ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೧೫

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಶ್ರೀ ವಾಮನಪುರಾಣಂ

(ಸಂಸ್ಕೃತದಲ್ಲಿ ಮೂಲ, ಕನ್ನಡ ಅರ್ಥಾನುವಾದವಿವರಣೆಗಳೊಡನೆ)

(ಕುರುಕ್ಷೇತ್ರವೆಂಬ ಮೊದಲನೆಯ ಸಂಪುಟ)

ಅನುವಾದಕ:

ವಿದ್ವಾನ್ ಮಹಾವಿದ್ವಾನ್

ಸಂಕೇಪುಟ್ಟಿ ವೆಂಕಟಾಚಾರ್ಯ.

ಶ್ರೀ ಶಾರದಾ ಎಲೆಕ್ಟ್ರಿಕ್ ಪ್ರೆಸ್

[illegible]

# ಅ ವ ತ ರ ಣಿ ಕೆ

## ಪುರಾಣಗಳ ಉತ್ಪತ್ತಿ

ಪ್ರಾಪಂಚಿಕವಾದ ಕ್ಷುದ್ರಸುಖಕ್ಕಾಗಿ ದುಃಖಸಾಗರದಲ್ಲಿ ಮುಳುಗುತ್ತಿರುವ ಮಾನವನಿಗೆ ಸಕಲ ದುಃಖವನ್ನೂ ನೀಗಿ ನಿತ್ಯವಾದ ಸುಖವನ್ನು ಹೊಂದಬೇಕೆಂಬ ಇಚ್ಛೆಯು ಎಂದಾದರೊಂದು ದಿನ ಉಂಟಾಗದಿರದು. ಇಂತಹ ದುಃಖನಿವೃತ್ತಿಯಿಂದ ನಿತ್ಯಸುಖವನ್ನು ಹೊಂದಲು ಆಶೆಯುಳ್ಳ ಆಸ್ತಿಕನಿಗೆ ಅಂತಹ ಸುಖಸ್ವರೂಪವನ್ನೂ ಅದರ ಉಪಾಯಗಳನ್ನೂ ತಿಳಿಯಲು ಪರೋಕ್ಷಾರ್ಥಬೋಧಕಗಳಾದ ವೇದಗಳೇ ಮುಖ್ಯವಾದ ಪ್ರಮಾಣಗಳೆಂಬುದೂ ನಿರ್ವಿವಾದಸಿದ್ಧ. ಇಂತಹ ವೇದಗಳ ಅರ್ಥವು ಬಹು ಗಂಭೀರವಾಗಿರುವುದರಿಂದ ಅದರ ಅರ್ಥವನ್ನೇ ವಿವರಿಸುವ ಪುರಾಣಗಳನ್ನು ಕರುಣಾಶಾಲಿಗಳಾದ ಕೃಷ್ಣದ್ವೈಪಾಯನರು ಸಕಲ ಚೇತನೋದ್ಧಾರಕ್ಕಾಗಿ ಹೊರ ಗೆಡಹಿದರು.

## ಪುರಾಣಗಳ ಪ್ರಯೋಜನ

"ಈಶ್ವರೋಹಮಹಂ ಭೋಗೀ" ಎಂಬ ಭಗವದ್ಗೀತೆಯ ವಚನದಂತೆ, ಮನುಷ್ಯರಿಗೆ ಅನಾದಿಯಾಗಿ ಬಂದ ವಾಸನೆಯಿಂದ ಅಭಿವೃದ್ಧಿಹೊಂದಿರುವ ಅಜ್ಞಾನವು ಜ್ಞಾನದಿಂದಲೇ ನಿವೃತ್ತಿಹೊಂದಬೇಕಾದುದು ಸಹಜ. ಜ್ಞಾನವೆಂದರೆ—ವಿದ್ಯೆ, ಇಂತಹ ವಿದ್ಯೆಯನ್ನು ಪರವಿದ್ಯೆಯೆಂದೂ, ಅಪರವಿದ್ಯೆಯೆಂದೂ, ಎರಡು ವಿಧವಾಗಿ ಉಪನಿಷತ್ತುಗಳು ನಿರೂಪಿಸುತ್ತವೆ. ಪರವಿದ್ಯೆ ಎಂದರೆ, ಪರಮಾತ್ಮನ ಪ್ರಾಪ್ತಿ ರೂಪವಾದ ಮೋಕ್ಷಕ್ಕೆ ಸಾಕ್ಷಾತ್ತಾಗಿ ಉಪಾಯವಾಗುವ ಉಪಾಸನೆ ಮೊದಲಾದುದು. ಅಪರವಿದ್ಯೆ ಎಂದರೆ, ಋಗ್ವೇದ ಯಜುರ್ವೇದವೇ ಮೊದಲಾದುವುಗಳ ಕರ್ಮ ಕಾಂಡದಿಂದಲೂ, ಪುರಾಣೇತಿಹಾಸಗಳಿಂದಲೂ, ಉಂಟಾಗುವ, ಚೇತನಾಚೇತನ ವಿವೇಕ, ತತ್ವಹಿತ ಪುರುಷಾರ್ಥಗಳು, ಪರಮಾತ್ಮ ಜೀವಾತ್ಮರುಗಳ ಸ್ವರೂಪ, ಪರಮಾತ್ಮನ ಆರಾಧನೋಪಯುಕ್ತಗಳಾದ ಯಜ್ಞಯಾಗಾದಿಗಳು, ಮತ್ತು ನಿತ್ಯ ನೈಮಿತ್ತಿಕ ಕರ್ಮಗಳು, ಹೇಯೋಪಾದೇಯವಿಭಾಗ, ಶಾಸ್ತ್ರಕ್ಕೆ ವಿರುದ್ಧವಾಗದಿರುವ ಧರ್ಮಾರ್ಥಕಾಮಗಳ ಸ್ವರೂಪ, ಇತ್ಯಾದಿ ವಿಷಯಗಳಲ್ಲಿ ಉಂಟಾಗವ ಜ್ಞಾನವಿಶೇಷ. ಇಂತಹ ಅಪರವಿದ್ಯೆಯೇ ಪರಮಾತ್ಮನಲ್ಲಿ ಪೂಜ್ಯತಾಬುದ್ಧಿಯನ್ನುಂಟುಮಾಡಿ ಜ್ಞಾನ ಯೋಗಾದಿಗಳ ಮೂಲಕ, ಅವನ ಪ್ರಾಪ್ತಿರೂಪವಾದ ಮೋಕ್ಷವೆಂಬ ನಿತ್ಯಸುಖಕ್ಕೆ ಕಾರಣವಾದ ಪರವಿದ್ಯೆಯನ್ನುಂ (ಉಪಾಸನೆ) ಟುಮಾಡುತ್ತದೆ. ಕರ್ಮಯೋಗಕ್ಕೆ ಉಪಕಾರಿಯಾದ ಇಂತಹ ಅಪರವಿದ್ಯೆಗೆ ಆಶ್ರಯವಾದ ಸ್ಥಾನಗಳು—

**ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ।**
**ಪುರಾಣಂ ಧರ್ಮಶಾಸ್ತ್ರಂ ಚ ವಿದ್ಯಾಹ್ಯೇತಾಶ್ಚತುರ್ದಶ॥**

ಎಂದು ಹದಿನಾಲ್ಕು ಎಂದು ಪರಿಗಣಿಸಲ್ಪಟ್ಟಿವೆ. ಇಂತಹ ಅಪರವಿದ್ಯಾಶ್ರಯ ಸ್ಥಾನಗಳಲ್ಲಿ ಪುರಾಣವೂ ಒಂದಾಗಿದೆ.

## ಪ್ರಕೃತ ವಾಮನಪುರಾಣದ ವಿಚಾರ

ಮಹಾಮುನಿಯಿಂದ ವಿರಚಿತಗಳಾಗಿರುವ ಹದಿನೆಂಟು ಪುರಾಣಗಳಲ್ಲಿ ಈ ವಾಮನಪುರಾಣವೂ ಒಂದು, "ತ್ರೈವಿಕ್ರಮಸ್ಯ ಮಾಹಾತ್ಮ್ಯಂ" ಎಂಬ ಮತ್ಸ್ಯ ಪುರಾಣದ ವಚನದಂತೆ, ಇದು ತ್ರಿವಿಕ್ರಮಾವತಾರಶಾಲಿಯಾದ ಮಹಾ ವಿಷ್ಣುವು ದಯೆಯಿಂದ ಹೊಂದಿದ ವಾಮನಾವತಾರದ ಉಪಾಖ್ಯಾನರೂಪವಾಗಿದೆ.

**ಯೋ ಮಾಮಜಮನಾದಿಂ ಚ ವೇತ್ತಿ ಲೋಕ ಮಹೇಶ್ವರಂ।**
**ಅಸಂಮೂಢಸ್ಸಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ॥**

ಎಂಬ ಭಗವದ್ಗೀತಾ ವಚನವೂ ಕರ್ಮಯೋಗಕ್ಕೆ ವಿರುದ್ಧವಾದ ಸಮಸ್ತ ಪಾಪಗಳೂ ಭಗವನ್ಮಾಹಾತ್ಮ್ಯಜ್ಞಾನದಿಂದ ಹೋಗಲಾಡಿಸಲ್ಪಡುವವೆಂದು ಉಪದೇಶಿಸುತ್ತಿದೆ. ಕರ್ಮಯೋಗವೆಂದರೆ,

**ಕರ್ಮಯೋಗಸ್ತಪಸ್ತೀರ್ಥ ದಾನಯಜ್ಞಾದಿ ಸೇವನಂ॥**

ಎಂಬ ವಚನದಂತೆ, ತಪಸ್ಸು, ತೀರ್ಥಯಾತ್ರೆ, ದಾನ, ಯಜ್ಞಾದಿಗಳ ಆಚರಣೆ (ಇಲ್ಲಿ ಯಜ್ಞಶಬ್ದದಿಂದ ಭಗವಂತನ ಪ್ರೀತಿಗೆ ಕಾರಣಗಳಾದ ಹವಿರ್ಯಜ್ಞ, ಸೋಮ ಯಜ್ಞ, ಮೊದಲಾದವುಗಳೆಲ್ಲಾ ಸಂಗ್ರಹಿಸಲ್ಪಟ್ಟಿವೆ) ಇತ್ಯಾದಿಗಳು.

ಇವುಗಳೆಲ್ಲವೂ ಈ ವಾಮನಪುರಾಣದಲ್ಲಿ ನಿರೂಪಿಸಲ್ಪಟ್ಟಿವೆ. ತೀರ್ಥ ಮತ್ತು ಕ್ಷೇತ್ರಗಳ ಮಾಹಾತ್ಮ್ಯವನ್ನು ಬಹುಮಟ್ಟಿಗೂ ವಿಸ್ತರಿಸಲಾಗಿದೆ. ಪುರಾಣದ ಸಾಮಾನ್ಯ ಲಕ್ಷಣಗಳೆಂದು ಹೇಳಲಾಗಿರುವ ಸರ್ಗ ಪ್ರತಿಸರ್ಗಾದಿಗಳೂ, ಬ್ರಹ್ಮ, ವಿಷ್ಣು, ಶಿವ, ಸೂರ್ಯ, ಇವರ ಮಾಹಾತ್ಮ್ಯ ವರ್ಣನೆಯೂ ಇದರಲ್ಲಿ ಅಡಗಿದೆ. ದೇವದಾನವ ಯುದ್ಧಪ್ರಕರಣದಲ್ಲಿ ದಿವ್ಯತೇಜೋಮಯಳಾದ ಕಾತ್ಯಾಯನೀದೇವಿಯ ಮಾಹಾತ್ಮ್ಯವನ್ನೂ ಅವಳಿಂದ ಉಂಟಾದ ದಾನವ ನಾಶವನ್ನೂ ವಿಸ್ತಾರವಾಗಿ ವರ್ಣಿಸಲಾಗಿದೆ.

ಮತ್ಸ್ಯಪುರಾಣ ಮತ್ತು ದೇವೀಭಾಗವತದ ಪರಿಗಣನೆಯಂತೆ ಈ ವಾಮನ ಪುರಾಣವೂ ಮಹಾಪುರಾಣವೆಂದೇ ಎಣಿಸಲು ಅವಕಾಶವಿದೆ. ಉಪಪುರಾಣಗಳಲ್ಲಿ ಇದನ್ನು ಸೇರಿಸಿಯೂ ಇಲ್ಲ. ಆದರೂ ಮುದ್ರಿತವಾಗಿರುವ ದೇವನಾಗರಿ ಲಿಪಿಯ ಪುಸ್ತಕದ ಕ್ರಮವನ್ನೇ ಅನುಸರಿಸಿ ಇಲ್ಲಿಯೂ ವ್ಯವಹರಿಸಲಾಗಿದೆ.

ಈ ವಾಮನಪುರಾಣದಲ್ಲಿ ತೊಂಭತ್ತೈದು ಅಧ್ಯಾಯಗಳಿವೆ. ಮೊದಲನೆಯ ಅಧ್ಯಾಯದಲ್ಲಿ ನಾರದರು ಮಾಡಿರುವ ನಾಲ್ಕು ಪ್ರಶ್ನೆಗಳಿಗೆ ಉತ್ತರವಾಗಿ ಇದು ಕೊನೆಗೊಂಡಿದೆ. ಆ ಪ್ರಶ್ನೆಗಳಲ್ಲಿ ಮಹಾವಿಷ್ಣುವು ಏತಕ್ಕೆ ವಾಮನಾವತಾರವನ್ನು ಹೊಂದಿದನೆಂಬ ಮೊದಲನೆಯ ಪ್ರಶ್ನೆಗೆ ಉತ್ತರವನ್ನು ಎಂಭತ್ತೊಂಭತ್ತನೆಯ ಅಧ್ಯಾಯದಲ್ಲಿ ನಿರೂಪಿಸಲಾಗಿದೆ. ವೈಷ್ಣವನಾದ ಪ್ರಹ್ಲಾದನು ದೇವತೆಗಳೊಡನೆ ಏತಕ್ಕೆ ಯುದ್ಧಮಾಡಿದನೆಂಬ ಎರಡನೆಯ ಪ್ರಶ್ನೆಗೆ ಉತ್ತರವನ್ನು ಏಳು ಮತ್ತು ಎಂಟನೇ ಅಧ್ಯಾಯಗಳಲ್ಲಿ ಹೇಳಲಾಗಿದೆ.

ಶಂಕರನ ಪತ್ನಿಯಾದ ಸತೀದೇವಿಯು ತನ್ನ ಶರೀರವನ್ನು ಏತಕ್ಕೆ ಬಿಟ್ಟಳು. ಪುನಃ ಹಿಮವಂತನ ಪುತ್ರಿಯಾಗಿ ಜನಿಸಿ ಶಂಕರನ ಪತ್ನಿಯಾಗಿ ಹೇಗೆ ಪರಿಣಮಿಸಿದಳು. ಎಂಬ ಮೂರನೆಯ ಪ್ರಶ್ನೆಗೆ ಉತ್ತರವನ್ನು ಹೇಳಲು ನಾಲ್ಕನೆಯ ಅಧ್ಯಾಯದಲ್ಲಿ ಸತೀದೇವಿಯ ದೇಹತ್ಯಾಗವನ್ನು ಅದಕ್ಕೆ ಉಪೋದ್ಘಾತರೂಪವಾದ ದಕ್ಷಯಜ್ಞದ ಕಥೆಯೊಡನೆ ನಿರೂಪಿಸಿ, ಆ ದೇವಿಯೇ ಕೌಶಿಕೀ, ಕಾತ್ಯಾಯನೀ, ಮೊದಲಾದ ಅನೇಕ ರೂಪಗಳನ್ನು ಹೊಂದಿ ಮಹಿಷನೇ ಮೊದಲಾದ ದಾನವರನ್ನು ಸಂಹರಿಸಿ ಪಾರ್ವತಿಯ ರೂಪದಿಂದ ಅವತರಿಸಿದಳೆಂದು ಐವತ್ತೊಂದನೆಯ ಅಧ್ಯಾಯದಲ್ಲಿ ಉತ್ತರವನ್ನು ಹೇಳಲಾಗಿದೆ.

ತೀರ್ಥ ಮತ್ತು ಕ್ಷೇತ್ರಗಳ ಮಹಾತ್ಮ್ಯ, ನಾನಾ ವಿಧವಾದ ದಾನಗಳ ಮಹಿಮೆ. ಇವುಗಳನ್ನೆಲ್ಲಾ ಪ್ರಾಸಂಗಿಕವಾಗಿ ಕುರುಕ್ಷೇತ್ರದ ಮಹಿಮೆಯನ್ನು ಪ್ರಶಂಸಿಸುವ ಸಂದರ್ಭದಲ್ಲಿ ವಿಸ್ತಾರವಾಗಿ ವಿವರಿಸಲಾಗಿದೆ

ಮಹರ್ಷಿಗಳು ಸರ್ವಜ್ಞರಾದುದರಿಂದ ಕೆಲವು ಕಡೆಗಳಲ್ಲಿ ಗಂಭೀರವಾದ ಅವರ ವಾಣಿಯ ಸಾರವಾದ ತಾತ್ಪರ್ಯವು ಭಾಷಾಂತರದಲ್ಲಿ ಸಂಪೂರ್ಣವಾಗಿ ಪ್ರತಿಬಿಂಬಿಸದಿರಬಹುದು. ಇದಕ್ಕೆ ಅವರ ಸರ್ವಜ್ಞತೆಯಾಗಲಿ, ಆ ಭಾಷೆಯ ಸ್ವಭಾವವೇ ಆಗಲಿ ಅನುವದಿಸುವವರ ಜ್ಞಾನಸಂಕೋಚವೇ ಆಗಲಿ ಯಾವುದಾದರೊಂದು ಕಾರಣವಿರಬಹುದು. ಇಂತಹ ಸಂದರ್ಭದಲ್ಲಿ ಮಾತ್ರ ಅನುವಾದಕರು ಮೂಲಕಾರರಿಗೆ ಸ್ವಲ್ಪಮಟ್ಟಿಗೆ ದ್ರೋಹಿಗಳೆಂದೇ ಒಪ್ಪಬೇಕಾಗುತ್ತದೆ. ಆದರೂ ತಕ್ಕಮಟ್ಟಿಗೆ ವಿಮರ್ಶೆಯಿಂದ ಈ ಅನುವಾದವನ್ನು ಮೂಲಕ್ಕೆ ವಿರೋಧವಿಲ್ಲದಂತೆ ರಚಿಸಲಾಗಿದೆ. ವಿಶೇಷಾರ್ಥಗಳನ್ನು ಗ್ರಹಿಸಲು ಕುತೂಹಲವುಳ್ಳ ಪ್ರಾಜ್ಞರು ಸಹನೆಯಿಂದ ಈ ಅರ್ಥವನ್ನೇ ಭೂಮಿಕೆಯನ್ನಾಗಿ ಭಾವಿಸುವರೆಂದು ನಂಬುತ್ತೇನೆ.

ಕರ್ಮಯೋಗಕ್ಕೆ ಉಪಯುಕ್ತಗಳಾದ ಅನೇಕ ವಿಷಯಗಳನ್ನು ವಿಶದಪಡಿಸಿರುವ ಈ ಪುರಾಣವು ಕರ್ಮಯೋಗಕ್ಕೆ ಮಾತ್ರ ಸಹಕಾರಿಯಾಗಿದೆ ಎಂಬ ಸಂಕೋಚಕ್ಕೂ ಕಾರಣವಿಲ್ಲ. ಅನೇಕ ಸ್ತೋತ್ರಗಳಲ್ಲಿಯೂ, ಗಜೇಂದ್ರಮೋಕ್ಷ,

ಸಾರಸ್ವತಸ್ತುತಿ, ಮೊದಲಾದ ಪ್ರಕರಣಗಳಲ್ಲಿಯೂ ವೇದಾಂತಶಾಸ್ತ್ರದಲ್ಲಿ ಪ್ರತಿಪಾದಿಸಲಾಗಿರುವ ಭಕ್ತಿಪ್ರಪತ್ತಿಗಳೆಂಬ ಮೋಕ್ಷೋಪಾಯವನ್ನೂ ಇದರಲ್ಲಿ ವಿಶೇಷವಾಗಿ ವಿವರಿಸಲಾಗಿದೆ. ಆದುದರಿಂದ ಚತುರ್ವಿಧವಾದ ಪುರುಷಾರ್ಥಬೋಧನದಿಂದ ಜನಸಾಮಾನ್ಯರನ್ನೂ ಜ್ಞಾನಿಗಳನ್ನಾಗಿ ಮಾಡಲು ಇದು ಬಹಳ ಸಹಕಾರಿಯಾಗಿದೆ. ಎಂಬುವುದನ್ನು ಬೇರೆ ಹೇಳಬೇಕಾದುದಿಲ್ಲ.

ಈ ಪುರಾಣದಲ್ಲಿ ಅಲ್ಲಲ್ಲಿ ಕಂಡುಬರುವ ವೇದಾಂತವಿಚಾರಗಳಿಗೆ ಅರ್ಥವನ್ನು ಅನುವದಿಸುವ ಸಂದರ್ಭದಲ್ಲಿ ಪ್ರಾಯಶಃ ವಿಶಿಷ್ಟಾದ್ವೈತ ಸಿದ್ಧಾಂತದ ರೀತಿಯನ್ನೇ ಅನುಸರಿಸಲಾಗಿದೆ. ಮತ್ತು ಧರ್ಮಶಾಸ್ತ್ರದ ಆಚಾರಕಾಂಡ, ಹಾಗೂ ಆಶೌಚ ಕಾಂಡಗಳಿಗೆ ಸಂಬಂಧಿಸಿರುವ ಅನೇಕ ವಿಷಯಗಳು ಇದರಲ್ಲಿ ಅಡಕವಾಗಿವೆ. ತಪತಿಯ ವಿವಾಹ ಪ್ರಸಂಗದಲ್ಲಿ ಸಾಮುದ್ರಿಕಶಾಸ್ತ್ರದಲ್ಲಿ ಹೇಳಲಾಗಿರುವ ಅನೇಕ ಲಕ್ಷಣಗಳನ್ನೂ ವಿವರಿಸಲಾಗಿದೆ. ಇವುಗಳಿಗೆಲ್ಲಾ ಮೂಲಗ್ರಂಥದ ವಿಮರ್ಶೆಯಿಂದ ವಿವರಣ ಮತ್ತು ಪ್ರಮಾಣವಚನಗಳೊಡನೆ ತಕ್ಕಮಟ್ಟಿಗೆ ಟಿಪ್ಪಣಿಯನ್ನೂ ಸೇರಿಸಲಾಗಿದೆ. ಕೆಲವು ಕಡೆಗಳಲ್ಲಿ ಪಾಠದ ಅಸಾಂಗತ್ಯವನ್ನು ಪರಿಹರಿಸುವ ಉದ್ದೇಶದಿಂದ ಸೂಕ್ತವೆಂದು ತೋರಿಬರುವ ಪಾಠವನ್ನು ಕೆಳಗೆ ನಿರ್ದೇಶಿಸಲಾಗಿದೆ. ಆಯಾಯ ಅಧ್ಯಾಯದ ಕಥಾಭಾಗವನ್ನು ಅಧ್ಯಾಯಾರ್ಥ ಸಂಗ್ರಹದಲ್ಲಿ ಸಂಗ್ರಹಿಸಿ ಶೇಖರಿಸಲಾಗಿದೆ.

ಬಹುಮಟ್ಟಿಗೂ ಶುದ್ಧವಾಗಿರುವ ಮುದ್ರಿತವಾದ ದೇವನಾಗರ ಲಿಪಿಯ ಮೂಲ ಪುಸ್ತಕದಿಂದ ಈ ಅನುವಾದಕ್ಕೆ ಬಹಳ ಸಹಾಯವಾದುದು ಸಂತೋಷಿಸತಕ್ಕ ವಿಷಯ. ಆದರೂ ಕೊನೆಯಲ್ಲಿ ತೊಂಭತ್ತೈದನೆಯ ಅಧ್ಯಾಯದಲ್ಲಿ ಇಪ್ಪತ್ತೇಳನೇ ಶ್ಲೋಕದಿಂದ ಮುಂದೆ ಮೂವತ್ತೇಳನೆಯ ಶ್ಲೋಕದವರಿಗೆ ಕೆಲವು ಶ್ಲೋಕಗಳು ಬೇರೆ ಪ್ರಕರಣಕ್ಕೆ ಅರ್ಹವಾಗಿರುವುದರಿಂದ ಅವನ್ನು ಬದಲಾಯಿಸಿ ಕೊನೆಯಲ್ಲಿರುವ ಫಲಪ್ರಶಂಸಾ ಸಂದರ್ಭದಲ್ಲಿ ಸೇರಿಸಲಾಗಿದೆ.

ಈ ಪುರಾಣದ ಸಂಸ್ಕೃತ ಮೂಲಗ್ರಂಥದಲ್ಲಿ ಯಾವ ವಿಭಾಗವೂ ಕಂಡಬರುವುದಿಲ್ಲ. ಮೂರು ಸಂಪುಟಗಳಲ್ಲಿ ಅಡಕವಾಗಬಹುದಾದ ಈ ಅನುವಾದದಲ್ಲಿ ಮೊದಲನೇಯ ಮೂವತ್ತೆರಡು ಅಧ್ಯಾಯಗಳ ಪ್ರಮೇಯಕ್ಕೆ ತಕ್ಕಂತೆ ಕುರುಕ್ಷೇತ್ರವೆಂಬ ಹೆಸರಿನಿಂದ ಈ ಮೊದಲನೇಯ ಸಂಪುಟವನ್ನು ಪ್ರಕಾಶಿಸಲಾಗಿದೆ.

ಸಂಸ್ಕೃತ ಭಾಷೆಯಲ್ಲಿರುವ ಈ ಪುರಾಣವನ್ನು ಕನ್ನಡ ಅನುವಾದದೊಡನೆ ಮುದ್ರಿಸಿ ಪ್ರಕಟಿಸಲು ಉದ್ಯಮಗೊಂಡ ಮಹಾಪ್ರಭುಗಳಾದ **ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ., ರವರ**

ಉದಾರಕೃಪೆಯು, ಜನತೆಗೆ ಅನ್ನವಸ್ತ್ರಗಳಿಂದ ಮಾತ್ರವಲ್ಲದೆ ಪುರಾತನವಾದ ಜ್ಞಾನ ಜ್ಯೋತಿಯಿಂದಲೂ ಉತ್ಕೃಷ್ಟ ಜೀವನವನ್ನು ಒದಗಿಸಲು ಸಿದ್ಧವಾದುದು ಪ್ರಜೆಗಳ ಭಾಗ್ಯೋದಯವೇ ಸರಿ. ಇದರ ಅರ್ಥಾನುಸಂಧಾನದಿಂದ ಪ್ರಜೆಗಳೆಲ್ಲರೂ ವಿವೇಕಿಗಳಾಗಿ ಅಹಿಂಸಾದಿ ಧರ್ಮಗಳನ್ನು ಕೈಗೊಂಡು ಸುಖಸಂತೋಷಗಳಿಂದ ಕೃತಯುಗವನ್ನೇ ಅನುಭವಿಸಲಿ, ಕರ್ಣಾಟಕಭೂಮಿಯು ಜ್ಞಾನಜ್ಯೋತಿಯಿಂದ ಮೆರೆಯಲಿ.

ಈ ಪ್ರಕಾರವಾದ ಉದಾರದೃಷ್ಟಿಯಿಂದ ಪುರಾತನಗಳಾದ ವೇದಶಾಸ್ತ್ರಗಳನ್ನು ಬಹುಮುಖವಾದ ಸ್ವಾನುಷ್ಠಾನದಿಂದ ಸಫಲಗೊಳಿಸುತ್ತಿರುವ ಪ್ರಭುವರ್ಯರಾದ **ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್,** ಜಿ. ಸಿ. ಬಿ., **ಜಿ. ಸಿ. ಎಸ್. ಐ., ರವರಿಗೆ** ಭಗವಂತನಾದ ತ್ರಿವಿಕ್ರಮ ಮೂರ್ತಿಯು ಇನ್ನೂ ಅಧಿಕವಾದ ಆಸ್ತಿಕ್ಯ ಬುದ್ಧಿಯನ್ನೂ ಆಯುರಾರೋಗ್ಯ ಐಶ್ವರ್ಯ ಸತ್ಸಂತಾನಾದಿ ಗಳನ್ನೂ ದಯಪಾಲಿಸಿ ಕಾಪಾಡುತ್ತಿರಲೆಂದು ಅನನ್ಯಮನಸ್ಕತೆಯಿಂದ ಆ ಸರ್ವೇಶ್ವರ ನನ್ನು ಪ್ರಾರ್ಥಿಸುತ್ತೇನೆ.

**ಕೀರ್ತಿಸ್ತ್ವಾಜ್ಜಯಚಾಮರಾಜನೃಪತೇಃ ದಿಙ್ಮಂಡಲೀ ಮಂಡನ**
**ಪ್ರೌಢಾ ಸೂಕ್ತಿಸಹಸ್ರ ಶುಕ್ತಿಪಟಲೀ ಮುಕ್ತಾಧುರಂ ಬಿಭ್ರತೀ ॥**

**ಸದ್ಧರ್ಮಾಭಿರತಿಃ ಪ್ರಜಾಸು ವಿತತಂ ವಾತ್ಸಲ್ಯಮಾಯುಶ್ಚಿರಂ ।**
**ಗಾತ್ರೇದಾರ್ಢ್ಯಮರೋಗತಾ ಸುಮಧುರಾ ಸಂಪಚ್ಚ ಸಾಂತಾನಿಕೀ ॥**

ಅನುವಾದಕ,
ಆಸ್ಥಾನ ಮಹಾವಿದ್ವಾನ್,
**ಸಂಕೀಘಟ್ಟಂ ವೆಂಕಟಾಚಾರ್ಯ.**

ಮೈಸೂರು
೧—೧—೧೯೪೭.



ಶ್ರೀ ವಾಮನಪುರಾಣದ

# ವಿ ಷ ಯಾ ನು ಕ್ರ ಮ ಣಿ ಕೆ



**ಎಂಟನೆಯ ಅಧ್ಯಾಯ**—



**ಒಂಭತ್ತನೆಯ ಅಧ್ಯಾಯ**—



**ಹತ್ತನೆಯ ಅಧ್ಯಾಯ**—



**ಹನ್ನೊಂದನೆಯ ಅಧ್ಯಾಯ**—



**ಹನ್ನೆರಡನೆಯ ಅಧ್ಯಾಯ**—

॥ ಶ್ರೀಃ ॥

ಶ್ರೀ ಹಯಗ್ರೀವಾಯನಮಃ

# ಶ್ರೀ ವಾ ಮ ನ ಪು ರಾ ಣ ಂ

## ಪ್ರಥಮೋಽಧ್ಯಾಯಃ

**ತ್ರೈಲೋಕ್ಯರಾಜ್ಯ ಮಾಚ್ಛಿದ್ಯ ಬಲೇರಿಂದ್ರಾಯ ಯೋದದೌ ।**
**ನಮಸ್ತಸ್ಮೈಸುರೇಶಾಯ ಸದಾ ವಾಮನ ರೂಪಿಣೆ ॥ ೧ ॥**

---

**ವೇದಾರ್ಥತತ್ವ ವಿಶದೀಕರಣೇನ ಪುಂಸಾ**
**ಮುಚ್ಚೈರ್ಗತಿಂ ಜಗತಿ ಯೋ ದಯಯಾ ವಿಧಾತುಂ ।**
**ರಮ್ಯಾಂ ಪುರಾಣಪದವೀಂ ಪ್ರಣಿನಾಯ**
**ತಸ್ಮೈ ಲೋಕೇಶವೈಭವವುಷೇ ಋಷಯೇ ನಮಸ್ತಾತ್ ॥**

ಮಹಾಮಹಿಮನಾದ ಯಾವ ಮಹರ್ಷಿಯು ಮನುಷ್ಯಸಾಮಾನ್ಯಕ್ಕೂ ಸದ್ಗತಿಯುಂಟಾಗಲೆಂಬ ಬಯಕೆಯಿಂದ ಪರಮಾತ್ಮನ ವೈಭವವನ್ನು ಪ್ರಕಾಶಪಡಿಸಲುದ್ಯುಕ್ತನಾಗಿ ಅವನ ಆಜ್ಞಾರೂಪಗಳಾದ ವೇದಗಳಲ್ಲಿ ಸಾರಭೂತಗಳಾದ ತತ್ವ, ಹಿತ, ಪುರುಷಾರ್ಥಗಳನ್ನು ತಿಳಿಯಪಡಿಸಲು ರಮ್ಯವಾದ ಪುರಾಣಮಾರ್ಗವನ್ನು ರಚಿಸಿದನೋ ಅಂತಹ ಮಹರ್ಷಿಗೆ ಅನೇಕ ವಂದನೆಗಳು.

---

## ಮೊದಲನೆಯ ಅಧ್ಯಾಯವು

೧. ಮೂರುಲೋಕಗಳಿಗೂ ಸಾರ್ವಭೌಮನಾಗಿದ್ದ ಬಲಿಚಕ್ರವರ್ತಿಯ ಸಾಮ್ರಾಜ್ಯವನ್ನು ಕಿತ್ತೊಗೆದು ದೇವೇಂದ್ರನಿಗೆ ಪ್ರದಾನಮಾಡಿದ ವಾಮನಮೂರ್ತಿಯಾದ ದೇವತಾಸಾರ್ವಭೌಮನಿಗೆ ನಮಸ್ಕಾರಗಳು. ಇದು ವಾಮನಾವತಾರ ಪ್ರಶಂಸಾಪರವಾದ ಪ್ರಕೃತ ಪುರಾಣದ ಮಂಗಲಪದ್ಯ. ಪುರಾಣಪ್ರತಿಪಾದ್ಯವಾದ ಪ್ರಧಾನವಿಷಯವನ್ನು ಸೂಚಿಸುತ್ತದೆ

---

ಸೂ.-- ವಿಶೇಷಾರ್ಥ ಅಥವಾ ತಾತ್ಪರ್ಯಾರ್ಥವನ್ನು ( ) ಈ ಚಿಹ್ನೆಯಲ್ಲಿ ಸೇರಿಸಲಾಗಿದೆ.

ಪುಲಸ್ತ್ಯ ಮೃಷಿಮಾಸೀನ ಮಾಶ್ರಮೇ ವಾಗ್ವಿದಾಂವರಂ ।
ನಾರದಃ ಪರಿಪಪ್ರಚ್ಛ ಪುರಾಣಂ ವಾಮನಾಶ್ರಯಂ ॥ ೨ ॥

ಕಥಂ ಭಗವತಾ ಬ್ರಹ್ಮ‍ನ್ ವಿಷ್ಣುನಾ ಪ್ರಭುವಿಷ್ಣುನಾ ।
ವಾಮನತ್ವಂ ಧೃತಂ ಪೂರ್ವಂ ತನ್ಮಮಾಚಕ್ಷ್ವ ಪೃಚ್ಛತಃ ॥ ೩ ॥

ಕಥಂ ಚ ವೈಷ್ಣವೋ ಭೂತ್ವಾ ಪ್ರಹ್ಲಾದೋ ದೈತ್ಯಸತ್ತಮಃ ।
ತ್ರಿದಶೈರ್ಯುಯುಧೇ ಸಾರ್ಧ ಮತ್ರ ಮೇ ಸಂಶಯೋ ಮಹಾನ್ ॥ ೪ ॥

ಶ್ರೂಯತೇ ಚ ದ್ವಿಜಶ್ರೇಷ್ಠ ದಕ್ಷಸ್ಯ ದುಹಿತಾ ಸತೀ ।
ಶಂಕರಸ್ಯ ಪ್ರಿಯಾ ಭಾರ್ಯಾ ಬಭೂವ ವರವರ್ಣಿನೀ ॥ ೫ ॥

ಕಿಮರ್ಥಂ ಸಾ ಪರಿತ್ಯಜ್ಯ ಸ್ವಶರೀರಂ ವರಾಂಗನಾ ।
ಜಾತಾ ಹಿಮವತೋ ಗೇಹೇ ಗಿರೀಂದ್ರಸ್ಯ ಮಹಾತ್ಮನಃ ॥ ೬ ॥

ಪುನಶ್ಚ ದೇವದೇವಸ್ಯ ಪತ್ನೀತ್ವ ಮಗಮಚ್ಛುಭಾ ।
ಏತಂ ಮೇ ಸಂಶಯಂ ಛಿಂದಿ ಸರ್ವವಿತ್ತ್ವಂ ಮತೋಽಸಿಮೇ ॥ ೭ ॥

---

೨-೭. ಆಶ್ರಮದಲ್ಲಿದ್ದ ಸರ್ವಜ್ಞರಾದ ಪುಲಸ್ತ್ಯಮಹರ್ಷಿಗಳನ್ನು ವಾಮನಾವತಾರದ ಪುರಾಣವನ್ನು ಅಪ್ಪಣೆಕೊಡಿಸಬೇಕೆಂದು ನಾರದಮಹರ್ಷಿಗಳು ಪ್ರಾರ್ಥಿಸಿದರು. [" ಯೋ ಮಾಮಜ ಮನಾದಿಂ ಚ ವೇತ್ತಿ ಲೋಕಮಹೇಶ್ವರಂ " ಇತ್ಯಾದಿ ಗೀತಾವಾಕ್ಯಗಳಿಂದ ಉಪದೇಶಿಸಲ್ಪಟ್ಟ ಸರ್ವಪಾಪನಿವರ್ತಕವಾದ ಭಗವನ್ಮಾಹಾತ್ಮ್ಯಜ್ಞಾನವು ಆದರಣೀಯವೆಂಬ ಅಂಶವನ್ನು ಈ ನಾರದಮಹರ್ಷಿಗಳ ಅನುಷ್ಠಾನವು ಸೂಚಿಸುತ್ತದೆ.] ಓ ಮಹಾತ್ಮನೇ, ಸರ್ವಶಕ್ತನಾಗಿಯೂ ಪೂರ್ಣಕಾಮನಾಗಿಯೂ ಇರುವ ವಿಷ್ಣುವು ವಾಮನಾವತಾರವನ್ನು ಏತಕ್ಕೆ ಆಶ್ರಯಿಸಿದನು, ಮತ್ತು ದೈತ್ಯಶ್ರೇಷ್ಠನಾದ ಪ್ರಹ್ಲಾದನು ಪರಮವೈಷ್ಣವನಾಗಿದ್ದರೂ ವಿಷ್ಣುಭಕ್ತರಾದ ದೇವತೆಗಳೊಡನೆ ಏತಕ್ಕೆ ಯುದ್ಧಮಾಡಿದನು. ಎಲೈ ಬ್ರಾಹ್ಮಣೋತ್ತಮನೇ, ದಕ್ಷಪ್ರಜಾಪತಿಯ ಮಗಳಾದ ಸತೀದೇವಿಯು ಶಂಕರನ ಪ್ರಿಯಪತ್ನಿಯಾಗಿದ್ದಳೆಂದು ನಾನು ಕೇಳುತ್ತೇನೆ. ಆ ಸತೀದೇವಿಯು ಸ್ವಶರೀರವನ್ನು ಬಿಟ್ಟು ಗಿರಿರಾಜನಾದ ಹಿಮವಂತನ ಪುತ್ರಿಯಾಗಿ ಏತಕ್ಕೆ ಹುಟ್ಟಿದಳು. ಪುನಃ ಶಂಕರನ ಪತ್ನಿಯಾಗಿ ಹೇಗೆ ಪರಿಣಮಿಸಿದಳು. ಈ ವಿಚಾರವನ್ನು ಅಪ್ಪಣೆಕೊಡಿಸಿ ನನ್ನ ಸಂದೇಹಗಳನ್ನು ಹೋಗಲಾಡಿಸಬೇಕು.

**ತೀರ್ಥಾನಾಂ ಚೈವ ಮಾಹಾತ್ಮ್ಯಂ ದಾನಾನಾಂ ಚೈವ ಸತ್ತಮ ।**
**ವ್ರತಾನಾಂ ವಿವಿಧಾನಾಂ ಚ ವಿಧಿಮಾಚಕ್ಷ್ವ ಮೇ ದ್ವಿಜ ॥ ೮ ॥**

**ಏವಮುಕ್ತೋ ನಾರದೇನ ಪುಲಸ್ತ್ಯೋ ಮುನಿಸತ್ತಮಃ ।**
**ಪ್ರೋವಾಚ ವದತಾಂ ಶ್ರೇಷ್ಠೋ ನಾರದಂ ತಪಸೋ ನಿಧಿಂ ॥ ೯ ॥**

**ಪುರಾಣಂ ವಾಮನಂ ವಕ್ಷ್ಯೇ ಕ್ರಮಾನ್ನಿಖಿಲಮಾದಿತಃ ।**
**ಅವಧಾನಂ ಸ್ಥಿರಂ ಕೃತ್ವಾ ಶೃಣುಷ್ವ ಮುನಿಸತ್ತಮ ॥ ೧೦ ॥**

**ಪುರಾ ಹೈಮವತೀ ದೇವೀ ಮಂದರಸ್ಥಂ ಮಹೇಶ್ವರಂ ।**
**ಉವಾಚ ವಚನಂ ದೃಷ್ಟ್ವಾ ಗ್ರೀಷ್ಮಕಾಲಮುಪಸ್ಥಿತಂ ॥ ೧೧ ॥**

**ಗ್ರೀಷ್ಮಃ ಪ್ರವೃತ್ತೋ ದೇವೇಶ ನ ಚ ಮೇ ವಿದ್ಯತೇ ಗೃಹಂ ।**
**ಯತ್ರ ವಾತಾತಪೌ ಗ್ರೀಷ್ಮೇ ಸ್ಥಿತಯೋರ್ನೌ ಗಮಿಷ್ಯತಃ ॥ ೧೨ ॥**

---

೮-೯. ಮತ್ತು ನಾನಾವಿಧವಾದ ತೀರ್ಥಗಳ ಮತ್ತು ದಾನಗಳ ಸ್ವರೂಪ ಮತ್ತು ವಿಧಾನಪ್ರಕಾರವನ್ನೂ ಬಹುವಿಧವಾದ ವ್ರತಗಳ ವಿಧಾನವನ್ನೂ ಸಹ ಸರ್ವಜ್ಞರೂ ವಾಗ್ಮಿಗಳೂ ಆದ ತಾವು ಅಪ್ಪಣೆಕೊಡಿಸಬೇಕು. ಹೀಗೆ ಪ್ರಶ್ನೆಮಾಡಲ್ಪಟ್ಟ ಪುಲಸ್ತ್ಯಮಹರ್ಷಿಗಳು ತಪೋನಿಷ್ಠರಾದ ನಾರದಮುನಿಗಳನ್ನು ಕುರಿತು ಹೇಳುತ್ತಾರೆ:

೧೦-೧೨. ಎಲೈ ಮುನಿಶ್ರೇಷ್ಠನೇ, ವಾಮನಪುರಾಣವನ್ನೆಲ್ಲಾ ಮೊದಲಿನಿಂದ ಕ್ರಮವಾಗಿ ಹೇಳುತ್ತೇನೆ, ಅವಹಿತನಾಗಿ ಕೇಳು. [ಪುರಾಣವೆಂದರೆ ಸೃಷ್ಟಿಪ್ರಳಯಾದಿ ಐದು ಅಂಗಗಳಿಂದ ಕೂಡಿದ ಕಥಾಸಂದರ್ಭ, ಸೃಷ್ಟ್ಯಾದಿಗಳನ್ನು ಬಿಟ್ಟು ಕೇವಲ ಪುರಾತನ ವೃತ್ತಾಂತವನ್ನು ಬೋಧಿಸುವ ಕಥಾಸಂದರ್ಭವು ಇತಿಹಾಸ ಎಂದು ಪೌರಾಣಿಕರ ಸಂಕೇತ.] ಪೂರ್ವಕಾಲದಲ್ಲಿ ಮಂದರಪರ್ವತದಲ್ಲಿರುವ ಶಂಕರನನ್ನು ಕುರಿತು ಹಿಮವತ್ಪುತ್ರಿಯಾದ ಪಾರ್ವತೀದೇವಿಯು ಸಮೀಪಿಸುತ್ತಿರುವ ಗ್ರೀಷ್ಮಕಾಲವನ್ನು ನೋಡಿ ಎಲೈ, ದೇವೇಶನೇ, ಗ್ರೀಷ್ಮವು ಪ್ರಾರಂಭವಾಗಿದೆ. ಈ ಗ್ರೀಷ್ಮಕಾಲದ ವಾತಾತಪಗಳನ್ನು ಸುಖದಿಂದ ಕಳೆಯಲು ತಕ್ಕ ಮನೆಯು ನಮಗೆ ಇಲ್ಲ ಎಂದು ಪ್ರಾರ್ಥಿಸಿದಳು. ಹೀಗೆ ಪ್ರಾರ್ಥಿಸಲ್ಪಟ್ಟ ಶಂಕರನು ಪಾರ್ವತಿಯನ್ನು ಕುರಿತು ಹೇಳುತ್ತಾನೆ:

ಏವಮುಕ್ತೋ ಭವಾನ್ಯೈತಚ್ಛಂಕರೋ ವಾಕ್ಯ ಮಬ್ರವೀತ್ ।
ನಿರಾಶ್ರಯೋಹಂ ಸುದತಿ ಸದಾ ರಣ್ಯಚರಃ ಶ್ಶುಭೆ ॥ ೧೩ ॥

ಇತ್ಯುಕ್ತಾ ಶಂಕರೇಣಾಥ ವೃಕ್ಷಚ್ಛಾಯಾಸು ನಾರದ ।
ನಿದಾಘಕಾಲಮನಯ ತ್ಸಮಂ ಶರ್ವೇಣ ಸಾ ಸತೀ ॥ ೧೪ ॥

ನಿದಾಘಾಂತೇ ಸಮುದ್ಭೂತೋ ನಿರ್ಜನಾಚರಿತೋ ದ್ಭುತಃ ।
ಘನಾಂಧಕಾರಿತಾಶೊ ವೈ ಪ್ರಾವೃಟ್ಕಾಲೊತಿರಾವವಾನ್ ॥ ೧೫ ॥

ತಂ ದೃಷ್ಟ್ವಾ ದಕ್ಷತನುಜಾ ಪ್ರಾವೃಟ್ಕಾಲಮುಪಸ್ಥಿತಂ ।
ಪ್ರೋವಾಚ ವಾಕ್ಯಂ ದೇವೇಶಂ ಸತೀ ಸಪ್ರಣಯಂ ತದಾ ॥ ೧೬ ॥

ನಿವಾನ್ತಿ ವಾತಾ ಹೃದಯಾವದಾರಣಾ
ಗರ್ಜನ್ತ್ಯಮೀ ತೋಯಧರಾ ಮಹೇಶ ।
ಸ್ಫುರನ್ತಿ ನೀಲಾಭ್ರಗುಣೇಷು ವಿದ್ಯುತೊ
ವಾಶನ್ತಿ ಕೇಕಾರವಮೇವ ಬರ್ಹಿಣಃ ॥ ೧೭ ॥

---

೧೩-೧೪. ಎಲೈ ಶೋಭನಾಂಗಿಯೇ, ಯಾವಾಗಲೂ ಅರಣ್ಯದಲ್ಲಿ ಸಂಚರಿಸುವ ನನಗೆ ಗೃಹವೇ ಮೊದಲಾದ ಆಶ್ರಯವೆಲ್ಲಿಯದು. ಶಂಕರನಿಂದ ಹೀಗೆ ಹೇಳಲ್ಪಟ್ಟ ಪಾರ್ವತಿಯು ಗ್ರೀಷ್ಮಕಾಲವನ್ನೆಲ್ಲಾ ಮರದನೆರಳಿನಲ್ಲಿ ಶಂಕರನೊಡನೆ ಕಳೆದಳು.

೧೫-೧೬. ಬೇಸಿಗೆಯು ಕಳೆದನಂತರ ಜನಸಂಚಾರರಹಿತವಾದ ಆಶ್ಚರ್ಯಕರವಾದ ವರ್ಷಾಕಾಲವು ಮೇಘಗಳಿಂದ ದಿಗಂತವನ್ನು ಆವರಿಸುತ್ತಾ ಮೇಘಧ್ವನಿಯೊಡನೆ ಆವಿರ್ಭಾವಹೊಂದಿತು. ಅಂತಹ ವರ್ಷಾಕಾಲವನ್ನು ನೋಡಿ ಪಾರ್ವತಿಯು ಶಂಕರನನ್ನು ಸಾನುರಾಗಳಾಗಿ ಹೇಳುತ್ತಾಳೆ :

೧೭-೧೮. ಹೃದಯವನ್ನು ನಡುಗಿಸುವ ಶೀತಲವಾದ ಗಾಳಿಯು ಬೀಸುತ್ತಿದೆ. ಪ್ರಭುವೇ, ಈ ಮೇಘಗಳೆಲ್ಲವೂ ಗರ್ಜಿಸುತ್ತಿವೆ, ಕಪ್ಪಾದ ಮೇಘಮಂಡಲದಲ್ಲಿ ಮಿಂಚುಗಳು ಸ್ಫುರಿಸುತ್ತಿವೆ, ನವಿಲುಗಳು ಕೇಕಾಧ್ವನಿಯನ್ನು ಮಾಡುತ್ತಿವೆ, ಸಂತತವಾಗಿ ಆಕಾಶದಿಂದ ಜಲಧಾರೆಗಳು ಬೀಳುತ್ತಿವೆ. ಕೊಕ್ಕರೆಗಳೂ ಬಲಾಕಾಪಕ್ಷಿಗಳೂ ಮೇಘ

ಪತನ್ತಿ ಧಾರಾ ಗಗನಾತ್ಪರಿಚ್ಯುತಾ ಬಕಾ
ಬಲಾಕಾ ಶ್ಚ ಭಜಂತಿ ತೋಯದಾ೯ ।
ಕದಮ್ಬಸರ್ಜಾರ್ಜುನಕೇತಕೀನಾಂ
ಪುಷ್ಪಾಣಿ ಮುಂಚಂತಿ ಚ ಮಾರುತಾದಿನಾ ॥ ೧೮ ॥

ಶ್ರುತ್ವೇವ ಮೇಘಸ್ಯ ದೃಢಂ ತು ಗರ್ಜಿತಂ
ತ್ಯಜನ್ತಿ ಹಂಸಾ ಶ್ಚ ಸರಾಂಸಿ ತತ್ ಕ್ಷಣಾತ್ ।
ನೀಚೋದ್ಧತಾ ಸ್ಸತ್ಪುರುಷಾ ಯಥಾ ಶ್ರಯಾ
ಸ್ಸ್ವವೃದ್ಧಮೂಲಾನಪಿ ಸಂತ್ಯಜಂತಿ ॥ ೧೯ ॥

ಇಮಾನಿ ಯೂಥಾನಿ ತಥಾ ಮೃಗಾಣಾಂ
ತ್ವರನ್ತಿ ಧಾವನ್ತಿ ರಮನ್ತಿ ಶಂಭೊ ।
ಧಾವನ್ತಿ ಹೃಷ್ಟಾನಿ ವನಸ್ಥಲೀಷು
ಸರ್ವಾ ಭುವಸ್ತ್ರೋಯದ ಸಂಪ್ರವೃದ್ಧಾಃ ॥ ೨೦ ॥

---

ಗಳನ್ನು ಆಶ್ರಯಿಸುತ್ತಿವೆ. ಕಡಹ, ಸರ್ಜ, ಮಡ್ಡಿ, ತಾಳೆ ಮೊದಲಾದ ಮರಗಳಲ್ಲಿ ಹೂವುಗಳು ಗಾಳಿಯಿಂದ ಕೆದರಲ್ಪಡುತ್ತಿವೆ.

೧೯. ಮೇಘದ ಗರ್ಜನೆಯನ್ನು ಕೇಳಿಯೊ ಎಂಬಂತೆ ನೀಚರಿಂದ ಆಕ್ರಮಿಸಲ್ಪಟ್ಟ ಆಶ್ರಯವು ಬಹುಕಾಲದಿಂದ ನಡೆದು ಬಂದಿದ್ದರೂ ಸತ್ಪುರುಷರು ಅವನ್ನು ಬಿಡುವಂತೆ ಹಂಸಗಳು ಸರೋವರವನ್ನು ಬಿಟ್ಟು ಹೋಗುತ್ತಿವೆ. [ಮಳೆಗಾಲದಲ್ಲಿ ಹಂಸಗಳು ಮಾನಸಸರೋವರಕ್ಕೆ ಹೋಗುತ್ತವೆ ಎಂದು ಪ್ರಸಿದ್ಧಿ ಇದೆ.]

೨೦-೨೨. ಎಲೈ ದೇವ, ಈ ಜಿಂಕೆಗಳು ಗುಂಪುಗುಂಪಾಗಿ ಸಮೃದ್ಧವಾದ ವನಭೂಮಿಗಳಲ್ಲಿ ತ್ವರೆಯಿಂದ ಓಡಾಡುತ್ತ ನಲಿಯುತ್ತಿವೆ. ವನಪ್ರದೇಶಗಳು ಜಲಸಮೃದ್ಧಿಯಿಂದ ರಮಣೀಯವಾದ ಹಸುರುಹುಲ್ಲು ಮತ್ತು ಸಸ್ಯಗಳಿಂದ ಶೋಭಿಸುತ್ತಿವೆ.

ರಾಜನ್ತಿ ಶಷ್ಪಾವೃತಸಸ್ಯಯುಕ್ತಾ
  ಸ್ತಥಾ ಚಿರಾಭಾ ಸ್ಸುತರಾಂ ಸ್ಫುರನ್ತಿ ।
ರಮ್ಯೇಷು ನೀಲೇಷು ಘನೇಷು ದೇವ
  ನೂನಂ ಸಮೃದ್ಧಿಂ ಮಲಿನಸ್ಯ ದೃಷ್ಟ್ವಾ ॥ ೨೦ ॥

ಚರನ್ತಿ ಶೂರಾಸ್ತರಣೋದ್ಗಮೇಷು
  ಉದ್ವೃತ್ತವೇಗಾ ಸ್ಸಹಸೈವ ನಿಮ್ನಗಾಃ ।
ಜಾತಾಃ ಶಶಾಂಕಾಂಕಿತಚಾರುಮೌಲಿ
  ಕಿಮತ್ರ ಚಿತ್ರಂ ಯದನು ಜ್ವಲಂ ಜನಂ ॥ ೨೨ ॥

ಶ್ರಯನ್ತಿ ನೀಚಾನುಗತಾ ಹಿ ಯೋಷಿತಃ ।
  ನೀಲೇಷು ಮೇಘೇಷು ಸಮಾಶ್ರಿತಂ ನಭಃ ॥
ಪುಷ್ಪೇಷು ಸರ್ಜಾ ಮುಕುಲೇಷು ನೀಪಾಃ
  ಫಲೇಷು ಚ ಶ್ರೀಶ್ಚ ಪಯಸ್ಸ್ವಥಾಪಗಾಃ ॥ ೨೩ ॥

---

ಜಲಪರಿಪೂರ್ಣವಾದ ಮೇಘಗಳಲ್ಲಿ ಕಪ್ಪುಬಣ್ಣವು ಹೆಚ್ಚಾಗಿ ಅಭಿವೃದ್ಧಿಹೊಂದುತ್ತಿದೆ. ಅದನ್ನು ನೋಡಿ ಮಿಂಚುಗಳಸ್ಫುರಣವೂ ಅಪರಿಮಿತವಾಗುತ್ತಿದೆ, ಪ್ರಭುವೇ, ಇದೇನಾಶ್ಚರ್ಯ, ನೀಚಾನುರಾಗಿಣಿಗಳಾದ ಸ್ತ್ರೀಯರು ಮಲಿನರನ್ನೇ ಆಶ್ರಯಿಸುವದು ಸ್ವಾಭಾವಿಕವಲ್ಲವೇ, ನದಿಗಳೆಲ್ಲವೂ ಜಲಸಮೃದ್ಧಿಯಿಂದ ಪರಿಪೂರ್ಣವಾಗಿ ವೇಗದಿಂದ ಓಡುತ್ತಿವೆ. ಶೂರರಾದ ಭಟರುಗಳು ದೋಣಿಗಳಲ್ಲಿ ಸಂಚರಿಸುತ್ತಲಿದ್ದಾರೆ,

೨೩. ಗಗನಮಂಡಲವು ನೀಲವಾದ ಮೇಘಗಳಲ್ಲಿ ಸೇರಿ ತನ್ಮಯವಾಗುತ್ತಿದೆ, ಹಾಗೆಯೇ ಸರ್ಜವೃಕ್ಷಗಳು ಪುಷ್ಪಮಯವಾಗಿಯೂ, ನೀಪ (ಈಚಲು) ವೃಕ್ಷಗಳು ಮುಕುಲ (ಮೊಗ್ಗು) ಮಯವಾಗಿಯೂ, ಫಲಗಳು ರಮಣೀಯಶೋಭಾಮಯ ವಾಗಿಯೂ, ನದಿಗಳೆಲ್ಲವೂ ಜಲಮಯವಾಗಿಯೂ, ಮಹಾಸರೋವರಗಳು ಪತ್ರ ಮತ್ತು ಪದ್ಮಗಳ ಸಮೃದ್ಧಿಯಿಂದ ತನ್ಮಯವಾಗಿಯೂ ಶೋಭಿಸುತ್ತಿವೆ. ಈ ವರ್ಷಾ ಕಾಲವು ಬಹಳ ಕ್ಲೇಶದಿಂದ ಕಳೆಯತಕ್ಕದ್ದಾಗಿದೆ.

ಪತ್ರೇಷು ಪದ್ಮೇಷು ಮಹಾಸರಾಂಸಿ
ಸು ದುಸ್ತರಸ್ಸಂಪ್ರತಿ ವರ್ಷಕಾಲಃ ।
ಇತೀದೃಶೇ ಶಂಕರ ದುಸ್ಸಹೇದ್ಭುತೆ
ಕಾಲೆ ಸುರಾದ್ರೆ ನನು ತೆ ಬ್ರವೀಮಿ ॥ ೨೪ ॥

ಗೃಹಂ ಕುರುಷ್ವಾತ್ರ ಮಹಾಚಲೋತ್ತಮೆ
ಸುನಿರ್ವೃತಾ ಯೇನ ಭವಾಮಿ ಶಂಭೊ ।
ಇತ್ಥಂ ತ್ರಿನೇತ್ರಃ ಶ್ರುತಿರಾಮಣೀಯಕಂ
ಶ್ರುತ್ವಾ ವಚೋ ವಾಕ್ಯಮಿದಂ ಬಭಾಷೆ ॥ ೨೫ ॥

ನ ಮೇಸ್ತಿವಿತ್ತಂ ಗೃಹಸಂಚಯಾರ್ಥೆ
ಮೃಗಾರಿಚರ್ಮಾವೃತದೇಹಿನಃ ಪ್ರಿಯೆ ।
ಮಮೋಪವೀತಂ ಭುಜಗೇಶ್ವರಃ ಫಣೀ
ಕರ್ಣೇಪಿ ಪದ್ಮಶ್ಚ ತಥೈವ ಪಿಂಗಲಃ ॥ ೨೬ ॥

---

೨೪-೨೫. ಎಲೈ ಶಂಕರನೇ, ಈ ಪ್ರಕಾರವಾದ ಭಯಂಕರವರ್ಷಾಕಾಲವು ಕಳೆಯಲಶಕ್ಯವಾಗಿರುವುದರಿಂದ ನಾನು ವಿಜ್ಞಾಪಿಸಬೇಕಾಗಿದೆ. ಈ ಮಹಾಪರ್ವತದಲ್ಲಿ ಒಂದು ಮನೆಯನ್ನು ಮಾಡಿಕೊಂಡಲ್ಲಿ ನಿನ್ನೊಡನೆ ನಾನು ಸುಖವಾಗಿರುತ್ತೇನೆ. [ಬೇಸಿಗೆಯು ಹೇಗೊ ಕಳೆದುಹೋಯಿತು. ಮನೆ ಇಲ್ಲದವರು ಮಳೆಗಾಲವನ್ನು ಕಳೆಯುವದು ಕಷ್ಟವೆಂದು ತಿಳಿದು ಪಾರ್ವತಿಯು ಹೀಗೆ ಪ್ರಾರ್ಥಿಸುತ್ತಾಳೆ. ಮಳೆಗಾಲದಲ್ಲಿ ಬಹುವಿಧವಾದ ಶೃಂಗಾರೋದ್ದೀಪಕಸಾಮಗ್ರಿಗಳು ಸಂಯುಕ್ತರಾದ ಸ್ತ್ರೀಪುರುಷರಿಗೆ ದುಸ್ಸಹವಲ್ಲ, ಆದರೂ ಮನೆ ಇಲ್ಲದವರಿಗೆ ಈ ವಿಧವಾದ ಮಳೆಗಾಲವನ್ನು ಕಳೆಯುವದೂ ಕಷ್ಟವೆಂದು ಪಾರ್ವತಿಯ ತಾತ್ಪರ್ಯ.]

೨೬-೨೭. ಪಾರ್ವತೀದೇವಿಯ ರಮಣೀಯವಾದ ವಚನಗಳನ್ನು ಲಾಲಿಸಿ ಶಂಕರನು ಪ್ರತ್ಯುತ್ತರವನ್ನು ಈರೀತಿ ಹೇಳುತ್ತಾನೆ: ಎಲೈ ಪ್ರಿಯೆಯೇ, ವ್ಯಾಘ್ರಚರ್ಮವನ್ನು ಹೊದ್ದು ಕಾಲಕಳೆಯುವ ನನಗೆ ಮನೆಯನ್ನು ಮಾಡಿಕೊಳ್ಳಲು ದ್ರವ್ಯವೆಲ್ಲಿಂದ ಬಂದೀತು. ನನ್ನ ವೇಷಭೂಷಣಗಳೂ ನನ್ನ ಈ ಸ್ವರೂಪವನ್ನು ಸೂಚಿಸುತ್ತಿವೆ, ನೋಡು, ಸರ್ಪರಾಜನಾದ ಆದಿಶೇಷನೇ ನನ್ನ ಯಜ್ಞೋಪವೀತನಾಗಿರುತ್ತಾನೆ. ಹಾಗೆಯೇ ಪದ್ಮ ಪಿಂಗಲ ಎಂಬ ಸರ್ಪಗಳು ಕರ್ಣಾಭರಣ, ಮತ್ತು ಕಂಬಲ, ಧನಂಜಯ ಎಂಬ ಸರ್ಪಗಳು ತೋಳಿಗೆ ಆಭರಣಗಳಾಗಿರುತ್ತವೆ. ಅಶ್ವತರ ತಕ್ಷಕ ಎಂಬ ಸರ್ಪಗಳು

**ಕೇಯೂರಮೇಕಂ ಮಮ ಕಂಬಲಸ್ತ್ವಹಿ**
**ರ್ದ್ವಿತೀಯಮನ್ಯೋ ಭುಜಗೋ ಧನಂಜಯಃ ।**
**ನಾಗಸ್ತಥೈವಾಶ್ವತರೋ ಹಿ ಕಂಕಣಂ**
**ಸವ್ಯೇತರೇ ತಕ್ಷಕ ಉತ್ತರಂ ತಥಾ ।**
**ನೀಲೋಽಪಿ ನೀಲಾಂಜನತುಲ್ಯವರ್ಣಃ**
**ಶ್ರೋಣೀತಟೇ ರಾಜತಿ ಸುಪ್ರತಿಷ್ಠಃ** ॥ ೨೭ ॥

---

ಹಸ್ತಾಭರಣಗಳಾಗಿವೆ. ನೀಲವೆಂಬ ಕಪ್ಪಾದ ಸರ್ಪವು ಕಟಿಸೂತ್ರವಾಗಿದೆ. ಈ ವೇಷಭೂಷಣಗಳನ್ನು ಹೊಂದಿರುವ ನಾನು ಹೇಗೆ ಐಶ್ವರ್ಯಶಾಲಿಯಾದೇನು. ನನ್ನನ್ನು ಆಶ್ರಯಿಸಿರುವ ನೀನೂ ಮನೆಮಠಮೊದಲಾದ ಐಶ್ವರ್ಯವನ್ನು ಅಪೇಕ್ಷಿಸಬಾರದು, ಎಂದು ಈ ಶಂಕರನ ಛಲೋಕ್ತಿಗೆ ತಾತ್ಪರ್ಯ. [ಇಲ್ಲಿ ಅನುರಕ್ತೆಯಾದ ಪಾರ್ವತೀ ದೇವಿಯ ಪ್ರಶ್ನೆಯು ಲೋಕಸಾಮಾನ್ಯದೃಷ್ಟಿಯಿಂದ ಪ್ರವೃತ್ತವಾಗಿದೆ. ಆದರೂ ಈ ಉತ್ತರವು ಅಸಮಂಜಸವೆಂದು ಭಾವಿಸಕೂಡದು. ಆಧ್ಯಾತ್ಮಿಕ ದೃಷ್ಟಿಯಿಂದ ಇದು ಸಮಂಜಸವಾಗಿದೆ. ಕರ್ಮಪರವಶನಾದ ಚೇತನನಿಗೆ ಆಯಾಯ ಕರ್ಮಾನುಗುಣ ವಾದ ಸುಖದುಃಖಾನುಭವವು ಅಪರಿಹಾರ್ಯವಾದದ್ದು. ದೇಶಕಾಲಾನುಬಂಧಿಗಳಾದ ವಾತಾತಪಗಳು ಇಂತಹ ಸುಖದುಃಖಗಳಿಗೆ ಕಾರಣವಾಗುತ್ತವೆ. ಸುಖಸಾಧನಗಳಿಂದ ಸುಖವನ್ನು ಹೊಂದಿ ಹಿಗ್ಗುವುದೂ, ದುಃಖಸಾಧನಗಳಿಂದ ಉಂಟಾಗಬಹುದಾದ ದುಃಖವನ್ನು ಹೋಗಲಾಡಿಸಲು ಗೃಹಕ್ಷೇತ್ರಾದಿಗಳನ್ನು ಸಂಗ್ರಹಿಸಲು ಪ್ರಯತ್ನಿಸು ವದೂ ಕರ್ಮಪರವಶನಾದ ಚೇತನನ ಸ್ವಭಾವ. ಆದುದರಿಂದ ಸುಖದುಃಖಗಳಲ್ಲಿ ಭೇದಭಾವನೆಯೂ ಅನುಕೂಲ್ಯಪ್ರಾತಿಕೂಲ್ಯಬುದ್ಧಿಯೂ ಚೇತನನಿಗೆ ಕರ್ಮಾಧೀನ ವಾದದ್ದು. ಯಾವನು ಕರ್ಮಪರವಶನಾಗದೆ ದಿವ್ಯಪ್ರಕೃತಿಯಾಗಿರುತ್ತಾನೆಯೊ ಅವನಿಗೆ ಕರ್ಮಾನುಬಂಧಿಯಾದ ಸುಖದುಃಖಭಾವನೆಯೇ ಇರುವದಿಲ್ಲ. ಆದುದರಿಂದ ಸುಖದಲ್ಲಿ ಆನುಕೂಲ್ಯಬುದ್ಧಿಯಿಂದ ಉತ್ಕರ್ಷವೂ ದುಃಖದಲ್ಲಿ ಪ್ರಾತಿಕೂಲ್ಯಬುದ್ಧಿ ಯಿಂದ ಜಿಹಾಸೆಯೂ ಉಂಟಾಗಲು ಕಾರಣವಿಲ್ಲ. ನಾನು ದಿವ್ಯಪ್ರಕೃತಿಯಾಗಿಯೂ ತಪಸ್ವಿಯಾಗಿಯೂ ಇರುತ್ತೇನೆ ಎಂಬ ವಿಷಯಕ್ಕೆ ನಾನು ಹೊದ್ದಿರುವ ವ್ಯಾಘ್ರ ಚರ್ಮವೇ ಸೂಚಕವಾಗಿದೆ. ಸಾಮಾನ್ಯಜನರಿಗೆ ಭಯಂಕರವಾಗಿಯೂ ಪ್ರತಿಕೂಲ ವಾಗಿಯೂ ಇರುವ ಸರ್ಪಗಳು ನನಗೆ ಅನುಕೂಲಗಳಾಗಿ ಭೂಷಣಗಳಾಗಿವೆ. ಆದ್ದರಿಂದ ಕರ್ಮಪರವಶನಾದ ಸಾಮಾನ್ಯಚೇತನರಂತೆ ನನ್ನನ್ನು ಭಾವಿಸಿ ನಿನ್ನ ಈ ಶಂಕೆಗಳು ಹೊರಟಿವೆ. ಇದು ಸರಿಯಲ್ಲವೆಂದು ಶಂಕರನ ಪ್ರತ್ಯುತ್ತರಕ್ಕೆ ಅಧ್ಯಾತ್ಮ ದೃಷ್ಟಿಯಿಂದ ಸಾಮಂಜಸ್ಯವನ್ನು ಏರ್ಪಡಿಸಿಕೊಳ್ಳಬೇಕು.]

ಪುಲಸ್ತ್ಯ ಉವಾಚ

ಇತಿ ವಚನಮಥೋಗ್ರಂ ಶಂಕರಾತ್ಸಾನ್ಮೃಡಾನೀ
ಶ್ರುತ ಮಪಿ ತದಸತ್ಯಂ ಶ್ರೀ ಮದಾಕರ್ಣ್ಯ ಭೀತಾ ।
ಅವನಿತಲಮವೇಕ್ಷ್ಯ ಸ್ವಾಮಿನೋ ವಾಸಕೃಚ್ಛ್ರಾ
ತ್ಪರಿವದತಿ ಸರೋಷಂ ಲಜ್ಜಯೋಚ್ಛ್ವಸ್ಯ ಚೋಷ್ಣಂ ॥ ೨೮ ॥

ದೇವ್ಯುವಾಚ

ಕಿಮೇವಂ ಸಂಶ್ರಿತಾಯಾಸ್ತು ಪ್ರಾವೃಟ್ಕಾಲೋ ಗಮಿಷ್ಯತಿ ।
ವೃಕ್ಷಮೂಲೇ ಸ್ಥಿತಾಯಾಸ್ತು ಸುನಯೇನ ವದಾವ್ಯಯ ॥ ೨೯ ॥

ಶಂಕರ ಉವಾಚ

ಘನಾವಸ್ಥಿತದೇಹಾಯಾಃ ಪ್ರಾವೃಟ್ಕಾಲಃ ಪ್ರಯಾಸ್ಯತಿ ।
ಯಥಾಂಬುಧಾರಾ ನ ತವ ನಿಪತಿಷ್ಯನ್ತಿ ವಿಗ್ರಹೆ ॥ ೩೦ ॥

---

೨೮. ಪುಲಸ್ತ್ಯರು ಕಥಾಭಾಗದ ಸಂಗತಿಗಾಗಿ ಹೇಳುತ್ತಾರೆ. ಈ ಪ್ರಕಾರವಾದ ಈಶ್ವರನ ಭಾವಗರ್ಭಿತವಾದ ವಾಕ್ಯವನ್ನೂ ಕೂಡ ಉಗ್ರವಾದ ನಿಷ್ಠುರವಚನವೆಂದೂ ಅಸತ್ಯವೆಂದೂ ಪಾರ್ವತಿಯು ಭಾವಿಸಿ ಭಯಪಟ್ಟು ರೋಷದಿಂದಲೂ ಲಜ್ಜೆಯಿಂದಲೂ ನಿಟ್ಟುಸುರುಬಿಟ್ಟು ಅಧೋಮುಖಳಾಗಿ ಸ್ವಾಮಿಯೊಡನೆ ಕ್ಲೇಶದಿಂದ ವಾಸಮಾಡುತ್ತಾ ಪ್ರಭುವನ್ನು ಕುರಿತು ಆಕ್ಷೇಪಿಸುತ್ತಾಳೆ.

೨೯. ಪ್ರಭುವೇ, ಇದೇನು ನಿನ್ನನ್ನು ಆಶ್ರಯಿಸಿರುವ ನಾನು ಈ ವರ್ಷಾಕಾಲವನ್ನು ಮರದಬುಡದಲ್ಲಿ ಹೀಗೆಯೇ ಕಳೆಯಬೇಕೇ? ನ್ಯಾಯಸಮ್ಮತವಾದ ಉತ್ತರವನ್ನು ಹೇಳು.

೩೦. ಈಶ್ವರನು ಹೇಳುತ್ತಾನೆ. ಮೇಘದ ಮೇಲುಭಾಗಕ್ಕೇರಿ ಕುಳಿತ ನಿನಗೆ ಈ ಮಳೆಗಾಲವು ಸುಖವಾಗಿ ಕಳೆದುಹೋಗುತ್ತದೆ, ನಿನ್ನ ದೇಹದಮೇಲೆ ಜಲಧಾರೆಗಳು ಬೀಳುವುದಿಲ್ಲ.

**ಪುಲಸ್ತ್ಯ ಉವಾಚ**

**ತತೋ ಹರಸ್ತದ್ಘನಖಂಡಮುನ್ನತಮಾರುಹ್ಯ ತಸ್ಥೌ ಸಹ ದಕ್ಷಕನ್ಯಯಾ ।**
**ತತೋಽಭವನ್ನಾಮ ಮಹೇಶ್ವರಸ್ಯ ಜೀಮೂತಕೇತುಸ್ತ್ವಿತಿ ವಿಶ್ರುತಂ ದಿವಿ**

**ಇತಿ ಶ್ರೀ ವಾಮನಪುರಾಣೆ ಹರಲಲಿತೆ ಪ್ರಥಮೋಽಧ್ಯಾಯಃ**

---

೩೧. ಪುಲಸ್ತ್ಯರು ಹೇಳುತ್ತಾರೆ. ಹೀಗೆ ಪ್ರತಿವಚನದಿಂದ ಪಾರ್ವತಿಯನ್ನು ಸಮಾಧಾನಪಡಿಸಿ ಈಶ್ವರನು ಆ ಮೇಘದ ಉನ್ನತವಾದ ಮೇಲ್ಭಾಗವನ್ನು ಹತ್ತಿ ಪಾರ್ವತಿಯೊಡನೆ ಅಲ್ಲಿ ಕುಳಿತನು. ಅದುಮೊದಲು ಈಶ್ವರನಿಗೆ ಜೀಮೂತಕೇತುವೆಂಬ ಹೆಸರು ಜಗತ್ತಿನಲ್ಲಿ ಪ್ರಖ್ಯಾತವಾಯಿತು.

ವಾಮನಪುರಾಣದ ಹರಲಲಿತವೆಂಬ ಪ್ರಥಮಾಧ್ಯಾಯವು ಇಲ್ಲಿಗೆ ಮುಗಿದಿದೆ.



## ಅಧ್ಯಾಯಾರ್ಥ ಸಂಗ್ರಹ

ಈ ಪ್ರಥಮಾಧ್ಯಾಯಕ್ಕೆ ಹರಲಲಿತವೆಂಬ ಹೆಸರು ಕೊಡಲ್ಪಟ್ಟಿದೆ. ಹರನ ವಿಲಾಸವನ್ನು ಪ್ರತಿಪಾದಿಸತಕ್ಕದ್ದೆಂದು ತಾತ್ಪರ್ಯ. ಇದರಲ್ಲಿ ಮಂದರಪರ್ವತದಲ್ಲಿ ಈಶ್ವರನಿಗೂ ಪಾರ್ವತಿಗೂ ಉಂಟಾದ ಸಂವಾದವು ವರ್ಣಿಸಲ್ಪಟ್ಟಿದೆ. ಇದರಲ್ಲಿ ಸಾಮಾನ್ಯಜನದೃಷ್ಟಿಯಿಂದ ಪಾರ್ವತಿಯ ಪ್ರಶ್ನೆಯೂ ಆಧ್ಯಾತ್ಮಿಕದೃಷ್ಟಿಯಿಂದ ಈಶ್ವರನ ಪ್ರತ್ಯುತ್ತರವೂ ನಿಬದ್ಧವಾಗಿದೆ. ತಾತ್ವಿಕವಾದ ಹರನ ಉತ್ತರವು ಪಾರ್ವತಿಗೆ ನ್ಯಾಯವೆಂದು ತೋರಲಿಲ್ಲವಾಗಿ ಅವಳ ಮನಸ್ಸಂತೋಷಕ್ಕೆ ತಕ್ಕಂತೆ ಈಶ್ವರನೂ ಅವಳನ್ನು ಅನುನಯಮಾಡಬೇಕಾಗಿ ಬಂದಿತು. ಈ ಅಧ್ಯಾಯದಲ್ಲಿ ಹರನಿಗೆ ಜೀಮೂತಕೇತುವೆಂಬ ಹೆಸರು ಬಂದುದಕ್ಕೆ ಕಾರಣವನ್ನು ವಿವರಿಸಲಾಗಿದೆ. ಈ ಅನುರಾಗಾತಿಶಯವು ಮುಂದೆ ಸತಿಯ ವಿಶ್ಲೇಷದಿಂದ ದುಃಖಿತನಾಗಿ ರೌದ್ರಾವೇಶದಿಂದ ಜೃಂಭಿಸುವ ರುದ್ರನ ಮುಂದಿನ ಕಥಾಭಾಗಕ್ಕೆ ಉಪೋದ್ಘಾತರೂಪವಾಗಿದೆ.

॥ ೬ ॥

# ಶ್ರೀವಾಮನಪುರಾಣಂ

## ದ್ವಿತೀಯೋಽಧ್ಯಾಯಃ

### ಪುಲಸ್ತ್ಯ ಉವಾಚ

**ತತಸ್ತ್ರಿನೇತ್ರಸ್ಯ ಗತಃ ಪ್ರಾವೃಟ್ಕಾಲೋ ಘನೋಪರಿ ।**
**ಲೋಕಾನನ್ದಕರೀ ರಮ್ಯಾ ಶರತ್ಸಮಭವನ್ಮುನೆ ॥ ೧ ॥**

**ತ್ಯಜನ್ತಿ ನೀಲಾಂಬುಧರಾ ನಭಸ್ತಲಂ**
**ವೃಕ್ಷಾಂಶ್ಚ ಕಂಕಾಃಸ್ಸರಿತಸ್ತಟಾನಿ ।**
**ಪದ್ಮಾನಿ ಗಂಧಂ ನಿಲಯಾನಿ ವಾಯಸಾಃ**
**ರುರುರ್ವಿಷಾಣಂ ಕಲುಷಂ ಜಲಾಶಯಾಃ ॥ ೨ ॥**

---

## ಎರಡನೆಯ ಅಧ್ಯಾಯವು

೧-೨. ಪುಲಸ್ತ್ಯರು ಮುಂದಿನ ವೃತ್ತಾಂತವನ್ನು ಹೇಳುತ್ತಾರೆ. ಅನಂತರ ಶಂಕರನು ಆ ಮೇಘದ ಮೇಲ್ಭಾಗದಲ್ಲೇ ವರ್ಷಾಕಾಲವನ್ನೆಲ್ಲಾ ಕಳೆದನು. ತರುವಾಯ ರಮಣೀಯವಾದ ಶರತ್ಕಾಲವು ಸನ್ನಿಹಿತವಾಯಿತು. ವರ್ಷಾಕಾಲದಲ್ಲಿ ಜಲಸಮೃದ್ಧಿಯಿಂದ ಕಪ್ಪಾಗಿದ್ದ ಮೇಘಗಳು ಆಕಾಶವನ್ನು ಬಿಡುತ್ತಿವೆ. ಶರತ್ಕಾಲದಲ್ಲಿ ನೀಲಮೇಘಗಳಿಲ್ಲದಿರುವುದರಿಂದ ಆಕಾಶವು ನಿರ್ಮಲವಾಗಿದೆ ಎಂದು ತಾತ್ಪರ್ಯ. ಹದ್ದು ಮೊದಲಾದ ಪಕ್ಷಿಗಳು ಮರಗಳನ್ನು ಬಿಟ್ಟು ಸಂಚರಿಸಲುಪಕ್ರಮಿಸಿವೆ. ಮಳೆಗಾಲದಲ್ಲಿ ಸಂಚಾರಕ್ಕೆ ತೊಂದರೆ ಇದ್ದುದರಿಂದ ಮರಗಳನ್ನೇ ಆಶ್ರಯಿಸಿಕೊಂಡಿರುತ್ತಿದ್ದವು ಎಂದು ತಾತ್ಪರ್ಯ. ನದಿಗಳೆಲ್ಲವೂ ದಡಗಳನ್ನು ಬಿಡುತ್ತಿವೆ. ವರ್ಷಾಕಾಲದಲ್ಲಿ ಹೆಚ್ಚಾದ ಪ್ರವಾಹದಿಂದ ದಡವನ್ನು ಆಕ್ರಮಿಸಿಕೊಂಡಿದ್ದ ನದಿಗಳು ಈಗ ಪ್ರವಾಹವು ಕಡಿಮೆಯಾದ್ದರಿಂದ ದಡವನ್ನು ಬಿಟ್ಟು ಹಳ್ಳದಲ್ಲಿ ಹರಿಯುತ್ತಿವೆ ಎಂದು ತಾತ್ಪರ್ಯ. ಪದ್ಮಗಳೆಲ್ಲವೂ ಗಂಧವನ್ನು ಬಿಡುತ್ತಿವೆ. ಮಳೆಗಾಲದಲ್ಲಿ ಮೊಗ್ಗಾಗಿದ್ದ ಪದ್ಮಗಳಲ್ಲಿ

ವಿಕಾಸಮಾಯಾನ್ತಿ ಚ ಪಂಕಜಾನಿ
ಚಂದ್ರಾಂಶವೋ ಭಾನ್ತಿ ಲತಾಃ ಸುಪುಷ್ಪಾಃ ।
ನಂದಂತಿ ಕೃಷ್ಣಾನ್ಯಪಿ ಗೋಕುಲಾನಿ
ಸನ್ತಶ್ಚ ಸಂತೋಷ ಮನುವ್ರಜಂತಿ । ॥ ೩ ॥

ಸರಸ್ಸು ಪದ್ಮಂ ಗಗನೇ ಚ ತಾರಕಾ
ಜಲಾಶಯೇಷ್ವೇವ ತಥಾ ಪಯಾಂಸಿ ।
ಸತಾಂ ಚ ಚಿತ್ತಂ ಹಿ ದಿಶಾಂ ಮುಖೈಃ
ಸಮಂ ವೈಮಲ್ಯ ಮಾಯಾಂತಿ ಶಶಾಂಕಕಾಂತಯಃ ॥ ೪ ॥

---

ವಾಸನೆಹುದುಗಿರಲು ಅವಕಾಶವಿತ್ತು. ಶರತ್ಕಾಲದಲ್ಲಿ ದಳಗಳೆಲ್ಲವೂ ಕೆದರಿ ವಿಕಾಸ ಉಂಟಾಗಿರುವುದರಿಂದ ಸುವಾಸನೆಯು ಪದ್ಮಗಳಲ್ಲಿ ನಿಲ್ಲಲು ಅವಕಾಶವಿಲ್ಲವೆಂದು ಭಾವ. ಕಾಗೆಗಳೂ ಕೂಡ ಸಂಚಾರಸೌಕರ್ಯಕ್ಕಾಗಿ ಗೂಡುಗಳನ್ನು ಬಿಡುತ್ತಿವೆ. ಗಂಡು ಜಿಂಕೆಗಳು ಮಳೆಗಾಲದಲ್ಲಿ ಕೆಸರಿನಿಂದ ಕೂಡಿದ ಕೊಂಬುಗಳನ್ನು ಸ್ವಚ್ಛವಾಗಿಮಾಡಿ ಕೊಳ್ಳುತ್ತಿವೆ. ಜಲಾಶಯಗಳೆಲ್ಲವೂ ಕೆಸರಿಲ್ಲದೆ ಪ್ರಸನ್ನವಾಗುತ್ತಿವೆ.

೩-೪. ಕಮಲಗಳೂ ಚಂದ್ರಕಿರಣಗಳೂ ಪ್ರಕಾಶಿಸುತ್ತಿವೆ. ಮಳೆಗಾಲದಲ್ಲಿ ಜಲದಆಧಿಕ್ಯದಿಂದ ನೀರಿನಲ್ಲಿ ಮೊಗ್ಗಾಗಿ ಮುಳುಗಿರುವ ಕಮಲಗಳಿಗೆ ಪ್ರಕಾಶವಿರುವದಿಲ್ಲ. ಶರತ್ಕಾಲದಲ್ಲಿ ಈ ವಿಧವಾದ ತೊಂದರೆಗಳಿಲ್ಲದಿರುವುದರಿಂದ ಪ್ರಕಾಶಿಸುತ್ತಿವೆ ಎಂದು ತಾತ್ಪರ್ಯ. ಲತೆಗಳು ಪುಷ್ಪಸಮೃದ್ಧಿಯಿಂದ ಕಳಕಳಿಸುತ್ತಿವೆ. ವರ್ಷಾಕಾಲದಲ್ಲಿ ದನಗಳು ಉಳುಮೆ ಮೊದಲಾದ ಕೆಲಸಗಳಿಂದ ಶ್ರಾಂತಿಗೊಂಡಿದ್ದರೂ ಈಗ ಸಂತೋಷದಿಂದಿವೆ. ಸತ್ಪುರುಷರು ಸಂತೋಷದಿಂದಿರುತ್ತಾರೆ. ವರ್ಷಾಕಾಲದಲ್ಲಿ ಕರ್ಮಾನುಷ್ಠಾನವೇ ಮೊದಲಾದ ಕರ್ತವ್ಯಕಾರ್ಯಗಳಿಗೆ ತೊಂದರೆ ಇತ್ತು. ಶರತ್ಕಾಲದಲ್ಲಿ ಅಂತಹ ತೊಂದರೆಗಳಿಲ್ಲದೆ ಅತಿಥಿಸೇವೆಯೇ ಮೊದಲಾದ ಕೆಲಸಗಳಿಗೆ ಆನುಕೂಲ್ಯ ಉಂಟೆಂದು ತಾತ್ಪರ್ಯ. ಸರೋವರಗಳಲ್ಲಿ ಪದ್ಮಗಳೂ ಆಕಾಶದಲ್ಲಿ ನಕ್ಷತ್ರಗಳೂ ಕೆರೆಕಟ್ಟೆಗಳಲ್ಲಿ ನೀರೂ ಸಹ ಸ್ವಚ್ಛವಾಗಿವೆ. ಸತ್ಪುರುಷರ ಮನಸ್ಸಿನಂತೆ ದಿಗ್ಮುಖಗಳೊಡನೆ ಚಂದ್ರಕಿರಣಗಳೂ ನಿರ್ಮಲವಾಗುತ್ತಿವೆ.

ಏತಾದೃಶೆ ಹರಃ ಕಾಲೆ ಮೇಘಪೃಷ್ಠಾಧಿವಾಸಿನೀಂ ।
ಸತೀಮಾದಾಯ ಶೈಲೇಂದ್ರಂ ಮಂದರಂ ಸಮುಪಾಯಯೌ ॥ ೫ ॥

ತತೋ ಮಂದರಪೃಷ್ಠೆಸೌ ಸ್ಥಿತಸ್ಸಮಶಿಲಾತಲೆ ।
ರೇಮೆ ಸ ಶಂಭುರ್ಭಗವಾನ್ಸತ್ಯಾ ಸಹಮಹಾದ್ಯುತಿಃ ॥ ೬ ॥

ತತೋ ಗತಾಯಾಂ ಶರದಿ ಪ್ರಬುದ್ಧೇ ಚೈವ ಕೇಶವೆ ।
ದಕ್ಷಃ ಪ್ರಜಾಪತಿ ಶ್ರೇಷ್ಠೋ ಯಷ್ಟುಮಾರಭತ ಕ್ರತುಂ ॥ ೭ ॥

ದ್ವಾದಶೈವ ಸ ಚಾ ದಿತ್ಯಾ೯ ಶಕ್ರಾದೀಂಶ್ಚ ಸುರೋತ್ತಮಾ೯ ।
ಸಕಶ್ಯಪಾನ್ಸಮಾಮಂತ್ರ್ಯ ಸದಸ್ಯಾನ್ಸಮಚೀಕರತ್ ॥ ೮ ॥

ಅರುನ್ಧತ್ಯಾನುಸಹಿತಂ ವಸಿಷ್ಠಂ ಶಂಸಿತವ್ರತಂ ।
ಸಹಾನುಸೂಯಯಾತ್ರಿಂ ಚ ಸಹ ಧೃತ್ಯಾ ಚಕೌಶಿಕಂ ॥ ೯ ॥

---

೫-೬. ಇಂತಹ ಶರತ್ಕಾಲದಲ್ಲಿ ಮೇಘದ ಮೇಲ್ಭಾಗದಲ್ಲಿ ವಾಸಿಸುತ್ತಿದ್ದ ಸತೀದೇವಿಯೊಡನೆ ಶಂಕರನು ಮಂದರಪರ್ವತವನ್ನೇ ಬಂದು ಸೇರಿದನು. ಅನಂತರ ಮಂದರಪರ್ವತದ ಸಮವಾಗಿರುವ ಮೇಲ್ಭಾಗದಲ್ಲಿ ಸತೀದೇವಿಯೊಡನೆ ಶಂಕರನು ಸಂತೋಷದಿಂದ ವಿಹರಿಸುತ್ತಿದ್ದನು.

೭-೧೦. ಈ ಪ್ರಕಾರ ಶರತ್ಕಾಲವು ಕಳೆದು ಮಹಾವಿಷ್ಣುವಿನ ಪ್ರಬೋಧಕಾಲವು (ಉತ್ತರಾಯಣ) ಸನ್ನಿಹಿತವಾಗಲಾಗಿ ದಕ್ಷಪ್ರಜಾಪತಿಯು ಯಜ್ಞಮಾಡಲು ಪ್ರಾರಂಭಿಸಿದನು. ಆ ಯಜ್ಞದ ಕ್ರಮವನ್ನೇ ವಿವರಿಸುತ್ತಾರೆ. ಆ ಮಹಾಯಜ್ಞದಲ್ಲಿ ದಕ್ಷಪ್ರಜಾಪತಿಯು ದ್ವಾದಶಾದಿತ್ಯರನ್ನೂ, ಇಂದ್ರನೇ ಮೊದಲಾದ ದೇವತೋತ್ತಮರನ್ನೂ, ಕಶ್ಯಪರನ್ನೂ ಸಹ ಕರೆಯಿಸಿ ಸದಸ್ಯರನ್ನಾಗಿ ಏರ್ಪಡಿಸಿದನು. ಮತ್ತು ಅರುಂಧತಿಯೊಡನೆ ವ್ರತನಿಷ್ಠರಾದ ವಸಿಷ್ಠರನ್ನೂ (ಅರುಂಧತಿಯೊಡಗೂಡಿದ ವಸಿಷ್ಠರಿಗೇ ಪೂಜ್ಯತೆಯು ಹೆಚ್ಚು ಎಂದು ಶಾಸ್ತ್ರಮರ್ಯಾದೆ.) ಅನಸೂಯಾದೇವಿಯೊಡನೆ ಅತ್ರಿಮಹರ್ಷಿಗಳನ್ನೂ, ಧೃತೀದೇವಿಯೊಡನೆ ಕೌಶಿಕಮಹರ್ಷಿಗಳನ್ನೂ, ಅಹಲ್ಯೆಯೊಡಗೂಡಿದ ಗೌತಮರನ್ನೂ, ಅಮಾಯೆಯೊಡನೆ ಭರದ್ವಾಜರನ್ನೂ, ಚಂದ್ರಾದೇವಿಯೊಡನೆ ಅಂಗಿರಸರನ್ನೂ ಆಹ್ವಾನಿಸಿ ಯಜ್ಞದಲ್ಲಿ ಸದಸ್ಯರನ್ನಾಗಿ

**ಅಹಲ್ಯಯಾ ಗೌತಮಂ ಚ ಭರದ್ವಾಜಮಮಾಯಯಾ ।**
**ಚಂದ್ರಯಾ ಸಹಿತಂ ಬ್ರಹ್ಮನ್ ಋಷಿಮಂಗಿರಸಂ ತಥಾ ॥ ೧೦ ॥**

**ಆಮಂತ್ರ್ಯ ಕೃತವಾನ್ದಕ್ಷಃ ಸದಸ್ಯಾನ್ಯಜ್ಞಕರ್ಮಣಿ ।**
**ಸದಸ್ಯಾನ್ಗುಣಸಂಪನ್ನಾನ್ ವೇದವೇದಾಂಗಪಾರಗಾನ್ ॥ ೧೧ ॥**

**ಧರ್ಮಂ ಚ ಸ ಸಮಾಹೂಯ ಭಾರ್ಯಯ್ಯಾಸಿಂಹಯಾ ಸಹ ।**
**ನಿಮಂತ್ರ್ಯ ಯಜ್ಞವಾಟಸ್ಯ ದ್ವಾರಪಾಲಾರ್ಥಮಾದಿಶತ್ ॥ ೧೨ ॥**

**ಅರಿಷ್ಟನೇಮಿನಂ ಚಕ್ರೆ ಇಧ್ಮಾಹರಣಕಾರಿಣಂ ।**
**ಚಂದ್ರಯಾ ಸಹಿತಂ ಬ್ರಹ್ಮನ್ ಋಷಿಮಂಗಿರಸಂ ತಥಾ ॥ ೧೩ ॥**

**ನ್ಯಪಾನ್ನಪಾನ ಸಂಸ್ಕಾರೆ ಸಮ್ಯಗ್ಧಕ್ಷಃ ಪ್ರಯುಕ್ತವಾನ್ ।**
**ಭೃಗುಂ ಚ ಸತ್ರ ಸಂಸ್ಕಾರೆ ಸಮ್ಯಗ್ದಕ್ಷಃ ಪ್ರಯುಕ್ತವಾನ್ ॥ ೧೪ ॥**

**ತಥಾ ಚಂದ್ರಮಸಂ ದೇವಂ ರೋಹಿಣ್ಯಾ ಸಹಿತಂ ಶುಚಿಂ ।**
**ಧನಾನಾಮಾಧಿಪತ್ಯೆ ಸ ಯುಕ್ತವಾನ್ ಹಿ ಪ್ರಜಾಪತಿಃ ॥ ೧೫ ॥**

**ಜಾಮಾತ್ರ್ನ್ ದುಹಿತ್ರ್ಶ್ಚೈವ ದೌಹಿತ್ರಾಂಶ್ಚ ಪ್ರಜಾಪತಿಃ ।**
**ಸಶಂಕರಾಂ ಸತೀಂ ಮುಕ್ತ್ವಾ ಮಖೆ ಸರ್ವಾನ್ಯ್ನಮಂತ್ರಯತ್ ॥ ೧೬ ॥**

---

ಮಾಡಿದನು. ಮಹಾಯಜ್ಞದ ಗೌರವಕ್ಕೆ ತಕ್ಕಂತೆ ಮಹಾಪುರುಷರನ್ನೇ ಸದಸ್ಯರನ್ನಾಗಿ ಆರಿಸಿದರು ಎಂದು ತಾತ್ಪರ್ಯ.

೧೧-೧೬. ಈ ಪ್ರಕಾರ ವೇದವೇದಾಂಗಪಾರಂಗತರಾಗಿಯೂ, ಗುಣಶಾಲಿಗಳಾಗಿಯೂ ಇರುವ ಸದಸ್ಯರನ್ನು ಆರಿಸಿ ಭಾರ್ಯೆಯಾದ ಅಸಿಹ್ಮೆಯೊಡನೆ ಯಮನನ್ನು ಆಹ್ವಾನಿಸಿ ಯಜ್ಞಶಾಲೆಯ ದ್ವಾರಪಾಲಕನನ್ನಾಗಿ ಏರ್ಪಡಿಸಿದನು. ಅರಿಷ್ಟನೇಮಿಯನ್ನು ಸಮಿದಾಹರಣಕ್ಕಾಗಿ ಏರ್ಪಡಿಸಿದನು. ಅಂಗಿರಸರನ್ನು ಭಾರ್ಯೆಯಾದ ಚಂದ್ರಾದೇವಿಯೊಡನೆ ಅನ್ನಪಾನಾದಿಗಳನ್ನು ಸಂಸ್ಕರಿಸುವ ಕಾರ್ಯಕ್ಕೆ ಅಪ್ಪಣೆ ಮಾಡಿದನು. ಭೃಗುಮಹರ್ಷಿಯನ್ನು ಸತ್ರವನ್ನು ಸಂಸ್ಕರಿಸುವ ಕಾರ್ಯಕ್ಕೆ ನೇಮಿಸಿದನು. (ಸತ್ರವೆಂದರೆ ಯಾಗವಿಶೇಷ.) ಹಾಗೆಯೇ ರೋಹಿಣಿಯೊಡಗೂಡಿದ ಚಂದ್ರನನ್ನು ಧನಾಧ್ಯಕ್ಷ ಕಾರ್ಯದಲ್ಲಿ ನಿಯಮಿಸಿದನು. ಇತರ ಅಳಿಯಂದಿರು ಹೆಣ್ಣು ಮಕ್ಕಳು, ಮೊಮ್ಮಕ್ಕಳು ಎಲ್ಲರನ್ನೂ ಆಹ್ವಾನಿಸಿದನು. ಸತೀದೇವಿಯನ್ನೂ ಶಂಕರನನ್ನೂ ಸಹ ಆಹ್ವಾನಿಸಲೇ ಇಲ್ಲ.

**ನಾರದ ಉವಾಚ**

**ಕಿಮರ್ಥಂ ಲೋಕಪತಿನಾ ಧನಾಧ್ಯಕ್ಷೋ ಮಹೇಶ್ವರಃ ।**
**ಜ್ಯೇಷ್ಠಶ್ರೇಷ್ಠೋವರಿಷ್ಠೋಽಪಿ ಆದ್ಯೋಽಪಿ ನ ನಿಮಂತ್ರಿತಃ ॥ ॥ ೧೭ ॥**

**ಪುಲಸ್ತ್ಯ ಉವಾಚ**

**ಜ್ಯೇಷ್ಠಶ್ರೇಷ್ಠೋ ವರಿಷ್ಠೋಽಪಿ ಆದ್ಯೋಽಪಿ ಭಗವಾನ್ ಶಿವಃ ।**
**ಕಪಾಲೀತಿ ವಿದಿತ್ವೇಶೊ ದಕ್ಷೇಣ ನ ನಿಮಂತ್ರಿತಃ ॥ ೧೮ ॥**

**ನಾರದ ಉವಾಚ**

**ಕಿಮರ್ಥಂ ದೇವತಾಶ್ರೇಷ್ಠಃ ಶೂಲಪಾಣಿಸ್ತ್ರಿಲೋಚನಃ ।**
**ಕಪಾಲೀ ಭಗವಾನ್ ಜಾತಃ ಕರ್ಮಣಾ ಕೇನ ಶಂಕರಃ ॥ ೧೯ ॥**

---

೧೭. ಈ ವೃತ್ತಾಂತವನ್ನು ಕೇಳಿ ನಾರದರು ಪ್ರಶ್ನೆಮಾಡುತ್ತಾರೆ. ಲೋಕನಾಥನಾದ ದಕ್ಷಪ್ರಜಾಪತಿಯು ಎಲ್ಲರನ್ನೂ ಆಹ್ವಾನಿಸಿ ಜ್ಯೇಷ್ಠನಾಗಿಯೂ, ಮಹಾತ್ಮನಾಗಿಯೂ, ಧನಾಧಿಪತಿಯಾಗಿಯೂ ಇರುವ ಈಶ್ವರನನ್ನು ಏತಕ್ಕೆ ಆಹ್ವಾನಿಸಲಿಲ್ಲ.

೧೮. ಪುಲಸ್ತ್ಯರು ಹೇಳುತ್ತಾರೆ :— ಜ್ಯೇಷ್ಠನಾಗಿಯೂ, ಶ್ರೇಷ್ಠನಾಗಿಯೂ, ಆದಿಪುರುಷನಾಗಿಯೂ ಇರುವ ಶಿವನನ್ನು ಕಪಾಲೀ ಎಂಬ ಕಾರಣದಿಂದ (ಅಮಙ್ಗಲಕರ) ದಕ್ಷನು ಆಹ್ವಾನಿಸಲಿಲ್ಲ.

೧೯. ನಾರದರು ಪುನಃ ಪ್ರಶ್ನೆ ಮಾಡುತ್ತಾರೆ. ದೇವತಾಶ್ರೇಷ್ಠನಾದ ಇತರಾಸಾಧಾಣರವಾದ ತ್ರಿನೇತ್ರತ್ವವನ್ನೂ, ಶೂಲಾಯುಧವನ್ನೂ ಹೊಂದಿರುವ ಪೂಜ್ಯನಾದ ಶಂಕರನು ಯಾವ ಕರ್ಮದಿಂದ ಕಪಾಲಿಯಾಗಿ ಪರಿಣಮಿಸಿದನು. [ಇಲ್ಲಿ ಆಯುಧ ವಿಶೇಷ ಸ್ವೀಕಾರದಿಂದಲೂ, ತ್ರಿನೇತ್ರತ್ವದಿಂದಲೂ ಶಂಕರನಲ್ಲಿ ಮಹಾತ್ಮ್ಯವನ್ನು ಒಪ್ಪಿಕೊಂಡು ಕಪಾಲಿತ್ವ ಪ್ರಯುಕ್ತವಾದ ಅಮಂಗಳ ಸಂಸರ್ಗಕ್ಕೆ ಕಾರಣವೇನೆಂದು ಪ್ರಶ್ನಿಸುವ ನಾರದರಿಗೆ ಕಾರಣ ವಿಶೇಷ ಜಿಜ್ಞಾಸೆಯಲ್ಲಿ ತಾತ್ಪರ್ಯ, ದುಃಖ ಅಥವಾ ಅಕೀರ್ತಿ ಇವುಗಳಿಗೆ ಕಾರಣವಾದ ಕರ್ಮ ಸಂಬಂಧವು ಶಂಕರನಲ್ಲಿಲ್ಲವಾದ್ದರಿಂದ ಅಂತಹ ಕಾರ್ಯದಲ್ಲಿ, ಮಹಾತ್ಮನಿಗೂ ಪ್ರವೃತ್ತಿಯು ಹೇಗೆ ಉಂಟಾಯಿತು. ಎಂದು, ಮಹಾತ್ಮರಿಗೂ ಅಹಂಕಾರ ಸಂಬಂಧದಿಂದ ಆಗಬಹುದಾದ ದುಷ್ಪರಿಣಾಮಗಳು ಅನಿವಾರ್ಯವೆಂಬ ಉತ್ತರವು ಮುಂದಿನ ಕಥಾ ಭಾಗದಿಂದ ವ್ಯಕ್ತವಾಗುತ್ತದೆ]

**ಶೃಣುಷ್ವಾವಹಿತೋ ಭೂತ್ವಾ ಕಥಾಮೇತಾಂ ಪುರಾತನೀಂ ।**
**ಪ್ರೋಕ್ತಾಂ ಹ್ಯಾದಿಪುರಾಣೇಷು ಬ್ರಹ್ಮಣಾ ವ್ಯಕ್ತಮೂರ್ತಿನಾ ॥ ೨೦ ॥**

**ಪುರಾ ತ್ವೇಕಾರ್ಣವೇ ಲೋಕೇ ನಷ್ಟೇ ಸ್ಥಾವರಜಂಗಮೇ ।**
**ನಷ್ಟಚಂದ್ರಾರ್ಕನಕ್ಷತ್ರೇ ಪ್ರನಷ್ಟಪವನಾನಲೇ ॥ ೨೧ ॥**

**ಅಪ್ರತರ್ಕ್ಯಮವಿಜ್ಞೇಯಂ ಭಾವಾಭಾವವಿವರ್ಜಿತಂ ।**
**ನಿಮಗ್ನಪರ್ವತತರುಂ ತಮೋಭೂತಂ ಸುದುರ್ದಿನಂ ॥ ೨೨ ॥**

---

೨೦-೨೨. ಪುಲಸ್ತ್ಯರು ಹೇಳುತ್ತಾರೆ :—ಮಹರ್ಷಿಯೇ! ಅವಧಾನದಿಂದ ಈ ಕಥೆಯನ್ನು ಕೇಳು. ಅನಾದಿಯಾದ ಈ ಕಥೆಯು ವ್ಯಕ್ತರೂಪಿಯಾದ ಬ್ರಹ್ಮನಿಂದ ಆದಿಪುರಾಣದಲ್ಲಿ ಹೇಳಲ್ಪಟ್ಟಿದೆ. ಸೃಷ್ಟಿಗೆ ಮೊದಲು ಪ್ರಪಂಚವೆಲ್ಲವೂ ಜಲಮಯವಾಗಿ ಸ್ಥಾವರಜಂಗಮಗಳೆಲ್ಲವೂ ಚಂದ್ರ, ನಕ್ಷತ್ರ, ಅಗ್ನಿ, ವಾಯು ಮೊದಲಾದ ದೇವತೆಗಳೆಲ್ಲವೂ ನಷ್ಟವಾಗಿ, ಇದು ಹೇಗಿದೆ ಎಂಬ ಭಾವನೆಗೆ ಅವಕಾಶವಿಲ್ಲದಂತೆಯೂ ಭಾವಪದಾರ್ಥ ಅಭಾವಪದಾರ್ಥ ಎಂಬ ವಿವೇಚನೆಗೆ ಅವಕಾಶವಿಲ್ಲದಂತೆಯೂ ತಮೋರೂಪವಾದ ಅವಸ್ಥೆಯಿಂದ ಜಗತ್ತು ಆಕ್ರಮಿಸಲ್ಪಡುತ್ತದೆ. ಮಹಾಪ್ರಳಯವೆಂದು ತಾತ್ಪರ್ಯ. ಆ ಕಾಲದಲ್ಲಿ ಎಲ್ಲಾ ಕಾರ್ಯವಸ್ತುಗಳೂ, ಕಾರಣಾವಸ್ಥೆಯನ್ನು ಹೊಂದಿ ತಮಸ್ಸೆಂಬ ಸೂಕ್ಷ್ಮಾವಸ್ಥೆಯಲ್ಲಿ ಲೀನವಾಗುತ್ತವೆ. ಆ ತಮಸ್ಸೂ ಕೂಡ ಪರಬ್ರಹ್ಮದಲ್ಲಿ ಸಂಶ್ಲೇಷ ಹೊಂದಿ ವಿಭಾಗಾನರ್ಹವಾದ ಸ್ಥಿತಿಯಲ್ಲಿರುತ್ತದೆ ಎಂದು ತಾತ್ಪರ್ಯ. ಅಂತಹ ತಮೋರೂಪವಾದ ಮಹಾಂಧಕಾರದಲ್ಲಿ ಸರ್ವ ಕಾರಣನಾದ ಶ್ರೀಮನ್ನಾರಾಯಣನೊಬ್ಬನೇ ತನ್ನ ಲೀಲೆಗಾಗಿ ಅನೇಕ ವರ್ಷ ಸಹಸ್ರ ಪರಿಮಿತವಾದ ರಾತ್ರಿಯಲ್ಲಿ ಯೋಗನಿದ್ರೆಯಿಂದ ಮಲಗಿರುತ್ತಾನೆ. ರಾತ್ರಿಯ ಕೊನೆಯಲ್ಲಿ ರಜೋಮಯವಾದ ಮೂರ್ತಿಯನ್ನು ಹೊಂದಿ ಪುನಃ ಲೋಕಗಳನ್ನು ಸೃಷ್ಟಿಮಾಡುತ್ತಾನೆ. [ಈ ಸೃಷ್ಟಿ ಪ್ರಕರಣಗಳಲ್ಲಿ ಪ್ರಮಾಣಭೂತವಾದ ಬೇರೆ ಸ್ಮೃತಿಗಳ ಸಂವಾದದಿಂದ ಅರ್ಥವ್ಯವಸ್ಥೆಯನ್ನು ನಿರ್ಧರಿಸಬೇಕಾಗುತ್ತದೆ. ಲೋಕದ ಸೃಷ್ಟಿ ಎಂದರೆ ಚೇತನಾಚೇತನಾತ್ಮಕವಾದ ಪ್ರಪಂಚದ ಆವಿರ್ಭಾವ ಚೇತನರುಗಳಿಗೆ ಸ್ವರೂಪವು ನಿತ್ಯವಾದ್ದರಿಂದ ಉತ್ಪತ್ತಿಯು ಬಾಧಿತವಾಗುತ್ತದೆ. ಅಚೇತನಗಳಿಗೆ ಮುಖ್ಯವಾದ ಉತ್ಪತ್ತಿ ಇರಬಹುದು. ನಿತ್ಯರಾದ ಚೇತನರುಗಳಿಗೆ ಸೃಷ್ಟಿಕಾಲದಲ್ಲಿ ದೇಹೇಂದ್ರಿಯ ಸಂಯೋಗವೇ ಉತ್ಪತ್ತಿ. ಈ ವಿಧವಾದ ಉತ್ಪತ್ತಿಯು ಪರಮಾತ್ಮನಿಂದ ಅಧಿಷ್ಠಿತವಾದ ಪ್ರಕೃತಿಯಿಂದ ಉಂಟಾಗುತ್ತದೆ. "ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ

**ತಸ್ಮಿನ್ ಸ ಶೇತೆ ಭಗವಾನ್ ನಿಶಾಂ ವರ್ಷಸಹಸ್ರಕೀಂ ।**
**ರಾತ್ರ್ಯಂತೇ ಸೃಜತೆ ಲೋಕಾನ್ರಾಜಸಂ ರೂಪಮಾಸ್ಥಿತಃ ॥ ೨೩ ॥**

**ರೇಜೆ ಸ ಪಂಚವದನೋ ವೇದವೇದಾಂಗಪಾರಗಃ ।**
**ಸ್ರಷ್ಟಾ ಚರಾಚರ ಸ್ಯಾಸ್ಯ ಜಗತೊ ದ್ಭುತದರ್ಶನಃ ॥ ೨೪ ॥**

**ತಮೋಮಯಸ್ತಥೈವಾನ್ಯಸ್ಸಮುದ್ಭೂತಸ್ತ್ರಿಲೋಚನಃ ।**
**ಶೂಲಪಾಣಿಃ ಕಪರ್ದೀ ಚ ಅಕ್ಷಮಾಲಾಂ ಚ ದರ್ಶಯನ್ ॥ ೨೫ ॥**

---

ಸಚರಾಚರಮ್ " ಎಂಬ ಗೀತಾವಚನವೂ ಇದಕ್ಕೆ ಪ್ರಮಾಣ. ಈ ವಿವೇಚನೆ ಇಲ್ಲದಿದ್ದರೆ ಗುಣತ್ರಯಾತೀತನಾದ ಪರಮಾತ್ಮನಿಂದ ರಜಸ್ತಮೋಮಯವಾದ ಚೇತನ ಸೃಷ್ಟಿಯು ಬಾಧಿತವಾಗುತ್ತದೆ. ಸೃಷ್ಟಿಯೂ ಸಹ ಸಮಷ್ಟಿವ್ಯಷ್ಟಿಭೇದದಿಂದ ಎರಡು ವಿಧ. ಈ ಪುರಾಣದಲ್ಲಿ ಸೃಷ್ಟಿಕ್ರಮವು ಸಂಗ್ರಹವಾಗಿ ರೂಪಿಸಲ್ಪಟ್ಟಿದೆ.]

೨೪. ಕಾರಣರೂಪಿಯಾದ ಆ ಪರಮಾತ್ಮನು ಐದು ಮುಖವುಳ್ಳವನಾಗಿಯೂ, ವೇದವೇದಾಂಗಪಾರಂಗತನಾಗಿಯೂ ಆಶ್ಚರ್ಯಕರನಾದ ಬ್ರಹ್ಮರೂಪದಿಂದ ಪ್ರಕಾಶಿಸಿದನು. ಇದು ಕೇವಲ ಶಬ್ದಾರ್ಥ. ತಾತ್ಪರ್ಯಾರ್ಥವನ್ನು ಹೀಗೆ ಗ್ರಹಿಸಬೇಕು : ರಜೋಗುಣದ ಆಧಿಕ್ಯವುಳ್ಳ ಪ್ರಕೃತಿಯ ಸಂಬಂಧದಿಂದ (ದೇಹೇಂದ್ರಿಯಾದಿ ಸಂಸರ್ಗದಿಂದ) ಜಗತ್ಸೃಷ್ಟಿಗಾಗಿ ಒಬ್ಬ ಚೇತನನನ್ನು ಪರಮಾತ್ಮನು ತನ್ನ ಸಂಕಲ್ಪದಿಂದ ಉಂಟು ಮಾಡಿದನು. ಆ ಚೇತನನಿಗೆ ಸೃಷ್ಟಿಕಾರ್ಯದ ಸೌಕರ್ಯಕ್ಕಾಗಿ ವೇದವೇದಾಂಗಗಳನ್ನುಪದೇಶಿಸಿ ಸರ್ವಜ್ಞತೆಯುಂಟಾಗುವಂತೆ ಶಿಕ್ಷಿಸಿ, ಆಧಿಕಾರಿಕಪುರುಷನನ್ನಾಗಿ ಏರ್ಪಡಿಸಿ ತಾನೂ ಸಹ ಅಂತರ್ಯಾಮಿ ರೂಪದಿಂದ ಪ್ರವರ್ತಕನಾಗಿ ನಿಂತನು. ಎಂಬು ತಾತ್ಪರ್ಯ.

೨೫. ಸೃಷ್ಟಿಯಲ್ಲಿ ಅಧಿಕೃತನಾದ ಆ ಚೇತನನಿಂದ ತಮೋಗುಣದ ಆಧಿಕ್ಯವುಳ್ಳ ಪ್ರಕೃತಿಯ ಸಂಸರ್ಗದಿಂದ ತ್ರಿಲೋಚನನಾಗಿಯೂ, ತ್ರಿಶೂಲಪಾಣಿಯಾಗಿಯೂ, ಜಟಾಧಾರಿಯಾಗಿಯೂ, ಅಕ್ಷಮಾಲೆಯನ್ನು ಹೊಂದಿರುವ ಒಬ್ಬ ಚೇತನನು ಉತ್ಪನ್ನನಾದನು.

ತತೊ ಮಹಾತ್ಮಾಹ್ಯಸೃಜದಹಂಕಾರಂ ಸುದಾರುಣಂ ।
ಯೇನಾಕ್ರಾನ್ತಾವುಭೌ ದೇವೌ ತಾವೇವ ಬ್ರಹ್ಮಶಂಕರೌ ॥ ೨೬ ॥

ಅಹಂಕಾರಾವೃತೋರುದ್ರಃ ಪ್ರತ್ಯುವಾಚ ಪಿತಾಮಹಂ ।
ಕೊ ಭವಾನಿಹ ಸಂಪ್ರಾಪ್ತಃ ಕೇನ ಸೃಷ್ಟೋಽಸಿ ಮಾಂ ವದ ॥ ೨೭ ॥

ಪಿತಾಮಹೋಽಪ್ಯಹಂಕಾರೀ ಪ್ರತ್ಯುವಾಚಾಥಕೋ ಭವಾನ್ ।
ಭವತೋ ಜನಕಃ ಕೋಽತ್ರ ಜನನೀ ವಾ ತದುಚ್ಯತಾಂ ॥ ೨೮ ॥

ಇತ್ಯನ್ಯೋಽನ್ಯಂ ಪುರಾ ತಾಭ್ಯಾಂ ಬ್ರಹ್ಮೇಶಾಭ್ಯಾಂ ಕಿಲಪ್ರಿಯಃ ।
ಪರಿವಾದೋ ಭವತ್ತತ್ರ ಉತ್ಪತ್ತಿರ್ಭವತೋಽಭವತ್ ॥ ೨೯ ॥

ಭವಾನಪ್ಯನ್ತರಿಕ್ಷಂ ಹಿ ಜಾತಮಾತ್ರಸ್ತದೋತ್ಪತತ್ ।
ಧಾರಯನ್ನತುಲಾಂ ವೀಣಾಂ ಕುರ್ವನ್ಕಿಲಕಿಲಾಧ್ವನಿಂ ॥ ೩೦ ॥

---

೨೬. ರಜಸ್ತಮೋಗುಣಸಂಬಂಧದಿಂದ ಕೃಷ್ಟರಾದ ಬ್ರಹ್ಮ ಮತ್ತು ಶಂಕರ ದೇವತೆಗಳನ್ನು ಮಹಾಪುರುಷನಿಂದ ಸೃಷ್ಟವಾದ ಅಹಂಕಾರವು ಆವರಿಸಿತು. [ಇವರಲ್ಲಿ ರಜಸ್ತಮೋಗುಣಗಳ ಕಾರ್ಯವನ್ನು ನಿದರ್ಶನದಿಂದ ತೋರ್ಪಡಿಸುವ ಉದ್ದೇಶ ದಿಂದಲೇ ಮಹಾಪುರುಷನಾದ ಪರಮಾತ್ಮನಿಂದ ಅಹಂಕಾರವು ಸೃಷ್ಟವಾಯಿತೆಂದು ತೋರುತ್ತದೆ.]

೨೭-೩೦. ಅನಂತರ ಅಹಂಕಾರದಿಂದ ಕೂಡಿದ ರುದ್ರನು ಬ್ರಹ್ಮನನ್ನು ಕುರಿತು ನೀನು ಯಾರು? ಇಲ್ಲಿ ಹೇಗೆ ಬಂದೆ? ನನ್ನನ್ನು ಹೇಗೆ ಸೃಷ್ಟಿಮಾಡಿದೆ ಎಂದು ಕೇಳಿ ದನು. ಬ್ರಹ್ಮನೂ ಸಹ ಅಹಂಕಾರದಿಂದಲೇ ನೀನು ಯಾರು? ನಿನ್ನ ತಂದೆತಾಯಿ ಗಳು ಯಾರು? ಎಂದು ಪ್ರತ್ಯುತ್ತರ ಹೇಳಿದನು. ಇಬ್ಬರೂ ಅಹಂಕಾರಾವೃತರಾದುದ ರಿಂದ ವಸ್ತು ತತ್ವಕ್ಕೆ ಆಚ್ಛಾದಕವಾದ ಮೋಹ, ಅಜ್ಞಾನ ಇವುಗಳಿಂದ ಸ್ವಸ್ವರೂಪ ವನ್ನು ತಿಳಿಯದೆ ಪರಸ್ಪರ ಪ್ರಿಯಾಪವಾದದಲ್ಲಿ ಮಗ್ನರಾದರೆಂದು ತಾತ್ಪರ್ಯ. ಆ ಸಮಯದಲ್ಲಿ ನೀನು (ನಾರದ) ಉತ್ಪನ್ನನಾದೆ. ಹುಟ್ಟಿದ ಕ್ಷಣದಲ್ಲಿಯೇ ವೀಣೆಯನ್ನು ಧರಿಸಿ ಕಿಲಕಿಲಧ್ವನಿಯನ್ನು ಮಾಡುತ್ತಾ ಆಕಾಶಕ್ಕೆ ಹಾರಿಹೋದೆ. [ಇಲ್ಲಿ ರುದ್ರನೊಡನೆ ಬ್ರಹ್ಮನು ಕಲಹಮಾಡುವ ಕಾಲದಲ್ಲಿ ನಾರದರ ಉತ್ಪತ್ತಿ ಯಾದುದರಿಂದ ನಾರದರು ಕಲಹಪ್ರಿಯರೆಂದು ಪುರಾಣ ಪ್ರಸಿದ್ಧಿ.]

ತತೋ ವಿನಿರ್ಜಿತಶ್ಶಂಭುಃ ಮಾನಿನಾ ಬ್ರಹ್ಮಯೋನಿನಾ ।
ತಸ್ಥಾವಧೋಮುಖೋ ದೀನೊ ಗ್ರಹಾಕ್ರಾನ್ತೋ ಯಥಾ ಶಶೀ ॥ ೩೦ ॥

ಪರಾಜಿತೆ ಲೋಕಪತೌ ದೇವೇನ ಪರಮೇಷ್ಠಿನಾ ।
ಕ್ರೋಧಾನ್ಧಕಾರಿತಂ ರುದ್ರಂ ಪಂಚಮಂ ಮುಖಮಬ್ರವೀತ್ ॥ ೩೨ ॥

ಅಹಂತೇ ಪ್ರತಿಜಾನಾಮಿ ತಮೋಮೂರ್ತೇ ತ್ರಿಲೋಚನ ।
ದಿಗ್ವಾಸಾ ವೃಷಭಾರೂಢೋ ಲೋಕಕ್ಷಯಕರೋ ಭವಾನ್ ॥ ೩೩ ॥

ಇತ್ಯುಕ್ತಃ ಶಂಕರಃ ಕ್ರುದ್ಧೋ ಬ್ರಹ್ಮಾಣಂ ಘೋರಚಕ್ಷುಷಾ ।
ನಿರ್ದಗ್ಧುಕಾಮಸ್ತ್ವನಿಶಂ ದದರ್ಶ ಭಗವಾನಜಃ ॥ ೩೪ ॥

ತತಸ್ತ್ರಿನೇತ್ರಸ್ಯ ಸಮುದ್ಭವನ್ತಿ ವಕ್ತ್ರಾಣಿ ಪಂಚಾಥ ಸುದುರ್ದಶಾನಿ ।
ಸಿತಂ ಚ ರಕ್ತಂ ಕನಕಾವದಾತಂ ನೀಲಂ ತಥಾ ಪಿಂಜರಕಂ ಚ ರೌದ್ರಂ ॥

---

೩೧-೩೨. ಅನಂತರದಲ್ಲಿ ಪರಮಾತ್ಮನಿಂದ ಉದಯಿಸಿದ ಮಾನಿಯಾದ ಬ್ರಹ್ಮನು ರುದ್ರನನ್ನು ವಿವಾದದಲ್ಲಿ ಜಯಿಸಿದನು. [ಅಂದರೆ ರುದ್ರನು ಅಹಂಕಾರದಿಂದ ಬ್ರಹ್ಮನನ್ನು ಧಿಕ್ಕರಿಸಿದುದು ತಪ್ಪೆಂದು ಒಪ್ಪಿಕೊಂಡನೆಂದು ತಾತ್ಪರ್ಯ.] ಪರಾಜಿತನಾದ ರುದ್ರನು ಅಧೋಮುಖನಾಗಿ ರಾಹುಗ್ರಸ್ತನಾದ ಚಂದ್ರನಂತೆ ನಿಸ್ತೇಜಸ್ಕನಾಗಿ ನಿಂತನು. ಆಗ ಕೋಪಾತಿಶಯದಿಂದ ವಿವೇಕಶೂನ್ಯನಾಗಿ ನಿಂತ ರುದ್ರನನ್ನು ಕುರಿತು ಬ್ರಹ್ಮನ ಐದನೇ ಮುಖವು (ಹೇಳುತ್ತದೆ.)

೩೩. ತಮೋಮೂರ್ತಿಯಾದ ತ್ರಿಲೋಚನನೇ ನೀನು ದಿಗಂಬರನಾಗಿ ವೃಷಭವಾಹನನಾಗಿ ಲೋಕನಾಶಕ್ಕೆ ಕಾರಣನಾಗು ಎಂದು ಶಪಿಸಿತು. [ಹೀಗೆ ಕ್ರೋಧಾಂಧನಾದ ಅವಿವೇಕಿಯಾದ ನಿನಗೆ ಸ್ವರೂಪವೂ, ಅದಕ್ಕೆ ತಕ್ಕ ಅಧಿಕಾರವೂ ಇಂತಹುದು ಎಂದು ತಾತ್ಪರ್ಯ.]

೩೪-೩೬. ಹೀಗೆ ಬ್ರಹ್ಮನಿಂದ ಹೇಳಲ್ಪಟ್ಟ ರುದ್ರನು ಕೋಪದಿಂದ ಘೋರವಾದ ಕೆಂಗಣ್ಣಿ ಹೊಂದಿ ಸುಡುವವನಂತೆ ಬ್ರಹ್ಮನನ್ನು ನೋಡಿದನು. ಅನಂತರ ಕ್ರುದ್ಧನಾದ ರುದ್ರನಿಗೆ ತೇಜಸ್ವಿಗಳಾದ ಐದು ತಲೆಗಳು ಉದ್ಭವಿಸಿದವು. ಅವು ಬಿಳುಪಾಗಿಯೂ, ಕೆಂಪಾಗಿಯೂ, ಚಿನ್ನದಂತೆ ಹೊಂಬಣ್ಣವಾಗಿಯೂ, ನೀಲವಾಗಿಯೂ,

ವಕ್ತ್ರಾಣಿ ದೃಷ್ಟ್ವಾ ರ್ಕಸಮಾನಿ ಸದ್ಯಃ
ಪಿತಾಮಹೋ ವಾಕ್ಯಮುವಾಚರುದ್ರಂ ।
ಸಮಾಹತಸ್ಯಾಥ ಜಲಸ್ಯ ಬುದ್ಬುದಾ
ಭವನ್ತಿ ಕಿಂ ತೇಷು ಪರಾಕ್ರಮೋಽಸ್ತಿ ॥ ೩೬ ॥

ತಚ್ಛ್ರುತ್ವಾ ಕ್ರೋಧಯುಕ್ತೇನ ಶಂಕರೇಣ ಮಹಾತ್ಮನಾ ।
ನಖಾಗ್ರೇಣ ಶಿರಶ್ಛಿನ್ನಂ ಬ್ರಾಹ್ಮಂ ಪರುಷವಾದಿನಂ * ॥ ೩೭ ॥

ತಚ್ಛಿನ್ನಂ ಶಂಕರಸ್ಯೈವ ಸವ್ಯೇ ಕರತಲೇಽಪತತ್ ।
ಪತತೇ ನ ಕದಾಚಿಚ್ಚ ತದಾ ಕರತಲಾಚ್ಛಿರಃ ॥ ೩೮ ॥

ಅಥ ಕ್ರೋಧಾವೃತೇನಾಥ ಬ್ರಹ್ಮಣಾ ದ್ಭುತಕರ್ಮಣಾ ।
ಸೃಷ್ಟಸ್ತು ಪುರುಷೋಧೀಮಾನ್ಕವಚೀ ಕುಂಡಲೀ ಶರೀ ॥ ೩೯ ॥

ಧನುಷ್ಪಾಣಿರ್ಮಹಾಬಾಹು ರ್ಬಾಣಶಕ್ತಿಧರೋಽವ್ಯಯಃ ।
ಚತುರ್ಭುಜೊ ಮಹಾತೂಣೀ ಆದಿತ್ಯಸಮದರ್ಶನಃ ॥ ೪೦ ॥

---

ಬೂದಾಗಿಯೂ ಪಂಚವರ್ಣವನ್ನು ಹೊಂದಿದ್ದವು. ಸೂರ್ಯನಂತೆ ಜ್ವಲಿಸುತ್ತಿರುವ ಆ ಮುಖಗಳನ್ನು ನೋಡಿ ನೀರನ್ನು ಕೈಯ್ಯಿನಿಂದ ಹೊಡೆದರೆ ಅದರಿಂದ ಗುಳ್ಳೆಗಳು ಉದ್ಭವಿಸುತ್ತವೆ. ಆದಮಾತ್ರಕ್ಕೆ ಆ ಗುಳ್ಳೆಗಳಲ್ಲಿ ಪರಾಕ್ರಮವೇನಿದೆ ಎಂದು ಬ್ರಹ್ಮನು ಹೀಯಾಳಿಸಿದನು.

೩೭. ಈ ಮಾತನ್ನು ಕೇಳಿ ಕೋಪದಿಂದ ಕಿಡಿಕಿಡಿಯಾದ ಶಂಕರನು ತನ್ನ ಉಗುರಿನ ಅಗ್ರಭಾಗದಿಂದ ನಿಷ್ಠುರ ವಚನವನ್ನಾಡಿದ-ಬ್ರಹ್ಮನ ಐದನೇ ಆ ಶಿರಸ್ಸನ್ನು ಕತ್ತರಿಸಿದನು. (ರಜೋಗುಣದ ಅಭಿವೃದ್ಧಿಯು ಕ್ರೋಧವನ್ನು ಕಾರ್ಯಪರ್ಯವಸಾಯಿಯನ್ನಾಗಿ ಮಾಡಿತೆಂದು ತಾತ್ಪರ್ಯ.)

೩೮. ಹಾಗೆ ಕತ್ತರಿಸಲ್ಪಟ್ಟ ಆ ಬ್ರಹ್ಮನ ಶಿರಸ್ಸು ಶಂಕರನ ಎಡಗೈಮೇಲೆ ಬಿದ್ದಿತು. ಅನಂತರವೂ ಕೆಳಗೆ ಬೀಳದೆ ಅಂಗೈಯ್ಯಿನಲ್ಲಿ ಅಂಟಿಕೊಂಡಿತು.

೩೯-೪೧. ಅನಂತರ ಕೋಪಾವೇಶದಿಂದ ಜ್ವಲಿಸಿದ ಬ್ರಹ್ಮನು ಒಬ್ಬ ಧೀರನಾದ ಪುರುಷನನ್ನು ಸೃಷ್ಟಿಮಾಡಿದನು. ಅವನು ಕವಚ ಕುಂಡಲ ಧಾರಿಯಾಗಿಯೂ ಧನಸ್ಸು, ಬಾಣ, ಶಕ್ತಿ ಮೊದಲಾದ ಆಯುಧಧಾರಿಯಾಗಿ, ಚತುರ್ಭುಜನಾಗಿ ಸೂರ್ಯನಂತೆ

---

* ಇಲ್ಲಿ 'ಪಾಟಿತಂ' ಎಂದು ಪಾಠವಿರಬೇಕು.

ಸ ತ್ವಾಹ ಗಚ್ಛ ದುರ್ಬುದ್ಧೇ ಮಾತ್ವಾಂ ಶೂಲಿ ನ್ನಿಪಾತಯೇ ।
ಭವಾನ್ ಪಾಪಸಮಾಯುಕ್ತಃ ಪಾಪಿಷ್ಠಂ ಕೋ ಜಿಘಾಂಸತಿ ॥ ೪೧ ॥

ಇತ್ಯುಕ್ತಃಶಂಕರಸ್ತೇನ ಪುರುಷೇಣ ಮಹಾತ್ಮನಾ ।
ಪ್ರಿಯಾಯುಕ್ತೋ ಜಗಾಮಾಥ ರುದ್ರೋ ಬದರಿಕಾಶ್ರಮಂ ॥ ೪೨ ॥

ನರನಾರಾಯಣಸ್ಥಾನಂ ಪರ್ವತೇ ಹಿ ಹಿಮಾಲಯೇ ।
ಸರಸ್ವತೀ ಯತ್ರ ಪುಣ್ಯಾ ಸ್ಯನ್ದತೆ ಸರಿತಾಂ ವರಾ ॥ ೪೩ ॥

ತತ್ರ ಗತ್ವಾ ಚ ತಂ ದೃಷ್ಟ್ವಾ ನಾರಾಯಣಮುವಾಚ ಹ ।
ಭಿಕ್ಷಾಂ ಪ್ರಯಚ್ಛ ಭಗವನ್ ಮಹಾಕಾರುಣಿಕೋಽಸಿ ಭೋಃ ॥ ೪೪ ॥

ಇತ್ಯುಕ್ತೋ ಧರ್ಮಪುತ್ರಸ್ತು ರುದ್ರಂ ವಚನಮಬ್ರವೀತ್ ।
ಸವ್ಯಂ ಭುಜಂ ತಾಡಯಸ್ವ ತ್ರಿಶೂಲೇನ ಮಹೇಶ್ವರ ॥ ೪೫ ॥

---

ಜ್ವಲಿಸಿದನು. ಆ ದಿವ್ಯಪುರುಷನು ಶಂಕರನನ್ನು ಕುರಿತು ಹೀಗೆ ಹೇಳುತ್ತಾನೆ. ಎಲೈ ವಿವೇಕರಹಿತನಾದ ದುರ್ಬುದ್ಧಿಯೇ, ನಿನ್ನನ್ನು ನಾನು ಕೊಲ್ಲುವುದಿಲ್ಲ. ನೀನು ಬ್ರಹ್ಮಹತ್ಯಾ ಪಾಪದಿಂದ ಆಕ್ರಾಂತನಾಗಿದ್ದೀಯೆ. ಇಂತಹ ಪಾಪಿಷ್ಠನನ್ನು ತಿಳಿದು ತಿಳಿದು ಕೊಲ್ಲಲು ಯಾರು ಅಪೇಕ್ಷಿಸುತ್ತಾರೆ. [ಬ್ರಹ್ಮಹತ್ಯಾಪಾಪದೂಷಿತನಾದವ ನೊಡನೆ ದರ್ಶನ, ಸಂಭಾಷಣ ಮೊದಲಾದ ಯಾವ ವ್ಯವಹಾರವನ್ನೂ ಮಾಡಕೂಡ ದೆಂದು ಧರ್ಮಶಾಸ್ತ್ರದ ನಿಯಮವಿದೆ.]

೪೨-೪೪. ಈ ಪ್ರಕಾರವಾಗಿ ಆ ಮಹಾಪುರುಷನಿಂದ ಹೇಳಲ್ಪಟ್ಟ ಶಂಕರನು ಸತೀದೇವಿಯೊಡನೆ ಬದರಿಕಾಶ್ರಮಕ್ಕೆ ಹೊರಟನು. ಹಿಮಾಲಯ ಪರ್ವತದಲ್ಲಿ ಪುಣ್ಯ ಕರವಾದ ಸರಸ್ವತೀನದಿಯಿಂದ ಕೂಡಿರುವ ಆ ಬದರಿಕಾಶ್ರಮದಲ್ಲಿ ನಾರಾಯಣನನ್ನು ನೋಡಿ ಹೀಗೆ ಹೇಳುತ್ತಾನೆ:- ಎಲೈ ಮಹಾತ್ಮನೇ, ಕೃಪಾನಿಧಿಯೇ, ನನಗೊಂದು ಭಿಕ್ಷೆಯನ್ನು ಅನುಗ್ರಹಿಸು. [ಬ್ರಹ್ಮಪುತ್ರನಿಂದುಂಟಾದ ಪರಾಜಯ ನಿವೃತ್ತಿಗೆ ತಕ್ಕ ಉಪಾಯವೇ ಇಲ್ಲಿ ಭಿಕ್ಷಾಶಬ್ದಕ್ಕೆ ಅರ್ಥ. ಈ ಭಿಕ್ಷಾಶಬ್ದವು ಉಪಾಯೋಪದೇಶದ ಅವಶ್ಯಕತೆಯನ್ನೂ, ಅಪೇಕ್ಷಿಸತಕ್ಕವನ ದೈನ್ಯವನ್ನೂ ಸೂಚಿಸುತ್ತದೆ.]

೪೫-೪೬. ಹೀಗೆ ಹೇಳಲ್ಪಟ್ಟ ನಾರಾಯಣನು ಶಂಕರನನ್ನು ಕುರಿತು ಎಲೈ ಮಹೇಶ್ವರನೇ! ನಿನ್ನ ತ್ರಿಶೂಲದಿಂದ ನನ್ನ ಎಡಭುಜವನ್ನು ಪ್ರಹರಿಸು ಎಂದನು.

ನಾರಾಯಣವಚಶ್ಶ್ರುತ್ವಾ ತ್ರಿಶೂಲೇನ ಮಹೇಶ್ವರಃ ।
ಸವ್ಯಂ ನಾರಾಯಣಭುಜಂ ತಾಡಯಾಮಾಸ ವೇಗವಾನ್ ॥ ೪೬ ॥

ತ್ರಿಶೂಲಾಭಿಹತಾ ಸ್ಮಾರ್ಗಾತ್ತಿಸ್ರೋ ಧಾರಾ ವಿನಿರ್ಯಯುಃ ।
ಏಕಾ ಗಗನಮಾಶ್ರಿತ್ಯ ಸ್ಥಿತಾ ತಾರಾಭಿಮಂಡಿತಂ । ॥ ೪೭ ॥

ದ್ವಿತೀಯಾ ನ್ಯಪತದ್ಭೂಮೌ ತಾಂ ಜಗ್ರಾಹ ತಪೋಧನಃ ।
ಅತ್ರಿಸ್ತಸ್ಮಾತ್ಸಮುದ್ಭೂತೊ ದುರ್ವಾಸಾಃ ಶಂಕರಾಂಶತಃ ॥ ೪೮ ॥

ತೃತೀಯಾನ್ಯಪತದ್ಧಾರಾ ಕಪಾಲೆ ರೌದ್ರದರ್ಶನೆ ।
ತಸ್ಮಾಚ್ಛಿಶುಸ್ಸಮುಭವತ್ಸನ್ನದ್ಧಃ ಕವಚೀ ಯುವಾ ॥ ೪೯ ॥

ಶ್ಯಾಮಾವದಾತಃ ಶರಚಾಪಪಾಣಿಃ
ಗರ್ಜನ್ ಯಥಾ ಪ್ರಾವೃಷಿ ತೋಯದೋಸೌ ।
ಇತ್ಥಂ ಬ್ರುವನ್ ಕಸ್ಯ ವಿನಾಶಯಾಮಿ
ಸ್ಕಂಧಾಚ್ಛಿರಸ್ತಾಲಫಲಂ ಯಥೈವ ॥ ೫೦ ॥

---

ನಾರಾಯಣನ ಆ ಮಾತನ್ನು ಕೇಳಿ ಶಂಕರನು ವೇಗದಿಂದ ಅವನ ಎಡಭುಜವನ್ನು ತಿವಿದನು.

೪೭-೪೯. ತ್ರಿಶೂಲದಿಂದ ಚುಚ್ಚಲ್ಪಟ್ಟ ಸ್ಥಳದಿಂದ ಮೂರು ಧಾರೆಗಳು ಹೊರಟವು. ಅವುಗಳಲ್ಲಿ ಒಂದು ನಕ್ಷತ್ರಗಳಿಂದ ಕೂಡಿದ ಗಗನಮಂಡಲವನ್ನಾಶ್ರಯಿಸಿ ನಿಂತಿತು. ಎರಡನೇ ಧಾರೆಯು ಭೂಮಿಯಲ್ಲಿ ಬಿದ್ದಿತು. ಅದನ್ನು ಅತ್ರಿಮುನಿಗಳು ಸ್ವೀಕರಿಸಿದರು. ಅದರಿಂದ ಶಂಕರಾಂಶವುಳ್ಳ ದುರ್ವಾಸಮಹರ್ಷಿಯು ಉದಯಿಸಿದನು. ಮೂರನೇ ಧಾರೆಯು ಭಯಂಕರಾಕಾರವಾದ ಕಪಾಲದಲ್ಲಿ ಬಿದ್ದಿತು. ಅದರಿಂದ ಮೊದಲು ಶಿಶುವಾಗಿದ್ದು ಅನಂತರ ಕವಚಧಾರಿಯಾಗಿಯೂ, ಯುವಕನಾಗಿಯೂ ಆದ ಒಬ್ಬ ಮನುಷ್ಯನು ಆವಿರ್ಭಾವಹೊಂದಿದನು.

೫೦. ಶುದ್ಧ ಶ್ಯಾಮವರ್ಣವುಳ್ಳ ಧನುರ್ಬಾಣಗಳನ್ನು ಹೊಂದಿ ವರ್ಷಾಕಾಲದ ಮೇಘದಂತೆ ಗರ್ಜಿಸುವ ಆ ಪುರುಷನು ತಾಳೆಯಮರದಿಂದ ಫಲವನ್ನು ಕೆಳಕ್ಕೆ ಉರುಳಿಸುವಂತೆ ಯಾರ ಶಿರಸ್ಸನ್ನು ಕತ್ತಿನಿಂದ ಕೆಳಕ್ಕೆ ಕೆಡವಬೇಕು ಹೇಳು ಎಂದು ಶಂಕರನನ್ನು ಕೇಳಿದನು.

ತಂ ಶಂಕರೋವೇತ್ಯವಚೊಬಭಾಷೆ ನರಂ ಹಿ ನಾರಾಯಣಬಾಹುಜಾತಂ ।
ನಿಪಾತಯ್ಯೆನಂ ನರ ದುಷ್ಟವಾಕ್ಯಂ ಬ್ರಹ್ಮಾತ್ಮಜಂ ಸೂರ್ಯಶತಪ್ರಕಾಶಂ ॥

ಇತ್ಯೇವ ಮುಕ್ತಃ ಸ ತು ಶಂಕರೇಣ
ಆದ್ಯಂ ಧನುಸ್ತ್ವಾಜಗವಂ ಪ್ರಸಿದ್ಧಂ ।
ಜಗ್ರಾಹ ತೂಣಾನಿ ತಥಾ ಕ್ಷಯಾಣಿ
ಯುದ್ಧಾಯ ವೀರಃ ಸಮತಿಂ ಚಕಾರ ॥ ೫೨ ॥

ತತಃ ಪ್ರಬು*ದ್ಧೌ ಸುಭೃಶಂ ಮಹಾಬಲೌ ।
ಬ್ರಹ್ಮಾತ್ಮಜೊ ಬಾಹುಭವಶ್ಚ ಶಾರ್ವಃ
ದಿವ್ಯಂ ಸಹಸ್ರಂ ಪರಿವತ್ಸರಾಣಾಂ
ತತೊಹರೇಣಾ ಪಿ ವಿರಿಂಚಿರೂಚೆ ॥ ೫೩ ॥

ಜಿತಸ್ತ್ವದೀಯಃ ಪುರುಷಃಪಿತಾಮಹ
ನರೇಣ ದಿವ್ಯಾದ್ಭುತಕರ್ಮಣಾ ಬಲೀ ।
ಮಹಾಪೃಷತ್ಕೈರಭಿಪತ್ಯ ತಾಡಿತಃ
ತದದ್ಭುತಂ ಚೈವ ದಿಶೊ ದಶೈವ ॥ ೫೪ ॥

---

೫೧. ಆ ಪುರುಷನು ತನಗೆ ಉಂಟಾದ ಅಪಜಯವನ್ನು ಹೋಗಲಾಡಿಸಲು ನಾರಾಯಣನ ಅನುಗ್ರಹದಿಂದ ಅವನ ಬಾಹುವಿನಿಂದ ಹುಟ್ಟಿದ ಮಹಾಪುರುಷನೆಂದು ಭಾವಿಸಿ ಶಂಕರನು ಅವನನ್ನು ಕುರಿತು, ಎಲೈ ಪುರುಷನೇ, ನಿಷ್ಠುರವಚನವುಳ್ಳ ಜ್ವಲಿಸುತ್ತಿರುವ ಈ ಬ್ರಹ್ಮಪುತ್ರನನ್ನು ನಾಶಪಡಿಸು ಎಂದು ಅಪ್ಪಣೆಮಾಡಿದನು.

೫೨-೫೪. ಹೀಗೆ ಈಶ್ವರನಿಂದ ಹೇಳಲ್ಪಟ್ಟ ಆ ಪುರುಷನು ಅಜಗವವೆಂಬ ಪ್ರಸಿದ್ಧ ಧನುಸ್ಸನ್ನೂ ಅಕ್ಷಯವಾದ ಬತ್ತಳಿಕೆಗಳನ್ನೂ ತೆಗೆದುಕೊಂಡು ಯುದ್ಧಕ್ಕಾಗಿ ಸಿದ್ಧನಾದನು. ಅನಂತರ ಆ ಇಬ್ಬರಿಗೂ (ಬ್ರಹ್ಮಪುತ್ರ ಮತ್ತು ನರ) ದಿವ್ಯವರ್ಷಸಹಸ್ರ ಪರ್ಯಂತ ಯುದ್ಧವು ನಡೆಯಿತು. ಅನಂತರ ಶಂಕರನು ಬ್ರಹ್ಮನನ್ನು ಕುರಿತು ನಿನ್ನ ಪುರುಷನು ನನ್ನ ಅದ್ಭುತಸಾಹಸಿಯಾದ ನರನಿಂದ ಮಹಾಬಾಣಗಳಿಂದ ಹೊಡೆಯಲ್ಪಟ್ಟು ಪರಾಜಿತನಾದನು. ಇದಕ್ಕೆ ದಶದಿಕ್ಕುಗಳೇ ಸಾಕ್ಷಿಯಾಗಿವೆ ಎಂದನು.

---

( * ಇಲ್ಲಿ ಪ್ರವೃದ್ಧೌ ಎಂದು ಪಾಠವಿರಬೇಕೆಂದು ತೋರುತ್ತದೆ. )

ಬ್ರಹ್ಮಾ ತಮೀಶಂ ವಚನಂ ಬಭಾಷೆ
ನೇಹಾಸ್ಯ ಜನ್ಮನ್ಯಜಿತಸ್ಯ ಶಂಭೋ ।
ಪರಾಜಿತಂ ಚೈಷ್ಯತೆ ಸೌ ತ್ವದೀಯೊ
ನರೊಮದೀಯಃ ಪುರುಷೊ ಮಹಾತ್ಮಾ ॥ ೫೫ ॥

ಇತ್ಯೇವ ಮುಕ್ತ್ವಾ ವಚನಂ ತ್ರಿನೇತ್ರಂ ಚಿಕ್ಷೇಪ ಸೂರ್ಯೆ ಪುರುಷಂ ವಿರಂಚಿಃ
ನರಂ ನರಸ್ಯೈವ ತದಾ ಸವಿಗ್ರಹೆ ಚಿಕ್ಷೇಪ ಧರ್ಮಪ್ರಭವಸ್ಯದೇವಃ ॥ ೫೬ ॥

ಇತಿ ಶ್ರೀ ವಾಮನಪುರಾಣೆ ಹರಲಲಿತೆ ನರೋತ್ಪತ್ತಿಪ್ರಲಯೋ ನಾಮ
ದ್ವಿತೀಯೋಽಧ್ಯಾಯಃ

---

೫೫-೫೬. ಆಗ ಬ್ರಹ್ಮನು ಶಂಕರನನ್ನು ಕುರಿತು ಈಜನ್ಮದಲ್ಲಿ ಯಾರಿಂದಲೂ ಜಯಿಸಲ್ಪಡದ ನನ್ನ ಈ ಪುರುಷನನ್ನು ನಿನ್ನ ನರನು ಪರಾಜಿತನನ್ನಾಗಿ ಭಾವಿಸಿದ್ದಾನೆ. ಆದರೆ ಇದು ಕೇವಲ ಇಚ್ಛಾಮಾತ್ರ. ಮಹಾತ್ಮನಾದ ನನ್ನ ಪುರುಷನು ಎಂದಿಗೂ ಪರಾಜಯವನ್ನು ಹೊಂದಲಾರನು ಎಂದು ಪ್ರತ್ಯುತ್ತರ ಹೇಳಿ ಆ ಪುರುಷನನ್ನು ಸೂರ್ಯನಿಗೆ ಎದುರಾಗಿ ಆಕಾಶಕ್ಕೆ ಎಸೆದನು. ಅನಂತರ ನರನನ್ನೂ ತ್ರಿಲೋಚನನು ನಾರಾಯಣನ ದೇಹದಲ್ಲೇ ಎಸೆದನು. ಅವರು ಅಲ್ಲೇ ಅಂತರ್ಹಿತರಾದರೆಂದು ತಾತ್ಪರ್ಯ.

ಇಲ್ಲಿಗೆ ಶ್ರೀ ವಾಮನಪುರಾಣದ ನರೋತ್ಪತಿ ಪ್ರಲಯವೆಂಬ ಎರಡನೆಯ
ಅಧ್ಯಾಯವು ಮುಗಿದಿದೆ.

## ಅಧ್ಯಾಯಾರ್ಥ ಸಂಗ್ರಹ

ಈ ಅಧ್ಯಾಯದಲ್ಲಿ ಸತೀದೇವಿಯು ಹಿಮವಂತನಲ್ಲಿ ಉದ್ಭವಿಸಲು ಉಪೋದ್ಘಾತರೂಪವಾಗಿ ಸತೀದೇವಿಯ ದೇಹವಿಯೋಗಕ್ಕೆ ಕಾರಣವಾದ ದಕ್ಷ ಯಜ್ಞವನ್ನು ಪ್ರಸ್ತಾವಿಸಿ, ಆ ಸಂದರ್ಭದಲ್ಲಿ ಹರನು ದಕ್ಷಯಜ್ಞದಲ್ಲಿ ಆಹೂತನಾಗ ದಿರಲು ಕಾರಣವೇನೆಂದು ಬಂದ ನಾರದರ ಪ್ರಶ್ನೆಗೆ ಉತ್ತರವಾಗಿ ಅವನು ಕಪಾಲಿ ಯಾಗಲು ಕಾರಣವನ್ನು ವಿವರಿಸಿದಂತಾಯಿತು. ಇದಕ್ಕೆ ಅವರಿಗೆ ಉಂಟಾದ ರಜಸ್ತಮೋಗುಣಗಳ ಆಕ್ರಮಣವೇ ಕಾರಣವೆಂದೂ ನಿರೂಪಿಸಿದಂತಾಯಿತು.

॥ ಶ್ರೀಃ ॥

# ಶ್ರೀವಾಮನಪುರಾಣಂ

## ತೃತೀಯೋಽಧ್ಯಾಯಃ

### ಪುಲಸ್ತ್ಯ ಉವಾಚ

ತತಃ ಕರತಲೇ ರುದ್ರಃ ಕಪಾಲೇ ದಾರುಣೇ ಸ್ಥಿತೇ ।
ಸನ್ತಾಪಮಗಮದ್ಬ್ರಹ್ಮಂಶ್ಚಿನ್ತಯಾಕುಲಿತೇಂದ್ರಿಯಃ ॥ ೧ ॥

ತತಸ್ಸಮಾಗತಾ ರೌದ್ರಾ ನೀಲಾಂಜನಚಯಪ್ರಭಾ ।
ಸಂರಕ್ತಮೂರ್ಧಜಾ ಭೀಮಾ ಬ್ರಹ್ಮಹತ್ಯಾ ಹರಾನ್ತಿಕಂ ॥ ೨ ॥

ತಾಮಾಗತಾಂ ಹರೋ ದೃಷ್ಟ್ವಾ ಪಪ್ರಚ್ಛ ವಿಕಾರಾಲಿನೀಂ ।
ಕಾಸಿ ತ್ವಮಾಗತಾ ರೌದ್ರೇ ಕೇನಾಪ್ಯರ್ಥೇನ ತದ್ವದ ॥ ೩ ॥

ಕಪಾಲಿನಮಥೋವಾಚ ಬ್ರಹ್ಮಹತ್ಯಾ ಸುದಾರುಣಾ ।
ಬ್ರಹ್ಮಹತ್ಯಾಸ್ಮಿ ಸಂಪ್ರಾಪ್ತಾ ಮಾಂ ಪ್ರತೀಚ್ಛ ತ್ರಿಲೋಚನ ॥ ೪ ॥

---

## ಮೂರನೆಯ ಅಧ್ಯಾಯವು

೧-೫. ಅನಂತರ ಶಂಕರನು ಘೋರಾಕಾರವಾದ ಅಂಗೈಯ್ಯಿನಲ್ಲಿ ಅಂಟಿಕೊಂಡಿರುವ ಬ್ರಹ್ಮಕಪಾಲವನ್ನು ನೋಡಿ ಬಹಳ ಸಂತಾಪಗೊಂಡನು. ಚಿಂತೆಯಿಂದ ಅವನ ಮನಸ್ಸೆಲ್ಲಾ ಕಲಕಿ ಹೋಯಿತು. ಆಮೇಲೆ ರೌದ್ರಾಕಾರಳಾಗಿಯೂ ಕಾಡಿಗೆಯಂತೆ ಕಪ್ಪಾದವರ್ಣವುಳ್ಳವಳಾಗಿಯೂ ಕೆಂಪಾದಕೇಶಪಾಶ ಉಳ್ಳವಳಾದ ಭಯಂಕರಾಕಾರಳಾದ ಬ್ರಹ್ಮಹತ್ಯೆಯು ಹರನ ಸಮೀಪಕ್ಕೆ ಬಂದಳು. ಅವಳನ್ನು ನೋಡಿ, ಎಲೈ ರೌದ್ರಾಕಾರಳೇ ನೀನು ಯಾರು ಏತಕ್ಕೆ ಇಲ್ಲಿ ಬಂದೆ ಎಂದು ಹರನು ಪ್ರಶ್ನೆಮಾಡಲಾಗಿ ಆ ಬ್ರಹ್ಮಹತ್ಯೆಯು, ನಾನು ಬ್ರಹ್ಮಹತ್ಯೆ. ನಿನ್ನನ್ನು ಹೊಂದಲು ಬಂದಿದ್ದೇನೆ ನನ್ನನ್ನು

ಇತ್ಯೇವಮುಕ್ತ್ವಾ ವಚನಂ ಬ್ರಹ್ಮಹತ್ಯಾ ವಿವೇಶತಂ ।
ತ್ರಿಶೂಲಪಾಣಿನಂ ರುದ್ರಂ ಸಂಪ್ರತಾಪಿತವಿಗ್ರಹಂ ॥ ೫ ॥

ಬ್ರಹ್ಮಹತ್ಯಾಭಿಭೂತಶ್ಚ ಶರ್ವೋ ಬದರಿಕಾಶ್ರಮಂ ।
ಆಗಚ್ಛನ್ನೊದದರ್ಶಾಥ ನರನಾರಾಯಣಾವೃಷೀ ॥ ೬ ॥

ಅದೃಷ್ಟ್ವಾ ಧರ್ಮತನಯೌ ಚಿನ್ತಾಶೋಕಸಮನ್ವಿತಃ ।
ಜಗಾಮ ಯಮುನಾಂ ಸ್ನಾತುಂ ಸಾ ಪಿ ಶುಷ್ಕಜಲಾ ಭವತ್ ॥ ೭ ॥

ಕಾಲಿಂದೀಂ ಶುಷ್ಕಸಲಿಲಾಂ ನಿರೀಕ್ಷ್ಯ ವೃಷಕೇತನಃ ।
ಪ್ಲಕ್ಷಜಾಂ ಸ್ನಾತುಮಗಮದನ್ತರ್ಧಾನಂ ಚ ಸಾ ಗತಾ ॥ ೮ ॥

ತತೋನು ಪುಷ್ಕರಾರಣ್ಯಂ ಮಾಗಧಾರಣ್ಯಮೇವ ಚ ।
ಸೈಂಧವಾರಣ್ಯಮೇವಾಸೌ ಗತ್ವಾ ಶ್ರಾನ್ತೋ ಯದೃಚ್ಛಯಾ ॥ ೯ ॥

---

ಸ್ವೀಕರಿಸು ಎಂದು ಹೇಳಿ ಹರನನ್ನು ಪ್ರವೇಶಿಸಿತು. ಅನಂತರದಲ್ಲಿ ಹರನು ಆ ಬ್ರಹ್ಮ ಹತ್ಯಾಪ್ರವೇಶದಿಂದ ಬಹಳ ಸಂತಪ್ತಹೃದಯನಾಗಿ ವ್ಯಾಕುಲನಾದನು.

೬-೮. ಬ್ರಹ್ಮಹತ್ಯೆಯಿಂದ ದೂಷಿತನಾದ ಶಂಕರನು ಅಲ್ಲಿಂದ ಬರುವ ಸಮಯ ದಲ್ಲಿ ನರನಾರಾಯಣರನ್ನು ಪುನಃ ನೋಡದೆ ಬಂದದ್ದರಿಂದ ಬಹಳ ದುಃಖಿತನಾದನು. [ಅಂದರೆ ಮೊದಲು ವಿರಿಂಚಿಪುರುಷನಿಂದ ಪರಾಜಯ ಉಂಟಾದ ಪ್ರಸಂಗದಲ್ಲಿ ಅದರ ಪ್ರತೀಕಾರೋಪಾಯವನ್ನು ನಾರಾಯಣನಲ್ಲಿ ಪ್ರಾರ್ಥಿಸಿದಂತೆ ಬ್ರಹ್ಮಹತ್ಯಾನಿವೃತ್ತಿಗೂ ಉಪಾಯವೇನೆಂದು ಅವನಲ್ಲೇ ಪ್ರಾರ್ಥಿಸಬೇಕಾಗಿದ್ದದ್ದರಿಂದ ಅದು ಆಸಮಯದಲ್ಲಿ ವಿಸ್ಮೃತವಾದ ಪ್ರಯುಕ್ತ ಚಿಂತೆಯಿಂದಲೂ ಶೋಕದಿಂದಲೂ ವ್ಯಾಕುಲನಾದನೆಂದು ತಾತ್ಪರ್ಯ.] ತನಗೆ ತೋರಿದ ಪ್ರತೀಕಾರವನ್ನಾದರೂ ಆಚರಿಸುವ ಉದ್ದೇಶದಿಂದ ಮಹಾನದಿಯಾದ ಯಮುನೆಯಲ್ಲಿ ಸ್ನಾನಮಾಡಲು ಹೊರಟನು. ಆ ಯಮುನಾ ನದಿಯು ಇವನು ಬಂದೊಡನೆ ಬತ್ತಿಹೋಯಿತು. ಅನಂತರ ಕಾಲಿಂದೀನದಿಗೆ ಸ್ನಾನಕ್ಕಾಗಿ ಹೋಗಿ ಅದೂ ಬತ್ತಿಹೋದದ್ದನ್ನು ನೋಡಿ ಪ್ಲಕ್ಷಜಾ ಎಂಬ ನದಿಗೆ ಹೋದನು. ಅದೂ ಸಹ ಇವನು ಬಂದ ಕ್ಷಣದಲ್ಲಿ ಅಂತರ್ಧಾನಹೊಂದಿತು.

೯-೧೧. ಆ ಮೇಲೆ ಪುಷ್ಕರಾರಣ್ಯ, ಮಾಗಧಾರಣ್ಯ, ಸೈಂಧವಾರಣ್ಯ, ನಿಮಿಷಾ ರಣ್ಯ, ಧರ್ಮಾರಣ್ಯ ಎಂಬ ಪುಣ್ಯಸ್ಥಳಗಳನ್ನು ಪ್ರವೇಶಿಸಿ ಸುತ್ತಿ ಸುತ್ತಿ ಶಂಕರನು ಶ್ರಾಂತ

ತಥೈ ವ ನಿಮಿಷಾರಣ್ಯಂ ಧರ್ಮಾರಣ್ಯಂ ತಥೇಶ್ವರಃ ।
ಸ್ನಾತೊ ನೈವಚ ಸಾರೌದ್ರಾ ಬ್ರಹ್ಮಹತ್ಯಾ ವ್ಯಮುಂಚತ ॥ ೧೦ ॥

ಸರಿತ್ಸು ತೀರ್ಥೇಷು ತಥಾ ಶ್ರಮೇಷು
ಪುಣ್ಯೆಷು ದೇವಾಯತನೇಷು ಸರ್ವತಃ ।
ಸಮಾಪ್ಲುತೋ ಯೋಗಯುತೋಽ ಪಿ
ಪಾಪಾನ್ನಾವಾಪ ಮೋಕ್ಷಂ ವೃಷಭಧ್ವಜೋಽಸೌ ॥ ೧೧ ॥

ತತೋ ಜಗಾಮ ನಿರ್ವಿಣ್ಣಃ ಶಂಕರಃ ಕುರುಜಾಂಗಲಂ ।
ತತ್ರ ಗತ್ವಾ ದದರ್ಶಾಥ ಚಕ್ರಪಾಣಿಂ ಖಗಸ್ಥಿತಂ ॥ ೧೨ ॥

ತಂ ದೃಷ್ಟ್ವಾ ಪುಂಡರೀಕಾಕ್ಷಂ ಶಂಖಚಕ್ರಗದಾಧರಂ ।
ಕೃತಾಂಜಲಿಪುಟೋಽಭೂತ್ವಾ ಹರಃ ಸ್ತೋತ್ರಮುದೀರಯತ್ ॥ ೧೩ ॥

ಹರ ಉವಾಚ

ನಮಸ್ತೇ ದೇವತಾನಾಥ ನಮಸ್ತೇ ಗರುಡಧ್ವಜ ।
ಶಂಖಚಕ್ರಗದಾಪಾಣೆ ವಾಸುದೇವ ನಮೋಽಸ್ತು ತೇ ॥ ೧೪ ॥

---

ನಾದನು. (ಆಯಾಸಹೊಂದಿದನು). ತೀರ್ಥಗಳಲ್ಲಿ ಸ್ನಾನಮಾಡಲೂ ಅವಕಾಶವಾಗಲಿಲ್ಲ. ಪುಣ್ಯಾಶ್ರಮಗಳನ್ನೂ ದೇವಾಲಯಗಳನ್ನೂ ಎಷ್ಟು ಸುತ್ತಿದರೂ ವ್ರತನಿಯಮಶಾಲಿಯಾಗಿದ್ದರೂ ಸಹ ಇವನನ್ನು ಬ್ರಹ್ಮಹತ್ಯೆಯು ಬಿಡಲೇ ಇಲ್ಲ.

೧೨-೧೩. ಅನಂತರ ಶಂಕರನು ಬಹಳ ನಿರ್ವೇದದಿಂದ ಕುರುಜಾಂಗಲಕ್ಷೇತ್ರಕ್ಕೆ ಹೋದನು. ಅಲ್ಲಿ ನೆಲಸಿರುವ ಗರುಡವಾಹನನಾದ ಚಕ್ರಪಾಣಿಯನ್ನು ಸಂದರ್ಶಿಸಿ, ಅಂಜಲಿಬಂಧಪೂರ್ವಕವಾಗಿ ಶಂಖಚಕ್ರಗದಾಧರನಾದ ಆ ಪುಂಡರೀಕಾಕ್ಷನನ್ನು ಸ್ತೋತ್ರಮಾಡಲುಪಕ್ರಮಿಸಿದನು.

೧೪. ಶಂಕರನು ಸ್ತೋತ್ರಮಾಡುತ್ತಾನೆ: ಎಲೈ ದೇವಾಧಿದೇವನೆ, ಗರುಡಧ್ವಜನೇ ನಿನಗೆ ನಮಸ್ಕಾರಗಳು. ಶಿಷ್ಟಸಂರಕ್ಷಣೆಗಾಗಿ ಶಂಖಚಕ್ರಗದಾಪಾಣಿಯಾಗಿ ವಸುದೇವಪುತ್ರನಾಗಿ ಅವತರಿಸಿದ ಪ್ರಭುವೇ ನಿನಗೆ ಅನಂತ ನಮಸ್ಕಾರಗಳು.

ನಮಸ್ತೇ ನಿರ್ಗುಣಾನನ್ತ ಅಪ್ರತರ್ಕ್ಯಾಯ ವೇಧಸೇ ।
ಜ್ಞಾನಾಜ್ಞಾನನಿರಾಲಂಬ ಸರ್ವಾಲಂಬ ನಮೋಽಸ್ತು ತೇ ॥ ೧೫ ॥
ರಜೋಯುಕ್ತ ನಮಸ್ತೇಽಸ್ತು ಬ್ರಹ್ಮಮೂರ್ತೇ ಸನಾತನ ।
ತ್ವಯಾ ಸರ್ವಮಿದಂ ನಾಥ ಜಗತ್ಸೃಷ್ಟಂ ಚರಾಚರಂ ॥ ೧೬ ॥
ಸತ್ವಾಧಿಷ್ಠಿತ ಲೋಕೇಶ ವಿಷ್ಣುಮೂರ್ತೇ ಅಧೋಕ್ಷಜ ।
ಪ್ರಜಾಪಾಲ ಮಹಾಬಾಹೋ ಜನಾರ್ಧನ ನಮೋಽಸ್ತುತೇ ॥ ೧೭ ॥
ತಮೋಮೂರ್ತೇ ಅಹಂಹ್ಯೇಷ ತ್ವದಂಶಕ್ರೋಧಸಂಭವಃ ।
ಗುಣಾಭಿಯುಕ್ತೋ ದೇವೇಶ ಸರ್ವವ್ಯಾಪಿನ್ ನಮೋಽಸ್ತು ತೇ ॥ ೧೮ ॥
ಭೂರಿಯಂ ತ್ವಂ ಜಗನ್ನಾಥ ಜಲಮಂಬರಪಾವಕೌ ।
ವಾಯುರ್ಬುದ್ಧಿರ್ಮನಶ್ಚಾಪಿ ಶರ್ವರೀ ತ್ವಂ ನಮೋಽಸ್ತು ತೇ ॥ ೧೯ ॥

---

೧೫-೧೭. ಶಂಕರನು ಸ್ತೋತ್ರಮಾಡುತ್ತಾನೆ: ಹೇಯಗುಣರಹಿತನಾಗಿಯೂ ಹೀಗೆಂದು ಊಹಿಸಲಶಕ್ಯನಾಗಿಯೂ, ಸೃಷ್ಟಿಕರ್ತನಾಗಿಯೂ ಇರುವ ಎಲೈ ಪ್ರಭುವೇ, ನಿನಗೆ ನಮಸ್ಕಾರಗಳು. ಅಂತಃಕರಣಾಧೀನವಾದ ಜ್ಞಾನಾಜ್ಞಾನಗಳಿಗೆ ಆಶ್ರಯನಾಗ ದಿದ್ದರೂ ತನಗೆ ಆಶ್ರಯಾಂತರವಿಲ್ಲದಿದ್ದರೂ ಸರ್ವಾಶ್ರಯನಾಗಿ ಪ್ರಕಾಶಿಸುವ ನಿನಗೆ ನಮಸ್ಕಾರಗಳು. ಎಲೈ ಸನಾತನ ಮೂರ್ತಿಯೇ, ರಜೋಗುಣಾಧಿಕ್ಯದಿಂದ ನಿರ್ಮಿಸಲ್ಪಟ್ಟ ಬ್ರಹ್ಮನಲ್ಲಿ ಅಂತರ್ಯಾಮಿಯಾಗಿ ನಿಂತು ಚರಾಚರಾತ್ಮಕವಾದ ಸರ್ವ ಜಗತ್ತನ್ನು ಸೃಷ್ಟಿಮಾಡಿದ ನಿನಗೆ ಅನಂತ ನಮಸ್ಕಾರಗಳು. ಎಲೈ ಶುದ್ಧ ಸತ್ವಮೂರ್ತಿಯೇ, ಲೋಕೇಶನೇ, ಲೋಕರಕ್ಷಕನೇ, ಸರ್ವಶಬ್ದವಾಚ್ಯನಾದ ನಿನಗೆ ನಮಸ್ಕಾರಗಳು.

೧೮. ಎಲೈ ದೇವನೇ, ಸರ್ವಾಂತರ್ಯಾಮಿಯಾಗಿ ಸರ್ವಜಗನ್ನಿಯಾಮಕ ನಾಗಿರುವ ನೀನು ತಮೋಮೂರ್ತಿಯಾದ ನನಗೂ ಅಂತರ್ಯಾಮಿಯಾಗಿ ನಿಂತು ನನ್ನ ಜ್ಞಾನಕ್ಕೂ, ಈ ಪ್ರಯತ್ನಕ್ಕೂ ಪ್ರೇರಕನಾಗಿ ನಿಂತಿದ್ದೀಯೆ. ನಿನ್ನ ಅಂಶವಾದ ಕ್ರೋಧದಿಂದಲೇ ನಾನು ನಿನ್ನ ಸಂಕಲ್ಪದಿಂದ ಉತ್ಪನ್ನನಾಗಿದ್ದೇನೆ. ಕಾರಣತ್ವೋಪ ಯುಕ್ತವಾದ ಸರ್ವ ಗುಣಶಾಲಿಯಾಗಿಯೂ, ಧಾರಕತ್ವಕ್ಕೆ ಉಪಯುಕ್ತಗಳಾದ ಸರ್ವ ವ್ಯಾಪಕತ್ವಾದಿಗುಣಶಾಲಿಯಾಗಿಯೂ ಇರುವ ಸರ್ವೇಶನಾದ ನಿನಗೆ ನಮಸ್ಕಾರಗಳು.

೧೯. ಎಲೈ ಜಗನ್ನಾಥನೇ! ಭೂಮಿ, ಜಲ, ಆಕಾಶ, ಅಗ್ನಿ, ವಾಯು, ಬುದ್ಧಿ, ಮನಸ್ಸು, ಅಹೋರಾತ್ರಿಗಳು ಎಲ್ಲವೂ ನೀನೇ ಆಗಿದ್ದೀಯೆ. [ದ್ಯೌಸ್ಸಚಂದ್ರಾರ್ಕ ನಕ್ಷತ್ರಾ ಖಂ ದಿಶೋ ಭೂರ್ಮಹೋದಧಿಃ । ವಾಸುದೇವಸ್ಯ ವೀರ್ಯೇಣ ವಿಧೃತಾನಿ ಮಹಾತ್ಮನಃ ॥ ಎಂಬ ಪ್ರಮಾಣವಚನಾನುಸಾರವಾಗಿ ಸರ್ವ ನಿಯಾಮಕನಾದ

ಧರ್ಮೋ ಯಜ್ಞ ಸ್ತಪಸ್ಸತ್ಯಂ ಅಹಿಂಸಾ ಶೌಚಮಾರ್ಜವಂ ।
ಕ್ಷಮಾ ದಾನಂ ದಯಾಲಕ್ಷ್ಮೀಃ ಬ್ರಹ್ಮಚರ್ಯಂ ತ್ವಮೀಶ್ವರಃ ॥ ೨೦ ॥

ತ್ವಂ ಸಾಂಗಾಶ್ಚ ಚತುರ್ವೇದಾಃ ತ್ವಂ ವೇದ್ಯೋ ವೇದಪಾರಗಃ ।
ಉಪವೇದೋ ಭವಾನೀಶ ಸರ್ವೋಽಸಿ ತ್ವಂ ನಮೋಽಸ್ತುತೇ ॥ ೨೧ ॥

ನಮೋ ನಮಸ್ತೇಽಚ್ಯುತ ಚಕ್ರಪಾಣೇ
ನಮೋಽಸ್ತು ತೇ ವಾಮನ ಮೀನಮೂರ್ತೇ ।
ಲೋಕೇ ಭವಾನ್ ಕಾರುಣಿಕೋ ಮತೋ ಮೇ
ತ್ರಾಯಸ್ವ ಮಾಂ ಕೇಶವ ಪಾಪಬಂಧಾತ್ ॥ ೨೨ ॥

---

ಪರಮಾತ್ಮನು ಭೂಮ್ಯಾದಿಗಳಲ್ಲೂ ಅಂತರ್ಯಾಮಿಯಾಗಿರುವುದರಿಂದ ಸರ್ವವೂ ನಿನಗೆ ಶರೀರವು. ಸರ್ವಶರೀರಿಯಾದ ನೀನು ಆಯಾಯ ಶರೀರವಾಚಕ ಶಬ್ದದಿಂದ ವ್ಯವಹರಿಸಲ್ಪಡುತ್ತೀಯೆ. ಭೂಮಿರಾಪೋಽನಲೋವಾಯುಃ ಖಂ ಮನೋ ಬುದ್ಧಿ ರೇವ ಚ। ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ॥ ಎಂಬ ಗೀತಾ ವಚನವೂ ಭೂಮ್ಯಾದಿಗಳ ಸ್ವಪ್ರವೃತ್ತಿಯೆಲ್ಲವೂ ತದಂತರ್ಯಾಮಿಯಾದ ಪರಮಾತ್ಮನ ಸಂಕಲ್ಪಾಧೀನವೆಂದು ಬೋಧಿಸುತ್ತದೆ.] ಇದರಿಂದ ಸರ್ವಾತ್ಮತ್ವೋಪಪಾದಕವಾದ ಸರ್ವಶಬ್ದ ಸಾಮಾನಾಧಿಕರಣ್ಯವನ್ನು ಉಪಪಾದಿಸಿದಂತಾಯಿತು.

೨೦-೨೧. ಧರ್ಮ, ಯಜ್ಞ,ತಪಸ್ಸು ಮುಂತಾದುವು ನಿನ್ನಿಂದ ಪ್ರಕಾಶಿಸಲ್ಪಟ್ಟ ವೇದಗಳ ಸಾರಾಂಶ, ಇಂತಹ ಧರ್ಮವನ್ನು ಪ್ರಕಾಶಗೊಳಿಸಿದ ಮಹರ್ಷಿಗಳೂ ನಿನ್ನ ಅನುಪ್ರವೇಶದಿಂದ ಜ್ಞಾನಿಗಳಾದವರು, ಇವುಗಳಲ್ಲಿ ಕೆಲವು ನಿನ್ನ ಸ್ವರೂಪ ಪ್ರಕಾಶಕವಾಗಿಯೂ ಕೆಲವು ನಿನ್ನ ಆರಾಧನೋಪಯುಕ್ತಗಳಾಗಿಯುಗಿಯೂ ಇವೆ. ಮತ್ತೆ ಕೆಲವು ಅಂತರುಗೋಪಾಯಗಳಾಗಿವೆ. ಆದ್ದರಿಂದ ನಿನ್ನಿಂದ ಪ್ರಕಾಶಗೊಳಿಸಲ್ಪಟ್ಟ ಇವೆಲ್ಲವೂ ಒಂದೊಂದು ರೀತಿಭೇದದಿಂದ ನಿನ್ನ ಲೀಲಾರೂಪವಾದ ಜಗದ್ಧಾರಣಕ್ಕೆ ಕಾರಣವಾಗಿವೆ. ಇವೆಲ್ಲಕ್ಕೂ ಇರುವ ಉತ್ಕರ್ಷವು ನಿನ್ನ ಸಂಬಂಧದಿಂದಲೇ ಹೊರತು ಬೇರೆ ಇಲ್ಲ. ಆದ್ದರಿಂದ ನೀನೇ ಚೇತನಾಚೇತನರೂಪವಾದ ಸರ್ವ ಜಗದಾತ್ಮಕನಾಗಿದ್ದೀಯೇ ಎಂದು ತಾತ್ಪರ್ಯ.

೨೨-೨೩. ಎಲೈ ಅಚ್ಯುತನೇ, ಆಶ್ರಿತರಕ್ಷಣಕ್ಕಾಗಿ ವಾಮನ, ಮೀನ ಮೊದಲಾದ ಅವತಾರಗಳನ್ನು ಧರಿಸಿದ ಕೃಪಾಶಾಲಿಯಾದ ನೀನು (ವಾಮನ, ಮೀನ ಮೊದಲಾದ ಕ್ಷುದ್ರಜೀವಿಗಳ ರೂಪವನ್ನು ಹೊಂದಿಯಾದರೂ ಆಶ್ರಿತರನ್ನು ರಕ್ಷಿಸಬೇಕೆಂಬ

ಮಮಾಶುಭಂ ನಾಶಯ ವಿಗ್ರಹಸ್ಥಂ
ಯದ್ಬ್ರಹ್ಮಹತ್ಯಾಭಿಭವಂ ಬಭೂವ ।
ದಗ್ಧೋಽಸ್ಮಿ ನಷ್ಟೋಽಸ್ಮ್ಯಸಮೀಕ್ಷ್ಯಕಾರೀ
ಪುನೀಹಿ ನಾಥೋಽಸಿ ನಮೋ ನಮಸ್ತೇ ॥ ೨೩ ॥

ಪುಲಸ್ತ್ಯ ಉವಾಚ

ಏವಂ ಸ್ತುತಶ್ಚಕ್ರಧರಃ ಶಂಕರೇಣ ಮಹಾತ್ಮನಾ ।
ಪ್ರೋವಾಚ ಭಗವಾನ್ ವಾಕ್ಯಂ ಬ್ರಹ್ಮಹತ್ಯಾಕ್ಷಯಾಯ ಹಿ ॥ ೨೪ ॥

ಹರಿರುವಾಚ

ಮಹೇಶ್ವರ ಶೃಣುಷ್ವೇಮಾಂ ಮಮ ವಾಚಂ ಕಲಸ್ವನಾಂ ।
ಬ್ರಹ್ಮಹತ್ಯಾಕ್ಷಯಕರೀಂ ಶುಭದಾಂ ಪುಣ್ಯವರ್ಧನೀಂ ॥ ೨೫ ॥

ಯೋಽಸೌ ಬ್ರಹ್ಮಾಂಡಕೇ ಪುಣ್ಯೇ ಮದಂಶಪ್ರಭವೋಽವ್ಯಯಃ ।
ಪ್ರಯಾಗೇ ವಸತೇ ನಿತ್ಯಂ ಯೋಗಶಾಯೀತಿ ವಿಶ್ರುತಃ ॥ ೨೬ ॥

---

ನಿನ್ನ ಪ್ರಯತ್ನಕ್ಕೆ ಅಸಾಧಾರಣವಾದ ನಿನ್ನ ದಯೆಯೇ ಕಾರಣವೆಂದು ತಾತ್ಪರ್ಯ.) ನನ್ನಂಥವರ ಅನಿಷ್ಟನಿವಾರಣಕ್ಕಾಗಿ ಚಕ್ರಪಾಣಿಯಾಗಿ ಪ್ರಕಾಶಿಸುತ್ತಿದ್ದೀಯೆ. ಇಂತಹ ನೀನು ಈ ಪಾಪದಿಂದ ನನ್ನನ್ನು ರಕ್ಷಿಸು. ನಿನಗೆ ಅನಂತ ನಮಸ್ಕಾರಗಳು. ಎಲೈ ಪ್ರಭುವೇ, ನನಗೆ ನೀನೇ ರಕ್ಷಕನಾಗಿರುತ್ತೀಯೆ. ಈ ಬ್ರಹ್ಮಹತ್ಯೆಯಿಂದ ನನ್ನ ದೇಹಕ್ಕೆ ಉಂಟಾಗಿರುವ ಅಮಂಗಲವನ್ನು ಹೋಗಲಾಡಿಸು. ಈ ಪಾಪದಿಂದ ನಾನು ಬಹಳ ಸಂತಪ್ತನಾಗಿ ಅವಿವೇಕಿಯಾಗಿಯೂ, ಆದರ್ಶನೀಯನಾಗಿಯೂ ಆಗಿರುತ್ತೀನೆ, ನನ್ನನ್ನು ಪವಿತ್ರಗೊಳಿಸು. ನಿನಗೆ ಅನಂತ ನಮಸ್ಕಾರಗಳು.

೨೪. ಪುಲಸ್ತ್ಯರು ಹೇಳುತ್ತಾರೆ :- ಈ ರೀತಿಯಾಗಿ ಕಾರ್ಯಜ್ಞನಾದ ಶಂಕರನಿಂದ ಸ್ತೋತ್ರಮಾಡಲ್ಪಟ್ಟ ಚಕ್ರಧರನು ಹೀಗೆ ಹೇಳಿದನು. ಬ್ರಹ್ಮಹತ್ಯಾನಾಶಕ್ಕಾಗಿ ನಾನು ಹೇಳುವ ಮಾತನ್ನು ಕೇಳಿ ಅದರಂತೆ ನಡೆದುಕೊ, ಇದರಿಂದ ನಿನಗೆ ಒಳ್ಳೆಯದಾಗುತ್ತದೆ.

೨೫-೨೯. ಪುಣ್ಯಕರವಾದ ಈ ಬ್ರಹ್ಮಾಂಡ ಭಾಗದಲ್ಲಿ ಪ್ರಯಾಗಕ್ಷೇತ್ರವಿದೆ. ಅಲ್ಲಿ ನನ್ನ ಅಂಶದಿಂದಲೇ ಅವತರಿಸಿರುವ ಯೋಗಶಾಯಿ ಎಂದು ಪ್ರಸಿದ್ಧಿ ಹೊಂದಿದ ದೇವನು ವಾಸಮಾಡಿಕೊಂಡಿರುತ್ತಾನೆ. ಅವನ ಬಲಗಾಲಿನಿಂದ ಹೊರಟ ವರಣಾ

ಚರಣಾದ್ದಕ್ಷಿಣಾತ್ತಸ್ಯ ವಿನಿರ್ಯಾತಾ ಸರಿದ್ವರಾ ।
ವಿಶ್ರುತಾ ವರಣೇತ್ಯೇವಂ ಸರ್ವಪಾಪಹರಾ ಶುಭಾ ॥ ೨೭ ॥

ಸರಿದನ್ಯಾ ದ್ವಿತೀಯಾಚ್ಚ ಆಸೀರಿತ್ಯೇವ ವಿಶ್ರುತಾ ।
ತೇ ಉಭೇ ತು ಸರಿಚ್ಛ್ರೇಷ್ಠೆ ಲೋಕಪೂಜ್ಯೇ ಬಭೂವತುಃ ॥ ೨೮ ॥

ತಯೋರ್ಮಧ್ಯೇ ತು ಯೋ ದೇಶಃ ತತ್ ಕ್ಷೇತ್ರಂ ಯೋಗಶಾಯಿನಃ ।
ತ್ರೈಲೋಕ್ಯಪ್ರವರಂ ತೀರ್ಥಂ ಸರ್ವಪಾಪಪ್ರಮೋಚನಂ ॥ ೨೯ ॥

ತತ್ರಾದ್ಯಶಾಸ್ತಿ ನಗರೀ ಪುಣ್ಯಾ ವಾರಾಣಸೀ ಶುಭಾ ।
ಯಸ್ಯಾಂ ಹಿ ಭೋಗಿನೋಪೀಶ ಪ್ರಯಾಂತಿ ಭವತೋಲಯಂ ॥ ೩೦ ॥

ವಿಲಾಸಿನೀನಾಂ ರಶನಾಸ್ವನೇನ ಶ್ರುತಿಸ್ವರೋ ಬ್ರಾಹ್ಮಣಪುಂಗವಾನಾಂ ।
ಶುಚಿಸ್ವರತ್ವಂ ಗುರವೋ ನಿಶಮ್ಯ ಹಾಸ್ಯಾನ್ವಿತಾ ಸ್ಸನ್ತಿ ಮುಹುರ್ಮುಹುಸ್ತಾಃ

---

ಎಂದು ಪ್ರಸಿದ್ಧವಾದ ನದಿಯೊಂದು ಪ್ರವಹಿಸುತ್ತಿದೆ. ಅದು ಸರ್ವಪಾಪಗಳನ್ನೂ ನಾಶ ಪಡಿಸುವ ಮಹಾತ್ಮ್ಯವುಳ್ಳದ್ದು. ಮತ್ತು ಅವನ ಎಡಗಾಲಿನಿಂದ ಆಸಿ ಎಂದು ಪ್ರಸಿದ್ಧಿ ಪಡೆದ ಮತ್ತೊಂದು ನದಿಯು ಹೊರಟು ಪ್ರವಹಿಸುತ್ತಿದೆ. ಆ ಎರಡು ನದಿಗಳೂ ಲೋಕಪೂಜ್ಯಗಳಾಗಿವೆ. ಆ ನದಿಗಳ ಮಧ್ಯದಲ್ಲಿರುವ ಪ್ರದೇಶವು ಯೋಗ ಶಾಯಿಯ ಕ್ಷೇತ್ರ. ಅದು ಸರ್ವಪಾಪನಾಶಕವಾದ ಮೂರು ಲೋಕಕ್ಕೂ ಪ್ರಶಸ್ತವಾದ ತೀರ್ಥ.

೩೦-೩೩. ಅದರಂತೆಯೇ ಸರ್ವಪಾಪನಿವರ್ತಕವಾದ ವಾರಾಣಸೀ ಎಂಬ ಮಂಗಲಕರವಾದ ನಗರವೊಂದಿದೆ. ಅಲ್ಲಿರುವ ಭೋಗಿಗಳೂ ಕೂಡ ಸಂಸಾರಬಂಧದಿಂದ ಮುಕ್ತಿಹೊಂದುತ್ತಾರೆ. ಸ್ತ್ರೀಯರ ರಶನಾಧ್ವನಿಯಿಂದ ಬ್ರಾಹ್ಮಣರ ವೇದಗಳ ಸ್ವರವು ಶುದ್ಧಸ್ವರವಾಗುವುದನ್ನು ನೋಡಿ ಹಾಸ್ಯದಿಂದ ಸ್ತ್ರೀಯರು ಅಧ್ಯಾಪಕರಾದ ಗುರುಜನ ಗಳನ್ನು ಸ್ವಲ್ಪಹೊತ್ತು ಹಾಸ್ಯಮಾಡುತ್ತಾರೆ. ಆ ನಗರದ ಚತುಷ್ಪಥಗಳಲ್ಲಿ (ಸರ್ಕಲ್) ಸಂಚರಿಸುವ ಸ್ತ್ರೀಯರ ಅರಗಿನ ರಸದಿಂದ ಕೆಂಪಾದ ಪಾದಗಳನ್ನು ನೋಡಿ ಚಂದ್ರನೂ ಸಹ ಇದೇನು ನೆಲದಾವರೆಯೇ ಎಂದು ಆಶ್ಚರ್ಯಪಡುತ್ತಾನೆ. ಮತ್ತು ಎತ್ತರವಾದ ದೇವಮಂದಿರಗಳು ರಾತ್ರಿಯಲ್ಲಿ ಚಂದ್ರಮಂಡಲವನ್ನೂ ತಡೆಯುತ್ತವೆ. ಹಗಲಿ

ವ್ರಜತ್ಸು ಯೋಷಿತ್ಸು ಚತುಃಪಥೇಷು
  ಪದಾನ್ಯಲಕ್ತಾರುಣಿತಾನಿ ದೃಷ್ಟ್ವಾ ।
ಯಯೌ ಶಶೀ ವಿಸ್ಮಯಮೇವ ಯಸ್ಯಾಂ
  ಕಿಂಸ್ವಿತ್ಪ್ರಯಾತಾ ಸ್ಥಲ ಪದ್ಮಿನೀಯಂ ॥ ೩೨ ॥

ತುಂಗಾನಿ ಯಸ್ಯಾಂಸುರಮಂದಿರಾಣಿ
  ರುಂಧಂತಿಚಂದ್ರಂ ರಜನೀಮುಖೇಷು ।
ದಿವಾಪಿ ಸೂರ್ಯಂ ಪವನಾನ್ವಿತಾಭಿ
  ರ್ದೀರ್ಘಾಭಿರೇವಂ ಸುಪತಾಕಿಕಾಭಿಃ ॥ ॥ ೩೩ ॥

ಭೃಂಗಾಶ್ಚ ಯಸ್ಯಾಂ ಶಶಿಕಾನ್ತಭಿತ್ತೌ
  ಪ್ರಲೋಭ್ಯಮಾನಾಃ ಪ್ರತಿಬಿಂಬಿತೇಷು ।
ಆಲಕ್ಷ್ಯ ಯೋಷಿದ್ವಿಮಲಾನನಾಬ್ಜೇಷ್ವೀಯು
  ರ್ಭ್ರಮಾನ್ನೈವ ಚ ಪುಷ್ಪಕಾಂತರಂ ॥ ೩೪ ॥

ಪರಿಶ್ರಮಶ್ಚಾಪಿ ಪರಾಜಿತೇಷು
  ನರೇಷು ಸಂಮೋಹನಖೇಲನೇನ ।
ಯಸ್ಯಾಂ ಜಲಕ್ರೀಡನಸಂಗತಾಸು
  ನ ಸ್ತ್ರೀಷು. ಶಂಭೋ ಗೃಹದೀರ್ಘಿಕಾಸು ॥ ೩೫ ॥

---

ನಲ್ಲಿಯೂ ವಾಯುವಿನಿಂದ ಚಲಿಸುತ್ತಿರುವ ದೀರ್ಘವಾದ ಬಾವುಟಗಳಿಂದ ಸೂರ್ಯ ಮಂಡಲವನ್ನೂ ತಡೆಯುತ್ತವೆ.

೩೪. ದುಂಬಿಗಳು ಆ ನಗರದ ಉಪ್ಪರಿಗೆಗಳ ಚಂದ್ರಕಾಂತ ಶಿಲಾಮಯವಾದ ಗೋಡೆಗಳಲ್ಲಿ ಪ್ರತಿಬಿಂಬಿತವಾಗಿರುವ ಸ್ತ್ರೀಯರ ಮುಖಕಮಲವನ್ನು ನೋಡಿ ಕಮಲವೆಂದು ಭ್ರಮಿಸಿ ಬೇರೆ ಹೂವುಗಳನ್ನು ಹುಡುಕಿಕೊಂಡು ಹೋಗುವುದೇ ಇಲ್ಲ.

೩೫. ಆ ನಗರದಲ್ಲಿ ಸುರತವಿಲಾಸದಿಂದ ಖೇದಗೊಂಡ ಪುರುಷರೂ ಮನೆಯ ತೋಟದಲ್ಲಿರುವ ಕೊಳದಲ್ಲಿ ಜಲಕ್ರೀಡೆಯಿಂದ ವಿಹರಿಸುವ ಸ್ತ್ರೀಯರೂ ಪರಿಶ್ರಮವನ್ನು ಅನುಭವಿಸುತ್ತಾರೆಯೇ ಹೊರತು ಮತ್ತಾರೂ ಪರಿಶ್ರಮವನ್ನು ಅನುಭವಿಸುವುದಿಲ್ಲ. ಎಲ್ಲರೂ ಸುಖಿಗಳೇ ಹೊರತು ಶ್ರಮಜೀವಿಗಳಲ್ಲವೆಂದು ತಾತ್ಪರ್ಯ.

ನ ಚೈವಕಶ್ಚಿತ್ಪರಮಂದಿರಾಣಿ
ರುಣದ್ಧಿ ಶಂಭೋ ಸಹ ಮಾರುತೇನ ।
ನ ಚಾಬಲಾನಾಂ ತರಸಾ ಪರಾಕ್ರಮಂ
ಕರೋತಿ ಯಸ್ಯಾಂ ಸುರತಂ ಹಿಮುಕ್ತ್ವಾ ॥ ೩೬ ॥

ಪಾಶಗ್ರಂಥಿರ್ಗಜೇಂದ್ರಾಣಾಂ ದಾನಚ್ಛೇದೋ ಮದಚ್ಯುತೌ ।
ಯಸ್ಯಾಂ ಮಾನಮದೌ ಪುಂಸಾಂ ಕರಿಣಾಂ ಯೌವನಾಗಮೇ ॥ ೩೭ ॥

---

೩೬. ಮತ್ತೊಬ್ಬರ ಮನೆಯನ್ನು ಆಕ್ರಮಿಸುವ ಕೆಲಸವು ವಾಯುವಿಗೆ ಮಾತ್ರ ಇದೆಯೇ ಹೊರತು ಯಾವ ಮನುಷ್ಯರಿಗೂ ಇಲ್ಲ. ಯಾರೂ ಇತರರಿಗೆ ತೊಂದರೆ ಕೊಡತಕ್ಕವರಲ್ಲವೆಂದು ತಾತ್ಪರ್ಯ. ಮತ್ತು ಸುರತಕಾಲದಲ್ಲಿ ಹೊರತು ಮತ್ತಾವ ಕಾಲದಲ್ಲೂ ಪುರುಷರು ಸ್ತ್ರೀಯರ ವಿಷಯದಲ್ಲಿ ತಮ್ಮ ಪರಾಕ್ರಮವನ್ನು ತೋರಿಸುವುದಿಲ್ಲ.

೩೭. ಮತ್ತು ಆ ನಗರದಲ್ಲಿ ಪಾಶಗ್ರಂಥಿಯು (ಕಾಲಿಗೆ ಹಾಕುವ ಬಂಧನ) ಆನೆಗಳಿಗೇ ಹೊರತು ಮನುಷ್ಯರಿಗಿಲ್ಲ. ಮನುಷ್ಯರಲ್ಲಿ ಅಪರಾಧಿಯೂ ಇಲ್ಲ. ಬಂಧನ ಪ್ರಸಕ್ತಿಯೂ ಇಲ್ಲವೆಂದು ತಾತ್ಪರ್ಯ. ಮತ್ತು ಮದೋದಕವನ್ನು ಬಿಡುವ ಕಾಲದಲ್ಲಿ ದಾನಚ್ಛೇದವು ಆನೆಗಳಿಗೇ ಹೊರತು ಮತ್ತೆಲ್ಲೂ ಇಲ್ಲ. ಇಲ್ಲಿ ದಾನಚ್ಛೇದವೆಂದರೆ ದಾನ ಮಾಡುವದನ್ನು ತಡೆಯುವಿಕೆ ಎಂದು ಶ್ಲೇಷೆಯಿಂದ ಮತ್ತೊಂದರ್ಥ ತೋರುತ್ತದೆ. ಮೊದಲನೇ ಯೋಜನೆಯಲ್ಲಿ ದಾನವೆಂದರೆ ಆನೆಗಳ ಗಂಡಸ್ಥಲದಿಂದ ಸುರಿಯುವ ದಾನೋದಕವೆಂದರ್ಥ. ಆನೆಗಳ ದಾನೋದಕವನ್ನು ತಡೆಯುತ್ತಾರೆಯೇ ಹೊರತು ದಾನಶೀಲರುಗಳ ದಾನವನ್ನು ಯಾರೂ ತಡೆಯುವುದಿಲ್ಲವೆಂದು ತಾತ್ಪರ್ಯ. ಈ ವರ್ಣನೆಯು ಪರಿಸಂಖ್ಯಾ ಎಂಬ ಕಾವ್ಯಾಲಂಕಾರಕ್ಕೆ ಉದಾಹರಣೆಯಾಗುತ್ತದೆ. ಶ್ಲೇಷೆಯ ಅವಲಂಬನದಿಂದ ಒಂದುಕಡೆ ನಿಷೇಧಮಾಡಿ ಮತ್ತೊಂದು ಕಡೆಯಲ್ಲಿ ಪದಾರ್ಥವನ್ನು ಆರೋಪಮಾಡುವಿಕೆಯೇ ಅದರ ಲಕ್ಷಣ. ಇಲ್ಲಿ ದಾನಚ್ಛೇದವನ್ನು ಜನರಲ್ಲಿ ನಿಷೇಧ ಮಾಡಿ ಆನೆಗಳಲ್ಲಿ ಆರೋಪಿಸಲಾಗಿದೆ. ಮತ್ತು ಆ ನಗರದಲ್ಲಿ ಪುರುಷರು ಯೌವನ ಕಾಲದಲ್ಲೇ ಮಾನಶಾಲಿಗಳಾಗಿರುತ್ತಾರೆ. ಆನೆಗಳು ಯೌವನದಲ್ಲೇ ಮದಶಾಲಿಗಳಾಗಿವೆ. ಇಲ್ಲಿಯೂ ಮಾನಶಬ್ದಕ್ಕೆ ಅಹಂಕಾರವೆಂದೂ ಸ್ತ್ರೀಪುರುಷರಕಲಹವೆಂದೂ ಎರಡು ಅರ್ಥಗಳಿವೆ. ಮದಶಬ್ದಕ್ಕೂ ಮದ್ಯಾದಿಸೇವನದಿಂದುಂಟಾದ ಚಿತ್ತವಿಕಾರ ಮತ್ತು ಆನೆಗಳ ಮದೋದಕ ಎಂದು ಅರ್ಥದ್ವಯವಿದೆ. ಮಾನಶಬ್ದಾರ್ಥವಾದ ಸ್ತ್ರೀಪುರುಷರ ಕಲಹವು

**ಪ್ರಿಯದೋಷಾಸ್ಸದಾ ಯಸ್ಯಾಂ ಕೌಶಿಕಾ ನೇತರೇ ಜನಾಃ ।**
**ತಾರಾಗಣೇಽಕುಲೀನತ್ವಂ ಮೇಘೇ ವೃತ್ತಚ್ಯುತಿರ್ವಿಭೋ ॥ ೩೮ ॥**

---

ಯೌವನಕಾಲದಲ್ಲಿ ಪುರುಷರಲ್ಲಿದೆಯೇ ಹೊರತು ಮತ್ತೊಂದರ್ಥವಾದ ಅಹಂಕಾರವು ಯಾವಾಗಲೂ ಇಲ್ಲವೆಂದು ತಾತ್ಪರ್ಯ. ಮದವು ಯೌವನದಲ್ಲಿ ಆನೆಗಳಿಗಿದೆಯೇ ಹೊರತು ಜನರಲ್ಲಿ ಯಾರಲ್ಲಿಯೂ ಯಾವಾಗಲೂ ಇಲ್ಲವೆಂದು ತಾತ್ಪರ್ಯ. ಜನರೆಲ್ಲರೂ ಸಾತ್ವಿಕರಾಗಿರುತ್ತಾರೆ. ಮದ್ಯಪಾನಾದಿಗಳಿಂದ ದೂಷಿತಚಿತ್ತರಲ್ಲವೆಂದು ಭಾವ.

೩೮. ಮತ್ತು ಆ ನಗರದಲ್ಲಿ ಗೂಬೆಗಳು ದೋಷಪ್ರಿಯವಾಗಿವೆಯೇ ಹೊರತು ಜನಗಳು ದೋಷಪ್ರಿಯರಲ್ಲ. ಇಲ್ಲಿ ದೋಷ ಶಬ್ದಕ್ಕೆ ರಾತ್ರಿ ಎಂದೂ ದೋಷಾಪಾದನ ವೆಂದೂ ಅರ್ಥದ್ವಯವುಂಟು. ಗೂಬೆಗಳು ದೋಷಪ್ರಿಯಗಳು ಎಂದರೆ ರಾತ್ರಿಯಲ್ಲಿಯೇ ಅವುಗಳ ಸರ್ವವ್ಯವಹಾರವೂ ಇರುವುದರಿಂದ ರಾತ್ರಿಯನ್ನು ಕಂಡರೆ ಅವುಗಳಿಗೆ ಬಹಳ ಪ್ರೀತಿ. ಆದ್ದರಿಂದ ದೋಷಪ್ರಿಯತ್ವವು ಅಲ್ಲಿ ಇದ್ದಂತಾಯಿತು. ಜನಗಳ ಪಕ್ಷದಲ್ಲಿ ನಿಷೇಧಾರ್ಹವಾದ ದೋಷಪ್ರಿಯತ್ವವು ದೋಷಾಪಾದನಪ್ರಿಯರಲ್ಲವೆಂದು ಪರ್ಯವಸಾನಹೊಂದುತ್ತದೆ. ಜನಗಳೆಲ್ಲರೂ ಪರದೋಷಪರಾಙ್ಮುಖರಾಗಿ ಸಾತ್ವಿಕ ರಾಗಿರುತ್ತಾರೆಂದು ತಾತ್ಪರ್ಯ. ಇಲ್ಲಿಯೂ ಶ್ಲೇಷಮೂಲಕವಾದ ಪರಿಸಂಖ್ಯಾಲಂಕಾರ ದಿಂದ ಅರ್ಥವೈಚಿತ್ರ್ಯವು ಏರ್ಪಡಿಸಲ್ಪಟ್ಟದೆ. ಅಕುಲೀನತ್ವವು ನಕ್ಷತ್ರಮಂಡಲ ದಲ್ಲಿಯೂ ವೃತ್ತಚ್ಯುತಿಯು ಮೇಘದಲ್ಲಿಯೂ ಇವೆಯೇ ಹೊರತು ಮತ್ತೆಲ್ಲಿಯೂ ಇಲ್ಲ. ಇಲ್ಲಿ ಅಕುಲೀನತ್ವವೆಂದರೆ (ಭೂಮಿಯ ಮೇಲಿಲ್ಲದೆ) ಆಕಾಶದಲ್ಲಿರುವಿಕೆ, ಎಂದು ನಕ್ಷತ್ರಪಕ್ಷದಲ್ಲಿ ಅರ್ಥ. (ಕೌ, ಭೂಮಿಯಲ್ಲಿ ಲೀನಾಃ ಕುಲೀನಾಃ ತೇ ನಭವಂತೀತ್ಯಕುಲೀನಾಃ, ತೇಷಾಂ ಭಾವಃ ಅಕುಲೀನತ್ವಂ, ಎಂದು ನಕ್ಷತ್ರಪರವಾದ ವ್ಯುತ್ಪತ್ತಿ ಜನಗಳ ಪಕ್ಷದಲ್ಲಿ ಅರ್ಥವು ಸ್ಪಷ್ಟವಾಗಿದೆ.) ಜನರೆಲ್ಲರೂ ದುಷ್ಟವಂಶದಲ್ಲಿ ಜನಿಸದೆ ಸತ್ಕುಲಪ್ರಸೂತರಾಗಿರುವರೆಂದು ತಾತ್ಪರ್ಯ. ವೃತ್ತಚ್ಯುತಿ ಎಂದರೆ ಮಂಡಲಾ ಕಾರವಾಗಿ ಮಳೆಗರೆಯುವಿಕೆ. ಇದು ಮೇಘದಲ್ಲಿ ಸ್ವಭಾವಸಿದ್ಧವಾದ್ದು. ಸದ್ವೃತ್ತ ದಿಂದ ಹಾನಿಯನ್ನು ಹೊಂದುವಿಕೆ ಎಂದು ಮತ್ತೊಂದರ್ಥ. ಜನರಲ್ಲಿ ಸದ್ವೃತ್ತಹಾನಿ ಇಲ್ಲವೆಂದು ತಾತ್ಪರ್ಯ. ಇಲ್ಲಿಯೂ ಶ್ಲೇಷಮೂಲಕವಾದ ಪರಿಸಂಖ್ಯಾಲಂಕಾರವಿದೆ.

**ಭೂತಿಲುಬ್ಧಾ ವಿಲಾಸಿನ್ಯಃ ಭುಜಂಗಪರಿವಾರಿತಾಃ ।**
**ಚಂದ್ರಭೂಷಿತದೇಹಾಶ್ಚ ಯಸ್ಯಾಂ ತ್ವಮಿವ ಶಂಕರ ॥ ೩೯ ॥**

**ಈದೃಶಾಯಾಂ ಸುರೇಶಾನ ವಾರಾಣಸ್ಯಾಂ ಮದಾಶ್ರಮೆ ।**
**ವಸತೇ ಭಗವಾನ್ ಲೋಲಃ ಸರ್ವಪಾಪಹರೋ ರವಿಃ ॥ ೪೦ ॥**

---

೩೯. ಮತ್ತು ಆ ನಗರದಲ್ಲಿ ಭೂತಿ (ಐಶ್ವರ್ಯ) ಯಲ್ಲಿ ಅತ್ಯಾಶೆಯುಳ್ಳವರಾಗಿಯೂ, ಭುಜಂಗ (ವಿಟರು) ಗಳಿಂದ ಸುತ್ತುವರಿಯಲ್ಪಟ್ಟೂ, ಚಂದ್ರ (ಪಚ್ಚಕರ್ಪೂರ) ದಿಂದ ಅಲಂಕರಿಸಲ್ಪಟ್ಟ ದೇಹವುಳ್ಳವರಾಗಿಯೂ ಇರುವ ವಿಲಾಸಿನಿಗಳಾದ ಸ್ತ್ರೀಯರು ಗಳು ನಿನ್ನ ಸಾಮ್ಯವನ್ನು ಹೊಂದಿ ಪ್ರಕಾಶಿಸುತ್ತಿದ್ದಾರೆ. ಈಶ್ವರನ ಪಕ್ಷದಲ್ಲಿ ಭೂತಿ ಎಂದರೆ ವಿಭೂತಿಯೆಂದೂ ಭುಜಂಗವೆಂದರೆ ಸರ್ಪವೆಂದೂ, ಚಂದ್ರನೆಂದರೆ ಪ್ರಸಿದ್ಧ ಚಂದ್ರನೆಂದೂ ಶ್ಲೇಷೆಯಿಂದ ಅರ್ಥಾಂತರವಿದೆ. ಪೂರ್ವಾರ್ಧದ ಎರಡು ವಿಶೇಷಣಗಳು ಸ್ತ್ರೀಯರ ಪಕ್ಷದಲ್ಲಿ ದೋಷದಲ್ಲಿ ಪರ್ಯವಸಾನಹೊಂದಿ ಕೆಲವು ಸ್ತ್ರೀಯರೇ ಅಂಥವರೇ ಹೊರತು ಸಾತ್ವಿಕರಾದ ಸ್ತ್ರೀಪುರುಷರು ಯಾರೂ ಅಧಿಕವಾದ ಧನಲೋಭದಿಂದಲೂ ದುಷ್ಟಸಹವಾಸದಿಂದಲೂ ನಿಂದಿತರಾಗಿಲ್ಲವೆಂದು ನಗರದ ಜನರ ಉತ್ಕರ್ಷದಲ್ಲಿ ಪರ್ಯವಸಾನಹೊಂದುತ್ತವೆ. ಚಂದ್ರಭೂಷಿತದೇಹಾಶ್ಚ ಎಂಬ ಮೂರನೇ ವಿಶೇಷಣವು ಪೂರ್ವಾರ್ಧವಿಶೇಷಣಗಳ ಅರ್ಥಾಂತರಸಹಾಯದಿಂದ ಶಂಕರಸಾದೃಶ್ಯಕ್ಕೆ ಉಪಪಾದಕ ವಾಗಿರುತ್ತೆ. ನೀನೊಬ್ಬನೇ ಅಸಾಧಾರಣನೆಂದು ತಿಳಿಯಬೇಡ, ನಿನ್ನನ್ನೂ ಹೋಲತಕ್ಕ ಸ್ತ್ರೀಯರು ಅಲ್ಲಿರುತ್ತಾರೆ ಎಂಬ ನಗರದ ಉತ್ಕರ್ಷದಲ್ಲಿ ಪರ್ಯವಸಾನ ಹೊಂದುತ್ತವೆ. ಇಲ್ಲಿ ಶ್ಲೇಷಾಲಂಕಾರದಿಂದ ಪರಿಷ್ಕರಿಸಲ್ಪಟ್ಟ ಉಪಮಾಲಂಕಾರ ಮುಖ್ಯ. ಅದರಿಂದ ಪ್ರತೀಪಾಲಂಕಾರದ ಧ್ವನಿಯೂ, ಸಂಪೂರ್ಣಶ್ಲೋಕಸಂದರ್ಭಗಳಿಂದ ನಗರದ ಉತ್ಕರ್ಷ ರೂಪವಾದ ಉದಾತ್ತಾಲಂಕರವೂ ರಮ್ಯವಾಗಿ ವರ್ಣಿಸಲ್ಪಟ್ಟಿವೆ.

ಇಲ್ಲಿ ನಗರವರ್ಣನಪ್ರಸ್ತಾವವಿರುವದ್ದರಿಂದ ವಿಲಾಸಿನೀ ಎಂಬ ಪದವು ವೇಶ್ಯೆಯರನ್ನು ಬೋಧಿಸುತ್ತದೆ. ಅವರ ಸಾಮ್ಯವನ್ನು ಶಂಕರನಲ್ಲಿ ಹೇಳುವದರಿಂದ ಅನೌಚಿತ್ಯತೋರಿ ಬರುತ್ತಿದೆ. ಆದರೂ ಸಂತಾಪಹೊಂದಿರುವ ಶಂಕರನಿಗೆ ಪರಿಹಾಸ ದಿಂದ ಸ್ವಲ್ಪಮಟ್ಟಿಗೆ ಮನಶ್ಶಾಂತಿಯನ್ನುಂಟುಮಾಡುವುದೇ ಇದಕ್ಕೆ ಪ್ರಯೋಜನ ವೆಂದು ತಿಳಿಯಬೇಕು.

೪೦-೪೨. ಹೀಗೆ ಪ್ರಕಾಶಿಸುತ್ತಿರುವ ವಾರಾಣಸೀನಗರದಲ್ಲಿ ಸರ್ವಪಾಪನಾಶಕ ನಾದ ಸೂರ್ಯನು ನನ್ನ ಆಶ್ರಮದಲ್ಲಿ ವಾಸಮಾಡಿಕೊಂಡಿರುತ್ತಾನೆ. ಆ ಸೂರ್ಯನು

ದಶಾಶ್ವಮೇಧಂ ಯತ್ಪ್ರೋಕ್ತಂ ಮದಂಶೋ ಯತ್ರ ಕೇಶವಃ ।
ತತ್ರ ಗತ್ವಾ ಸುರಶ್ರೇಷ್ಠ ಪಾಪಮೋಕ್ಷಮವಾಪ್ಸ್ಯಸಿ ॥ ೪೧ ॥

ಇತ್ಯೇವಮುಕ್ತೋ ಗರುಡಧ್ವಜೇನ
ವೃಷಧ್ವಜಸ್ತಂ ಶಿರಸಾ ಪ್ರಣಮ್ಯ
ಜಗಾಮ ವೇಗಾದ್ಗರುಡೋಯಥಾsಸೌ
ವಾರಾಣಸೀಂ ಪಾಪವಿಮೋಚನಾಯ ॥ ೪೨ ॥

ಗತ್ವಾ ಸುಪುಣ್ಯಾಂ ನಗರೀಂ ಸುತೀರ್ಥಾಂ
ದೃಷ್ಟ್ವಾ ಚ ಲೋಲಂ ಸ ದಶಾಶ್ವಮೇಧಂ।
ಸ್ನಾತ್ವಾ ಚ ತೀರ್ಥೇಷು ವಿಮುಕ್ತಪಾಪಃ
ಸ ಕೇಶವಂ ದ್ರಷ್ಟುಮುಪಾಜಗಾಮ ॥ ೪೩ ॥

ಕೇಶವಂ ಶಂಕರೋ ದೃಷ್ಟ್ವಾ ಪ್ರಣಿಪತ್ಯೇದಮಬ್ರವೀತ್ ।
ತ್ವತ್ಪ್ರಸಾದಾದ್ಧೃಷೀಕೇಶ ಬ್ರಹ್ಮಹತ್ಯಾ ಕ್ಷಯಂಗತಾ ॥ ೪೪ ॥

ನೇದಂ ಕಪಾಲಂ ದೇವೇಶ ಮದ್ಧಸ್ತಂ ಪರಿಮುಂಚತಿ ।
ಕಾರಣಂ ವೇದ್ಮಿನೈವೈತತ್ತನ್ಮೇತ್ವಂ ವಕ್ತುಮರ್ಹಸಿ ॥ ೪೫ ॥

---

ದಶಾಶ್ವಮೇಧವನ್ನು ವಿವರಿಸಿ ಅಲ್ಲಿ ಪ್ರಸಿದ್ಧಿಹೊಂದಿದ್ದಾನೆ. ಮತ್ತು ನನ್ನ ಅಂಶ ಭೂತನಾದ ಕೇಶವನೂ ಅಲ್ಲಿ ಪ್ರತಿಷ್ಠಿತನಾಗಿರುತ್ತಾನೆ. ಅಲ್ಲಿ ಹೋಗಿ ಅವರನ್ನು ಸೇವಿಸಿ ಅವರ ಅನುಗ್ರಹದಿಂದ ಈ ಪಾಪದ ಬಿಡುಗಡೆಯನ್ನು ಹೊಂದು. ಎಂದು ನಾರಾಯಣ (ಚಕ್ರಪಾಣಿ) ನಿಂದ ಉಪದೇಶಿಸಲ್ಪಟ್ಟ ಶಂಕರನು ಅವನಿಗೆ ಪ್ರಣಾಮವಂ ಮಾಡಿ ಗರುಡನಂತೆ ಬಹಳ ವೇಗದಿಂದ ಪಾಪನಾಶಕ್ಕಾಗಿ ವಾರಾಣಸಿನಗರವನ್ನು ಹೊಂದಿದನು.

೪೩-೪೫. ಆ ಪುಣ್ಯಕರವಾದ ಅನೇಕ ತೀರ್ಥಗಳಿಂದ ಕೂಡಿದ ವಾರಾಣಸೀ ನಗರಕ್ಕೆ ಹೋಗಿ ಅಲ್ಲಿರುವ ವಿಲಾಸಿಯಾದ ದಶಾಶ್ವಮೇಧಕರ್ತೃವಾದ ಸೂರ್ಯನನ್ನು ಸಂದರ್ಶಿಸಿ ತೀರ್ಥಗಳಲ್ಲಿ ಸ್ನಾನಮಾಡಿ ಶಂಕರನು ಬ್ರಹ್ಮಹತ್ಯಾಪಾಪದಿಂದ ಬಿಡುಗಡೆ ಹೊಂದಿದನು. ಅನಂತರ ಅಲ್ಲಿರುವ ಕೇಶವಸ್ವಾಮಿಯನ್ನು ನೋಡಿ ಅವನನ್ನು ನಮಸ್ಕರಿಸಿ ಹೀಗೆ ಹೇಳುತ್ತಾನೆ. ಎಲೈ ಹೃಷಿಕೇಶನೇ, ನಿನ್ನ ಅನುಗ್ರಹದಿಂದ.ನನ್ನ ಬ್ರಹ್ಮಹತ್ಯೆಯು ನಾಶವಾಯಿತು. ಆದರೆ ಈ ಕಪಾಲವು ಮಾತ್ರ ನನ್ನ ಕೈಯನ್ನು ಬಿಡದೆ ಹಾಗೆಯೇ ಅಂಟಿಕೊಂಡಿದೆ. ಇದಕ್ಕೇನು ಕಾರಣ ದಯವಿಟ್ಟು ಹೇಳಬೇಕು.

## ಪುಲಸ್ತ್ಯ ಉವಾಚ

ಮಹಾದೇವವಚಶ್ಶ್ರುತ್ವಾ ಕೇಶವೋ ವಾಕ್ಯಮಬ್ರವೀತ್ ।
ವಿದ್ಯತೇ ಕಾರಣಂ ವತ್ಸ ತತ್ಸರ್ವಂ ಕಥಯಾಮಿ ತೇ ॥ ೪೬ ॥

ಯೋಽಸೌಮಮಾಗ್ರತೋ ದಿವ್ಯೋ ಹ್ರದಃ ಪದ್ಮೋತ್ಪಲೈಃ ವೃತಃ ।
ಏಷತೀರ್ಥವರಃ ಪುಣ್ಯೋ ದೇವಗಂಧರ್ವಪೂಜಿತಃ ॥ ೪೭ ॥

ಏತಸ್ಮಿನ್ ಪ್ರವರೇ ಪುಣ್ಯೇ ಸ್ನಾನಂ ಶೋಭನಮಾಚರ ।
ಸ್ನಾತಮಾತ್ರಸ್ಯ ಚಾದ್ಯೈವ ಕಪಾಲಂ ಪರಿಮೋಕ್ಷ್ಯತಿ ॥ ೪೮ ॥

ತತಃ ಕಪಾಲೀ ಲೋಕೇ ಚ ಖ್ಯಾತೋ ರುದ್ರ ಭವಿಷ್ಯಸಿ ।
ಕಪಾಲಮೋಚನೇತ್ಯೇವಂ ತೀರ್ಥಂ ಚೇದಂ ಭವಿಷ್ಯತಿ ॥ ೪೯ ॥

## ಪುಲಸ್ತ್ಯ ಉವಾಚ

ಏವಮುಕ್ತಸ್ಸುರೇಶೇನ ಕೇಶವೇನ ಮಹೇಶ್ವರಃ ।
ಕಪಾಲಮೋಚನೇ ಸಸ್ನೌ ವೇದೋಕ್ತವಿಧಿನಾ ಮುನೆ ॥ ೫೦ ॥

---

೪೬-೪೮. ಅನಂತರ ಪುಲಸ್ತ್ಯರು ಹೇಳುತ್ತಾರೆ. ಈಶ್ವರನ ಈಮಾತನ್ನು ಕೇಳಿ ಕೇಶವನು ಹೀಗೆ ಹೇಳುತ್ತಾನೆ. ಮಗುವೆ, ಇದಕ್ಕೆ ಕಾರಣವಿದೆ. ಅದನ್ನು ಹೇಳು ತ್ತೇನೆ. ಈ ನನ್ನ ಮುಂಭಾಗದಲ್ಲಿ ಪದ್ಮಗಳಿಂದ ಕೂಡಿದ ಒಂದು ದಿವ್ಯಸರೋವರವಿದೆ. ಇದು ದೇವಗಂಧರ್ವರಿಂದಲೂ ಸೇವಿಸಲ್ಪಟ್ಟ ಪುಣ್ಯಕರವಾದ ತೀರ್ಥ. ಇಲ್ಲಿ ನೀನು ಸ್ನಾನಮಾಡು, ಕಪಾಲವು ನಿನ್ನನ್ನು ಬಿಟ್ಟುಬಿಡುತ್ತದೆ.

೪೯-೫೧. ಅನಂತರ ನೀನು ಕಪಾಲೀ ಎಂಬುದಾಗಿ ಲೋಕದಲ್ಲಿ ಪ್ರಸಿದ್ಧಿ ಹೊಂದುತ್ತೀಯೆ. ಈ ತೀರ್ಥವೂ ಸಹ ಕಪಾಲಮೋಚನವೆಂದು ಪ್ರಸಿದ್ಧಿಹೊಂದುತ್ತದೆ. ಪುಲಸ್ತ್ಯರು ಹೇಳುತ್ತಾರೆ. ಎಲೈ ಮುನಿಯೇ! ಈ ಪ್ರಕಾರ ಕೇಶವನಿಂದ ಉಪದೇಶಿ ಸಲ್ಪಟ್ಟ ಶಂಕರನು ಕಪಾಲಮೋಚನ ತೀರ್ಥದಲ್ಲಿ ಸ್ನಾನಮಾಡಿಡನು. ಸ್ನಾನ

ಸ್ನಾತಸ್ಯ ತೀರ್ಥೇ ತ್ರಿಪುರಾಂತಕಸ್ಯ
ಪರಿಚ್ಯುತಂ ಹಸ್ತತಲಾತ್ಕಪಾಲಂ ।
ನಾಮ್ನಾ ಬಭೂವಾಥ ಕಪಾಲಮೋಚನಂ
ತತ್ತೀರ್ಥವರ್ಯಂ ಭಗವತ್ಪ್ರಸಾದಾತ್ ॥ ೫೧ ॥

ಇತಿ ಶ್ರೀ ವಾಮನಪುರಾಣೇ ಪುಲಸ್ತ್ಯನಾರದಸಂವಾದೇ
ಹರಲಲಿತೋನಾಮ ತೃತೀಯೋಽಧ್ಯಾಯಃ

---

ಮಾಡಿದೊಡನೆಯೇ ಆ ಕಪಾಲವು ಕೈಯಿನಿಂದ ಬಿದ್ದುಹೋಯಿತು. ಆ ತೀರ್ಥವೂ ಸಹ ಕಪಾಲಮೋಚನವೆಂದು ಭಗವದನುಗ್ರಹದಿಂದ ಪ್ರಸಿದ್ಧಿಹೊಂದಿತು.

ಶ್ರೀ ವಾಮನಪುರಾಣದಲ್ಲಿ ಇಲ್ಲಿಗೆ ಹರಲಲಿತವೆಂಬ ಮೂರನೇ ಅಧ್ಯಾಯವು ಮುಗಿದಿದೆ.

## ಅಧ್ಯಾಯಾರ್ಥ ಸಂಗ್ರಹ

ಈ ಅಧ್ಯಾಯದಲ್ಲಿ ಬ್ರಹ್ಮಪುತ್ರನ ಪರಾಭವಕ್ಕಾಗಿ ನಾರಾಯಣನ ಅನುಗ್ರಹದಿಂದ ನರನನ್ನು ಹೊಂದಿದರೂ ಜಯಪರಾಜಯಗಳ ವ್ಯವಸ್ಥೆಯಿಲ್ಲದೆ ಬ್ರಹ್ಮಹತ್ಯೆಯಿಂದ ವ್ಯಾಕುಲನಾದ ಶಂಭುವು ಅದರ ನಿವೃತ್ತಿಗಾಗಿ ಎಲ್ಲಾ ತೀರ್ಥಗಳನ್ನೂ, ಕ್ಷೇತ್ರಗಳನ್ನೂ ಅಲೆದು ಕೊನೆಗೆ ಕುರುಜಾಂಗಲದಲ್ಲಿ ನೆಲಸಿರುವ ಚಕ್ರಪಾಣಿಯ ಅನುಗ್ರಹದಿಂದ ವಾರಾಣಸಿಯನ್ನು ಹೊಂದಿ ಅಲ್ಲಿರುವ ಚಕ್ರಪಾಣಿಯ ಅಂಶನಾದ ಕೇಶವಸ್ವಾಮಿಯ ಅನುಗ್ರಹದಿಂದಲೂ ಮತ್ತು ಪ್ರಯಾಗಕ್ಷೇತ್ರದ ಯೋಗಶಾಯಿಯ ಅನುಗ್ರಹದಿಂದಲೂ ಕಪಾಲದ ನಿವೃತ್ತಿಯನ್ನೂ ಬ್ರಹ್ಮಹತ್ಯಾನಾಶವನ್ನೂ ಹೊಂದಿದನೆಂದು ಉಪಪಾದಿಸಿ ಹಿಂದೆ ನಾರದರ, "ಶಂಭುವು ಹೇಗೆ ಕಪಾಲಿಯಾದನೆಂಬ" ಉಪಪ್ರಶ್ನೆಗೆ ಸಮಾಧಾನ ಹೇಳಿದಂತಾಯಿತು. ಇನ್ನು ಮುಂದೆ ಸತೀದೇವಿಯ ದೇಹನಾಶಕ್ಕೆ ಕಾರಣವೇನೆಂಬ ಪ್ರಧಾನ ಪ್ರಶ್ನೆಯ ಉತ್ತರವನ್ನು ಮುಂದುವರಿಸಲಾಗುತ್ತದೆ.

॥ ಶ್ರೀಃ ॥

# ಶ್ರೀವಾಮನಪುರಾಣಂ

## ಚತುರ್ಥೋಽಧ್ಯಾಯಃ

### ಪುಲಸ್ತ್ಯ ಉವಾಚ

**ಏವಂ ಕಪಾಲೀ ಸಂಜಾತೋ ದೇವರ್ಷೇ ಭಗವಾನ್ ಹರಃ ।**
**ಅನೇನ ಕಾರಣೇನಾಸೌ ದಕ್ಷೇಣ ನ ನಿಮಂತ್ರಿತಃ ॥ ೧ ॥**

**ಏತಸ್ಮಿನ್ನಂತರೆ ದೇವೀಂ ದ್ರಷ್ಟುಂ ಗೌತಮನಂದನೀ ।**
**ಜಯಾ ಜಗಾಮ ಶೈಲೇಂದ್ರಂ ಮಂದರಂ ಚಾರುಕಂದರಂ ॥ ೨ ॥**

**ತಾಮಾಗತಾಂ ಸತೀದೃಷ್ಟ್ವಾ ಜಯಾಮೇಕಾಮುವಾಚ ಹ ।**
**ಕಿಮರ್ಥಂ ವಿಜಯಾ ನಾಗಾಜ್ಜಯಂತೀ ಚಾ ಪರಾಜಿತಾ ॥ ೩ ॥**

---

### ನಾಲ್ಕನೆಯ ಅಧ್ಯಾಯವು

೧-೩. ಪುಲಸ್ತ್ಯರು ಹೇಳುತ್ತಾರೆ, ಈ ರೀತಿಯಾಗಿ ಹರನು ಕಪಾಲಿಯಾದುದರಿಂದ ದಕ್ಷನು ಅವನನ್ನು ಯಜ್ಞಕ್ಕೆ ಆಹ್ವಾನಿಸಲಿಲ್ಲ. ಈ ಸಂದರ್ಭದಲ್ಲಿ ಗೌತಮರ ಮಗಳಾದ ಜಯೆಯು ಸತೀದೇವಿಯನ್ನು ನೋಡಲು ಮಂದರಪರ್ವತಕ್ಕೆ ಬಂದಳು. ಅವಳನ್ನು ನೋಡಿ ಸತೀದೇವಿಯು ನಿನ್ನ ಸಹೋದರಿಗಳಾದ ವಿಜಯಾ, ಜಯಂತೀ, ಅಪರಾಜಿತಾ ಇವರು ಏಕೆ ಬರಲಿಲ್ಲ. ನೀನೊಬ್ಬಳೇ ಏಕೆ ಬಂದೆ ಎಂದು ಪ್ರಶ್ನೆ ಮಾಡಲಾಗಿ ಜಯೆಯು ಉತ್ತರ ಹೇಳುತ್ತಾಳೆ.

ಸಾ ದೇವ್ಯಾ ವಚನಂ ಶ್ರುತ್ವಾ ಉವಾಚ ಪರಮೇಶ್ವರೀ ।
ಗತಾ ನಿಮಂತ್ರಿತಾಃ ಸರ್ವಾ ಮಖೆ ಮಾತಾಮಹಸ್ಯ ತಾಃ ॥ ೪ ॥

ಸಮಂ ಪಿತ್ರಾ ಗೌತಮೇನ ಮಾತ್ರಾ ಚೈವಾಪ್ಯಹಲ್ಯಯಾ ।
ಅಹಂ ಸಮಾಗತಾ ದ್ರಷ್ಟುಂ ತ್ವಾಂ ತತ್ರ ಗಮನೋತ್ಸುಕಾ ॥ ೫ ॥

ಕಿಂ ತ್ವಂ ನವ್ರಜಸೇ ತತ್ರ ತಥಾ ದೇವೋ ಮಹೇಶ್ವರಃ ।
ನಾಮಂತ್ರಿತಾಸಿ ತಾತೇನ ಉತಾಹೋ ಸ್ವಿದ್ವ್ರಜಿಷ್ಯಸಿ ॥ ೬ ॥

ಗತಾಸ್ತು ಋಷಯಸ್ಸರ್ವೇ ಋಷಿಪತ್ನ್ಯಸ್ತಥಾ ಸುರಾಃ ।
ಮಾತೃಷ್ವಸಃ ಶಶಾಂಕಶ್ಚ ಸಪತ್ನೀಕೊ ಗತಃ ಕ್ರತುಂ ॥ ೭ ॥

ಚತುರ್ದಶಸು ಲೋಕೇಷು ಜಂತವೋ ಯೇ ಚರಾಚರಾಃ ।
ನಿಮಂತ್ರಿತಾಃ ಕ್ರತೌ ಸರ್ವೆ ಕಿಂ ವಾ ತ್ವಂ ನ ನಿಮಂತ್ರಿತಾ ॥ ೮ ॥

ಪುಲಸ್ತ್ಯ ಉವಾಚ

ಜಯಾಯಾಸ್ತದ್ವಚಶ್ಶ್ರುತ್ವಾ ವಜ್ರಪಾತೋಪಮಂ ಸತೀ ।
ಮನ್ಯುನಾ ಭಿಪ್ಲುತಾ ಬ್ರಹ್ಮನ್ ಪಂಚತ್ವಮುಗಮತ್ತದಾ ॥ ೯ ॥

---

೪-೬. ವಿಜಯಾ ಮುಂತಾದವರೆಲ್ಲರೂ ಅಜ್ಜನಾದ ದಕ್ಷಪ್ರಜಾಪತಿಯ ಯಜ್ಞಕ್ಕೆ ಆಹ್ವಾನಿಸಲ್ಪಟ್ಟು ತಂದೆತಾಯಿಗಳಾದ ಗೌತಮಾಹಲ್ಯೆಯರೊಡನೆ ಅಲ್ಲಿಗೆ ಹೋದರು. ನಾನೂ ಅಲ್ಲಿ ಹೋಗಲು ಆಶೆಯಿಂದ ನಿನ್ನನ್ನು ನೋಡಿಹೋಗಲು ಇಲ್ಲಿ ಬಂದೆ. ನೀನು ಅಲ್ಲಿಗೆ ಬರುವುದಿಲ್ಲವೆ? ನಿನ್ನ ಪತಿಯಾದ ಮಹೇಶ್ವರನು ಬರುವುದಿಲ್ಲವೆ? ಅಥವಾ ನಿನ್ನನ್ನು ಆಹ್ವಾನಿಸಿಲ್ಲವೆ? ಆಹ್ವಾನಿಸಿದ್ದರೂ ಇನ್ನು ಮೇಲೆ ಹೊರಡುವೆಯಾ ಏನು? ಹೇಳು.

೭-೮. ಋಷಿಗಳೂ, ಋಷಿಪತ್ನಿಗಳೂ ಎಲ್ಲರೂ ಆಹೂತರಾಗಿ ಅಲ್ಲಿ ಹೋಗಿರುತ್ತಾರೆ. ಚಂದ್ರನೂ ಸಪತ್ನೀಕನಾಗಿ ಹೋಗಿರುತ್ತಾನೆ. ಹದಿನಾಲ್ಕು ಲೋಕದಲ್ಲಿರುವ ಎಲ್ಲರೂ ಆಹೂತರಾಗಿ ಹೋಗಿದ್ದಾರೆ. ನಿನಗೆ ಆಹ್ವಾನವೇ ಬರಲಿಲ್ಲವೇ ಏನು? ಹೇಳು ಎಂದು ಚಿಕ್ಕತಾಯಿಯಾದ ಸತೀದೇವಿಯನ್ನು ಕೇಳುತ್ತಾಳೆ.

೯-೧೧. ಪುಲಸ್ತ್ಯರು ಹೇಳುತ್ತಾರೆ. ಎಲೈ ದೇವರ್ಷಿಯೇ, ವಜ್ರಾಯುಧದಂತೆ ತೀಕ್ಷ್ಣವಾದ ಜಯೆಯ ಆ ಮಾತನ್ನು ಕೇಳಿದೊಡನೆಯೇ ಬಹಳ ದುಃಖದಿಂದ

**ಜಯಾ ಮೃತಾಂ ಸತೀಂ ದೃಷ್ಟ್ವಾ ಕ್ರೋಧಶೋಕಪರಿಪ್ಲುತಾ ।**
**ಮುಂಚಂತೀ ವಾರಿ ನೇತ್ರಾಭ್ಯಾಂ ವಿಸ್ವರಂ ವಿಲಲಾಪ:ಹ** ॥ ೧೦ ॥

**ಆಕ್ರಂದಿತಧ್ವನಿಂ ಶ್ರುತ್ವಾ ಶೂಲಪಾಣಿಸ್ತ್ರಿಲೋಚನಃ ।**
**ಆಃ ಕಿಮೇತದಿತೀತ್ಯುಕ್ತ್ವಾ ಜಯಾಭ್ಯಾಶ ಮುಪಾಗತಃ** ॥ ೧೧ ॥

**ಆಗತೋ ದದೃಶೇ ದೇವೀಂ ಲತಾಮಿವ ವನಸ್ಪತೇಃ ।**
**ಕೃತ್ತಾಂ ಪರಶುನಾ ಭೂಮೌ ಶ್ಲಥಾಂಗೀಂ ಪತಿತಾಂ ಸತೀಂ** ॥ ೧೨ ॥

**ದೇವೀಂ ನಿಪತಿತಾಂ ದೃಷ್ಟ್ವಾ ಜಯಾಂ ಪಪ್ರಚ್ಛ ಶಂಕರಃ ।**
**ಕಿಮಿಯಂ ಪತಿತಾ ಭೂಮೌ ನಿಕೃತ್ತೇವಲತಾ ಸತೀ** ॥ ೧೩ ॥

**ಸಾ ಶಂಕರ ವಚಶ್ಶ್ರುತ್ವಾ ಜಯಾ ವಚನಮುಬ್ರವೀತ್ ।**
**ಶ್ರುತ್ವಾ ಮಖೇ ಚ ಸ್ವಾವಜ್ಞಾಂ ಭಗಿನ್ಯಃ ಪತಿಭಿಸ್ಸಹ** ॥ ೧೪ ॥

---

ಸಂತಪ್ತಳಾದ ಸತೀದೇವಿಯು ಪ್ರಾಣವನ್ನೇ ಬಿಟ್ಟಳು. ಮೃತಳಾದ ಆ ಸತೀದೇವಿಯನ್ನು ನೋಡಿ ದಕ್ಷನಮೇಲೆ ಕೋಪದಿಂದಲೂ ಸತೀದೇವಿಯ ನಾಶದಿಂದುಂಟಾದ ದುಃಖದಿಂದಲೂ ಬಹಳ ವ್ಯಾಕುಲಳಾಗಿ ಧಾರಾಕಾರವಾಗಿ ಕಣ್ಣೀರುಬಿಡುತ್ತಾ ಜಯೆಯು ಅಪಸ್ವರದಿಂದ ಗೋಳಾಡಿದಳು. ಆ ಧ್ವನಿಯನ್ನು ಕೇಳಿದೊಡನೆಯೇ ಗಾಬರಿಯಿಂದ ಇದೇನು ಅನರ್ಥ ಎಂದು ಕೇಳುತ್ತಾ ಶಂಕರನು ಜಯೆಯ ಸಮೀಪಕ್ಕೆ ಬಂದನು.

೧೨-೧೪. ಜಯೆಯ ಸಮೀಪಕ್ಕೆ ಬಂದ ಶಂಕರನು ಕೊಡಲಿಯಿಂದ ಕಡಿದು ಕೆಳಗೆ ಬಿದ್ದಿರುವ ಲತೆಯಂತೆ ಮೃತಳಾಗಿ ಕೆಳಗೆ ಬಿದ್ದಿರುವ ಸತೀದೇವಿಯನ್ನು ನೋಡಿ ಜಯೆಯನ್ನು ಕುರಿತು ಕಡಿದು ಹಾಕಿದ ಮರದ ಲತೆಯಂತೆ ಈ ಸತೀದೇವಿಯು ಏತಕ್ಕೆ ಕೆಳಗೆ ಬಿದ್ದಿದ್ದಾಳೆ? ಎಂದು ಪ್ರಶ್ನೆಮಾಡಿದನು. ಆ ಮಾತನ್ನು ಕೇಳಿದ ಜಯೆಯು ಅಕ್ಕತಂಗಿಯರೆಲ್ಲರೂ ಅವರವರ ಪತಿಗಳೊಡನೆಯೂ ಮೂರು ಲೋಕದಲ್ಲಿರುವ ದೇವತೆಗಳೆಲ್ಲರೂ ಇಂದ್ರಾದಿದೇವತೆಗಳೊಡನೆಯೂ ತಂದೆಯಾದ ದಕ್ಷಬ್ರಹ್ಮನ ಯಜ್ಞಕ್ಕೆ ಆಹ್ವಾನದಿಂದ ಹೋಗಿದ್ದಾರೆ. ಇಂತಹ ಯಜ್ಞದಲ್ಲಿ ನನಗೆ

ಆದಿತ್ಯಾಃ ತ್ರಿಷು ಲೋಕೇಷು ಸಮಂ ಶಕ್ರಾದಿಭಿಸ್ಸುರೈಃ ।
ಮಾತೃಷ್ವಸಾ ವಿಪನ್ನೇಯಮಂತರ್ದುಃಖೇನ ದಹ್ಯತೀ ॥ ೧೫ ॥

ಪುಲಸ್ತ್ಯ ಉವಾಚ

ತಚ್ಛ್ರುತ್ವಾಥ ವಚೋರೌದ್ರಂ ರುದ್ರಃ ಕ್ರೋಧಾಪ್ಲುತೋ ಬಭೌ ।
ಕ್ರುದ್ಧಸ್ಯ ಸರ್ವಗಾತ್ರೇಭ್ಯೋ ನಿಶ್ಚೇರುಃ ಪಾವಕಾರ್ಚಿಷಃ ॥ ೧೬ ॥

ತತಃ ಕ್ರೋಧಾತ್ತ್ರಿನೇತ್ರಸ್ಯ ಗಾತ್ರರೋಮೋದ್ಭವಾ ಮುನೆ ।
ಗಣಾಃ ಸಿಂಹಮುಖಾ ಜಾತಾ ವೀರಭದ್ರಪುರೋಗಮಾಃ ॥ ೧೭ ॥

ಗಣೈಃ ಪರಿವೃತಸ್ತಸ್ಮಾನ್ಮಂದರಾದ್ಧಿಮಸಾಹ್ವಯಂ ।
ತತಃ ಕನಖಲಂ ತಸ್ಮಾದ್ಯತ್ರ ದಕ್ಷೋಽಯಜತ್ಕ್ರತುಂ ॥ ೧೮ ॥

ತತೋಗಣಾನಾಮಧಿಪೋ ವೀರಭದ್ರೋ ಮಹಾಬಲಃ ।
ದಿಶಿ ಪ್ರತ್ಯುತ್ತರಾಯಾಂ ಚ ತಸ್ಥೌ ಶೂಲಧರೋಮುನೇ ॥ ೧೯ ॥

---

ಆಹ್ವಾನವನ್ನೂ ಕೊಡದೆ ತಂದೆಯು ಅವಮಾನಮಾಡಿದನಲ್ಲಾ ಎಂಬ ದುಃಖದಿಂದ ಬಹಳಬೆಂದು ಈ ನನ್ನ ಚಿಕ್ಕತಾಯಿಯು ಮೃತಳಾದಳು ಎಂದು ಪ್ರತ್ಯುತ್ತರ ಹೇಳಿದಳು.

೧೬-೧೮. ಪುಲಸ್ತ್ಯರು ಹೇಳುತ್ತಾರೆ. ಭಯಂಕರವಾದ ಆ ಮಾತನ್ನು ಕೇಳಿದವೊಡನೆಯೇ ಶಂಕರನು ಬಹಳ ಕ್ರೋಧದಿಂದ ಜ್ವಲಿಸಿದನು. ಕ್ರೋಧದಿಂದ ಜ್ವಲಿಸಿದ ಹರನ ದೇಹದಿಂದ ಬೆಂಕಿಯ ಜ್ವಾಲೆಗಳು ಹೊರಹೊರಟವು. ಆಗ ಅವನ ದೇಹದ ರೋಮಗಳಿಂದ ಸಿಂಹಮುಖವುಳ್ಳ ವೀರಭದ್ರನೇ ಮೊದಲಾದ ಪ್ರಮಥ ಗಣಗಳು ಉದಯಿಸಿದವು. ಆಗ ಗಣಗಳಿಂದ ಕೂಡಿದ ಶಂಕರನು ಮಂದರಪರ್ವತ ದಿಂದ ಹಿಮಸವೆಂಬ ದೇಶವನ್ನೂ ಅಲ್ಲಿಂದ ಕನಖಲದೇಶವನ್ನೂ ದಾಟಿ ದಕ್ಷಬ್ರಹ್ಮನ ಯಜ್ಞಸ್ಥಾನಕ್ಕೆ ಹೋಗಿ ಸೇರಿದನು.

೧೯-೨೧. ಅನಂತರ ಆ ಗಣದಲ್ಲಿ ಪ್ರಮುಖನಾದ ವೀರಭದ್ರನು ಪಶ್ಚಿಮೋತ್ತರ ದಿಗ್ಭಾಗಗಳಲ್ಲಿ ಶೂಲಪಾಣಿಯಾಗಿ ನಿಂತನು. ಜಯೆಯು ಕೋಪದಿಂದ ಗದಾಧಾರಿಣಿ

**ಜಯಾ ಕ್ರೋಧಾದ್ಗದಾಂ ಗೃಹ್ಯ ಪೂರ್ವದಕ್ಷಿಣತಃ ಸ್ಥಿತಾ ।**
**ಮಧ್ಯೇ ತ್ರಿಶೂಲಭೃಚ್ಛರ್ವಃ ತಸ್ಥೌ ಕ್ರುದ್ಧೋ ಮಹಾಕ್ರತೌ** ॥ ೨೦ ॥

**ಮೃಗಾರಿವದನಂ ದೃಷ್ಟ್ವಾ ದೇವಾಶ್ಶಕ್ರಪುರೋಗಮಾಃ ।**
**ಋಷಯೋ ದೇವಗಂಧರ್ವಾಃ ಕಿಮಿದಂ ತ್ವಿತ್ಯಚಿಂತಯನ್** ॥ ೨೧ ॥

**ತತಸ್ತು ಧನುರಾದಾಯ ಶರಾ ನಾಶೀವಿಷೋಪಮಾನ್ ।**
**ದ್ವಾರಪಾಲಸ್ತದಾ ಧರ್ಮೋ ವೀರಭದ್ರಮುಪಾದ್ರವತ್** ॥ ೨೨ ॥

**ತಮಾಪತಂತಂ ಸಹಸಾ ಧರ್ಮಂ ದೃಷ್ಟ್ವಾ ಗಣೇಶ್ವರಃ ।**
**ಕರೇಣೈಕೇನ ಜಗ್ರಾಹ ತ್ರಿಶೂಲಂ ವಜ್ರಸನ್ನಿಭಂ** ॥ ೨೩ ॥

**ಕಾರ್ಮುಕಂ ಚ ದ್ವಿತೀಯೇನ ತೃತೀಯೇನಾಥಮಾರ್ಗಣಾನ್ ।**
**ಚತುರ್ಥೇನ ಗದಾಂ ಗೃಹ್ಯ ಧರ್ಮಮಭ್ಯದ್ರವದ್ಗಣಃ** ॥ ೨೪ ॥

**ತತಶ್ಚತುರ್ಭುಜಂ ದೃಷ್ಟ್ವಾ ಧರ್ಮರಾಜೋ ಗಣೇಶ್ವರಂ ।**
**ತಸ್ಥಾವಷ್ಟಭುಜೋ ಭೂತ್ವಾ ನಾನಾಯುಧಧರೋಽವ್ಯಯಃ** ॥ ೨೫ ॥

---

ಯಾಗಿ ಪೂರ್ವದಕ್ಷಿಣದಿಗ್ಭಾಗಗಳಲ್ಲಿ ನಿಂತಳು. ಮಧ್ಯದಲ್ಲಿ ತ್ರಿಶೂಲಧಾರಿಯಾದ ಶಂಕರನು ರೌದ್ರಾಕಾರನಾಗಿ ನಿಂತನು. ಸಿಂಹಮುಖನಾದ ವೀರಭದ್ರನ ಮುಖವನ್ನು ನೋಡಿ ಇಂದ್ರನೇ ಮೊದಲಾದ ದೇವತೆಗಳೂ ಋಷಿಗಳೂ ಗಂಧರ್ವರೂ ಇದೇನು ಎಂದು ಆಶ್ಚರ್ಯದಿಂದ ಆಲೋಚಿಸತೊಡಗಿದರು.

೨೨-೨೪. ಅನಂತರ ದ್ವಾರಪಾಲಕನಾದ ಯಮನು ಯಜ್ಞವಿಘ್ನಶಂಕೆಯಿಂದ ಧನುರ್ಬಾಣಪಾಣಿಯಾಗಿ ವೀರಭದ್ರನನ್ನು ಎದುರಿಸಿದನು. ತನ್ನ ಮೇಲೆ ಪ್ರತಿಕಕ್ಷಿಯಾಗಿ ಬರುತ್ತಿರುವ ಯಮನನ್ನು ನೋಡಿ ಗಣಾಧಿಪತಿಯಾದ ವೀರಭದ್ರನು ಒಂದು ಕೈಯ್ಯಿನಿಂದ ವಜ್ರಾಯುಧದಂತೆ ನಿಶಿತವಾದ ತ್ರಿಶೂಲವನ್ನೂ ಮತ್ತೊಂದು ಕೈಯ್ಯಿನಿಂದ ಧನುಸ್ಸನ್ನೂ ಇನ್ನೊಂದು ಕೈಯ್ಯಿನಿಂದ ಬಾಣಗಳನ್ನೂ ನಾಲ್ಕನೇ ಕೈಯಿನಿಂದ ಗದೆಯನ್ನೂ ಧರಿಸಿ ಯಮನನ್ನು ಎದುರಿಸಲು ನಿಂತನು.

೨೫-೨೭. ಅನಂತರ ಚತುರ್ಭುಜನಾಗಿ ಪರಾಕ್ರಮವನ್ನು ತೋರಿಸಲು ಸಿದ್ಧನಾದ ವೀರಭದ್ರನನ್ನು ನೋಡಿ ಯಮನೂ ಸಹ ಕತ್ತಿ, ಗುರಾಣಿ, ಗದೆ, ಭರ್ಜಿ,

ಖಡ್ಗ ಚರ್ಮಗದಾಪ್ರಾಸಪರಶ್ವಧವರಾಂಕುಶೈಃ ।
ಚಾಪಮಾರ್ಗಣಭೃತ್ತಸ್ಥೌ ಹಂತುಕಾಮೋ ಗಣೇಶ್ವರಂ ॥ ೨೬ ॥

ಗಣೇಶ್ವರೋಽಪಿ ಸಂಕ್ರುದ್ಧಃ ಹಂತುಂ ಧರ್ಮಂ ಸನಾತನಂ ।
ವವರ್ಷ ಮಾರ್ಗಣಾಂಸ್ತೀಕ್ಷ್ಣಾನ್ ಯಥಾ ಪ್ರಾವೃಷಿ ತೋಯದಃ ॥ ೨೭ ॥

ತಾವನ್ಯೋಽನ್ಯಂ ಮಹಾತ್ಮಾನೌ ಶರಚಾಪಧರೌ ಮುನೇ ।
ರುಧಿರಾರುಣಸಿಕ್ತಾಂಗೌ ಕಿಂಶುಕಾವಿವ ರೇಜತುಃ ॥ ೨೮ ॥

ಮೃಧೇ ವರಾಸ್ತ್ರೈರ್ಗಣನಾಯಕೇನ
ಜಿತಸ್ಸಧರ್ಮಸ್ತ್ವರಸಾ ಪ್ರಸಹ್ಯ ।
ಪರಾಂಙ್ಮುಖೋಽಭೂದ್ವಿಮನಾ ಮುನೀಂದ್ರ
ಸವೀರಭದ್ರಃ ಪ್ರವಿವೇಶ ಯಜ್ಞಂ ॥ ೨೯ ॥

ಯಜ್ಞವಾಟಂ ಪ್ರವಿಷ್ಟಂ ತು ವೀರಭದ್ರಂ ಗಣೇಶ್ವರಂ ।
ದೃಷ್ಟ್ವಾ ತು ಸಹಸಾ ದೇವಾ ಉತ್ತಸ್ಥುಸ್ಸಾಯುಧಾ ಮುನೇ ॥ ೩೦ ॥

---

ಕೊಡಲಿ, ಅಂಕುಶ, ಧನುಸ್ಸು, ಬಾಣ ಇತ್ಯಾದಿ ನಾನಾಯುಧಗಳಿಂದಕೂಡಿದ ಎಂಟು ಭುಜಗಳನ್ನು ಹೊಂದಿ ಕೋಪದಿಂದ ವೀರಭದ್ರನನ್ನು ಕೊಲ್ಲಲು ಯತ್ನಿಸಿದನು. ವೀರಭದ್ರನೂ ಸಹ ಕೋಪದಿಂದ ಯಮನನ್ನು ಕೊಲ್ಲಲು ವರ್ಷಾಕಾಲದ ಮೇಘವು ಮಳೆಗರೆಯುವಂತೆ ತೀಕ್ಷ್ಣವಾದ ಬಾಣಗಳನ್ನು ಸುರಿಸಿದನು.

೨೮-೩೦. ಧನುರ್ಬಾಣಪಾಣಿಗಳಾಗಿಯೂ ಮಹಾಪರಾಕ್ರಮಶಾಲಿಗಳಾಗಿಯೂ ಇರುವ ಆ ಇಬ್ಬರೂ (ವೀರಭದ್ರ ಮತ್ತು ಯಮ) ಪರಸ್ಪರಯುದ್ಧದಿಂದ ರಕ್ತದಿಂದ ನೆನಸಲ್ಪಟ್ಟ ಅಂಗಗಳುಳ್ಳವರಾಗಿ ಹೂವು ಬಿಟ್ಟಿರುವ ಮುತ್ತುಗದ ಮರದಂತೆ ಪ್ರಕಾಶಿಸಿದರು. ಆ ಯುದ್ಧದಲ್ಲಿ ವಿವಿಧಾಸ್ತ್ರಪ್ರಯೋಗಶಾಲಿಯಾದ ವೀರಭದ್ರನಿಂದ ಬಲಾತ್ಕರಿಸಿ ಪರಾಜಿತನಾದ ಯಮನು ದುಃಖದಿಂದ ಪರಾಙ್ಮುಖನಾದನು. ನಂತರ ವೀರಭದ್ರನು ಯಜ್ಞಶಾಲೆಗೆ ಪ್ರವೇಶಿಸಿದನು. ಅಂತಹ ವೀರಭದ್ರನನ್ನು ನೋಡಿ ಅಲ್ಲಿದ್ದ ದೇವತೆಗಳೆಲ್ಲರೂ ಆಯುಧಧಾರಿಗಳಾಗಿ ಎದ್ದು ನಿಂತರು.

ವಸವೋಽಷ್ಟೌ ಮಹಾಭಾಗಾ ಗ್ರಹಾ ನವ ಸುದಾರುಣಾಃ ।
ಇಂದ್ರಾದ್ಯಾ ದ್ವಾದಶಾದಿತ್ಯಾ ರುದ್ರಾಸ್ತ್ವೇಕಾದಶೈವ ಹಿ ॥ ೩೧ ॥

ವಿಶ್ವೇದೇವಾ ಶ್ಚ ಸಾಧ್ಯಾ ಶ್ಚ ಸಿದ್ಧಗಂಧರ್ವಪನ್ನಗಾಃ ।
ಯಕ್ಷಾಃ ಕಿಂಪುರುಷಾ ಭೂತಾಃ ಖಗಾ ಶ್ಚಕ್ರಧರಾ ಸ್ತಥಾ ॥ ೩೨ ॥

ನೃಪಾ ವೈವಸ್ವತಾದ್ವಂಶಾದ್ವಿವಿಧಾ ಯೇ ಚ ವಿಶ್ರುತಾಃ ।
ಸೋಮವಂಶೋದ್ಭವಾಶ್ಚಾನ್ಯೇಭೋಜಕೀರ್ತಿಮಹೀಭುಜಃ ॥ ೩೩ ॥

ದಿತಿಜಾ ದಾನವಾಶ್ಚಾನ್ಯೇ ಯೇಽನ್ಯೇ ತತ್ರ ಸಮಾಗತಾಃ ।
ತೇ ಸರ್ವೇ ಸ್ಯಂದ್ರನರ್ಣ ರೌದ್ರಂ ವೀರಭದ್ರ ಮುದಾಯುಧಾಃ ॥ ೩೪ ॥

ತಾನಾಪತತ ಏವಾಶು ಬಾಣಚಾಪಧರೋ ಗಣಃ ।
ಅಭಿದುದ್ರಾವ ವೇಗೇನ ಸರ್ವಾನೇವ ಶರೋತ್ಕರೈಃ ॥ ೩೫ ॥

ತೇ ಶಸ್ತ್ರವರ್ಷ ಮತುಲಂ ಗಣೇಶಾಯ ಸಮುತ್ಸೃಜನ್ ।
ಗಣೇಶೋಽಪಿ ವರಾಸ್ತ್ರೈಸ್ತಾಂಶ್ಚಿಚ್ಛೇದ ಚ ಬಿಭೇದ ಚ ॥ ೩೬ ॥

---

೩೧-೩೪. ಎಲೈ ದೇವರ್ಷಿಯೇ, ಅನಂತರ ಅಷ್ಟವಸುಗಳೂ ಕೋಪೋದ್ರಿಕ್ತರಾದ ನವಗ್ರಹಗಳೂ, ಇಂದ್ರಾದಿದೇವತೆಗಳೂ, ದ್ವಾದಶಾದಿತ್ಯರೂ, ಏಕಾದಶರುದ್ರರೂ, ವಿಶ್ವೇದೇವತೆಗಳೂ, ಸಿದ್ಧ, ಸಾಧ್ಯರುಗಳೂ, ಗಂಧರ್ವರೂ, ಸರ್ಪಶ್ರೇಷ್ಠಗಳೂ, ಯಕ್ಷರೇ ಮೊದಲಾದ ದೇವತಾಂಶಿಗಳಾದ ಮಹಾಪುರುಷರೂ, ವೈವಸ್ವತವಂಶಕ್ಕೆ ಸೇರಿದ ಸುಪ್ರಸಿದ್ಧರಾಜರುಗಳೂ, ಚಂದ್ರವಂಶದರಾಜರುಗಳೂ, ಭೋಜರಾಜನ ಕೀರ್ತಿಯಪ್ರಕಾಶಕ್ಕೆ ಕಾರಣರಾದ ರಾಜರುಗಳೂ, ದೈತ್ಯರೂ, ದಾನವರೂ ಎಲ್ಲರೂ ಏಕೀಭವಿಸಿ ಆಯುಧಧಾರಿಗಳಾಗಿ ವೀರಭದ್ರನನ್ನು ಎದುರಿಸಲು ಸನ್ನದ್ಧರಾದರು.

೩೫-೩೬. ಯುದ್ಧೋನ್ಮುಖರಾದ ಅವರೆಲ್ಲರನ್ನೂ ಧನುರ್ಬಾಣಧಾರಿಯಾದ ವೀರಭದ್ರನು ಬಾಣಗಳಿಂದ ಎದುರಿಸಿದನು. ಆ ದೇವತೆಗಳೂ ವೀರಭದ್ರನಮೇಲೆ ಶಸ್ತ್ರವೃಷ್ಟಿಯನ್ನು ಮಾಡಿದರು. ಗಣಾಧಿಪತಿಯಾದ ವೀರಭದ್ರನೂ ಮಹಾಸ್ತ್ರಗಳಿಂದ ಅವರನ್ನು ಛೇದನ ಭೇದನಗಳಿಗೀಡುಮಾಡಿದನು. ಹೀಗೆ ಬಹು ಪ್ರಕಾರವಾಗಿ

ಶರೈಶ್ಯಸ್ತ್ರೈಶ್ಚ ಸತತಂ ಬಾಧ್ಯಮಾನಾ ಮಹಾತ್ಮನಾ ।
ವೀರಭದ್ರೇಣ ದೇವಾದ್ಯಾ ಸ್ತ್ವವಹಾರ ಮರೋಚಯನ್ ॥ ೩೭ ॥

ತತೋ ವಿವೇಶ ಗಣಪ್ರೋ ಯಜ್ಞಮಧ್ಯಂ ಸುವಿಸ್ತೃತಂ ।
ಜುಹ್ವಾನಾ ಋಷಯೋ ಯತ್ರ ಹವೀಂಷಿ ಪ್ರತ್ಯಬಂಧತ ॥ ೩೮ ॥

ತತೋ ಮಹರ್ಷಯೋ ದೃಷ್ಟ್ವಾ ಮೃಗೇಂದ್ರವದನಂ ಗಣಂ ।
ಭೀತಾ ಹೋತ್ರಂ ಪರಿತ್ಯಜ್ಯ ಜಗ್ಮುಶ್ಶರಣಮಚ್ಯುತಂ ॥ ೩೯ ॥

ತಾನಾರ್ತಾಂ ಶ್ಚ ಕ್ರಭೃದ್ದೃಷ್ಟ್ವಾ ಮಹರ್ಷೀಂಸ್ತ್ರಸ್ತಮಾನಸಾನ್ ।
ನ ಭೇತವ್ಯಮಿತೀತ್ಯುಕ್ತ್ವಾ ಸಮುತ್ತಸ್ಥೌ ವರಾಯುಧಃ ॥ ೪೦ ॥

ಸಮಾನಮ್ಯ ತತಶ್ಶಾಙ್ಗಂ ಶರಾನಾಶೀವಿಷೋಪಮಾನ್ ।
ಮುಮೋಚ ವೀರಭದ್ರಾಯ ಕಾಯಾವರಣದಾರಣಾನ್ ॥ ೪೧ ॥

---

ಶಸ್ತ್ರಾಸ್ತ್ರಗಳಿಂದ ವೀರಭದ್ರನಿಂದ ಹಿಂಸಿಸಲ್ಪಟ್ಟ ದೇವತೆಗಳು ಯುದ್ಧನಿವೃತ್ತಿಯನ್ನು ಅಪೇಕ್ಷಿಸಿ ಪರಾಙ್ಮುಖರಾದರು.

೩೮-೪೧. ಅನಂತರ ವೀರಭದ್ರನು ವಿಸ್ತಾರವಾದ ಯಜ್ಞಶಾಲೆಯ ಮಧ್ಯ ಭಾಗಕ್ಕೆ ಪ್ರವೇಶಿಸಿದನು. ಅಲ್ಲಿ ಹೋಮಮಾಡುತ್ತಿದ್ದ ಋಷಿಗಳು ಹವಿಸ್ಸನ್ನು ಹೋಮಮಾಡದೇ ತಡೆದರು. ಆಗ ಅಲ್ಲಿದ್ದ ಹೋತೃಗಣಕ್ಕೆ ಸೇರಿದ ಋಷಿಗಳು (ಋಗ್ವೇದದ ಸೂಕ್ತಶಸ್ತ್ರಾದಿಗಳಿಂದ ಯಜ್ಞಕಾರ್ಯವನ್ನು ನಡೆಸುವ ಒಂದು ವರ್ಗ) ಸಿಂಹಮುಖನಾದ ವೀರಭದ್ರನನ್ನು ನೋಡಿ ತಮ್ಮ ಹೋತೃಕರ್ಮವನ್ನು ಬಿಟ್ಟು ಭಯಭ್ರಾಂತರಾಗಿ ನಾರಾಯಣನನ್ನು ಶರಣುಹೊಕ್ಕರು. ದೀನರಾದ ಆ ಋಷಿಗಳನ್ನು ನೋಡಿ ನಾರಾಯಣನು ಭಯಪಡಬೇಡಿರಿ ಎಂದು ಅಭಯಕೊಟ್ಟು ಆಯುಧಧಾರಿಯಾಗಿ ಹೊರಟನು. ತನ್ನ ಶಾಙ್ಗ೯ವೆಂಬ ಧನುಸ್ಸನ್ನು ಹೆದೆಯೇರಿಸಿ ಕವಚವನ್ನೂ ಛೇದಿಸುವ ಶಕ್ತಿಯುಳ್ಳ ತೀಕ್ಷ್ಣವಾದ ಬಾಣಗಳನ್ನು ವೀರಭದ್ರನ ಮೇಲೆ ಪ್ರಯೋಗಿಸಿದನು.

ತೇ ತಸ್ಯ ಕಾಯಮಾಸಾದ್ಯ ಅಮೋಘಾ ವೈ ಹರೇಶ್ಶರಾಃ ।
ನಿಪೇತುರ್ಭುವಿ ಭಗ್ನಾಶಾ ನಾಸ್ತಿಕಾದಿವ ಯಾಚಕಾಃ ॥ ೪೨ ॥

ಶರಾಂಸ್ತ್ವಮೋಘಾನ್ಮೋಘತ್ವಮಾಪನ್ನಾನ್ವೀಕ್ಷ್ಯ ಕೇಶವಃ ।
ದಿವ್ಯೈರಸ್ತ್ರೈರ್ವೀರಭದ್ರಂ ಪ್ರಚ್ಛಾದಯಿತುಮುದ್ಯತಃ ॥ ೪೩ ॥

ತಾನಸ್ತ್ರಾನ್ವಾಸುದೇವೇನ ಪ್ರಕ್ಷಿಪ್ತಾನ್ ಗಣನಾಯಕಃ ।
ವಾರಯಾಮಾಸ ಶೂಲೇನ ಗದಯಾ ಮಾರ್ಗಣೈಸ್ತಥಾ ॥ ೪೪ ॥

ದೃಷ್ಟ್ವಾ ವಿಪನ್ನಾನ್ಯಸ್ತ್ರಾಣಿ ಗದಾಂ ಚಿಕ್ಷೇಪ ಮಾಧವಃ ।
ತ್ರಿಶೂಲೇನ ಸಮಾಹತ್ಯ ಪಾತಯಾಮಾಸ ಭೂತಲೇ ॥ ೪೫ ॥

ತಾಂ ಗದಾಂ ವಿಫಲಾಂ ದೃಷ್ಟ್ವಾ ಲಾಂಗಲಂ ಪ್ರಾಕ್ಷಿಪದ್ಧರಿಃ ।
ಲಾಙ್ಗಲಂ ಚ ಗಣೇಶೋಽಪಿ ಗದಯಾ ಪ್ರತ್ಯವಾರಯತ್ ॥ ೪೬ ॥

ಮುಸಲಂ ವೀರಭದ್ರಾಯ ಸಂಚಿಕ್ಷೇಪ ಹಲಾಯುಧಃ ।
ಪೂರ್ವವನ್ಮುಸಲಾಘಾತಂ ವೀರಭದ್ರೋ ನ್ಯವಾರಯತ್ ॥ ೪೭ ॥

---

೪೨-೪೪. ಅಂತಹ ಬಾಣಗಳೂ ಕೂಡ ವೀರಭದ್ರನ ದೇಹವನ್ನು ಹೊಂದಿ ಏನನ್ನೂ ಮಾಡಲು ಸಾಧ್ಯವಿಲ್ಲದೆ ನಷ್ಟಮನೋರಥಗಳಾಗಿ ನಾಸ್ತಿಕರಿಂದ ಯಾಚಕರು ಹಿಂತಿರುಗುವಂತೆ ಭಗ್ನಗಳಾಗಿ ಭೂಮಿಯಲ್ಲಿ ಬಿದ್ದುವು. [ನಾಸ್ತಿಕನಿಗೆ ಧರ್ಮಾಧರ್ಮ ಪರಲೋಕಗಳಲ್ಲಿ ನಂಬಿಕೆ ಇರುವುದಿಲ್ಲವಾದ್ದರಿಂದ ದಾನವು ಪುಣ್ಯಕರವೆಂದು ಅವನು ಭಾವಿಸುವುದಿಲ್ಲ. ಆದುದರಿಂದ ಅವನಲ್ಲಿ ಹೋದ ಯಾಚಕರು ನಿರಾಶರಾಗಿ ಹಿಂತಿರುಗುತ್ತಾರೆ. ಈ ಅಂಶವು ಇಲ್ಲಿ ಉಪಮಾನವಾಗಿ ಕೊಡಲ್ಪಟ್ಟಿದೆ.] ಅಮೋಘವಾದ ಆ ಬಾಣಗಳೂ ವೀರಭದ್ರನಲ್ಲಿ ವ್ಯರ್ಥವಾದದ್ದನ್ನು ನೋಡಿ ನಾರಾಯಣನು ದಿವ್ಯಾಸ್ತ್ರಗಳಿಂದ ವೀರಭದ್ರನಮೇಲೆ ಮಳೆಗರೆದನು. ಆ ಅಸ್ತ್ರಗಳನ್ನೆಲ್ಲಾ ವೀರಭದ್ರನು ಶೂಲದಿಂದಲೂ ಗದೆಯಿಂದಲೂ ಬಾಣಗಳಿಂದಲೂ ತಡೆದನು.

೪೫-೪೮. ತನ್ನ ಅಸ್ತ್ರಗಳೆಲ್ಲವೂ ವ್ಯರ್ಥವಾದದ್ದನ್ನು ನೋಡಿ ಹರಿಯು ಗದೆಯನ್ನು ಪ್ರಯೋಗಿಸಿದನು. ವೀರಭದ್ರನು ಅದನ್ನೂ ತ್ರಿಶೂಲದಿಂದ ತಡೆದು ನೆಲಕ್ಕೆ ಬೀಳಿಸಿದನು. ಗದೆಯೂ ವ್ಯರ್ಥವಾದಮೇಲೆ ಹರಿಯು ನೇಗಿಲನ್ನು ಪ್ರಯೋಗಿಸಿದನು. ಅದನ್ನೂ ತನ್ನ ಗದೆಯಿಂದ ವೀರಭದ್ರನು ತಡೆದನು. ಆಗ

ಮುಸಲಂ ಸಂಹತಂ ದೃಷ್ಟ್ವಾ ಲಾಙ್ಗಲಂ ಚ ನಿವಾರಿತಂ।
ವೀರಭದ್ರಾಯ ಚಿಕ್ಷೇಪ ಚಕ್ರಂ ಕ್ರೋಧಾತ್ಖಗಧ್ವಜಃ ॥ ೪೮ ॥

ತಮಾಪತಂತಂ ಶತಸೂರ್ಯಕಲ್ಪಂ ಸುದರ್ಶನಂ ಪ್ರೇಕ್ಷ್ಯಗಣೇಶ್ವರಸ್ತು।
ಶೂಲಂ ಪರಿತ್ಯಜ್ಯ ಜಗಾರ ಚಕ್ರಂ ಯಥಾ ಮಧುಂ ಮಾನವಪುಃ ಸುರೇಂದ್ರಃ

ಚಕ್ರೆ ನಿಗೀರ್ಣೆ ಗಣನಾಯಕೇನ ಕ್ರೋಧಾತಿರಕ್ತೋsಸಿತಚಾರುನೇತ್ರಃ।
ಮುರಾರಿರಭ್ಯೇತ್ಯ ಗಣಾಧಿಪೇಂದ್ರಮುತ್ಕ್ಷಿಪ್ಯ ವೇಗಾದ್ಭುವಿ ನಿಷ್ಪಿಪೇಷ॥

ಹರಿಬಾಹೂರುವೇಗೇನ ವಿನಿಷ್ಪಿಷ್ಟಸ್ಯ ಭೂತಲೆ।
ಸಹಿತಂ ರುಧಿರೋದ್ಗಾರೈ ರ್ಮುಖಾಚ್ಚಕ್ರಂ ವಿನಿರ್ಗತಂ ॥ ೫೧ ॥

ತತೋ ನಿಸ್ಸೃತಮಾಲೋಕ್ಯ ಚಕ್ರಂ ಕೈಟಭನಾಶನಃ।
ಸಮಾದಾಯ ಹೃಷೀಕೇಶೊ ವೀರಭದ್ರಂ ಮುಮೋಚ ಹ ॥ ೫೨ ॥

---

ಬಲರಾಮನು ವೀರಭದ್ರನಮೇಲೆ ಮುಸಲಾ (ಒನಕೆ) ಯುಧವನ್ನು ಪ್ರಯೋಗಿಸಲು ಅದನ್ನೂ ವೀರಭದ್ರನು ಮೊದಲಿನಂತೆ ತಡೆದನು. ಅವೆಲ್ಲವೂ ನಿಷ್ಫಲವಾದದ್ದನ್ನು ನೋಡಿ ಹರಿಯು ಚಕ್ರಾಯುಧವನ್ನು ವೀರಭದ್ರನಮೇಲೆ ಪ್ರಯೋಗಿಸಿದನು.

೪೯-೫೨. ನೂರಾರು ಸೂರ್ಯರ ಪ್ರಕಾಶದಿಂದ ಜ್ವಲಿಸುವ ಆ ಸುದರ್ಶನವನ್ನು (ಚಕ್ರ) ವೀರಭದ್ರನು ನೋಡಿ ಶೂಲವನ್ನು ಕೆಳಗೆ ಹಾಕಿ ಮಾನರೂಪಿಯಾದ ಭಗವಂತನು ಮಧುದೈತ್ಯನನ್ನು ನುಂಗಿದಂತೆ ಬರುವಾಗಲೇ ಆ ಚಕ್ರವನ್ನು ನುಂಗಿದನು. ಚಕ್ರವನ್ನೂ ವೀರಭದ್ರನು ನುಂಗಲಾಗಿ ಕೋಪದಿಂದ ಕೆಂಪಾದ ನೇತ್ರವುಳ್ಳ ಹರಿಯು ವೀರಭದ್ರನ ಬಳಿಗೆ ಬಂದು ವೇಗದಿಂದ ಮೇಲಕ್ಕೆ ಎತ್ತಿಕೊಂಡು ಅವನನ್ನು ಭೂಮಿಯಮೇಲೆ ಅಪ್ಪಳಿಸಿ ಮರ್ದಿಸಿದನು. ಹರಿಯ ಬಾಹುವೇಗದಿಂದ ಬಹಳವಾಗಿ ಮರ್ದಿಸಲ್ಪಟ್ಟ ಆ ವೀರಭದ್ರನ ಮುಖದಿಂದ ರಕ್ತಗಳೊಡನೆ ಅ ಚಕ್ರವು ಹೊರಗೆ ಬಂದಿತು. ಅನಂತರ ಆ ಚಕ್ರವನ್ನು ತಾನು ಸ್ವೀಕರಿಸಿ ಹರಿಯು ವೀರಭದ್ರನನ್ನು ಬಿಟ್ಟುಬಿಟ್ಟನು.

ಹೃಷೀಕೇಶೇನ ಮುಕ್ತಸ್ತು ವೀರಭದ್ರೋ ಜಟಾಧರಂ।
ಗತ್ವಾ ನಿವೇದಯಾಮಾಸ ವಾಸುದೇವಾತ್ಪರಾಜಯಂ ॥ ೫೩ ॥

ತತೋ ಜಟಾಧರೋ ದೃಷ್ಟ್ವಾ ಗಣೇಶಂ ಶೋಣಿತಾಪ್ಲುತಂ।
ನಿಶ್ವಸಂತಂ ಯಥಾನಾಗಂ ಕ್ರೋಧಂ ಚಕ್ರೇ ತದಾವ್ಯಯಃ ॥ ೫೪ ॥

ತತಃ ಕ್ರೋಧಾಭಿಭೂತೇನ ವೀರಭದ್ರೋಥ ಶಂಭುನಾ।
ಪೂರ್ವೋದ್ದಿಷ್ಟೇ ತದಾ ಸ್ಥಾನೇ ಸಾಯುಧಸ್ತು ನಿವೇಶಿತಃ ॥ ೫೫ ॥

ವೀರಭದ್ರಮಥಾದಿಶ್ಯ ಭದ್ರಕಾಲೀಂ ಚ ಶಂಕರಃ।
ವಿವೇಶ ಕ್ರೋಧತಾಮ್ರಾಕ್ಷೋ ಯಜ್ಞವಾಟಂ ತ್ರಿಶೂಲಭೃತ್ ॥ ೫೬ ॥

ತತಸ್ತು ದೇವಪ್ರವರೇ ಜಟಾಧರೇ।
ತ್ರಿಶೂಲಪಾಣೌ ತ್ರಿಪುರಾಂತಕಾರಿಣಿ॥
ದಕ್ಷಸ್ಯ ಯಜ್ಞಂ ವಿಶತಿ ಕ್ಷಯಂಕರೇ।
ಜಾತೋ ಮುನೀನಾಂ ಪ್ರವರೋ ಹಿ ಸಾಧ್ವಸಃ ॥ ೫೭ ॥

ಇತಿ ಶ್ರೀ ವಾಮನಪುರಾಣೇ ಪುಲಸ್ತ್ಯನಾರದಸಂವಾದೇ ಹರಲಲಿತೋ ನಾಮ ಚತುರ್ಥೋಽಧ್ಯಾಯಃ

---

೫೩-೫೫. ಈ ರೀತಿ ಹರಿಯಿಂದ ವಿಮುಕ್ತನಾದ ವೀರಭದ್ರನು ಸ್ವಾಮಿಯಾದ ಶಂಕರನ ಸಮೀಪಕ್ಕೆ ಹೋಗಿ ನಾರಾಯಣನಿಂದ ತನಗೆ ಆದ ಪರಾಜಯವನ್ನು ಅರಿಕೆ ಮಾಡಿದನು. ಆಗ ಶಂಕರನು ರಕ್ತದಿಂದ ನೆನಸಲ್ಪಟ್ಟು ಹಾವಿನಂತೆ ನಿಟ್ಟುಸುರು ಬಿಡುತ್ತಿರುವ ಆ ವೀರಭದ್ರನನ್ನು ನೋಡಿ ವಾಸುದೇವನಮೇಲೆ ಬಹಳ ಕೋಪಾಕ್ರಾಂತನಾದನು. ಅನಂತರ ಕೋಪಾತಿಶಯದಿಂದ ಶಂಭುವು ವೀರಭದ್ರನನ್ನು ಮೊದಲಿದ್ದ ಪೂರ್ವದಿಕ್ಕಿನಲ್ಲೇ ಸಾಯುಧನನ್ನಾಗಿ ನಿಯಮಿಸಿ ತಾನೇ ಕಾರ್ಯೋನ್ಮುಖನಾದನು.

೫೬-೫೭. ಈ ಪ್ರಕಾರವಾಗಿ ವೀರಭದ್ರನನ್ನೂ ಭದ್ರಕಾಲಿಯನ್ನೂ ನಿಯಮಿಸಿ ಶಂಕರನು ತಾನೇ ತ್ರಿಶೂಲಧಾರಿಯಾಗಿ ಯಜ್ಞಶಾಲೆಗೆ ಪ್ರವೇಶಿಸಿದನು. ಈರೀತಿ ಆಯುಧಧಾರಿಯಾದ ತ್ರಿಪುರಾರಿಯು ದಕ್ಷಯಜ್ಞವನ್ನು ಸರ್ವನಾಶಕನಾಗಿ ಪ್ರವೇಶಿಸಲಾಗಿ ಅಲ್ಲಿದ್ದ ಮುನಿವರ್ಯರೆಲ್ಲರೂ ಭಯಭ್ರಾಂತರಾಗಿ ತಲ್ಲಣಿಸಿದರು.

ಇಲ್ಲಿಗೆ ಶ್ರೀ ವಾಮನಪುರಾಣದಲ್ಲಿ ಹರಲಲಿತವೆಂಬ
ನಾಲ್ಕನೆಯ ಅಧ್ಯಾಯವು ಮುಗಿದಿದೆ.

## ಅಧ್ಯಾಯಾರ್ಥ ಸಂಗ್ರಹ

ಈ ಅಧ್ಯಾಯದಲ್ಲಿ ಚಿಕ್ಕತಾಯಿಯಾದ ಸತೀದೇವಿಯನ್ನು ನೋಡಿ ಅವಳೊಡನೆ ತಾನೂ ದಕ್ಷಯಜ್ಞಕ್ಕೆ ಹೋಗಲು ಕುತೂಹಲಿನಿಯಾದ ಜಯೆಯು ಮಂದರಪರ್ವತ ದಲ್ಲಿರುವ ಸತೀದೇವಿಯನ್ನು ಹೊಂದಿ ಯಜ್ಞದ ಮಹಾಸಮಾರಂಭವನ್ನೂ ಅಲ್ಲಿಗೆ ಆಹೂತರಾದ ಮಹಾಪುರುಷರನ್ನೂ ಅವಳಿಗೆ ತಿಳಿಸಿದಳು. ಎಲ್ಲರನ್ನೂ ಆಹ್ವಾನಿಸಿ ತನ್ನನ್ನು ಮಾತ್ರ ತಂದೆಯು ಆಹ್ವಾನಿಸದಿರುವ ನಿಮಿತ್ತ ತನಗೂ ತನ್ನ ಪತಿಯಾದ ಶಂಕರನಿಗೂ ಅವಮಾನವನ್ನು ಮನಃಪೂರ್ವಕವಾಗಿಯೇ ತಂದೆಯು ಮಾಡಿರು ವನೆಂದು ತಿಳಿದು ಸತೀದೇವಿಯು ಉತ್ಕಟವಾದ ದುಃಖದಿಂದ ಪ್ರಾಣವನ್ನೇ ತೊರೆದಳು. ಆಕಸ್ಮಿಕವಾದ ಅವಳ ವಿಪತ್ತಿನಿಂದಲೂ ಆ ವಿಪತ್ತಿಗೂ ತನ್ನ ಅವ ಮಾನಕ್ಕೂ ಕಾರಣವಾದ ದಕ್ಷಯಜ್ಞವನ್ನು ಧ್ವಂಸ ಮಾಡಲು ಕೋಪೋದ್ರಿಕ್ತನಾದ ಶಂಕರನು ರೌದ್ರಾವತಾರವನ್ನು ತಾಳಿ ಅಗ್ನಿಜ್ವಾಲಾಮಯವಾದ ತನ್ನ ರೋಮ ಗಳಿಂದ ವೀರಭದ್ರನೇ ಮೊದಲಾದ ಪ್ರಮಥಗಣಗಳನ್ನು ನಿರ್ಮಿಸಿ ಯಜ್ಞಶಾಲೆಗೆ ಪ್ರವೇಶಿಸಿ ಅಲ್ಲಿ ಅದನ್ನು ನಾಶಮಾಡಲು ವೀರಭದ್ರನನ್ನು ಪರಿವಾರದೊಡನೆ ನಿಯ ಮಿಸಿದನು. ಆ ವೀರಭದ್ರನಿಗೆ ಮೊದಲು ದ್ವಾರಪಾಲಕನಾಗಿದ್ದ ಯಮನೊಡನೆಯೂ, ಅನೇಕ ದೇವತೆಗಳೊಡನೆಯೂ ಭಯಂಕರವಾದ ಯುದ್ಧ ನಡೆದು ವೀರಭದ್ರನೇ ಜಯಶಾಲಿಯಾದನು. ಅನಂತರ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ನಾರಾಯಣ ನೊಡನೆಯೂ ಬಲವಾದ ಯುದ್ಧ ನಡೆಯಿಸಿ ಕೊನೆಗೆ ಪರಾಜಿತನಾದನು. ಮತ್ತು ಶಂಕರನಲ್ಲಿ ಈ ವಿಚಾರವನ್ನು ತಿಳಿಸಿ ಮೊರೆಯಿಟ್ಟನು. ಅನಂತರ ವೀರಭದ್ರನ ಪರಾಜಯದಿಂದ ಮತ್ತೂ ಕ್ರೋಧಾವೇಶ ತಾಳಿದ ರುದ್ರನು ತಾನೇ ಆಯುಧಧಾರಿ ಯಾಗಿ ದಕ್ಷಯಜ್ಞವನ್ನು ನಾಶಪಡಿಸಲುದ್ಯುಕ್ತನಾದನು.



॥ ಶ್ರೀಃ ॥

# ಶ್ರೀ ವಾಮನಪುರಾಣಂ

## ಪಂಚಮೋಽಧ್ಯಾಯಃ

### ಪುಲಸ್ತ್ಯ ಉವಾಚ

ಜಟಾಧರಂ ಹರಿರ್ದೃಷ್ಟ್ವಾ ಕ್ರೋಧಾದಾರಕ್ತಲೋಚನಂ ।
ತಸ್ಮಾತ್ ಸ್ಥಾನಾದಪಾಕ್ರಮ್ಯ ಕುಬ್ಜಾಮ್ರೇಂತರ್ಹಿತಸ್ಸ್ಥಿತಃ ॥ ೧ ॥

ವಸವೋಽಷ್ಟೌ ಹರಂ ದೃಷ್ಟ್ವಾ ಸಸೃಪುರ್ವೇಗತೋ ಮುನೇ ।
ಸಾತು ಜಾತಾ ಸರಿಚ್ಛ್ರೇಷ್ಠಾ ಸೀತಾನಾಮ ಸರಸ್ವತೀ । ॥ ೨ ॥

ಏಕಾದಶ ತಥಾ ರುದ್ರಾಸ್ತ್ರಿನೇತ್ರಾ ವೃಷಕೇತನಾಃ ।
ಕಾಂದಿಶೀಕಾ ಲಯಂ ಜಗ್ಮುಃ ಸಮಭ್ಯೇತ್ಯಾಥ ಶಂಕರಂ ॥ ೩ ॥

---

### ಐದನೆಯ ಅಧ್ಯಾಯವು

೧-೩. ಪುಲಸ್ತ್ಯರು ಹೇಳುತ್ತಾರೆ: ಎಲೈ ದೇವರ್ಷಿಯೇ, ಕೋಪದಿಂದ ಕೆಂಪಾದ ಕಣ್ಣುಗಳುಳ್ಳ ಆ ರೌದ್ರಾವತಾರವುಳ್ಳ ಜಟಾಧಾರಿಯಾದ ರುದ್ರನನ್ನು ನೋಡಿ ಹರಿಯು ಆ ಸ್ಥಲದಿಂದ ಹೊರಟು ಕುಬ್ಜಾಮ್ರವೆಂಬ ಸ್ಥಳದಲ್ಲಿ (ಅಥವಾ ಮಟ್ಟವಾಗಿ ಬೆಳೆದಿರುವ ಮಾವಿನ ಮರದ ಪೊದರಿನಲ್ಲಿ) ಅವಿತುಕೊಂಡನು. ಅಷ್ಟ ವಸುಗಳು ರುದ್ರನನ್ನು ನೋಡಿ ಭಯಪಟ್ಟು ಅಲ್ಲಿಂದ ಹಿಂದೆ ಸರಿದರು. ಅಲ್ಲಿಷ್ಟ ಸರಸ್ವತೀ ನದಿಯು ಸೀತಾ ಎಂಬ ಹೆಸರಿನಿಂದ ಹರಿದುಹೋಯಿತು. ಹಾಗೆಯೇ ಏಕಾದಶರುದ್ರರೂ ಸಹ ಶಂಕರನೊಡನೆ ಯುದ್ಧಹೂಡಿ ದಿಕ್ಕೆಟ್ಟು ಓಡಿಹೋದರು.

ವಿಶ್ವೇ ಶ್ವಿನೌ ಚ ಸಾಧ್ಯಾಶ್ಚ ಮರುತೋಽ ನಲಭಾಸ್ಕರಾಃ।
ಸಮಾಸಾದ್ಯ ಪುರೋಡಾಶಂ ಭಕ್ಷಯನ್ತೋ ಮಹಾಮುನೇ ॥ ೪ ॥

ಚನ್ದ್ರಃ ಸಮಂ ಋಕ್ಷಗಣೈರ್ನಿಶಾಂ ಸಮುಪದರ್ಶಯನ್।
ಉತ್ಪತ್ಯಾರುಹ್ಯ ಗಗನಂ ಸ್ವಮಧಿಷ್ಠಾನಮಾಸ್ಥಿತಃ। ॥ ೫ ॥

ಕಶ್ಯಪಾದ್ಯಾಶ್ಚ ಋಷಯೋ ಜಪನ್ತಶ್ಶತರುದ್ರಿಯಂ।
ಪುಷ್ಪಾಂಜಲಿಪುಟಾ ಭೂತ್ವಾ ಪ್ರಣತಾಃ ಸಂಸ್ಥಿತಾ ಮುನೇ ॥ ೬ ॥

ಅಸಕೃದ್ದಕ್ಷದಯಿತಾ ದೃಷ್ಟ್ವಾ ರುದ್ರಂ ಬಲಾಧಿಕಂ।
ಶಕ್ರಾದೀನಾಂ ಸುರೇಶಾನಾಂ ಕೃಪಣಂ ವಿಲಲಾಪ ಹ। ॥ ೭ ॥

ತತಃ ಕ್ರೋಧಾಭಿಭೂತೇನ ಶಂಕರೇಣ ಮಹಾತ್ಮನಾ।
ತಲಪ್ರಹಾರೈರಮರಾ ಬಹವೋ ವಿನಿಪಾತಿತಾಃ ॥ ೮ ॥

ಪಾದಪ್ರಹಾರೈರಪರೆ ತ್ರಿಶೂಲೇನಾಪರೇ ಮುನೆ।
ದೃಷ್ಟ್ವಾ* ಗ್ನಿನಾ ತಥೈವಾನ್ಯೇ ದೇವಾದ್ಯಾಃ ಪ್ರಲಯಂ ಗತಾಃ ॥ ೯ ॥

---

೪-೬. ಎಲೈ ಮುನಿಯೇ, ಅನಂತರ ವಿಶ್ವೇದೇವತೆಗಳೂ, ಸಾಧ್ಯರೂ, ಅಗ್ನಿ, ಸೂರ್ಯ ಮೊದಲಾದ ದೇವತೆಗಳೂ ಪುರೋಡಾಶವನ್ನು ಭಕ್ಷಿಸುತ್ತಾ ಶಂಕರನೊಡನೆ ಹೋರಾಡಿ ಓಡಿದರು. ಚಂದ್ರನು ನಕ್ಷತ್ರಗಳೊಡನೆ ರಾತ್ರಿಯನ್ನು ತೋರಿಸುತ್ತಾ ಗಗನಕ್ಕೆ ಹಾರಿ ತನ್ನ ಸ್ಥಾನವನ್ನು ಹೊಂದಿದನು. ಕಶ್ಯಪಾದಿಮಹರ್ಷಿಗಳು ಶತರುದ್ರಿಯವೆಂಬ ವೇದಭಾಗದಿಂದ ರುದ್ರನನ್ನು ಸ್ತೋತ್ರಮಾಡುತ್ತಾ ಪುಷ್ಪಾಂಜಲಿ ಪೂರ್ವಕವಾಗಿ ನಮಸ್ಕರಿಸುತ್ತ ನಿಂತರು.

೭-೮. ದಕ್ಷಪತ್ನಿಯು ರುದ್ರನ ಈ ಪರಾಕ್ರಮವನ್ನು ಬಾರಿಬಾರಿಗೂ ನೋಡಿ ದೈನ್ಯದಿಂದ ಇಂದ್ರಾದಿದೇವತೆಗಳಲ್ಲಿ ಅಂಗಲಾಚಿ ಮೊರೆಯಿಟ್ಟು ಅತ್ತಳು. ಅನಂತರವೂ ಕೋಪದಿಂದ ಉಗ್ರನಾದ ಶಂಕರನು ಹಸ್ತದ ಏಟಿನಿಂದಲೂ ಪಾದಪ್ರಹಾರದಿಂದಲೂ ತ್ರಿಶೂಲದಿಂದಲೂ ಅಗ್ನಿಮಯವಾದ ನೇತ್ರಜ್ವಾಲೆಯಿಂದಲೂ ಅನೇಕಾನೇಕ ದೇವತೆಗಳನ್ನು ನಾಶಪಡಿಸಿದನು.

---

* ಇಲ್ಲಿ 'ದೃಷ್ಟ್ಯಗ್ನಿನಾ' ಎಂದು ಪಾಠವಿರಬೇಕೆಂದು ತೋರುತ್ತದೆ.

ತತಃ ಪೂಷಾ ಹರಂ ವೀಕ್ಷ್ಯ ವಿನಿಘ್ನನ್ತಂ ಸುರಾಸುರಾನ್ ।
ಕ್ರೋಧಾತ್ ಬಾಹೂ ಪ್ರಸಾರ್ಯಾಥ ಪ್ರಾದುದ್ರಾವ ಮಹೇಶ್ವರಂ ॥ ೧೦ ॥

ತಮಾಪತನ್ತಂ ಭಗವಾನ್ ಸಂನಿರೀಕ್ಷ್ಯ ತ್ರಿಲೋಚನಃ ।
ಬಾಹುಭ್ಯಾಂ ಪ್ರತಿಜಗ್ರಾಹ ಕರೇಣೈಕೇನ ಶಂಕರಃ । ॥ ೧೧ ॥

ಕರಾಭ್ಯಾಂ ಪ್ರಗೃಹೀತಸ್ಯ ಶಂಭುನಾಂಶುಮತೋಽಪಿ ಹಿ ।
ಕರಾಂಗುಲಿಭ್ಯೋ ನಿಶ್ಚೇರುರಸೃಗ್ಧಾರಾ ಸ್ಸಮನ್ತತಃ । ॥ ೧೨ ॥

ತತೋ ವೇಗೇನ ಮಹತಾ ಅಂಶುಮನ್ತಂ ದಿವಾಕರಂ ।
ಭ್ರಾಮಯಾಮಾಸ ಸತತಂ ಸಿಹ್ಮೋ ಮೃಗಶಿಶುಂ ಯಥಾ । ॥ ೧೩ ॥

ಭ್ರಾಮಿತಸ್ಯಾತಿವೇಗೇನ ನಾರದಾಂಶುಮತೋಽಪಿ ಹಿ ।
ಭುಜೌ ಹ್ರಸ್ವತ್ವಮಾಪನ್ನೌ ತ್ರುಟಿತಸ್ನಾಯುಬನ್ಧನೌ ॥ ೧೪ ॥

ರುಧಿರಾಪ್ಲುತಸರ್ವಾಂಗಮಂಶುಮನ್ತಂ ಮಹೇಶ್ವರಃ ।
ಸನ್ನಿರೀಕ್ಷ್ಯೋತ್ಸಸರ್ಜೈನಮನ್ಯತೋಽಭಿಜಗಾಮ ಹ ॥ ೧೫ ॥

---

೧೦-೧೫. ಎಲೈ ಮಹರ್ಷಿಯೇ, ಅನಂತರ ಸುರಾಸುರರೆಲ್ಲರನ್ನೂ ನಾಶಪಡಿಸುತ್ತಿರುವ ರುದ್ರನನ್ನು ನೋಡಿ ಸೂರ್ಯನು ಕೋಪದಿಂದ ಕೈಗಳನ್ನು ಮುಂದೆ ಚಾಚುತ್ತಾ ಎದುರಿಸಲು ಓಡಿಬಂದನು. ಆರೀತಿ ಓಡಿಬರುವ ಸೂರ್ಯನನ್ನು ಬಾಹುಗಳಿಂದಲೂ ಕೈಗಳಿಂದಲೂ ರುದ್ರನು ದೃಢವಾಗಿ ಹಿಡಿದುಕೊಂಡನು. ಘಟ್ಟಿಯಾಗಿ ಹಿಡಿಯಲ್ಪಟ್ಟ ಸೂರ್ಯನ ಕೈಗಳಿಂದ ರಕ್ತಧಾರೆಗಳು ಸುರಿದವು. ಆಮೇಲೆ ಆ ಸೂರ್ಯನನ್ನು ಹಾಗೇ ಹಿಡಿದುಕೊಂಡು ಸಿಂಹವು ಜಿಂಕೆಯ ಮರಿಯನ್ನು ತಿರುಗಿಸುವಂತೆ ವೇಗದಿಂದ ಗರಗರನೆ ತಿರುಗಿಸಿದನು. ಹಾಗೆ ಶಂಕರನಿಂದ ತಿರುಗಿಸಲ್ಪಟ್ಟ ಸೂರ್ಯನ ಎರಡು ಭುಜಗಳೂ ನರಗಳ ಮತ್ತು ಸಂಧಿಗಳ ಶೈಥಿಲ್ಯದಿಂದ ಕುಗ್ಗಿ ಹ್ರಸ್ವಾಕಾರವಾದವು. ರಕ್ತದಿಂದ ತೋಯಲ್ಪಟ್ಟ ಮೈಯ್ಯುಳ್ಳ ಆ ಸೂರ್ಯನನ್ನು ನೋಡಿ ದಣಿದು ಸೋತನೆಂದು ತಿಳಿದು ಶಂಕರನು ಅವನನ್ನು ಬಿಟ್ಟು ಮತ್ತೊಂದು ಕಡೆಗೆ ಹೊರಟನು.

ತತಸ್ತು ಪೂಷಾ ವಿಹಸನ್ ದಶನಾನಿ ವಿದರ್ಶಯನ್ ।
ಪ್ರೋವಾಚೈಹ್ಯೇಹಿ ಕಾಪಾಲಿನ್ ಪುನಃ ಪುನರಪೀಶ್ವರಂ ॥ ೧೬ ॥

ತತಃ ಕ್ರೋಧಾಭಿಭೂತೇನ ಪೂಷ್ಣೋವೇಗೇನ ಶಂಭುನಾ ।
ಮುಷ್ಟಿನಾ ಹತ್ಯ ದಶನಾಃ ಪಾತಿತಾ ಧರಣೀತಲೆ ॥ ೧೭ ॥

ಭಗ್ನದಂತಸ್ತಥಾ ಪೂಷಾ ರುಧಿರಾಭಿಪ್ಲುತಾನನಃ ।
ಪಪಾತ ಭುವಿ ನಿಸ್ಸಂಜ್ಞೋ ವಜ್ರಾಹತ ಇವಾಚಲಃ ॥ ೧೮ ॥

ಭಗೋಽಪಿ ವೀಕ್ಷ್ಯ ಪತಿತಂ ಪೂಷಣಂ ರುಧಿರೋಕ್ಷಿತಂ ।
ನೇತ್ರಾಭ್ಯಾಂ ಘೋರರೂಪಾಭ್ಯಾಂ ವೃಷಭಧ್ವಜಮೈಕ್ಷತ ॥ ೧೯ ॥

ತ್ರಿಪುರಘ್ನಸ್ತತಃ ಕ್ರುದ್ಧಸ್ತಲೇನಾಹತ್ಯ ಚಕ್ಷುಷೀ ।
ನಿಪಾತಯಾಮಾಸ ಭುವಿ ಕ್ಷೋಭಯನ್ಸರ್ವದೇವತಾಃ ॥ ೨೦ ॥

ತತೋ ದಿವಾಕರಾಃ ಸರ್ವೇ ಪುರಸ್ಕೃತ್ಯ ಶತಕ್ರತುಂ ।
ಮರುದ್ಭಿಶ್ಚ ಹುತಾಶೈಶ್ಚ ಭಯಾಜ್ಜಗ್ಮುರ್ದಿಶೋ ದಶ ॥ ೨೧ ॥

---

೧೬-೧೮. ಅನಂತರ ಅವಮಾನಿತನಾದ ಸೂರ್ಯನು ಹಲ್ಲುಗಳನ್ನು ತೋರಿಸುತ್ತಾ ಶಂಭುವನ್ನು ಹಾಸ್ಯಮಾಡುತ್ತಾ ಎಲೈ ಕಪಾಲಿಯೇ ಬಾ ಬಾ ಎಂದು ಮಾತ್ಸರ್ಯದಿಂದ ಮೊದಲಿಸುತ್ತ ಬಂದನು. ಕುಪಿತನಾದ ಹರನು ಕೈಯಿನಿಂದ ಅಪ್ಪಳಿಸಿ ಅವನ ಹಲ್ಲುಗಳನ್ನೆಲ್ಲಾ ಭೂಮಿಯಲ್ಲಿ ಕೆಡಹಿದನು. ಹಲ್ಲುಗಳ ನಾಶದಿಂದ ಬಾಯಿನಲ್ಲಿ ರಕ್ತವನ್ನು ಸುರಿಸುತ್ತಾ ಸೂರ್ಯನು ಮೂರ್ಛಿತನಾಗಿ ವಜ್ರಪಾತದಿಂದ ಪರ್ವತವು ಬೀಳುವಂತೆ ನೆಲಕ್ಕೆ ಬಿದ್ದನು.

೧೯-೨೧. ಹಾಗೆ ನೆಲಕ್ಕೆ ಬಿದ್ದ ಸೂರ್ಯನನ್ನು ನೋಡಿ ದ್ವಾದಶಾದಿತ್ಯರಲ್ಲಿ ಒಬ್ಬನಾದ ಭಗನು ಕೋಪದಿಂದ ಕಿಡಿಕಿಡಿಯಾದ ಕಣ್ಣುಗಳಿಂದ ರುದ್ರನನ್ನು ನೋಡಿದನು. ರುದ್ರನು ಇವನ ಕೋಪವನ್ನು ನೋಡಿ ಕೈಯ್ಯಿನಿಂದ ಅವನ ಕಣ್ಣುಗಳನ್ನು ಅಪ್ಪಳಿಸಿ ನೆಲಕ್ಕೆ ಕೆಡವಿದನು. ದೇವತೆಗಳೆಲ್ಲರೂ ಭಯದಿಂದ ಕ್ಷುಬ್ಧರಾದರು. ಈ ಅಪಜಯವನ್ನು ನೋಡಿ ದ್ವಾದಶಾದಿತ್ಯರೆಲ್ಲರೂ ಇತರ ದೇವತೆಗಳೊಡನೆಯೂ ಅಗ್ನಿಗಳೊಡನೆಯೂ ಇಂದ್ರನನ್ನು ಮುಂದಿಟ್ಟುಕೊಂಡು ಹತ್ತುದಿಕ್ಕುಗಳ ಕಡೆಗೂ ಭಯದಿಂದ ಚದುರಿ ಓಡಿದರು.

ಪ್ರತಿಯಾತೇಷು ದೇವೇಷು ಪ್ರಹ್ಲಾದಾದ್ಯಾ ದಿತೀಶ್ವರಾಃ ।
ನಮಸ್ಕೃತ್ಯ ತತಃ ಸರ್ವೇ ತಸ್ಥುಃ ಪ್ರಾಂಜಲಯೋ ಮುನೇ ॥ ೨೨ ॥

ತತಸ್ತಂ ಯಜ್ಞವಾಟಂ ತು ಶಂಕರೋ ಘೋರಚಕ್ಷುಷಾ ।
ದದರ್ಶ ದಗ್ಧುಂ ಕೋಪೇನ ಸರ್ವಾಂಶ್ಚೈವ ಸುರಾಸುರಾನ್ । ॥ ೨೩ ॥

ತತೋ ನಿಲಿಲ್ಯಿರೇ ವೀರಾಃ ಪ್ರಣೇಮುರ್ದುದ್ರುವುಸ್ತಥಾ
ಭಯಾದನ್ಯೇ ಹರಂ ದೃಷ್ಟ್ವಾ ಗತಾ ವೈವಸ್ವತಕ್ಷಯಂ ॥ ೨೪ ॥

ತತೋಽಗ್ನಯಸ್ತ್ರಿಭಿನೇತ್ರೈರ್ದುಸ್ಸಮಂ ಸಮುವೈಕ್ಷತ* ।
ದೃಷ್ಟಮಾತ್ರಾಸ್ತ್ರಿನೇತ್ರೇಣ ಭಸ್ಮೀಭೂತಾಭವನ್ಕ್ಷಣಾತ್ ॥ ೨೫ ॥

ಅಗ್ನೌ ಪ್ರಣಷ್ಟೇ ಯಜ್ಞೋಽಪಿ ಭೂತ್ವಾ ದಿವ್ಯವಪುರ್ಮೃಗಃ ।
ದುದ್ರಾವ ವಿಕ್ಲವಗತಿರ್ದಕ್ಷಿಣಾ ಸಹಿತೋಽಂಬರೇ ॥ ೨೬ ॥

ತಮೇವಾನುಸಸಾರೇಶಶ್ಚಾಪಮಾನಮ್ಯ ವೇಗವಾನ್ ।
ಶರಂ ಪಾಶುಪತಂ ಕೃತ್ವಾ ಕಾಲರೂಪೀ ಮಹೇಶ್ವರಃ ॥ ೨೭ ॥

೨೨-೨೪. ದೇವತೆಗಳೆಲ್ಲರೂ ಹೊರಟುಹೋದನಂತರ ದೈತೇಯರಲ್ಲಿ ಮುಖ್ಯರಾದ ಪ್ರಹ್ಲಾದನೇ ಮೊದಲಾದವರು ಶಂಕರನನ್ನು ನಮಸ್ಕರಿಸಿ ಅಂಜಲಿಬಂಧಮಾಡಿಕೊಂಡು ಭಕ್ತಿಯಿಂದ ನಿಂತರು. ಆಮೇಲೆ ಶಂಕರನು ಆ ಯಜ್ಞಶಾಲೆಯನ್ನೂ ಇತರ ಕೆಲವು ದೇವತೆಗಳನ್ನೂ ಸುಡಲು ಕೋಪದಿಂದ ನೋಡಿದನು. ಆ ಸಮಯದಲ್ಲಿ ಅಲ್ಲಿ ಅಳಿದುಳಿದ ಕೆಲವು ವೀರರು ಭಯದಿಂದ ಅಡಗಿಕೊಂಡರು. ಕೆಲವರು ಓಡಿದರು. ಮತ್ತೆ ಕೆಲವರು ಹರನ ರೌದ್ರಾವತಾರವನ್ನು ನೋಡಿದೊಡನೆಯೇ ಮಡಿದರು.

೨೫-೨೭. ಅನಂತರ ಅಲ್ಲಿ ನೆಲಸಿದ್ದ ಯಜ್ಞಾಗ್ನಿಗಳನ್ನು ಮೂರು ಕಣ್ಣುಗಳಿಂದಲೂ ಶಂಕರನು ತೀವ್ರದೃಷ್ಟಿಯಿಂದ ನೋಡಲಾಗಿ ಅವು ಆಕ್ಷಣದಲ್ಲೇ ಭಸ್ಮವಾಗಿ ಹೋದವು. ಅಗ್ನಿಯು ನಷ್ಟವಾದ ನಂತರ ಯಜ್ಞವೂ ಮೃಗರೂಪವನ್ನು ಧರಿಸಿ ದಕ್ಷಿಣೆಯೊಡನೆ ದುಃಖದಿಂದ ಆಕಾಶಕ್ಕೆ ಓಡಿಹೋಯಿತು. ಅಲ್ಲಿಯೂ ಅದನ್ನು ಬಿಡದೆ ಪಾಶುಪತಬಾಣದಿಂದ ಧನುಸ್ಸನ್ನು ಸಿದ್ಧಪಡಿಸಿಕೊಂಡು ರುದ್ರನು ಕಾಲರೂಪಿಯಾಗಿ ಅನುಸರಿಸಿ ಹೋದನು.

* ಇಲ್ಲಿರುವ ಅಶುದ್ಧಪಾಠವು ಬೇರೆ ಮಾತೃಕೆಯನ್ನು ನೋಡಿ ಪರಿಷ್ಕರಿಸತಕ್ಕದ್ದಾಗಿದೆ.

ಅರ್ಧೇನ ಯಜ್ಞವಾಟಾಂತೇ ಜಟಾಧರ ಇತಿ ಶ್ರುತಃ ।
ಅರ್ಧೇನ ಗಗನೇ ಶರ್ವಃ ಕಾಲರೂಪೀ ಚ ಕಥ್ಯತೇ ॥ ೨೮ ॥

॥ ನಾರದ ಉವಾಚ ॥

ಕಾಲರೂಪೀ ತ್ವಯಾಖ್ಯಾತಃ ಶಂಭುರ್ಗಗನಗೋಚರಃ ।
ಲಕ್ಷಣಂ ಚ ಸ್ವರೂಪಂ ಚ ಸರ್ವಂ ವ್ಯಾಖ್ಯಾತುಮರ್ಹಸಿ ॥ ೨೯ ॥

॥ ಪುಲಸ್ತ್ಯ ಉವಾಚ ॥

ಸ್ವರೂಪಂ ತ್ರಿಪುರಘ್ನಸ್ಯ ವದಿಷ್ಯೇ ಕಾಲರೂಪಿಣಃ ।
ಯೇನಾಂಬರಂ ಮುನಿಶ್ರೇಷ್ಠ ವ್ಯಾಪ್ತಂ ಲೋಕಹಿತೇಚ್ಛುನಾ ॥ ೩೦ ॥

ಯತ್ರಾಶ್ವಿನೀ ಚ ಭರಣೀ ಕೃತ್ತಿಕಾಯಾಸ್ತಥಾಂಶಕಃ ।
ಮೇಷೋರಾಶಿಃ ಕುಜಕ್ಷೇತ್ರಂ ತಚ್ಛಿರಃ ಕಾಲರೂಪಿಣಃ ॥ ೩೧ ॥

ಆಗ್ನೇಯಾಂ ಶಾಸ್ತ್ರಯೋ ಬ್ರಹ್ಮನ್ಪ್ರಾಜಾಪತ್ಯಂ ಕವೇರ್ಗೃಹಂ ।
ಸೌಮ್ಯಾರ್ಧಂ ವೃಷನಾಮೇದಂ ವದನಂ ಪರಿಕೀರ್ತಿತಂ ॥ ೩೨ ॥

---

೨೮. ಯಜ್ಞಶಾಲೆಯಲ್ಲಿ ಇಡಲ್ಪಟ್ಟ ಅವನ ಅರ್ಧಭಾಗವು ಜಟಾಧರ ನೆಂಬದಾಗಿಯೂ ಗಗನ ಭಾಗದಲ್ಲಿ ನಿಂತ ಅರ್ಧ ಭಾಗವು ಕಾಲರೂಪಿಯೆಂದೂ ಕರೆಯಲ್ಪಡುತ್ತದೆ.

೨೯. ನಾರದರು ಕೇಳುತ್ತಾರೆ:—ಆಕಾಶದಲ್ಲಿ ವ್ಯಾಪ್ತನಾದ ಶಂಭುವು ಕಾಲ ರೂಪಿ ಎಂದು ಅಪ್ಪಣೆ ಕೊಡಿಸಿದ್ದೀರಿ. ಆ ಕಾಲರೂಪಿಯ ಸ್ವರೂಪವೇನು ಲಕ್ಷಣವೇನು ದಯವಿಟ್ಟು ಅಪ್ಪಣೆಕೊಡಿಸಬೇಕು.

೩೦. ಪುಲಸ್ತ್ಯರು ಉತ್ತರ ಹೇಳುತ್ತಾರೆ: ಎಲೈ, ಮುನಿಶ್ರೇಷ್ಠನೇ, ಲೋಕ ಹಿತೈಷಿಯಾದ ಯಾವ ತ್ರಿಪುರಾರಿಯ ಸ್ವರೂಪವು ಆಕಾಶದಲ್ಲಿ ವ್ಯಾಪ್ತವಾಗಿ ನಿಂತಿತೋ ಅಂತಹ ಕಾಲರೂಪಿಯಾದ ಅವನ ಸ್ವರೂಪವನ್ನು ಹೇಳುತ್ತೇನೆ.

೩೧ ೩೨. ಯಾವ ಕಾಲದ ಅಂಶದಲ್ಲಿ ಅಶ್ವಿನೀ ಮತ್ತು ಭರಣೀ ಮತ್ತು ಕೃತ್ತಿಕಾ ನಕ್ಷತ್ರದ ಒಂದು ಪಾದವೂ ಸೇರಿರುತ್ತದೆಯೊ ಅದಕ್ಕೆ ಮೇಷರಾಶಿ ಎಂದು ಹೆಸರು. ಅದಕ್ಕೆ ಅಧಿಪತಿಯು ಅಂಗಾರಕನು. ಇಂತಹ ಕಾಲವು ಆ ಕಾಲರೂಪಿಯಾದ ಮಹೇಶ್ವರನಿಗೆ ಶಿರಸ್ಸು (ತಲೆ). ಹೀಗೆಯೇ ಕೃತ್ತಿಕಾ ನಕ್ಷತ್ರದ ಮೂರು ಪಾದಗಳೂ

ಮೃಗಾರ್ಧಮಾದ್ರಾಽದಿತ್ಯಾಂಶಾಸ್ತ್ರಯಃ ಸೌಮ್ಯಗೃಹಂತ್ವಿದಂ।
ಮಿಥುನಂ ಭುಜಯೋಸ್ತಸ್ಯ ಗಗನಸ್ಥಸ್ಯ ಶೂಲಿನಃ ॥ ೩೩ ॥

ಆದಿತ್ಯಾಂಶಶ್ಚ ಪುಷ್ಯಂ ಚ ಆಶ್ಲೇಷಾ ಶಶಿನೋ ಗೃಹಂ।
ರಾಶಿಃ ಕರ್ಕಟಕೋ ನಾಮ ಪಾರ್ಶ್ವೇ ಮಖವಿನಾಶಿನಃ ॥ ೩೪ ॥

ಪಿತ್ರ್ಯರ್ಕ್ಷಂ ಭಗದೈವತ್ಯಮುತ್ತರಾಂಶಶ್ಚ ಕೇಸರೀ।
ಸೂರ್ಯಕ್ಷೇತ್ರಂ ವಿಭೋರ್ಬ್ರಹ್ಮನ್ಹೃದಯಂ ಪರಿಗೀಯತೆ ॥ ೩೫ ॥

ಉತ್ತರಾಂಶಾಸ್ತ್ರಯಃ ಪಾಣಿಶ್ಚಿತ್ರಾರ್ಧಂ ಕನ್ಯಕಾತ್ವಿದಂ।
ಸೋಮಪುತ್ರಸ್ಯ ಸದ್ಮೈತದ್ದ್ವಿತೀಯಂ ಜಠರಂ ವಿಭೋಃ ॥ ೩೬ ॥

ಚಿತ್ರಾಂಶದ್ವಿತಯಂ ಸ್ವಾತಿರ್ವಿಶಾಖಾಯಾಂಶಕತ್ರಯಂ।
ದ್ವಿತೀಯಂ ಶುಕ್ರಸದನಂ ತುಲಾನಾಭಿರುದಾಹೃತಾ ॥ ೩೭ ॥

ವಿಶಾಖಾಂಶಮನುರಾಧಾ ಜ್ಯೇಷ್ಠಾ ಭೌಮಗೃಹಂತ್ವಿದಂ।
ದ್ವಿತೀಯಂ ವೃಶ್ಚಿಕೋ ರಾಶಿರ್ಮೇಢ್ರಂ ಕಾಲಸ್ವರೂಪಿಣಃ ॥ ೩೮ ॥

---

ರೋಹಿಣೀ ನಕ್ಷತ್ರದ ನಾಲ್ಕು ಪಾದ ಮತ್ತು ಮೃಗಶಿರಾ ನಕ್ಷತ್ರದ ಎರಡುಪಾದ ಈ ಒಂಭತ್ತು ಪಾದಗಳು ವೃಷಭರಾಶಿ. ಅದಕ್ಕೆ ಶುಕ್ರನು ಅಧಿಪತಿಯಾಗಿರುವನು. ಇದು ಕಾಲರೂಪಿಯ ಮುಖವು.

೩೩-೩೪. ಮೃಗಶಿರಾನಕ್ಷತ್ರದ ಕೊನೆಯ ಎರಡು ಪಾದಗಳು ಮತ್ತು ಆದ್ರಾ ಪುನರ್ವಸುವಿನ ಮೂರು ಅಂಶಗಳೂ ಸೇರಿ ಮಿಥುನರಾಶಿಯಾಗುತ್ತದೆ. ಅದಕ್ಕೆ ಬುಧನು ಅಧಿಪತಿಯು. ಇದು ಕಾಲರೂಪಿಯ ಭುಜಸಂಧಿ ಮತ್ತು ಪುನರ್ವಸು ನಕ್ಷತ್ರದ ಅಂತ್ಯಭಾಗ ಪುಷ್ಯ ಆಶ್ಲೇಷಾಭಾಗಗಳು ಸೇರಿ ಕರ್ಕಟವೆನಿಸುತ್ತದೆ. ಇದಕ್ಕೆ ಚಂದ್ರನು ಸ್ವಾಮಿ. ಇದು ಕಾಲಪುರುಷನ ಪಾರ್ಶ್ವಪ್ರದೇಶ.

೩೫-೩೬. ಮಖಾ, ಪುಬ್ಬಾ, ಉತ್ತರೆಯ ಒಂದು ಪಾದವು ಸಿಂಹರಾಶಿಯಾಗುತ್ತದೆ. ಇದು ಸೂರ್ಯನಕ್ಷೇತ್ರ ಇದು ಕಾಲರೂಪಿಯ ಹೃದಯ ಮತ್ತು ಉತ್ತರೆಯ ಮೂರುಪಾದಗಳು ಹಸ್ತ, ಚಿತ್ರಾ ನಕ್ಷತ್ರದ ಮೊದಲನೇ ಎರಡು ಪಾದಗಳು ಕನ್ಯಾ ರಾಶಿ ಇದಕ್ಕೆ ಬುಧನು ಅಧಿಪತಿ. ಇದು ಕಾಲಪುರುಷನ ಉದರ.

೩೭-೩೮. ಚಿತ್ರಾನಕ್ಷತ್ರದ ಎರಡು ಪಾದಗಳು ಸ್ವಾತಿ, ವಿಶಾಖಾನಕ್ಷತ್ರದ ಮೂರು ಪಾದಗಳು ತುಲಾರಾಶಿ, ಇದು ಶುಕ್ರನ ಎರಡನೇಗೃಹ,ಇದು ಕಾಲಪುರುಷನ

ಮೂಲಂ ಪೂರ್ವೋತ್ತರಾಂಶಶ್ಚ ದೇವಾಚಾರ್ಯಗೃಹಂ ಧನುಃ ।
ಊರ್ವೋರ್ಯುಗಲಮೀಶಸ್ಯ ಅಪರಾರ್ಧಂ ಪ್ರಗೀಯತೇ ॥ ೩೯ ॥

ಉತ್ತರಾಂಶಾಸ್ತ್ರಯಶ್ಚರ್ಕ್ಷಂ ಶ್ರವಣಂ ಮಕರೋ ಮುನೇ ।
ಧನಿಷ್ಠಾರ್ಧಂ ಶನಿಕ್ಷೇತ್ರಂ ಜಾನುನೀ ಪರಿಕೀರ್ತಿತೇ ॥ ೪೦ ॥

ಧನಿಷ್ಠಾರ್ಧಂ ಶತಭಿಷಾ ಪ್ರೋಷ್ಠಪಾದಾಂಶಕತ್ರಯಂ ।
ಸೌರೇಃ ಸದ್ಮಾಪರಮಿದಂ ಕುಂಭೋ ಜಂಘೇ ಚ ವಿಶ್ರುತೇ ॥ ೪೧ ॥

ಪ್ರೋಷ್ಠಪಾದಾಂಶಮೇಕಂ ತು ಉತ್ತರಾ ರೇವತೀ ತಥಾ ।
ದ್ವಿತೀಯಂ ಜೀವಸದನಂ ಮೀನಸ್ತೌ ಚರಣಾವುಭೌ ॥ ೪೨ ॥

ಏವಂ ಕೃತ್ವಾ ಕಾಲರೂಪಂ ತ್ರಿನೇತ್ರೋ
ಯಜ್ಞಂ ಕ್ರೋಧಾನ್ಮಾರ್ಗಣೈರಾಜಘಾನ ।
ವಿದ್ಧಶ್ಚಾಸೌ ವೇದನಾ ಬುದ್ಧಿಮುಕ್ತಃ ।
ಖೇ ಸಂತಸ್ಥೌ ತಾರಕಾಭಿಶ್ಚಿತಾಂಗಃ ॥ ೪೩ ॥

---

ನಾಭಿ ವಿಶಾಖೆಯ ಕೊನೆಯಪಾದ ಅನೂರಾಧಾ, ಜ್ಯೇಷ್ಠಾ ನಕ್ಷತ್ರಗಳು ವೃಶ್ಚಿಕರಾಶಿ ಇದು ಅಂಗಾರಕನ ಎರಡನೇಯ ಗೃಹ. ಇದು ಕಾಲಪುರುಷನ ಲಿಂಗ.

೩೯-೪೦. ಮೂಲ ಪೂರ್ವಾಷಾಢಾ ಉತ್ತರಾಷಾಢಾ ಒಂದು ಪಾದವೂ ಸೇರಿ ಧನೂರಾಶಿಯಾಗುತ್ತದೆ. ಇದು ಬೃಹಸ್ಪತಿಯ ಗೃಹ. ಇದು ಕಾಲರೂಪಿಯ ಊರು (ತೊಡೆ) ವಿನಭಾಗ ಮತ್ತು ಉತ್ತರಾಷಾಢಾನಕ್ಷತ್ರದ ಮೂರು ಪಾದ ಮತ್ತು ಶ್ರವಣ ಧನಿಷ್ಠಾನಕ್ಷತ್ರದ ಅರ್ಧ ಇವು ಮಕರರಾಶಿ. ಇದಕ್ಕೆ ಶನಿಯು ಅಧಿಪತಿ. ಇದು ಕಾಲಪುರುಷನ ಜಾನು (ಮಂಡಿಯ) ಭಾಗವಾಗಿರುತ್ತದೆ.

೪೧-೪೨. ಧನಿಷ್ಠೆಯ ಕಡೆಯ ಎರಡು ಪಾದಗಳು ಶತಭಿಷ, ಪೂರ್ವಾಭಾದ್ರ ಪಾದತ್ರಯಗಳೂ, ಕುಂಭರಾಶಿಯಾಗುತ್ತದೆ. ಇದು ಶನಿಯ ಮತ್ತೊಂದು ಸ್ಥಾನ. ಇದು ಕಾಲಪುರುಷನ ಕಣಕಾಲು. ಮತ್ತು ಪೂರ್ವಾಭಾದ್ರೆಯ ಒಂದು ಪಾದ ಉತ್ತರಾ ಭಾದ್ರಾರೇವತಿಗಳು ಮೀನರಾಶಿ, ಇದು ಬೃಹಸ್ಪತಿಯ ಎರಡನೇ ಗೃಹ ಇದು ಕಾಲ ಪುರುಷನ ಪಾದಗಳು.

೪೩. ಈ ರೀತಿಯಾದ ಕಾಲರೂಪವನ್ನು ಧರಿಸಿದ ಶಂಕರನು ಮೃಗರೂಪ ದಿಂದ ಓಡಿಹೋದ ಆ ಯಜ್ಞವನ್ನು ಕೋಪಾವಿಷ್ಟನಾಗಿ ಬಾಣಗಳಿಂದ್ಧ ಹೊಡೆದನು.

॥ ನಾರದ ಉವಾಚ ॥

ರಾಶಯಃ ಕಥಿತಾ ಬ್ರಹ್ಮಂಸ್ತ್ವಯಾ ದ್ವಾದಶವೈ ಮಮ ।
ತೇಷಾಂ ವಿಸ್ತರತೋ ಬ್ರೂಹಿ ಲಕ್ಷಣಾನಿ ಸ್ವರೂಪತಃ ॥ ೪೪ ॥

॥ ಪುಲಸ್ತ್ಯ ಉವಾಚ ॥

ಸ್ವರೂಪಂ ತವ ವಕ್ಷ್ಯಾಮಿ ರಾಶೀನಾಂ ಶೃಣು ನಾರದ ।
ಯಾದೃಶಾ ಯತ್ರ ಸಂಚಾರಾ ಯಸ್ಮಿಂಸ್ಥಾನೇ ವಸಂತಿ ಚ ॥ ೪೫ ॥

ಸಂಚರಸ್ಥಾನಮೇವಾಸ್ಯ ಧಾನ್ಯರತ್ನಾಕರಾದಿಷು ।
ನವಶಾಡ್ವಲಸಂಚ್ಛನ್ನ ವಸುಧಾಯಾಂ ಚ ಸರ್ವಶಃ ॥ ೪೬ ॥

ನಿತ್ಯಂ ಚರತಿ ಫುಲ್ಲೇಷು ಸರಸಾಂ ಪುಲಿನೇಷು ಚ ।
ಮೇಷಃ ಸಮಾನಮೂರ್ತಿಶ್ಚ ಅಜಾವಿಕಧನಾದಿಷು ॥ ೪೭ ॥

---

ಬಾಣಗಳಿಂದ ಹೊಡೆಯಲ್ಪಟ್ಟ ಆ ಮೃಗವು ಬುದ್ಧಿಜ್ಞಾನಗಳಿಂದ ಬಿಡಲ್ಪಟ್ಟು ಜಡವಾಗಿ ಆಕಾಶದಲ್ಲಿ ನಕ್ಷತ್ರಗಳಿಂದ ಆವೃತವಾಗಿ ಅಲ್ಲಿಯೇ ನಿಂತಿತು. [ಇಲ್ಲಿ ಹೇಳಿರುವ ನಕ್ಷತ್ರಾಂಶಗಳು ಜ್ಯೋತಿರೂಪವಾದ ಮೇಷಾದಿರಾಶಿಗಳು. ಇವುಗಳು ಕಾಲರೂಪವಲ್ಲ. ಆ ಮೇಷಾದಿ ರಾಶಿಗಳ ಉದಯಾಭಿವ್ಯಕ್ತಿಯಾಗುವ ಮೇಷಾದಿಲಗ್ನಗಳೇ ಕಾಲರೂಪವಾಗುತ್ತವೆಯಾದ್ದರಿಂದ ಇವುಗಳೇ ಕಾಲರೂಪಿಯಾದ ತ್ರಿನೇತ್ರನ ಅವಯವಗಳೆಂದು ರೂಪಿತವಾಗಿರುತ್ತವೆ.]

೪೪. ನಾರದರು ಹೇಳುತ್ತಾರೆ: ಮಹರ್ಷಿಯೇ ರಾಶಿಗಳನ್ನೆಲ್ಲಾ ನೀನು ಹೇಳಿ ಆಯಿತು. ಅವುಗಳ ಸ್ವರೂಪ ಮತ್ತು ಲಕ್ಷಣಗಳನ್ನು ಹೇಳಬೇಕು.

೪೫. ಎಲೈ ನಾರದನೇ, ಆ ರಾಶಿಗಳ ಸ್ವರೂಪವನ್ನೂ ಅವು ಸಂಚರಿಸುವ ಸ್ಥಲವನ್ನೂ ಅವುಗಳ ವಾಸಸ್ಥಾನವನ್ನೂ ಹೇಳುತ್ತೇನೆ ಕೇಳು

೪೬-೪೭. ಮೇಷರಾಶಿಯು ಟಗರಿಗೆ ಸಮಾನವಾದ ಆಕಾರವುಳ್ಳದ್ದು. ಅದು ಹಸಿರುಹುಲ್ಲು ಬೆಳೆದಿರುವ ಪ್ರದೇಶದಲ್ಲೂ ನದೀಸರೋವರಗಳಲ್ಲೂ ಮರಳು ಪ್ರದೇಶದಲ್ಲೂ ಸಂಚರಿಸುತ್ತದೆ. ಆಡು, ಕುರಿ ಮುಂತಾದ ಪಶುಗಳನ್ನು ಸಾಕುವವರೇ ಅದಕ್ಕೆ ಆಶ್ರಯಸ್ಥಾನ.

ವೃಷಃ ಸದೃಶರೂಪೇಷು ಚರತೇ ಗೋಕುಲಾದಿಷು ।
ತಸ್ಯಾಧಿವಾಸಭೂಮಿಸ್ತು ಕೃಷೀವಲಧರಾಶ್ರಯಃ ॥ ೪೮ ॥

ಸ್ತ್ರೀಪುಂಸಯೋಃ ಸಮಂ ರೂಪಂ ಶಯ್ಯಾಸನಪರಿಗ್ರಹಂ ।
ವೀಣಾವಾದ್ಯಧೃಙ್ಮಿಥುನಂ ಗೀತನರ್ತನಶಿಲ್ಪಿಷು ॥ ೪೯ ॥

ಸ್ಥಿತಂ ಕ್ರೀಡಾರತಿರ್ನಿತ್ಯಂ ವಿಹಾರಂ *ಧ್ವನಿಕಸ್ಯ ತು ।
ಮಿಥುನಂ ನಾಮ ವಿಖ್ಯಾತಂ ರಾಶಿರ್ದ್ವೇಧಾತ್ಮಕಃ ಶಿವಃ ॥ ೫೦ ॥

ಕರ್ಕಿಃ ಕುಲೀರೇಣ ಸಮಃ ಸಲಿಲಸ್ಥಃ ಪ್ರಕೀರ್ತಿತಃ ।
ಕೇದಾರವಾಪೀಪುಲಿನವಿವಿಕ್ತಾವನಿರೇವ ಚ ॥ ೫೧ ॥

ಸಿಂಹಸ್ತು ಪರ್ವತಾರಣ್ಯದುರ್ಗಕಂದರಭೂಮಿಷು ।
ವಸತೇ ವ್ಯಾಧಪಲ್ಲೀಷು ಗಹ್ವರೇಷು ಗುಹಾಸು ಚ ॥ ೫೨ ॥

ವ್ರೀಹಿ ಪ್ರದೀಪಿಕಕರಾ ಭಾವಾರೂಢಾ ಚ ಕನ್ಯಕಾ ।
ಚರತೇ ಸ್ತ್ರೀ ರತಿಸ್ಥಾನೇ ವಸತೇ ನಡ್ವಲೇಷು ಚ ॥ ೫೩ ॥

---

೪೮. ವೃಷಭರಾಶಿಯು ಎತ್ತಿನ ಆಕಾರವಾಗಿರುತ್ತದೆ. ಅದು ಗೋಕುಲದಲ್ಲಿ ಸಂಚರಿಸುತ್ತದೆ. ವ್ಯವಸಾಯಗಾರರೂ ಪರ್ವತವಿರುವ ಪ್ರದೇಶಗಳೂ ಅದಕ್ಕೆ ಆವಾಸಸ್ಥಾನ.

೪೯-೫೦. ಶಯ್ಯೆ (ಹಾಸಿಗೆ) ಆಸನ ಇವುಗಳನ್ನು ಆಶ್ರಯಿಸಿ ಸ್ತ್ರೀಪುರುಷರ ಯುಗ್ಮಕ್ಕೆ ಸಮಾನವಾದ ಆಕಾರವನ್ನು ಹೊಂದಿ ವೀಣಾಧಾರಿಯಾಗಿ ಮಿಥುನರಾಶಿ ಇರುತ್ತದೆ. ಇದಕ್ಕೆ ಧನಿಕರೇ ಆಶ್ರಯ. ಸಂಗೀತ ನೃತ್ಯ ಮೊದಲಾದ ಕಲಾಭಿಜ್ಞ ರಲ್ಲಿ ಇದು ಸಂಚರಿಸುತ್ತದೆ. ಇದು ಸ್ತ್ರೀಪುರುಷರ ಉಭಯಾತ್ಮಕವಾದ ಹರನ ದೇಹ.

೫೧-೫೩. ಕರ್ಕಾಟಕವು ನಳ್ಳಿಗೆ (ಏಡಿ) ಸಮಾನವಾದ ಆಕಾರವುಳ್ಳದ್ದು. ಜಲವು ಅದಕ್ಕೆ ಆವಾಸಸ್ಥಾನ. ಗದ್ದೆ, ಭಾವಿ, ಮರಳುಪ್ರದೇಶ, ಜನರಹಿತವಾದ ಭೂಮಿ ಇವು ಇದರ ಸಂಚಾರಸ್ಥಾನಗಳು. ಸಿಂಹವು ಪರ್ವತ, ಅರಣ್ಯ, ದುರ್ಗ ಪ್ರದೇಶ, ಗುಹೆಗಳು ಇಲ್ಲಿ ವಾಸಮಾಡುತ್ತದೆ. ಬೇಡರಹಳ್ಳಿ, ಗುಹೆ ಇವುಗಳು ಇದರ

---

* ಇಲ್ಲಿ ಧನಿಕಸ್ಯ ಎಂದು ಪಾಠವಿರಬೇಕೆಂದು ತೋರುತ್ತದೆ.

**ತುಲಾಪಾಣಿಶ್ಚ ಪುರುಷೋ ವೀಥ್ಯಾಪಣವಿಚಾರಕಃ ।**
**ನಗರಾಧ್ವನಿ ಶಾಲಾಸು ವಸತೇ ತತ್ರ ನಾರದ** ॥ ೫೪ ॥

**ಶ್ವಭ್ರವಲ್ಮೀಕಸಂಚಾರೀ ವೃಶ್ಚಿಕೋ ವೃಶ್ಚಿಕಾಕೃತಿಃ ।**
**ವಿಷಗೋಮಯಕೀಟಾದಿ ಪಾಷಾಣಾದಿಷು ಸಂಸ್ಥಿತಃ** ॥ ೫೫ ॥

**ಧನುಸ್ತುರಂಗಜಘನೋ ದೀಪ್ಯಮಾನೋ ಧನುರ್ಧರಃ ।**
**ವಾಜಿ ಶೂರಾಸ್ತ್ರವಿದ್ವೀರಃ ಸ್ಥಾಯೀ ಗಜರಥಾದಿಷು** ॥ ೫೬ ॥

**ಮೃಗಾಸ್ಯೋ ಮಕರೋ ನಾಮ ವೃಷಸ್ಕಂಧೇಕ್ಷಣೋ ಗಜಃ ।**
**ಮಕರೋಽಸೌ ನದೀಚಾರೀ ವಸತೇ ಚ ಮಹೋದಧೌ** ॥ ೫೭ ॥

**ರಿಕ್ತಕುಂಭಶ್ಚ ಪುರುಷಃ ಸ್ಕಂಧಚಾರೀ ಜಲಾಪ್ಲುತಃ ।**
**ದ್ಯೂತಶಾಲಾಚರಃ ಕುಂಭಃ ಸ್ಥಾಯೀ ಶೌಂಡಿಕಸದ್ಮಸು** ॥ ೫೮ ॥

---

ಸಂಚಾರಸ್ಥಾನಗಳು. ಕನ್ಯಾರಾಶಿಯು ಸ್ತ್ರೀಯರ ಸುಖಸ್ಥಾನದಲ್ಲಿ ವಾಸಿಸುತ್ತದೆ. ಭತ್ತ, ದೀಪಧಾರಿಣಿಯಾದ ಸ್ತ್ರೀ, ಮನುಷ್ಯರ ಅಂತಃಕರಣ, ಹುಲ್ಲಿನಿಂದ ಕೂಡಿರುವ ಪ್ರದೇಶ ಇವು ಇದರ ಸಂಚಾರಸ್ಥಾನಗಳು.

೫೪-೫೬. ತುಲಾರಾಶಿಯು ತಕ್ಕಡಿಯುಳ್ಳ ಪುರುಷನ ಆಕಾರವಾಗಿರುತ್ತದೆ. ನಗರದ ಮಾರ್ಗದಲ್ಲೂ ದೊಡ್ಡಶಾಲೆಗಳಲ್ಲೂ ಅದರ ವಾಸ. ಮಾರ್ಗ, ಅಂಗಡಿ ಇವು ಇದರ ಸಂಚಾರಸ್ಥಾನ. ವೃಶ್ಚಿಕವು ಚೇಳಿನ ಆಕಾರವುಳ್ಳದ್ದು. ವಿಷ, ಗೋಮಯ (ಸಗಣಿ) ಕ್ರಿಮಿಗಳು, ಕಲ್ಲುಗಳು ಇವು ಇದರ ವಾಸಸ್ಥಾನ. ಹಳ್ಳ, ಹುತ್ತ ಇವುಗಳು ಸಂಚಾರಸ್ಥಾನ. ಧನೂರಾಶಿಯು ಕುದುರೆಯಂತೆ ಸಣ್ಣ ಮಧ್ಯಭಾಗವುಳ್ಳ ತೇಜಸ್ವಿಯಾದ ಧನುರ್ಧಾರಿಯ ಆಕಾರವುಳ್ಳದ್ದು. ಆನೆ, ರಥ ಮುಂತಾದುವು ಇದರ ಸಂಚಾರ ಸ್ಥಾನ. ಕುದುರೆ, ಶೂರ, ಅಸ್ತ್ರವಿದ್ಯೆಯುಳ್ಳ ಪುರುಷ ಇವರಲ್ಲಿ ವಾಸಿಸುತ್ತದೆ.

೫೭-೫೮. ಮಕರರಾಶಿಯು ಜಿಂಕೆಯ ಮೂತಿಯಂತೆ ಮುಖವುಳ್ಳ, ಎತ್ತಿನ ಭುಜದಂತೆ ಭುಜವುಳ್ಳ ಎತ್ತಿನಂತಹ ಕಣ್ಣುಳ್ಳ ಆನೆಯಂತಿರುವದು. ಅದರ ಸಂಚಾರ ನದಿಯಲ್ಲಿ. ಅದರ ವಾಸಸ್ಥಾನವು ಮಹಾಸಮುದ್ರ. ಮತ್ತು ಕುಂಭ ರಾಶಿಯು ನೀರಿಲ್ಲದ ಗಡಿಗೆಯನ್ನು ಹೊಂದಿ ಭುಜಗಳಿಂದ ಸಂಚರಿಸುವ ಮನುಷ್ಯನಂತಿರುವದು. ನೀರಿನಿಂದ ತೊಯ್ದುಹೋದ ಶರೀರ, ಜೂಜಿನ ಶಾಲೆಗಳಲ್ಲಿ ಇದಕ್ಕೆ ಸಂಚಾರ. ಪಡಖಾನೆಗಳಲ್ಲಿ ಇದರ ವಾಸ.

ಮೀನದ್ವಯಮಥಾಸಕ್ತಂ ಮೀನಸ್ತೀರ್ಥಾಬ್ಧಿಸಂಚರಃ ।
ವಸತೇ ಪುಣ್ಯದೇಶೇಷು ದೇವಬ್ರಾಹ್ಮಣಸದ್ಮಸು ॥ ೫೯ ॥

ಲಕ್ಷಣಾ ಗದಿತಾಸ್ತುಭ್ಯಂ ಮೇಷಾದೀನಾಂ ಮಹಾಮುನೇ ।
ನ ಕಸ್ಯಚಿತ್ತ್ವಯಾಖ್ಯೇಯಂ ಗುಹ್ಯಮೇತತ್ಪುರಾತನಂ ॥ ೬೦ ॥

ಏತನ್ಮಯಾ ತೇ ಕಥಿತಂ ಸುರರ್ಷೇ
ಯಥಾ ತ್ರಿನೇತ್ರಃ ಪ್ರಮಮಂಥ ಯಜ್ಞಂ ।
ಪುಣ್ಯಂ ಪುರಾಣಂ ಪರಮಂ ಪವಿತ್ರ
ಮಾಖ್ಯಾತವಾನ್ಪಾಪಹರಂ ಶಿವಂ ಚ ॥ ೬೧ ॥

ಇತಿ ಶ್ರೀ ವಾಮನ ಪುರಾಣೇ ಹರಲಲಿತೋ ನಾಮ
ಪಂಚಮೋಽಧ್ಯಾಯಃ

---

೫೯. ಮೀನರಾಶಿಯು ಪರಸ್ಪರಸೇರಿಕೊಂಡಿರುವ ಮೀನದ್ವಯದ ಆಕಾರವುಳ್ಳದ್ದು. ತೀರ್ಥಗಳಲ್ಲಿಯೂ, ಸಮುದ್ರಗಳಲ್ಲಿಯೂ ಇದಕ್ಕೆ ಸಂಚಾರ. ಪುಣ್ಯಕ್ಷೇತ್ರಗಳಲ್ಲಿಯೂ ದೇವಬ್ರಾಹ್ಮಣರ ಮನೆಯಲ್ಲಿಯೂ ಇದರ ವಾಸ.

೬೦-೬೧. ಎಲೈ ಮಹರ್ಷಿಯೇ, ಈ ಮೇಷಾದಿಗಳ ಲಕ್ಷಣವೆಲ್ಲವನ್ನೂ ನಿನಗೆ ಹೇಳಿರುತ್ತೇನೆ. ಪರಮಪ್ರಾಚೀನವಾದ ಈ ರಹಸ್ಯವನ್ನು ಯಾರಿಗೂ ಹೇಳಕೂಡದು. ಇಂತಹ ತ್ರಿನೇತ್ರನ ಸಾಮರ್ಥ್ಯಸೂಚಕವಾದ ದಕ್ಷಯಜ್ಞ ಧ್ವಂಸ ವೃತ್ತಾಂತವನ್ನು ನಿನಗೆ ಹೇಳಿದ್ದೇನೆ. ಈ ಪುರಾತನವಾದ ಕಥೆಯು ಪವಿತ್ರವೂ ಪುಣ್ಯಕರವೂ ಮಂಗಲಪ್ರದವೂ ಆಗಿರುವದ್ದರಿಂದ ಇದನ್ನು ಕೇಳಿದ ನೀನೂ ಹೇಳಿದ ನಾನೂ ಧನ್ಯರೆಂದು ತಾತ್ಪರ್ಯ.

ಇಲ್ಲಿಗೆ ಶ್ರೀ ವಾಮನಪುರಾಣದಲ್ಲಿ ಹರಲಲಿತವೆಂಬ
ಐದನೆಯ ಅಧ್ಯಾಯವು ಮುಗಿದಿದೆ.

## ಅಧ್ಯಾಯಾರ್ಥ ಸಂಗ್ರಹ

ಈ ಅಧ್ಯಾಯದಲ್ಲಿ ವೀರಭದ್ರನ ಪರಾಜಯದಿಂದ ಕೋಪಾವಿಷ್ಟನಾದ ಶಂಕರನು ದಕ್ಷಯಜ್ಞದ ನಾಶಕ್ಕಾಗಿ ತಾನೇ ಯಜ್ಞಶಾಲೆಗೆ ಪ್ರವೇಶಿಸಿದನು. ಅಲ್ಲಿದ್ದ ದೇವತೆಗಳೆಲ್ಲರೂ ಪರಾಜಿತರಾಗಲಾಗಿ ಆ ಯಜ್ಞವು ಮೃಗರೂಪಧಾರಿಯಾಗಿ ಆಕಾಶಕ್ಕೆ ಓಡಿತು. ಅಲ್ಲಿಯೂ ಬಿಡದೆ ಕಾಲರೂಪಿಯಾಗಿ ಆಕಾಶವನ್ನೆಲ್ಲಾ ಆವರಿಸಿ ಪಾಶುಪತ ಬಾಣದಿಂದ ಆ ಯಜ್ಞಮೃಗವನ್ನು ನಿಶ್ಚೇತನವನ್ನಾಗಿ ಮಾಡಿ ಪರಾಭವಗೊಳಿಸಿದನು. ಅನಂತರ ನಾರದರ ಉಪಪ್ರಶ್ನೆಗೆ ಉತ್ತರವಾಗಿ ಮೇಷಾದಿರಾಶಿಗಳನ್ನು ಕಾಲಪುರುಷನ ಅವಯವಗಳೆಂದು ವರ್ಣಿಸಿ ಅವುಗಳ ಸ್ವರೂಪವನ್ನೂ ಲಕ್ಷಣಸಂಚಾರಸ್ಥಾನಗಳನ್ನೂ ವಿವರಿಸಲಾಯಿತು.

॥ ಶ್ರೀಃ ॥

# ಶ್ರೀವಾಮನಪುರಾಣಂ

## ಷಷ್ಠೋಽಧ್ಯಾಯಃ

॥ ಪುಲಸ್ತ್ಯ ಉವಾಚ ॥

ಬಹ್ವೃಚೋ ಬ್ರಾಹ್ಮಣೋ ಯೋಽಸೌ ಧರ್ಮೋ ದಿವ್ಯವಪುಃ ಸದಾ ।
ತಸ್ಯ ಭಾರ್ಯಾ ತ್ವಹಿಂಸಾ ಚ ತಸ್ಯಾಮಜನಯತ್ಸುತಾನ್ ॥ ೧ ॥

ಹರಿಂ ಕೃಷ್ಣಂ ಚ ದೇವರ್ಷೇ ನರನಾರಾಯಣೌ ತಥಾ ।
ಯೋಗಾಭ್ಯಾಸರತೌ ನಿತ್ಯಂ ಹರಿಕೃಷ್ಣೌ ಬಭೂವತುಃ ॥ ೨ ॥

ನರನಾರಾಯಣೌ ಚೈವ ಜಗತೋ ಹಿತಕಾಮ್ಯಯಾ ।
ತಪ್ಯೇತಾಂ ಚ ತಪಃ ಸೌಮ್ಯೌ ಪುರಾಣಾವೃಷಿಸತ್ತಮೌ ॥ ೩ ॥

---

## ಆರನೆಯ ಅಧ್ಯಾಯವು

೧-೩. ಪುಲಸ್ತ್ಯರು ಹೇಳುತ್ತಾರೆ: ಬಹ್ವೃಚಗೋತ್ರದಲ್ಲಿ ಜನಿಸಿದ ಒಬ್ಬ ಬ್ರಾಹ್ಮಣನು ದಿವ್ಯದೇಹವನ್ನು ಧರಿಸಿದ ಧರ್ಮದಂತೆ ಪ್ರಕಾಶಿಸುತ್ತಿದ್ದನು. ಅವನಿಗೆ ಅಹಿಂಸಾ ಎಂಬ ತನ್ನ ಧರ್ಮ ಪತ್ನಿಯಲ್ಲಿ ಹರಿ ಕೃಷ್ಣ ನರ ನಾರಾಯಣರೆಂಬ ನಾಲ್ಕು ಮಕ್ಕಳು ಜನಿಸಿದರು. ಅವರಲ್ಲಿ ಹರಿ ಕೃಷ್ಣರು ಯೋಗಾಭ್ಯಾಸದಲ್ಲಿ ನಿರತರಾದರು. ನರನಾರಾಯಣರು ಪುರಾತನರಾದ ಮಹರ್ಷಿಗಳಾಗಿ ಜಗತ್ತಿನ ಹಿತಕ್ಕಾಗಿ ಸಾತ್ವಿಕ ವೃತ್ತಿಯಿಂದ ತಪಸ್ಸನ್ನು ಮಾಡಿದರು.

ಪ್ರಾಲೇಯಾದ್ರಿಂ ಸಮಾಗಮ್ಯ ತೀರ್ಥೇ ಬದರಿಕಾಶ್ರಮೇ।
ಗೃಣಂತೌ ತತ್ಪರಂ ಬ್ರಹ್ಮ ಗಂಗಾಯಾ ವಿಪುಲೇ ತಟೇ ॥ ೪ ॥

ನರನಾರಾಯಣಾಭ್ಯಾಂ ಚ ಜಗದೇತಚ್ಚರಾಚರಂ।
ತಾಪಿತಂ ತಪಸಾ ಬ್ರಹ್ಮನ್ಸಂಕ್ಷೋಭಂ ಪರಮಂ ಯಯೌ ॥ ೫ ॥

ಸಂಕ್ಷುಬ್ಧಸ್ತಪಸಾ ತಾಭ್ಯಾಂ ಕ್ಷೋಭಣಾಯ ಶತಕ್ರತುಃ।
ರಂಭಾಮಪ್ಸರಸಾಂ ಶ್ರೇಷ್ಠಾಂ ಪ್ರೈಷಯತ್ಸಮಹಾಶ್ರಮಂ ॥ ೬ ॥

ಕಂದರ್ಪಶ್ಚ ಸುದುರ್ಧರ್ಷಶ್ಚೂತಾಂಕುರಮಹಾಯುಧಃ।
ಸಮಂ ಸಹಚರೇಣೈವ ವಸಂತೇನಾಶು ಸಂಗತಃ ॥ ೭ ॥

ತತೋ ಮಾಧವಕಂದರ್ಪೌ ಸಾ ಚೈವಾಪ್ಸರಸಾಂ ವರಾ।
ಬದರ್ಯಾಶ್ರಮಮಾಗಮ್ಯ ವಿಚಿಕ್ರೀಡುರ್ಯಥೇಚ್ಛಯಾ ॥ ೮ ॥

ತತೋ ವಸಂತೇ ಸಂಪ್ರಾಪ್ತೇ ಕಿಂಶುಕಾ ಜ್ವಲನಪ್ರಭಾಃ।
ನಿಷ್ಪತ್ರಾಃ ಸತತಂ ರೇಜುಃ ಶೋಭಯಂತೋ ಧರಾತಲಂ ॥ ೯ ॥

---

೪-೬. ಹಿಮವತ್ಪರ್ವತಕ್ಕೆ ಹೋಗಿ ಅಲ್ಲಿರುವ ಪುಣ್ಯಕರವಾದ ಬದರಿಕಾಶ್ರಮದಲ್ಲಿ ಗಂಗಾನದಿಯ ವಿಶಾಲವಾದ ದಡವನ್ನು ಆಶ್ರಯಿಸಿ ಉಚ್ಚಾರಣಧ್ಯಾನಾದಿಗಳಿಂದ ಪರಬ್ರಹ್ಮನನ್ನು ಸೇವಿಸುತ್ತಾ ತಪಸ್ಸನ್ನು ಉಗ್ರವಾಗಿ ಮಾಡಿದರು ಎಲೈ ಋಷಿಯೇ, ಅವರ ಆ ತಪಸ್ಸಿನಿಂದ ಜಗತ್ತೆಲ್ಲವೂ ಬಹಳ ಸಂತಾಪಗೊಂಡು ಕ್ಷುಭಿತವಾಯಿತು. ಅವರ ಆ ಮಹಾತಪಸ್ಸಿನಿಂದ ಕಳವಳ ಹೊಂದಿದ ಇಂದ್ರನು ಆ ತಪಸ್ಸನ್ನು ತಡೆಯಲು ಅವರ ಆಶ್ರಮಕ್ಕೆ ರಂಭಾ ಎಂಬ ಪ್ರಸಿದ್ಧಳಾದ ಅಪ್ಸರೆಯನ್ನು ಕಳುಹಿಸಿದನು.

೭-೯. ಮಾವಿನ ಚಿಗುರೆಂಬ ಮಹಾಯುಧವನ್ನು ಹೊಂದಿ ಮನ್ಮಥನೂ ಇಂದ್ರನ ಆಜ್ಞೆಯಿಂದ ತನ್ನ ಸ್ನೇಹಿತನಾದ ವಸಂತನೊಡನೆ ಅಲ್ಲಿಗೆ ಬಂದು ರಂಭೆಯೊಡನೆ ಸೇರಿದನು. ಅನಂತರ ಆ ಮೂವರೂ ಅಲ್ಲಿ ಸೇರಿ ಇಚ್ಛೆ ಬಂದಂತೆ ವಿವಿಧವಾದ ವಿಲಾಸಗಳನ್ನಾಡತೊಡಗಿದರು. ವಸಂತನ ಸಾನ್ನಿಧ್ಯವುಂಟಾದವೊಡನೆಯೇ ಅಲ್ಲಿದ್ದ ಮುತ್ತುಗದ ಮರಗಳು ಹಳೆಯ ಎಲೆಗಳನ್ನೆಲ್ಲಾ ಉದುರಿಸಿ ಶೃಂಗಾರಿಗಳಿಗೆ ಮೋಹಕವಾದ ಕೆಂಡದಂತೆ ಕೆಂಪಾದ ಹೂವುಗಳಿಂದ ಕೂಡಿ ಭೂಮಿಯನ್ನು ಸೊಗಸುಗೊಳಿಸುತ್ತಾ ಪ್ರಕಾಶಿಸಿದವು.

**ಶಿಶಿರಂ ನಾಮ ಮಾತಂಗಂ ವಿದಾರ್ಯರ್ಜ ನಖರೈರಿವ।**
**ವಸಂತಕೇಸರೀಪ್ರಾಪ್ತಃ ಪಲಾಶಕುಸುಮೈರ್ಮುನೇ ॥ ೧೦ ॥**

**ಮಯಾ ತುಷಾರೈಶ್ಚ ಕರೀ ನಿರ್ಜಿತಃ ಸ್ವೇನ ತೇಜಸಾ।**
**ತಮೇವಮುಹಸಲ್ಲೋಧ್ರೈರ್ವಸಂತಃ ಕುಂದಕುಡ್ಮಲೈಃ ॥ ೧೧ ॥**

**ವನಾನಿ ಕರ್ಣಿಕಾರಾಣಾಂ ಪುಷ್ಪಿತಾನಿ ವಿರೇಜಿರೇ।**
**ಯಥಾ ನರೇಂದ್ರಪತ್ರಾಣಿ ಕನಕಾಭರಣಾನಿ ವೈ ॥ ೧೨ ॥**

**ತೇಷಾಮನು ತಥಾನೀಪಾಃ ಕಿಂಕರಾ ಇವ ರೇಜಿರೆ।**
**ಸ್ವಾಮಿಸಂಲಬ್ಧಸಂಮಾನಾ ಭೃತ್ಯಾ ರಾಜಸುತಾ ಇವ ॥ ೧೩ ॥**

**ರಕ್ತಾ ಶೋಕವನಾ ಭಾಂತಿ ಪುಷ್ಪಿತಾಃ ಸಹಸೋಜ್ವಲಾಃ।**
**ಭೃತ್ಯಾ ವಸಂತ ನೃಪತೇಃ ಸಂಗ್ರಾಮಾಸೃಕ್ಷತಾ ಇವ ॥ ೧೪ ॥**

**ಭೃಂಗವೃಂದಾಃ ಪಿಂಜರಿತಾ ರಾಜಂತೇ ಗಹನೇ ವನೆ।**
**ಪುಲಕಾಭಿವೃತಾ ಯದ್ವತ್ಸಜ್ಜನಾಃ ಸುಹೃದಾಗಮೆ ॥ ೧೫ ॥**

**ಮಂಜರೀಭಿರ್ವಿರಾಜಂತೇ ನದೀಕೂಲೇಷು ವೇತಸಾಃ।**
**ವಕ್ತುಕಾಮಾ ಇವಾಂಗುಲ್ಯಾ ಕೋಽಸ್ಮಾಕಂ ಸದೃಶೋ ನಗಃ ॥ ೧೬ ॥**

---

೧೦-೧೧. ಎಲೈ ಮುನಿಯೇ, ಶಿಶಿರಋತುವೆಂಬ ಆನೆಯನ್ನು ಮುತ್ತುಗದ ಹೂವುಗಳೆಂಬ ಉಗುರುಗಳಿಂದ ಸೀಳಿ ವಸಂತವೆಂಬ ಸಿಂಹವು ವಿಜಯಶಾಲಿಯಾಗಿ ಮೆರೆಯಹತ್ತಿತು. ನಾನು ಹಿಮದಿಂದ ಆನೆಗಳನ್ನೂ ನಡುಗಿಸಿ ವಿಜಯಗಳಿಸಿದ್ದೇನೆ ಎಂದು ಮೆರೆಯುವ ಶಿಶಿರಋತುವನ್ನು ವಸಂತವು ತನ್ನ ಗೋರಂಟಿಹೂವುಗಳಿಂದಲೂ ಮಲ್ಲಿಯ ಮಗ್ಗುಗಳಿಂದಲೂ ಹಾಸ್ಯಮಾಡಿ ನಕ್ಕಿತು. [ಶಿಶಿರಋತುವು ಇತರರಿಗೆ ಹಿಂಸಕವಾಗಿ ಹೊಂದಿದ ಯಶಸ್ಸಿಗಿಂತಲೂ ಸೌಂದರ್ಯದಿಂದ ಲೋಕವನ್ನು ಪರವಶಗೊಳಿಸಿ ತಾನು ಹೊಂದಿರುವ ಯಶಸ್ಸೇ ಅತ್ಯುತ್ತಮವೆಂದು ವಸಂತನಿಗೆ ತಾತ್ಪರ್ಯ.]

೧೨-೧೩. ಕರ್ಣಿಕಾರ (ಕಣಿಗಲೆ) ಗಿಡಗಳುಳ್ಳ ವನಪ್ರದೇಶವೆಲ್ಲವೂ ಕೆಂಪಾದ ಹೂವುಗಳಿಂದ ರಾಜರುಗಳ ಕುದುರೆ ಮೊದಲಾದ ವಾಹನಗಳು ಚಿನ್ನದ ಒಡವೆಗಳಿಂದ ಲೋಪಾದಿಯಲ್ಲಿ ಪ್ರಕಾಶಿಸಿದವು. ರಾಜರಿಂದ ಸನ್ಮಾನಿತರಾದ ಭೃತ್ಯರು ರಾಜಪುತ್ರರಂತೆ ಹೇಗೆ ಪ್ರಕಾಶಿಸುತ್ತಾರೋ ಹಾಗೆ ಆ ಕಣಿಗಲೆ ಗಿಡಗಳನ್ನು ಆಶ್ರಯಿಸಿಕೊಂಡು ಸೇವಕರಂತಿರುವ ನೀಪ (ಕದಂಬ) ವೃಕ್ಷಗಳೂ ಉಜ್ವಲವಾಗಿ ಮೆರೆದವು,

೧೪-೧೬. ಕೆಂಪಾದ ಅಶೋಕವೃಕ್ಷಗಳು ಪುಷ್ಪಗಳಿಂದ ಪ್ರಕಾಶಿಸುತ್ತಲಿವೆ. ಅವು ವಸಂತನೆಂಬ ಧೊರೆಯ ಮುಂದೆ ಯುದ್ಧದಲ್ಲಿ ರಕ್ತದಿಂದ ತೋಯಲ್ಪಟ್ಟ

ರಕ್ತಾ ಶೋಕಕರಾ ತನ್ವೀ ದೇವರ್ಷೇ ಕಿಂಶುಕಾಂಘ್ರಿಕಾ ।
ನೀಲಾ ಶೋಕಕರಾ ಶ್ಯಾಮಾ ವಿಕಾಸಿ ಕಮಲಾನನಾ ॥ ೧೭ ॥

ನೀಲೇಂದೀವರನೇತ್ರಾ ಚ ಬ್ರಹ್ಮನ್ಬಿಲ್ವಫಲಸ್ತನೀ ।
ಪ್ರೋತ್ಫುಲ್ಲಕುಂದದಶನಾ ಮಂಜರೀಕರಶೋಭಿತಾ ॥ ೧೮ ॥

ಬಂಧುಜೀವಾಧರಾ ಶುಭ್ರಸಿಂಧುವಾರನವಾಂಕುರಾ ।
ಪುಂಸ್ಕೋಕಿಲಸ್ವನಾ ದಿವ್ಯಾ ಕಂಕೋಲವಸನಾ ಶುಭಾ ॥ ೧೯ ॥

ಬರ್ಹಿವೃಂದಕಲಾಪಾ ಚ ಸಾರಸಸ್ವರನೂಪುರಾ ।
ಪ್ರಾಗ್ವಂಶರಸನಾ ಬ್ರಹ್ಮನ್ಮತ್ತಹಂಸಗತಿಸ್ತಥಾ ॥ ೨೦ ॥

ಪುತ್ರಜೀವಾಂಶುಕಾಸಂಗರೋಮರಾಜಿವಿರಾಜಿತಾ ।
ವಸಂತಲಕ್ಷ್ಮೀಃ ಸಂಪ್ರಾಪ್ತಾ ತಸ್ಮಿನ್ಬದರಿಕಾಶ್ರಮೆ ॥ ೨೧ ॥

---

ಭೃತ್ಯರೋ ಎಂಬಂತೆ ತೋರುತ್ತಿವೆ. ದುಂಬಿಗಳೆಲ್ಲವೂ ಹೂವುಗಳ ಧೂಳಿಗಳಿಂದ ಹೊಂಬಣ್ಣವಾಗಿ ಸ್ನೇಹಿತರ ಸಮಾಗಮದಿಂದ ರೋಮಾಂಚಿತರಾದ ಸಜ್ಜನರಂತೆ ಪ್ರಕಾಶಿಸುತ್ತಿವೆ. ನದಿಯ ದಡದಲ್ಲಿರುವ ನೀರಂಜಿಮರಗಳು ಜೋಲಾಡುವ ಹೂವಿನ ಗೊಂಚಲುಗಳಿಂದ ನನಗೆ ಸಮಾನವಾದ ಮರವು ಯಾವುದಿದೆ ಎಂದು ಬೆರಳಿನಿಂದ ತೋರಿಸಿ ಹೇಳುತ್ತಿವೆಯೋ ಎಂಬಂತೆ ಪ್ರಕಾಶಿಸುತ್ತಿವೆ.

೧೭-೧೯. ಇದೇ ಪ್ರಕಾರವಾದ ಕೆಂಪಾದ ಅಶೋಕವೃಕ್ಷಗಳೆಂಬ ಕೈಗಳಿಂದಲೂ ಮುತ್ತುಗದ ಮರಗಳೆಂಬ ಕಾಲುಗಳಿಂದಲೂ, ಅರಳಿರುವ ಕಮಲಗಳೆಂಬ ಮುಖಗಳಿಂದಲೂ, ಕಪ್ಪುಕಮಲಗಳೆಂಬ ಕಣ್ಣುಗಳಿಂದಲೂ, ಬಿಲ್ವಫಲಗಳೆಂಬ ಸ್ತನಗಳಿಂದಲೂ, ಕುಂದಪುಷ್ಪಗಳೆಂಬ ಹಲ್ಲುಗಳಿಂದಲೂ, ಬಂದೂಕಪುಷ್ಪವೆಂಬ ತುಟಿಯಿಂದಲೂ, ಬಿಳುಪಾದ ನಿರ್ಗುಂಡಿಮುಗ್ಗುಗಳೆಂಬ ಹಲ್ಲುಗಳ ಅಗ್ರಭಾಗಗಳಿಂದಲೂ, ಪುರುಷಕೋಕಿಲೆಗಳ ಧ್ವನಿಯೆಂಬ ಧ್ವನಿಯಿಂದಲೂ, ಕಂಕೋಲವೃಕ್ಷಗಳೆಂಬ ಶುಭ್ರವಸ್ತ್ರದಿಂದಲೂ,

೨೦-೨೧. ನವಿಲುಗಳ ಸಮೂಹವೆಂಬ ಅಲಂಕಾರದಿಂದಲೂ, ಸಾರಸ (ಕೊಕ್ಕರೆ) ಪಕ್ಷಿಗಳ ಸ್ವರವೆಂಬ ನೂಪುರ (ಕಾಲುಕಡಗ) ದಿಂದಲೂ, ಪ್ರಾಗ್ವಂಶವೆಂಬ ಲತೆಯ ವಡ್ಯಾಣದಿಂದಲೂ, ಮತ್ತವಾದ ರಾಜಹಂಸಗಳ ಗಮನವೆಂಬ ನಡಿಗೆಯಿಂದಲೂ, ಪುತ್ರಜೀವವೆಂಬ ರೋಮರಾಜಿಗಳಿಂದಲೂ (ನಾಭಿಸ್ಥಾನದ ರೋಮ

**ತತೋ ನಾರಾಯಣೋ ದೃಷ್ಟ್ವಾ ಆಶ್ರಮಸ್ಯಾನವದ್ಯತಾಂ।**
**ಸಮೀಕ್ಷ್ಯ ಸ ದಿಶಃ ಸರ್ವಾಸ್ತತೋಽನಂಗಮಪಶ್ಯತ ॥ ೨೨ ॥**

**ನಾರದ ಉವಾಚ**

**ಕೋಽಸಾವನಂಗೋ ಬ್ರಹ್ಮರ್ಷೇ ತಸ್ಮಿನ್ ಬದರಿಕಾಶ್ರಮೇ।**
**ಯಂ ದದರ್ಶ ಜಗನ್ನಾಥೋ ದೇವೋ ನಾರಾಯಣೋಽವ್ಯಯಃ ॥ ೨೩ ॥**

**ಪುಲಸ್ತ್ಯ ಉವಾಚ**

**ಕಂದರ್ಪೋ ಹರ್ಷತನಯೋ ಯೋಽಸೌ ಕಾಮೋ ನಿಗದ್ಯತೇ।**
**ಸ ಶಂಕರೇಣ ಸಂದಗ್ಧೋ ಹ್ಯನಂಗತ್ವಮುಪಾಗತಃ ॥ ೨೪ ॥**

**ನಾರದ ಉವಾಚ**

**ಕಿಮರ್ಥಂ ಕಾಮದೇವೋಽಸೌ ದೇವದೇವೇನ ಶಂಭುನಾ।**
**ದಗ್ಧಸ್ತು ಕಾರಣೇ ಕಸ್ಮಿನ್ನೇತದ್ವ್ಯಾಖ್ಯಾತುಮರ್ಹಸಿ ॥ ೨೫ ॥**

---

ಪಂಕ್ತಿ) ಆ ಬದರಿಕಾಶ್ರಮದಲ್ಲಿ ವಸಂತಲಕ್ಷ್ಮಿಯು ಕಳಕಳಿಸಿದಳು. (ಇಲ್ಲಿ ವಸಂತ ಋತುವಿನಿಂದ ಉಂಟಾದ ಶೋಭೆಯನ್ನು ಲಕ್ಷ್ಮಿಯೆಂದೂ, ಅದಕ್ಕೆ ಕಾರಣವಾದ ಫಲಪುಷ್ಪಸಮೃದ್ಧಿಯನ್ನು ಕವಿ ಸಂಪ್ರದಾಯಕ್ಕೆ ತಕ್ಕಂತೆ ಆ ಲಕ್ಷ್ಮಿಯ ಅವಯವಗಳೆಂದೂ ವರ್ಣಿಸಿರುತ್ತಾರೆ.)

೨೨. ಅನಂತರದಲ್ಲಿ ನಾರಾಯಣನು ವಸಂತಲಕ್ಷ್ಮಿಯ ಸಂಬಂಧದಿಂದ ಉಂಟಾದ ಆಶ್ರಮದ ರಮಣೀಯತೆಯನ್ನು ನೋಡಿ ಎಲ್ಲಾ ದಿಕ್ಕುಗಳನ್ನೂ ಹಾಗೆಯೇ ನಿರೀಕ್ಷಿಸಿ ಅಲ್ಲಿದ್ದ ಮನ್ಮಥನನ್ನು ನೋಡಿದನು.

೨೩. ಎಲೈ ಬ್ರಹ್ಮರ್ಷಿಯೇ, ಆ ಬದರಿಕಾಶ್ರಮದಲ್ಲಿ ನಾರಾಯಣನಿಂದ ನೋಡಲ್ಪಟ್ಟ ಅನಂಗನೆಂಬುವನಾರು, ಅವನು ಅನಂಗನಾದುದು ಹೇಗೆ ಎಂದು ನಾರದರು ಪ್ರಶ್ನೆ ಮಾಡುತ್ತಾರೆ.

೨೪. ಕಾಮನೆಂದು ಪ್ರಸಿದ್ಧನಾಗಿರುವ ಈ ಕಂದರ್ಪನು ಹರ್ಷನಪುತ್ರನು ಇವನು ಶಂಕರನಿಂದ ಸುಡಲ್ಪಟ್ಟು ಅಂಗವಿಕಲನಾದುದರಿಂದ ಅನಂಗನೆಂದು ಹೇಳಲ್ಪಡುತ್ತಾನೆ. ಎಂದು ಪುಲಸ್ತ್ಯರು ನಾರದರ ಉಪಪ್ರಶ್ನೆಗೆ ಉತ್ತರ ಹೇಳುತ್ತಾರೆ.

೨೫. ನಾರದರು ಪುನಃ ಪ್ರಶ್ನೆ ಮಾಡುತ್ತಾರೆ. ಈ ಕಾಮದೇವನು ದೇವತೋತ್ತಮನಾದ ಶಂಕರನಿಂದ ಏತಕ್ಕೆ ಸುಡಲ್ಪಟ್ಟನು. (ಸುಡಲು ಕಾರಣವೇನು, ಮತ್ತು ಫಲವೇನು ಎಂದು ಉಭಯವಿಷಯಕ ಪ್ರಶ್ನೆ) ಇದನ್ನು ಅಪ್ಪಣೆಕೊಡಿಸಬೇಕು.

## ಪುಲಸ್ತ್ಯ ಉವಾಚ

ಯದಾ ದಕ್ಷಸುತಾ ಬ್ರಹ್ಮನ್ಸತೀ ಯಾತಾ ಯಮಕ್ಷಯಂ ।
ವಿನಾಶ್ಯ ದಕ್ಷಯಜ್ಞಂ ತಂ ವಿಚಚಾರ ತ್ರಿಲೋಚನಃ ॥ ೨೬ ॥

ತತೋ ವೃಷಧ್ವಜಂ ದೃಷ್ಟ್ವಾ ಕಂದರ್ಪಃ ಕುಸುಮಾಯುಧಃ ।
ಅಪತ್ನೀಕಂ ತದಾಸ್ತ್ರೇಣ ಉನ್ಮಾದೇನಾಭ್ಯತಾಡಯತ್ ॥ ೨೭ ॥

ತತೋ ಹರಃ ಶರೇಣಾಥ ಉನ್ಮಾದೇನಾಶು ತಾಡಿತಃ ।
ವಿಚಚಾರ ತತೋನ್ಮತ್ತಃ ಕಾನನಾನಿ ಸರಾಂಸಿ ಚ ॥ ೨೮ ॥

ಸ್ಮರನ್ಸತೀಂ ಮಹಾದೇವಸ್ತಥೋನ್ಮಾದೇನ ತಾಡಿತಃ ।
ನ ಶರ್ಮ ಲೇಭೇ ದೇವರ್ಷೇ ಬಾಣವಿದ್ಧ ಇವ ದ್ವಿಪಃ ॥ ೨೯ ॥

ತತಃ ಪಪಾತ ದೇವೇಶಃ ಕಾಲಿಂದೀಸರಿತಂ ಮುನೇ ।
ನಿಮಗ್ನೆ ಶಂಕರೇ ಚಾಪೋ ದಗ್ಧಾಃ ಕೃಷ್ಣತ್ವಮಾಗತಾಃ ॥ ೩೦ ॥

ತದಾ ಪ್ರಭೃತಿ ಕಾಲಿಂದ್ಯಾ ಭೃಂಗಾಂಜನನಿಭಂಜಲಂ ।
ಆಸ್ಯಂದತ್ಪುಣ್ಯತೀರ್ಥಾ ಸಾ ಕೇಶಪಾಶ ಇವಾವನೇಃ ॥ ೩೧ ॥

---

೨೬-೨೯. ಪುಲಸ್ತ್ಯರು ಹೇಳುತ್ತಾರೆ, ಎಲೈ ದೇವರ್ಷಿಯೇ, ದಕ್ಷಪುತ್ರಿಯಾದ ಸತೀದೇವಿಯು ಮೃತಳಾದನಂತರ ಶಂಕರನು ದಕ್ಷಯಜ್ಞವನ್ನು ಧ್ವಂಸಮಾಡಿ ಏಕಾಕಿಯಾಗಿ ಎಲ್ಲಾ ಕಡೆಯಲ್ಲೂ ಸಂಚರಿಸಲುಪಕ್ರಮಿಸಿದನು. ಆ ಪ್ರಕಾರವಲ್ಲಿರುವ ಶಂಕರನನ್ನು ನೋಡಿ ಅಪತ್ನೀಕನೆಂದು ತಿಳಿದು (ವಿಷಯಸುಖದಲ್ಲಿ ಅವನನ್ನು ತಿರುಗಿಸಲು) ಪುಷ್ಪಾಯುಧನಾದ ಮನ್ಮಥನು ಉನ್ಮಾದಾಸ್ತ್ರದಿಂದ ಅವನನ್ನು ಹೊಡೆದನು ಹಾಗೆ ಹೊಡೆಯಲ್ಪಟ್ಟ ಶಂಕರನು ಉನ್ಮತ್ತನಾಗಿ (ಹುಚ್ಚು ಹಿಡಿದವನಾಗಿ) ಅನೇಕ ಕಾಡುಗಳಲ್ಲೂ ಸರೋವರಗಳಲ್ಲೂ ಸಂಚರಿಸಿದನು. ಈ ರೀತಿ ಉನ್ಮಾದಾಸ್ತ್ರ ತಾಡಿತನಾದ ಶಂಕರನು ಸತೀದೇವಿಯನ್ನು ಸ್ಮರಿಸಿಕೊಂಡು ಸಂಚರಿಸುತ್ತಾ ಬಾಣದಿಂದ ಹೊಡೆಯಲ್ಪಟ್ಟ ಆನೆಯಂತೆ ಎಲ್ಲಿಯೂ ಸುಖಿಯಾಗಿ ನಿಲ್ಲಲಿಲ್ಲ.

೩೦-೩೧. ಅನಂತರ ಉನ್ಮಾದದಿಂದ ಸಂತಪ್ತನಾದ ಶಂಕರನು ತಾಪಶಾಂತಿಗಾಗಿ ಕಾಲಿಂದೀನದಿಯಲ್ಲಿ ಧುಮಿಕಿದನು. ಇವನು ಧುಮಿಕಿದೊಡನೆಯೇ ನದಿಯ ನೀರೆಲ್ಲವೂ ಸುಟ್ಟು ಕಪ್ಪಾಯಿತು. ಅದು ಮೊದಲು ಕಾಲಿಂದೀನದಿಯ ನೀರು ದುಂಬಿಯಂತೆಯೂ, ಕಾಡಿಗೆಯಂತೆಯೂ ಕಪ್ಪಾಗಿಹೋಯಿತು. ಪುಣ್ಯತೀರ್ಥವಾಗಿ ಹರಿಯುವ ಆ ನದಿಯು ಕಪ್ಪಾದ ಭೂದೇವಿಯ ಕೇಶಪಾಶದಂತೆ ತೋರಿತು.

ತತೋ ನದೀಷು ಪುಣ್ಯಾಸು ಸರಸ್ಸು ಚ ಸರಿತ್ಸು ಚ ।
ಪುಲಿನೇಷು ಚ ರಮ್ಯೇಷು ವಾಪೀಷು ನಲಿನೀಷು ಚ ॥ ೩೨ ॥

ಪರ್ವತೇಷು ಚ ರಮ್ಯೇಷು ಕಾನನೇಷು ಚ ಸಾನುಷು ।
ವಿಚರನ್ಸ್ವೇಚ್ಛಯಾನ್ನೈವ ಶರ್ಮ ಲೇಭೇ ಮಹೇಶ್ವರಃ ॥ ೩೩ ॥

ಕ್ಷಣಂ ಗಾಯತಿ ದೇವರ್ಷೇ ಕ್ಷಣಂ ರೋದಿತಿ ಶಂಕರಃ ।
ಕ್ಷಣಂ ಧ್ಯಾಯತಿ ತನ್ವಂಗೀಂ ದಕ್ಷಕನ್ಯಾಂ ಮನೋರಮಾಂ ॥ ೩೪ ॥

ಧ್ಯಾತ್ವಾ ಕ್ಷಣಂ ಸ್ವಪಿತಿ ಚ ಕ್ಷಣಂ ಸ್ವಪ್ನಾಯತೇ ಹರಃ ।
ಸ್ವಪ್ನೇ ತಥೇದಂ ಗದತಿ ದೃಷ್ಟ್ವಾ ದಕ್ಷಸ್ಯ ಕನ್ಯಕಾಂ ॥ ೩೫ ॥

ನಿರ್ಘೃಣೇ ತಿಷ್ಠ ಕಿಂ ಮೂಢೇ ತ್ಯಜಸೇಮಾಮನಿಂದಿತೆ ।
ಮುಗ್ಧೆ ತ್ವಯಾ ವಿರಹಿತೋ ದಗ್ಧೋಽಸ್ಮಿ ಮದನಾಗ್ನಿನಾ ॥ ೩೬ ॥

ಸತ್ಯಂ ಪ್ರಕುಪಿತಾ ದೇವಿ ಮಾಕೋಪಂ ಕುರು ಸುಂದರಿ ।
ಪಾದಪ್ರಣಾಮಾವನತಮಭಿಭಾಷಿತುಮರ್ಹಸಿ ॥ ೩೭ ॥

---

೩೨-೩೩. ಅನಂತರ ಶಂಕರನು ಪುಣ್ಯನದಿಗಳಲ್ಲಿಯೂ, ಸರೋವರಗಳಲ್ಲಿಯೂ, ರಮಣೀಯವಾದ ಮರಳುಪ್ರದೇಶದಲ್ಲಿಯೂ, ಕಮಲಗಳುಳ್ಳ ಕೊಳಗಳಲ್ಲಿಯೂ, ರಮ್ಯವಾದ ಬೆಟ್ಟಗಳು ಕಾಡುಗಳು, ತಪ್ಪಲುಪ್ರದೇಶಗಳು ಇವುಗಳಲ್ಲಿಯೂ ಸ್ವೇಚ್ಛೆಯಿಂದ ಅಲೆಯುತ್ತಾ ಎಲ್ಲಿಯೂ ಸುಖಿಯಾಗಲಿಲ್ಲ.

೩೪-೩೬. ಎಲೈ ನಾರದನೇ ಈ ಪ್ರಕಾರ ಉನ್ಮತ್ತನಾದ ಶಂಕರನು ಕ್ಷಣಕಾಲ ಗಾನಮಾಡುತ್ತಾನೆ. ನಂತರ ಕ್ಷಣಕಾಲ ಅಳುತ್ತಾನೆ. ಆಮೇಲೆ ಸತೀದೇವಿಯ ರೂಪಲಾವಣ್ಯಾದಿಗಳನ್ನು ಮನಸ್ಸಿನಲ್ಲೇ ಧ್ಯಾನಮಾಡುತ್ತಾನೆ. ಧ್ಯಾನಮಾಡಿ ತನ್ಮಯಚಿತ್ತನಾಗಿ ಸ್ವಲ್ಪಕಾಲ ಮಲಗುತ್ತಾನೆ. ಅನಂತರ ಅವಳನ್ನೇ ಕನವರಿಸುತ್ತಾನೆ. ಸ್ವಪ್ನದಲ್ಲಿ ಸತೀದೇವಿಯನ್ನು ನೋಡಿ ಎಲೈ ನಿರ್ದಯಳೇ ನಿಲ್ಲು ನನ್ನನ್ನು ಬಿಟ್ಟುಹೋಗುವೆಯಾ, ಎಲೌ ಪತಿವ್ರತೆಯೇ, ಸುಂದರಿಯೇ ನಿನ್ನಿಂದ ವಿರಹಿತನಾದ ನಾನು ಮದನಾಗ್ನಿಯಿಂದ ಸುಡಲ್ಪಡುತ್ತಿದ್ದೇನೆ. (ಇಂತಹ ನನ್ನನ್ನು ಪತಿವ್ರತೆಯಾದ ನೀನು ಉಪೇಕ್ಷಿಸುವೆಯಾ ಎಂದು ತಾತ್ಪರ್ಯ.)

ಶ್ರೂಯಸೇ ದೃಶ್ಯಸೇ ನಿತ್ಯಂ ಸ್ಪೃಶ್ಯಸೇ ವಂದ್ಯಸೇ ಪ್ರಿಯೇ।
ಆಲಿಂಗ್ಯಸೇ ಚ ಸತತಂ ಕಿಮರ್ಥಂ ನಾಭಿಭಾಷಸೇ ॥ ೩೮ ॥

ವಿಲಪಂತಂ ಜನಂ ದೃಷ್ಟ್ವಾ ಕೃಪಾ ಕಸ್ಯ ನಜಾಯತೇ।
ವಿಶೇಷತಃ ಪತಿಂ ಬಾಲೇ ನನು ತ್ವಮತಿನಿಘೃಣಾ ॥ ೩೯ ॥

ತ್ವಯೋಕ್ತಾನಿ ವಚಾಂಸ್ಯೇವಂ ಪೂರ್ವಂ ಮಮ ಕೃಶೋದರಿ।
ತ್ವಯಾ ವಿನಾ ನ ಜೀವೇಯಂ ತದಸತ್ಯಂ ತ್ವಯಾ ಕೃತಂ ॥ ೪೦ ॥

ಏಹ್ಯೇಹಿ ಕಾಮಸಂತಪ್ತಂ ಪರಿಷ್ವಜ ಸುಲೋಚನೇ।
ನಾನ್ಯಥಾ ನಶ್ಯತೇ ತಾಪಃ ಸತ್ಯೇನಾಪಿ ಶಪೇ ಪ್ರಿಯೇ ॥ ೪೧ ॥

ಇತ್ಥಂ ವಿಲಪ್ಯ ಸ್ವಪ್ನಾಂತೇ ಪ್ರತಿಬುದ್ಧಸ್ತು ತತ್ಕ್ಷಣಾತ್।
ಉತ್ಕ್ರೋಜತಿ ತಥಾರಣ್ಯೇ ಮುಕ್ತಕಂಠಂ ಪುನಃ ಪುನಃ ॥ ೪೨ ॥

---

೩೭-೩೯. ಎಲೈ ದೇವಿಯೇ, ನೀನು ನಿಜವಾಗಿಯೂ ಕೋಪಗೊಂಡಿರುವೆ. ಸುಂದರಿಯೇ ಕೋಪಮಾಡಬೇಡ. ಈ ಪಾದಪ್ರಣಾಮದಿಂದ ಎಲ್ಲಾ ಅಪರಾಧಗಳನ್ನೂ ಮರೆತು ನನ್ನೊಡನೆ ಮಾತನಾಡು. ನಿನ್ನ ಧ್ವನಿಯನ್ನು ಕೇಳುತ್ತಿದ್ದೇನೆ. ನಿನ್ನ ರೂಪವನ್ನು ನೋಡುತ್ತಿದ್ದೇನೆ. ನಿನ್ನನ್ನು ಸ್ಪರ್ಶಮಾಡುತ್ತಿದ್ದೇನೆ. ಪ್ರಣಾಮ ಮಾಡುತ್ತಿದ್ದೇನೆ. ಯಾವಾಗಲೂ ಆಲಿಂಗಿಸುತ್ತಿದ್ದೇನೆ. ಆದರೂ ಏಕೆ ಮಾತನಾಡುವುದಿಲ್ಲ. (ಇವೆಲ್ಲವೂ ಕಾಮಿಜನ ಸಾಧಾರಣವಾದ ಧ್ಯಾನದಿಂದ ಹೊಂದಿದ ತನ್ಮಯಚಿತ್ತತೆಯಿಂದ ಸಾಕ್ಷಾತ್ಕರಿಸಿ ಹೇಳುವ ಮಾತುಗಳು)ದೈನ್ಯದಿಂದ ಪ್ರಲಾಪಿಸುತ್ತಿರುವ ಸಾಮಾನ್ಯಜನರನ್ನು ನೋಡಿಯಾದರೂ ಎಲ್ಲರಿಗೂ ದಯೆಯುಂಟಾಗುತ್ತದೆ. ಹೀಗಿರುವಾಗ ಪತಿಯಾದ ನನ್ನ ಪ್ರಲಾಪವನ್ನು ನೋಡಿನಿನಗೆ ದಯೆಯುಂಟಾಗಲಿಲ್ಲ. ಆದ್ದರಿಂದ ನೀನು ಬಹಳ ನಿರ್ದಯಳಾಗಿರುವೆ.

೪೦-೪೨. ಎಲೈ ಸುಂದರಿಯೇ, ಮೊದಲು ನಿನ್ನನ್ನಗಲಿ ನಾನು ಜೀವಿಸಲಾರೆನೆಂದು ಅನೇಕವೇಳೆ ನೀನು ಹೇಳಿರುವೆ, ಆ ಮಾತುಗಳನ್ನು ನೀನೇ ಅಸತ್ಯವನ್ನಾಗಿ ಮಾಡಿದಂತಾಯಿತು. ಎಲೈ, ಸುಂದರಾಂಗಿಯೇ, ನಾನು ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತಿರುತ್ತೇನೆ. ಬಾ, ಬಾ, ಸಂತಪ್ತನಾದ ನನ್ನನ್ನು ಆಲಂಗಿಸಿಕೊಂಡು ಈ ನನ್ನ ಕಾಮಸಂತಾಪವನ್ನು ಹೋಗಲಾಡಿಸು, ಅನ್ಯಥಾ ಈ ತಾಪವು ಶಾಂತವಾಗುವದಿಲ್ಲ. ಹೀಗೆ ಕನವರಿಸಿ ನಿದ್ದೆಯಿಂದ ಎಚ್ಚೆತ್ತು ಅರಣ್ಯದಲ್ಲಿ ಘಟ್ಟಿಯಾಗಿ ಬಾರಿಬಾರಿಗೂ ಕೂಗುತ್ತಾನೆ.

ತಂ ಕೂಜಮಾನಂ ವಿಲಪಂತಮಾರಾ
ತ್ಸಮೀಕ್ಷ್ಯ ಕಾಮೋ ವೃಷಕೇತನಂ ಹಿ ।
ವಿವ್ಯಾಧ ಚಾಪಂ ತರಸಾ ವಿನಾಮ್ಯ
ಸಂತಾಪನಾಮ್ನಾ ಸುಶರೇಣ ಭೂಯಃ ॥ ೪೩ ॥

ಸಂತಾಪನಾಸ್ತ್ರೇಣ ತದಾ ಸವಿದ್ಧೋ
ಭೂಯಃ ಸ ಸಂತಪ್ತತರೋ ಬಭೂವ ।
ಸಂತಾಪಯಂಶ್ಚಾಪಿ ಜಗತ್ಸಮಸ್ತಂ
ಫೂತ್ಕೃತ್ಯ ಫೂತ್ಕೃತ್ಯ ವಿವಾಶತೇಽಸ್ಮ ॥ ೪೪ ॥

ತಂ ಚಾಪಿ ಭೂಯೋ ಮದನೋ ಜಘಾನ
ವಿಜೃಂಭಣಾಸ್ತ್ರೇಣ ತತೋ ವಿಜೃಂಭೇ ।
ತತೋ ಭೃಶಂ ಕಾಮಶರೈರ್ವಿತುನ್ನೋ
ವಿಜೃಂಭಮಾಣಃ ಪರಿತೋ ಭ್ರಮಂಶ್ಚ ॥ ೪೫ ॥

ದದರ್ಶ ಯಕ್ಷಾಧಿಪತೇಸ್ತನೂಜಂ
ಪಾಂಚಾಲಿಕಂ ನಾಮ ಜಗತ್ಪ್ರಧಾನಂ ।
ದೃಷ್ಟ್ವಾ ತ್ರಿನೇತ್ರೋ ಧನದಸ್ಯ ಪುತ್ರಂ
ಪಾರ್ಶ್ವಂ ಸಮಭ್ಯೇತ್ಯ ವಚೋ ಬಭಾಷೇ ।
ಭ್ರಾತೃವ್ಯ ವಕ್ಷ್ಯಾಮಿವಚೋಯದದ್ಯ
ತತ್ತ್ವಂ ಕುರುಷ್ವಾಮಿತ ವಿಕ್ರಮೋಽಸಿ ॥ ೪೬ ॥

---

೪೩-೪೫. ಹಾಗೆ ಕೂಗುತ್ತಿರುವ ಆ ಶಂಕರನನ್ನು ಮನ್ಮಥನು ದೂರದಿಂದ ನೋಡಿ ಧನುಸ್ಸನ್ನು ಬಗ್ಗಿಸಿ ಸಂತಾಪವೆಂಬ ಬಾಣದಿಂದ ಪುನಃ ಹೊಡೆದನು. ಆ ಅಸ್ತ್ರದಿಂದ ಹೊಡೆಯಲ್ಪಟ್ಟ ಶಂಕರನು ಮತ್ತೂ ಸಂತಪ್ತನಾಗಿ ಆ ತಾಪದಿಂದ ಪ್ರಪಂಚವನ್ನೂ ಸಂತಾಪಗೊಳಿಸುತ್ತಾ ನಿಟ್ಟುಸುರುಬಿಟ್ಟು ಕಿರಚಲಾರಂಭಿಸಿದನು.

೪೬. ಅಂತಹ ಶಂಕರನನ್ನು ಪುನಃ ಮನ್ಮಥನು ವಿಜೃಂಭಣವೆಂಬ ಅಸ್ತ್ರದಿಂದ ಪ್ರಹರಿಸಿದನು. ಈ ಪ್ರಕಾರ ಮೇಲೆ ಮೇಲೆ ಮನ್ಮಥಬಾಣಗಳಿಂದ ಪ್ರಹರಿಸಲ್ಪಟ್ಟ ಶಂಕರನು ವಿಶೇಷವಾಗಿ ಆಕಳಿಸುತ್ತಾ ಪರಿಭ್ರಮಣಶೀಲನಾದನು. ಆ ಭ್ರಮಣ ಸಂದರ್ಭದಲ್ಲಿ ಶಂಕರನು ಕುಬೇರನ ಪುತ್ರನಾದ ಪಾಂಚಾಲಿಕನನ್ನು ನೋಡಿದನು. ಅವನೊಬ್ಬ ಜಗತ್ತಿಗೆ ಪ್ರಧಾನಪುರುಷ, ಅವನನ್ನು ನೋಡಿದ ಶಂಕರನು ಅವನ ಸಮೀಪಕ್ಕೆ ಹೋಗಿ ಎಲೈ, ಅಣ್ಣನ ಮಗನೇ, ನಾನು ಒಂದು ಮಾತನ್ನು ನಿನ್ನಲ್ಲಿ ಹೇಳುತ್ತೇನೆ. ಪರಾಕ್ರಮಶಾಲಿಯಾದ ನೀನು ಅದನ್ನು ಅವಶ್ಯ ನಡೆಸಿಕೊಡಬೇಕು.

## ಪಾಂಚಾಲಿಕ ಉವಾಚ

ಯನ್ನಾಥ ಮಾಂ ವಕ್ಷ್ಯಸಿ ತತ್ಕರಿಷ್ಯೇ
ಸುದುಷ್ಕರಂ ಯದ್ಯಪಿ ದೇವಸಂಘೈಃ ।
ಆಜ್ಞಾಪಯಸ್ವಾತುಲವೀರ್ಯಶಂಭೋ
ದಾಸೋಽಸ್ಮಿ ತೇ ಭಕ್ತಿಯುತಸ್ತಥೇಶ ॥ ೪೭ ॥

## ಈಶ್ವರ ಉವಾಚ

ನಾಶಂ ಗತಾಯಾಂ ವರದಾಂಬಿಕಾಯಾಂ
ಕಾಮಾಗ್ನಿನಾಪ್ಲುಷ್ಟ ಸುವಿಗ್ರಹೋಽಸ್ಮಿ ।
ವಿಜೃಂಭಣೋನ್ಮಾದಶರೈರ್ವಿಭಿನ್ನೋ
ಧೃತಿಂ ನ ವಿಂದಾಮಿ ರತಿಂ ಸುಖಂ ಚ ॥ ೪೮ ॥

ವಿಜೃಂಭಣಂ ಪುತ್ರ ತಥೈವ ತಾಪ
ಮುನ್ಮಾದಮುಗ್ರಂ ಮದನಪ್ರಣುನ್ನಂ ।
ನಾನ್ಯಃ ಪುಮಾನ್ಧಾರಯಿತುಂ ಹಿ ಶಕ್ತೋ
ಮುಕ್ತ್ವಾ ಭವಂತಂ ಹಿ ತತಃ ಪ್ರತೀಚ್ಛ ॥ ೪೯ ॥

---

೪೭. ಪಾಂಚಾಲಿಕನು ಹೇಳುತ್ತಾನೆ: ಎಲೈ ಪ್ರಭುವೇ, ನನ್ನನ್ನು ಕುರಿತು ಯಾವ ಕಾರ್ಯವನ್ನು ಅಪ್ಪಣೆಮಾಡುತ್ತೀಯೋ ಅದು ದೇವತೆಗಳಿಂದ ಅಸಾಧ್ಯ ವಾಗಿದ್ದರೂ ಅದನ್ನು ನಾನು ನಡೆಸಿಕೊಡುತ್ತೇನೆ. ಎಲೈ ಶಂಭುವೇ, ಅಪ್ಪಣೆಮಾಡು. ನಾನು ನಿನ್ನಲ್ಲಿ ಭಕ್ತಿಯುಳ್ಳ ದಾಸನು.

೪೮-೪೯. ಎಲೈ ದಾನಶೀಲನೇ, ಸತೀದೇವಿಯು ನಷ್ಟಳಾದಮೇಲೆ ಕಾಮಾಗ್ನಿ ಯಿಂದ ನನ್ನ ಮೈಯ್ಯೆಲ್ಲಾ ಸುಟ್ಟುಹೋಗಿದೆ. ವಿಜೃಂಭಣ ಮತ್ತು ಉನ್ಮಾದ ಈ ಬಾಣಗಳಿಂದ ಬಹಳ ಹಿಂಸಿಸಲ್ಪಟ್ಟ ನಾನು ಮನಸ್ಥೈರ್ಯವನ್ನೇ ಹೊಂದಿಲ್ಲ. ಸುಖ ಸಂತೋಷಗಳು ದೂರವಾಗಿವೆ. ಮದನನಿಂದ ಪ್ರೇರಿತವಾಗಿರುವ ಈ ಉನ್ಮಾದ ಮತ್ತು ವಿಜೃಂಭಣಾಸ್ತ್ರಗಳ ಉಗ್ರವಾದ ತಾಪವನ್ನು ನಿನ್ನ ಹೊರತು ಮತ್ತಾರೂ ಧರಿಸಲು ಸಮರ್ಥರಾಗಿಲ್ಲ. ಆದ್ದರಿಂದ ನೀನು ಇದನ್ನು ಸ್ವೀಕರಿಸು.

## ಪುಲಸ್ತ್ಯ ಉವಾಚ

ಇತ್ಯೇವಮುಕ್ತೋ ವೃಷಭಧ್ವಜೇನ
ಯಕ್ಷಃ ಪ್ರತೀಚ್ಛನ್ಸವಿಜೃಂಭಣಾದೀನ್।
ತೋಷಂ ಜಗಾಮಾಶು ತತಸ್ತ್ರಿಶೂಲೀ
ತುಷ್ಟಸ್ತ್ವದೈವಂ ವಚನಂ ಬಭಾಷೇ ॥೫೦॥

## ಹರ ಉವಾಚ

ಯಸ್ಮಾತ್ತ್ವಯಾ ಪುತ್ರ ಸುದುರ್ಧರಾಣಿ
ವಿಜೃಂಭಣಾದೀನಿ ಪ್ರತೀಚ್ಛಿತಾನಿ।
ತಸ್ಮಾದ್ವರಂ ತ್ವಾಂ ಪ್ರತಿಪೂಜನಾಯ
ದಾಸ್ಯಾಮಿ ಲೋಕಸ್ಯ ಚ ಹಾಸ್ಯಕಾರೀ ॥೫೧॥

ಯಸ್ತ್ವಾಂ ಯದಾ ಪಶ್ಯತಿ ಚೈತ್ರಮಾಸೇ
ಸ್ಪೃಶೇನ್ನರೋ ವಾರ್ಚಯತೇ ಚ ಭಕ್ತ್ಯಾ।
ವೃದ್ಧೋಽಥ ಬಾಲೋಽಥ ಯುವಾಥ ಯೋಷಿ
ತ್ಸರ್ವೇ ತದೋನ್ಮಾದಧರಾ ಭವಂತಿ ॥೫೨॥

---

೫೦-೫೨. ಪುಲಸ್ತ್ಯರು ಹೇಳುತ್ತಾರೆ: ಈ ಪ್ರಕಾರ ಶಂಕರನಿಂದ ಹೇಳಲ್ಪಟ್ಟ ಆ ಯಕ್ಷನು ವಿಜೃಂಭಣಾದಿಗಳನ್ನು ತಾನೇ ಸ್ವೀಕರಿಸಿದನು. ಅನಂತರ ಸಂತುಷ್ಟನಾದ ಶಂಕರನು ಅವನನ್ನು ಕುರಿತು ಹೇಳುತ್ತಾನೆ: ಎಲೈ ಪುತ್ರನೇ, ಇತರರಿಂದ ದುಸ್ಸಹನಾದ ಈ ವಿಜೃಂಭಣಾದಿ ಅಸ್ತ್ರಗಳನ್ನು ನೀನು ಸ್ವೀಕರಿಸಿದ್ದೀಯೆ. ಇದಕ್ಕೆ ಪ್ರತಿಯಾಗಿ ನಿನ್ನನ್ನು ಸಂತೋಷಪಡಿಸಲು ಒಂದು ವರವನ್ನು ಕೊಡುತ್ತೇನೆ. ಆದರೆ ಇದು ಲೋಕಕ್ಕೆ ಹಾಸ್ಯಕರವಾದ್ದು. ಚೈತ್ರಮಾಸದಲ್ಲಿ ವೃದ್ಧರಾಗಲಿ, ಯುವಕರಾಗಲಿ, ಸ್ತ್ರೀಯಾಗಲಿ ನಿನ್ನನ್ನು ಯಾವಾಗ ಯಾರು ಮುಟ್ಟುತ್ತಾರೊ, ಭಕ್ತಿಯಿಂದ ಪೂಜಿಸುತ್ತಾರೊ ಅವರೆಲ್ಲರೂ ಆಗ ಉನ್ಮಾದಿಗಳಾಗಿ ಆಗುತ್ತಾರೆ.

ಗಾಯಂತಿ ನೃತ್ಯಂತಿ ರಮಂತಿ ಯಕ್ಷ
ವಾದ್ಯಾನಿ ಯತ್ನಾದಪಿ ವಾದಯಂತಿ ।
ತವಾಗ್ರತೋ ಹಾಸ್ಯವಚೋಭಿರಕ್ತಾ
ಭವಂತಿ ತೇ ಯೋಗಯುತಾಸ್ತು ತೇ ಸ್ಯುಃ ॥ ೫೩ ॥

ಮಮ್ಮೈವ ನಾಮ್ನಾ ಭವಿತಾಸಿ ಪೂಜ್ಯಃ
ಪಾಂಚಾಲಕೇಶಃ ಪ್ರಥಿತಃ ಪೃಥಿವ್ಯಾಂ ।
ಮಮ ಪ್ರಸಾದಾದ್ವರದೋ ನರಾಣಾಂ
ಭವಿಷ್ಯಸೇ ಪೂಜ್ಯತಮೋಭಿಗಚ್ಛ ॥ ೫೪ ॥

ಇತ್ಯೇವಮುಕ್ತೋ ವಿಭುನಾ ಸ ಯಕ್ಷೋ
ಜಗಾಮ ದೇಶಾನ್ಸಹಸೈವ ಸರ್ವಾನ್ ।
ಕಾಲಂಜರಸ್ಯೋತ್ತರತಃ ಸುಪುಣ್ಯೋ
ದೇಶೋ ಹಿಮಾದ್ರೇರಪಿ ದಕ್ಷಿಣಸ್ಥಃ ॥ ೫೫ ॥

ತಸ್ಮಿನ್ಸುಪುಣ್ಯೇ ವಿಷಯೇ ನಿವಿಷ್ಟೋ
ರುದ್ರಪ್ರಸಾದಾದಪಿ ಪೂಜ್ಯತೇಽಸೌ ।
ತಸ್ಮಿನ್ಪ್ರಯಾತೇ ಭಗವಾಂಸ್ತ್ರಿನೇತ್ರೋ
ದೇವೋಽಪಿ ವಿಂಧ್ಯಂ ಗಿರಿಮಭ್ಯಗಚ್ಛತ್ ॥ ೫೬ ॥

---

೫೩-೫೪. ಹಾಗೆ ಉನ್ಮತ್ತರಾದವರು ವಾದ್ಯಗಳನ್ನು ಬಾರಿಸುತ್ತಾ ಗಾನ ಮಾಡುತ್ತಾ ಕುಣಿಯುತ್ತಾ ಸಂತೋಷಪಡುತ್ತಾರೆ. ಅವರು ನಿನ್ನೊಡನೆ ಹಾಸ್ಯಕಾರಿಗಳಾಗಿ ನಿನ್ನನ್ನು ಪ್ರೀತಿಸುತ್ತಾರೆ. ಆದರೆ ಅವರು ಯೋಗಶಾಲಿಗಳು ತತ್ವಾರ್ಥದೃಷ್ಟಿಯುಳ್ಳ ಅವರು ನನ್ನ ಹೆಸರಿನಿಂದ ನಿನ್ನನ್ನೇ ಪೂಜಿಸುತ್ತಾರೆ. ಈಶ್ವರನೆಂಬ ಬುದ್ಧಿಯಿಂದ ಅವರಿಂದ ಪೂಜಿಸಲ್ಪಟ್ಟ ನೀನು ಪಾಂಚಾಲಿಕೇಶನೆಂದು ಪ್ರಸಿದ್ಧಿ ಹೊಂದಿ ನನ್ನ ಅನುಗ್ರಹದಿಂದ ಜನರಿಗೆ ಇಷ್ಟಾರ್ಥಪ್ರದನಾಗಿ ಪೂಜ್ಯನಾಗಿಯೂ ಸೇವ್ಯನಾಗಿಯೂ ಆಗುತ್ತೀಯೆ.

೫೫-೫೬. ಈ ಪ್ರಕಾರ ಶಂಕರನಿಂದ ಅನುಗ್ರಹಿಸಲ್ಪಟ್ಟ ಆ ಯಕ್ಷನು ಅನೇಕ ದೇಶಗಳಲ್ಲಿ ಸಂಚರಿಸತೊಡಗಿದನು. ಹೀಗೆ ಸಂಚರಿಸುತ್ತಾ ಕಾಲಂಜರವೆಂಬ ದೇಶದ ಉತ್ತರದಿಗ್ಭಾಗದಲ್ಲೂ ಹಿಮವತ್ಪರ್ವತಕ್ಕೆ ದಕ್ಷಿಣದಲ್ಲೂ ಇರುವ ಸುಪುಣ್ಯಕ್ಷೇತ್ರದಲ್ಲಿ ನಿಂತು ರುದ್ರನ ಅನುಗ್ರಹದಿಂದ ಈಗಲೂ ಅಲ್ಲಿ ಪೂಜಿಸಲ್ಪಡುತ್ತಿದ್ದಾನೆ. ಹೀಗೆ ಯಕ್ಷನು ಅಲ್ಲಿಂದ ತೆರಳಿದನಂತರ ಶಂಕರನೂ ವಿಂಧ್ಯಪರ್ವತಕ್ಕೆ ಹೊರಟನು.

ತತ್ರಾಪಿ ಮದನೋ ಗತ್ವಾ ದದರ್ಶ ವೃಷಕೇತನಂ ।
ದೃಷ್ಟ್ವಾ ಪ್ರಹರ್ತುಕಾಮಶ್ಚ ತತಃ ಪ್ರಾದುದ್ರುವೇ ಹರಃ ॥ ೫೭ ॥

ತತೋ ದಾರುವನಂ ಘೋರಂ ಮದನಾಭಿಸೃತೋ ಹರಃ
ವಿವೇಶ ಋಷಯೋ ಯತ್ರ ಸಪತ್ನೀಕಾ ವ್ಯವಸ್ಥಿತಾಃ ॥ ೫೮ ॥

ತೇ ಚಾಪಿ ಋಷಯಃ ಸರ್ವೇ ದೃಷ್ಟ್ವಾ ಮೂರ್ಧ್ನಾನತಾ ಭವನ್ ।
ತತಸ್ತಾನ್ಪ್ರಾಹ ಭಗವಾನ್ಭಿಕ್ಷಾ ಮೇ ಪ್ರತಿದೀಯತಾಂ ॥ ೫೯ ॥

ತತಸ್ತೇ ಮೌನಿನಸ್ತಸ್ಥುಃ ಸರ್ವ ಏವ ಮಹರ್ಷಯಃ ।
ತದಾಶ್ರಮಾಣಿ ಪುಣ್ಯಾನಿ ಪರಿಚಕ್ರಾಮ ನಾರದ ॥ ೬೦ ॥

ತಂ ಪ್ರವಿಷ್ಟಂ ತದಾ ದೃಷ್ಟ್ವಾ ಭಾರ್ಗವಾತ್ರೇಯಯೋಷಿತಃ ।
ಪ್ರಕ್ಷೋಭಮಗಮನ್ಸರ್ವಾ ಹೀನಸತ್ವಾಃ ಸಮಂತತಃ ॥ ೬೧ ॥

---

೫೭-೫೮. ಆ ವಿಂಧ್ಯಪರ್ವತದಲ್ಲೂ ಶಂಕರನನ್ನ ನೋಡಿ ಮನ್ಮಥನು ಪುನಃ ಪ್ರಹರಿಸಲು ಪ್ರಯತ್ನಪಟ್ಟನು. ನಂತರ ಹರನು ಅಲ್ಲಿಂದ ಓಡಿದನು. ಹಾಗೇ ಮನ್ಮಥನಿಂದ ಓಡಿಸಲ್ಪಟ್ಟು ಘೋರವಾದ ದಾರುವನವನ್ನು ಹೊಕ್ಕನು. ಆ ವನವಲ್ಲಿ ಸಪತ್ನೀಕರಾದ ಋಷಿಗಳು ನಿಯಮದಿಂದ ವಾಸಿಸುವ ಆಶ್ರಮಕ್ಕೆ ಪ್ರವೇಶಿಸಿದನು.

೫೯-೬೧. ಅಲ್ಲಿದ್ದ ಋಷಿಗಳೆಲ್ಲರೂ ಶಂಕರನನ್ನು ನೋಡಿ ಭಕ್ತಿಯಿಂದ ಪ್ರಣಾಮಮಾಡಿದರು. ಅವರನ್ನು ಕುರಿತು ಶಂಕರನು ನನಗೆ ಭಿಕ್ಷೆಯನ್ನು ಕೊಡಿ ಎಂದು ಕೇಳಿದನು. ಅವರು ಏನನ್ನೂ ಹೇಳದೆ ಮೌನಿಗಳಾಗಿ ನಿಂತರು. ಅನಂತರ ಶಂಕರನು ಅಲ್ಲಿರುವ ಪುಣ್ಯಕರವಾದ ಆಶ್ರಮಗಳಲ್ಲೆಲ್ಲಾ ಸಂಚರಿಸತೊಡಗಿದನು. ಆ ರೀತಿಯಲ್ಲಿ ಸಂಚರಿಸುವ ಹರನನ್ನು ನೋಡಿ ಅಲ್ಲಿದ್ದ ಭಾರ್ಗವ ಮತ್ತು ಆತ್ರೇಯಸ್ತ್ರೀ ಜನಗಳು ಇವನಲ್ಲಿ ಪ್ರೀತಿಯಿಂದ ಕಲಕಲ್ಪಟ್ಟ ಹೃದಯವುಳ್ಳವರಾಗಿ ಬಹಳ ಆಸಕ್ತಿಯಿಂದ ದುರ್ಬಲರಾಗಿ ಪರಿಣಮಿಸಿದರು.

ಋತೇ ತ್ವರುಂಧತೀಮೇಕಾಮನಸೂಯಾಂ ಚ ಭಾಮಿನೀಂ।
ಏತಯೋರ್ಭರ್ತೃಪೂಜಾಸು ತಚ್ಚಿಂತಾಸು ಸ್ಥಿತಂ ಮನಃ ॥ ೬೨ ॥

ತತಃ ಸಂಕ್ಷೋಭಿತಾಃ ಸರ್ವಾಃ ಯತ್ರಾಯಾತಿ ಮಹೇಶ್ವರಃ।
ತತ್ರ ಪ್ರಯಾಂತಿ ಕಾಮಾರ್ತಾ ಮದವಿಹ್ವಲಿತೇಂದ್ರಿಯಾಃ ॥ ೬೩ ॥

ತ್ಯಕ್ತ್ವಾಶ್ರಮಾಣಿ ಶೂನ್ಯಾನಿ ಸ್ವಾನಿ ತಾ ಮುನಿಯೋಷಿತಃ।
ಅನುಜಗ್ಮುರ್ಯಥಾ ಮತ್ತಂ ಕರಿಣ್ಯ ಇವ ಕುಂಜರಂ ॥ ೬೪ ॥

ತತಸ್ತು ಋಷಯೋ ದೃಷ್ಟ್ವಾ ಭಾರ್ಗವಾಂಗಿರಸೋ ಮುನೇ।
ಕ್ರೋಧಾನ್ವಿತಾಬ್ರುವನ್ಸರ್ವೇ ಲಿಂಗಮಾಪತತಾಂ ಭುವಿ ॥ ೬೫ ॥

ತತಃ ಪಪಾತ ದೇವಸ್ಯ ಲಿಂಗಂ ಪೃಥ್ವೀಂ ವಿದಾರಯತ್।
ಅಂತರ್ಧಾನಂ ಜಗಾಮಾಥ ತ್ರಿಶೂಲೀ ನೀಲಲೋಲಿತಃ ॥ ೬೬ ॥

ತತಸ್ತತ್ಪತಿತಂ ಲಿಂಗಂ ವಿಭೇದ್ಯ ವಸುಧಾತಲಂ।
ರಸಾತಲಂ ವಿವೇಶಾಥ ಬ್ರಹ್ಮಾಂಡೇ ಚೋರ್ಧ್ವತೋಽಭಿನತ್ ॥ ೬೭ ॥

---

೬೨-೬೪. ಪತಿಸೇವೆಯಲ್ಲಿಯೇ ನಿಮಗ್ನರಾಗಿದ್ದ ಅರುಂಧತಿ ಮತ್ತು ಅನುಸೂಯಾ ಈ ಇಬ್ಬರು ಹೊರತು ಎಲ್ಲಾ ಸ್ತ್ರೀಯರೂ ಹರನಲ್ಲಿ ಕಾಮಾರ್ತರಾಗಿ ಪರಿಣಮಿಸಿದರು. ಅವರು ಕಾಮಾರ್ತರಾಗಿ ಹರನು ಎಲ್ಲಿ ಎಲ್ಲಿ ಸಂಚರಿಸುತ್ತಾನೊ ಅಲ್ಲಲ್ಲಿ ಮತ್ತ ಗಜವನ್ನು ಹೆಣ್ಣಾನೆಗಳು ಅನುಸರಿಸಿಹೋಗುವಂತೆ ತಮ್ಮ ಆಶ್ರಮ ರಕ್ಷಣೆಯನ್ನೂ ಬಿಟ್ಟು ಹರನನ್ನು ಹಿಂಬಾಲಿಸತೊಡಗಿದರು.

೬೫-೬೭. ಅನಂತರ ಭಾರ್ಗವ ಮತ್ತು ಆಂಗೀರಸ ಋಷಿಗಳು ತಮ್ಮ ಪತ್ನಿಗಳ ಈ ಸ್ಥಿತಿಯನ್ನು ನೋಡಿ ಕೋಪದಿಂದ ನಿನ್ನ ಲಿಂಗವು ಕೆಳಗೆ ಬಿದ್ದುಹೋಗಲಿ ಎಂದು ಹರನನ್ನು ಶಪಿಸಿದರು. ಅನಂತರ ಶಂಕರನ ಲಿಂಗವು ಭೂಮಿಯನ್ನು ಕೊರೆದುಕ್ಕೊಂಡು ಕೆಳಕ್ಕೆ ಬಿದ್ದಿತು. ಒಡನೆಯೇ ಶಂಕರನು ಅಂತರ್ಧಾನಹೊಂದಿದನು. ನೆಲದಲ್ಲಿ ಬಿದ್ದ ಅವನ ಲಿಂಗವು ಭೂಮಿಯನ್ನು ಭೇದಿಸಿಕೊಂಡು ಪಾತಾಲವನ್ನೂ, ಬ್ರಹ್ಮಾಂಡದ ಮೇಲ್ಭಾಗವನ್ನು ಭೇದಿಸಿಕ್ಕೊಂಡು ಅಂತರಿಕ್ಷಲೋಕವನ್ನೂ ಪ್ರವೇಶಿಸಿತು.

**ತತಶ್ಚಚಾಲ ಪೃಥಿವೀ ಗಿರಯಃ ಸರಿತೋ ನಗಾಃ ।**
**ಪಾತಾಲಭುವನಾಃ ಸರ್ವೇ ಜಂಗಮಾಜಂಗಮಾಶ್ರಿತಾಃ** ॥ ೬೮ ॥

**ಸಂಕ್ಷುಬ್ಧಾನ್ಭುವನಾದ್ದೃಷ್ಟ್ವಾ ಭೂರ್ಲೋಕಾದೀನ್ಪಿತಾಮಹಃ ।**
**ಜಗಾಮ ಮಾಧವಂ ದ್ರಷ್ಟುಂ ಕ್ಷೀರೋದಂ ನಾಮ ಸಾಗರಂ** ॥ ೬೯ ॥

**ತತ್ರ ದೃಷ್ಟ್ವಾ ಹೃಷೀಕೇಶಂ ಪ್ರಣಿಪತ್ಯ ಚ ಭಕ್ತಿತಃ ।**
**ಉವಾಚ ದೇವ ಭುವನಾಃ ಕಿಮರ್ಥಂ ಕ್ಷುಭಿತಾ ವಿಭೋ** ॥ ೭೦ ॥

**ಅಥೋವಾಚ ಹರಿಬ್ರಹ್ಮನ್ ಶಾರ್ವೋ ಲಿಂಗೋ ಮಹರ್ಷಿಭಿಃ ।**
**ಪಾತಿತಸ್ತಸ್ಯ ಭಾರಾರ್ತಾ ಸಂಚಚಾಲ ವಸುಂಧರಾ** ॥ ೭೧ ॥

**ತತಸ್ತದದ್ಭುತತಮಂ ಶ್ರುತ್ವಾ ದೇವಃ ಪಿತಾಮಹಃ ।**
**ತತ್ರ ಗಚ್ಛಾಮ ದೇವೇಶ ಏವಮಾಹ ಪುನಃ ಪುನಃ** ॥ ೭೨ ॥

---

೬೮-೭೦. ಆ ರೀತಿ ಅಭಿವೃದ್ಧಿಹೊಂದಿದ ಲಿಂಗದ ರಭಸದಿಂದ .ಭೂಮಿಯೂ ಅದನ್ನಾಶ್ರಿಯಿಸಿರುವ ಪರ್ವತಗಳು, ನದಿಗಳು, ಮರಗಳು ಎಲ್ಲವೂ ನಡುಗಿದುವು ಪಾತಾಲಲೋಕಗಳೂ ಸ್ಥಾವರಜಂಗಮಗಳೊಡನೆ ನಡುಗಿಹೋದವು. ಆಗ ಬ್ರಹ್ಮನು ಪ್ರಪಂಚವೆಲ್ಲವೂ ಹೀಗೆ ಕ್ಷೋಭೆಹೊಂದಿದ್ದನ್ನು ನೋಡಿ ನಾರಾಯಣನನ್ನು ನೋಡಲು ಕ್ಷೀರಸಮುದ್ರಕ್ಕೆ ಹೊರಟನು. ಅಲ್ಲಿ ನಾರಾಯಣನನ್ನು ನೋಡಿ ಭಕ್ತಿಯಿಂದ ನಮಸ್ಕರಿಸಿ ಪ್ರಪಂಚವೆಲ್ಲವೂ ಹೀಗೆ ಕ್ಷೋಭೆಹೊಂದಲು ಕಾರಣವೇನೆಂದು ಕ್ಷೀರ ಸಮುದ್ರಶಾಯಿಯಾದ ಭಗವಂತನನ್ನು ಪ್ರಶ್ನೆಮಾಡಿದನು.

೭೧-೭೨. ಆ ಬ್ರಹ್ಮನನ್ನು ಕುರಿತು ನಾರಾಯಣನು ಶಂಕರನ ಲಿಂಗವನ್ನು ಮಹರ್ಷಿಗಳು ಕೆಡವಿದರು. ಅದರ ಭಾರದಿಂದ ಭೂಮಿಯು ಚಲಿಸಿತು ಎಂದು ಉತ್ತರಕೊಟ್ಟನು. ಅಂತಹ ಆಶ್ಚರ್ಯಕರವಾದ ಮಾತನ್ನು ಕೇಳಿ ಬ್ರಹ್ಮನು ಅಲ್ಲಿ ಹೋಗಿ ಅದನ್ನು ನೋಡಲು ಕುತೂಹಲಿಯಾಗಿ ನೀನೂ ಬರಬೇಕೆಂದು ಪುನಃ ಪುನಃ ನಾರಾಯಣನನ್ನೂ ಪ್ರಾರ್ಥಿಸಿದನು.

ತತಃ ಪಿತಾಮಹೋ ದೇವಃ ಕೇಶವಶ್ಚ ಜಗತ್ಪತಿಃ ।
ಆಜಗ್ಮತುಸ್ತಮುದ್ದೇಶಂ ಯತ್ರ ಲಿಂಗಂ ಭವಸ್ಯತತ್ ॥ ೭೩ ॥

ತತೋಽನಂತಂ ಹರಿರ್ಲಿಂಗಂ ದೃಷ್ಟ್ವಾರುಹ್ಯ ಖಗೇಶ್ವರಂ ।
ಪಾತಾಲಂ ಪ್ರವಿವೇಶಾಥ ವಿಸ್ಮಯಾಂತರಿತೋ ವಿಭುಃ ॥ ೭೪ ॥

ಬ್ರಹ್ಮಾ ಹಂಸವಿಮಾನೇನ ಊರ್ಧ್ವಮಾಕ್ರಮ್ಯ ಸರ್ವತಃ ।
ನೈವಾಂತಮಲಭದ್ಬ್ರಹ್ಮಾ ವಿಸ್ಮಿತಃ ಪುನರಾಗತಃ ॥ ೭೫ ॥

ವಿಷ್ಣುರ್ಗತ್ವಾಥ ಪಾತಾಲಾನ್ಸಪ್ತಲೋಕಪರಾಯಣಃ ।
ಚಕ್ರಪಾಣಿರ್ವಿನಿಷ್ಕ್ರಾಂತೋ ಲೇಭೇಽಂತಂ ನ ಮಹಾಮುನೇ ॥ ೭೬ ॥

ವಿಷ್ಣುಃ ಪಿತಾಮಹಶ್ಚೋಭೌ ಹರಲಿಂಗಂ ಸಮೇತ್ಯ ಹ ।
ಕೃತಾಂಜಲಿಪುಟೌ ಭೂತ್ವಾ ಸ್ತೋತ್ರಂ ದೇವೌ ಪ್ರಚಕ್ರತುಃ ॥ ೭೭ ॥

ಹರಿಬ್ರಹ್ಮಾಣಾವೂಚತುಃ

ನಮೋಽಸ್ತು ತೇ ಶೂಲಪಾಣೇ ನಮೋಽಸ್ತು ವೃಷಭಧ್ವಜ ।
ಜೀಮೂತವಾಹನ ಕವೇ ಶರ್ವ ತ್ರ್ಯಂಬಕ ಶಂಕರ ॥ ೭೮ ॥

---

೭೩-೭೫. ಅನಂತರ ಬ್ರಹ್ಮನೂ ನಾರಾಯಣನೂ ಸಹ ಆ ಲಿಂಗವು ಬಿದ್ದ ಪ್ರದೇಶಕ್ಕೆ ಹೋಗಿ ಸೇರಿದರು. ಅನಂತವಾಗಿ ಬೆಳೆದಿರುವ ಆ ಲಿಂಗವನ್ನು ನೋಡಿ ಹರಿಯು ಆಶ್ಚರ್ಯಚಕಿತನಾಗಿ ಅದರ ಕೆಳಭಾಗದ ಅವಧಿಯನ್ನು ನೋಡಲು ಪಕ್ಷಿವಾಹನನಾಗಿ ಪಾತಾಲಕ್ಕೆ ಪ್ರವೇಶಿಸಿದನು. ಚತುರ್ಮುಖನು ಹಂಸವಾಹನನಾಗಿ ಊರ್ಧ್ವ (ಮೇಲು) ಲೋಕಗಳನ್ನೆಲ್ಲಾ ಸುತ್ತಿ ಅದರ ಕೊನೆಯನ್ನು ಕಾಣದೆ ಆಶ್ಚರ್ಯದಿಂದ ಪುನಃ ಬಂದು ಸ್ವಸ್ಥಾನವನ್ನು ಸೇರಿದನು.

೭೬-೭೭. ಅನಂತರ ಚಕ್ರಪಾಣಿಯಾದ ವಿಷ್ಣುವು ಕೆಳಭಾಗದಲ್ಲಿರುವ ಏಳು ಲೋಕಗಳನ್ನೂ ಸುತ್ತಿದರೂ ಅದರ ಅಂತವನ್ನು ತಿಳಿಯಲಾಗಲಿಲ್ಲ. ಅನಂತರ ವಿಷ್ಣುವೂ ಬ್ರಹ್ಮನೂ ಅಲ್ಲಿ ಸೇರಿ ಅಂಜಲಿಬಂಧಪೂರ್ವಕವಾಗಿ ಆ ಹರನಲಿಂಗವನ್ನು ಸ್ತೋತ್ರಮಾಡಲುಪಕ್ರಮಿಸಿದರು.

೭೮-೭೯. ಎಲೈ ಶೂಲಪಾಣಿಯೇ, ನಿನಗೆ ನಮಸ್ಕಾರವು. ವೃಷಭಧ್ವಜನೇ ನಿನಗೆ ನಮಸ್ಕಾರಗಳು. ಎಲೈ, ಮೇಘವಾಹನನೇ, ತ್ರ್ಯಂಬಕನೇ, ಮಹೇಶ್ವರನೇ,

**ಮಹೇಶ್ವರ ಮಹೇಶಾನ ಸುವರ್ಣಾಕ್ಷ ವೃಷಾಕಪೇ ।**
**ದಕ್ಷಯಜ್ಞಕ್ಷಯಕರ ಕಾಲರೂಪ ನಮೋಽಸ್ತು ತೇ ॥ ೭೯ ॥**

**ತ್ವಮಾದಿರಸ್ಯ ಜಗತಸ್ತ್ವಂ ಮಧ್ಯಂ ಪರಮೇಶ್ವರ ।**
**ಭವಾನಂತಶ್ಚ ಭಗವಾನ್ಸರ್ವಗಸ್ತ್ವಂ ನಮೋಽಸ್ತು ತೇ ॥ ೮೦ ॥**

**ಪುಲಸ್ತ್ಯ ಉವಾಚ**

**ಏವಂ ಸಂಸ್ತೂಯಮಾನಸ್ತು ತಸ್ಮಿನ್ದಾರುವನೇ ಹರಃ ।**
**ಸ್ವರೂಪೀ ತಾವಿದಂ ವಾಕ್ಯಮುವಾಚ ವದತಾಂ ವರಃ ॥ ೮೧ ॥**

**ಹರ ಉವಾಚ**

**ಕಿಮರ್ಥಂ ದೇವತಾನಾಥೌ ಪರಿಭೂತಕ್ರಮಂ ತ್ವಿಹ ।**
**ಮಾಂಸ್ತುವಾತೇ ಭೃಶಾಸ್ವಸ್ಥಂ ಕಾಮತಾಪಿತವಿಗ್ರಹಂ ॥ ೮೨ ॥**

---

ಸುವರ್ಣಾಕ್ಷನೇ, ವೃಷಾಕಪಿಯೇ, ದಕ್ಷಯಜ್ಞನಾಶಕನೇ, ಕಾಲರೂಪಿಯೇ ನಿನಗೆ ಅನಂತನಮಸ್ಕಾರಗಳು. (ಈ ಪ್ರಕರಣದಲ್ಲಿ ಆಯಾಯ ನಾಮದ ಅವಯವಾರ್ಥ ವ್ಯುತ್ಪತ್ತಿಯಿಂದ ರುದ್ರದೇವನ ಗುಣವಿಶೇಷಾವಿಷ್ಕರಣದಲ್ಲಿ ತಾತ್ಪರ್ಯ)

೮೦. ಎಲೈ ಪರಮೇಶ್ವರನೇ, ಸರ್ವವ್ಯಾಪಕನಾದ ನೀನೇ ಈ ಜಗತ್ತಿಗೆ ಆದಿಯಾಗಿರುವೆ, ಮಧ್ಯನಾಗಿರುವೆ, ಅಂತವಾಗಿಯೂ ಇರುವೆ ನಿನಗೆ ನಮಸ್ಕಾರಗಳು.

೮೧. ಹೀಗೆ ಸ್ತೋತ್ರಮಾಡಲ್ಪಟ್ಟ ಶಂಭುವು ಆ ದಾರುವನದಲ್ಲಿ ಸ್ವಸ್ವರೂಪವನ್ನು ತೋರ್ಪಡಿಸುತ್ತಾ ವಿಷ್ಣುವನ್ನೂ ಬ್ರಹ್ಮನನ್ನೂ ಕುರಿತು ಹೇಳುತ್ತಾನೆ.

೮೨. ಹರನು ಹೇಳುತ್ತಾನೆ: ಎಲೈ ದೇವತಾನಾಥರೇ, ದೇವಾಧಿಪತಿಗಳಾದ ನೀವು ನೀಚೋಚ್ಚಕ್ರಮವನ್ನು ಬಿಟ್ಟು ಕಾಮಪೀಡಿತನಾಗಿ ಸಂತಪ್ತನಾದ ನನ್ನನ್ನು ಏತಕ್ಕೆ ಸ್ತೋತ್ರಮಾಡುತ್ತಿದ್ದೀರಿ.

**ದೇವಾವೂಚತುಃ**

**ಭವತಃ ಪಾತಿತಂ ಲಿಂಗಂ ಯದೇತದ್ಭುವಿ ಶಂಕರ ।**
**ಏತತ್ಪ್ರಗೃಹ್ಯತಾಂ ಭೂಯಃ ಅತೋ ದೇವ ವದಾವಹೆ** ॥ ೮೩ ॥

**ಹರ ಉವಾಚ**

**ಯದ್ಯರ್ಚಯಂತಿ ತ್ರಿದಶಾ ಮಮ ಲಿಂಗಂ ಸುರೋತ್ತಮಾಃ ।**
**ತದೇತತ್ಪ್ರತಿಗೃಹ್ಣೀಯಾಂ ನಾನ್ಯಥೇತಿ ಕಥಂಚನ** ॥ ೮೪ ॥

**ತತಃ ಪ್ರೋವಾಚ ಭಗವಾನೇವಮಸ್ತ್ವಿತಿ ಕೇಶವಃ ।**
**ಬ್ರಹ್ಮಾ ಸ್ವಯಂ ಚ ಜಗ್ರಾಹ ಲಿಂಗಂ ಕನಕಪಿಂಗಲಂ** ॥ ೮೫ ॥

**ತತಶ್ಚಕಾರ ಭಗವಾಂಶ್ಚಾತುರ್ವರ್ಣ್ಯಂ ಹರಾರ್ಚನೇ ।**
**ಶಾಸ್ತ್ರಾಣಿ ಚೈಷಾಂ ಮುಖ್ಯಾನಿ ನಾನೋಕ್ತವಿದಿತಾನಿ ಚ** ॥ ೮೬ ॥

೮೩. ಬ್ರಹ್ಮವಿಷ್ಣುಗಳು ಹೇಳುತ್ತಾರೆ: ಎಲೈ ಶಂಕರನೇ, ಕೆಳಗೆ ಬೀಳಿಸಲ್ಪಟ್ಟ ಈ ನಿನ್ನ ಲಿಂಗವನ್ನು ಪುನಃ ನೀನು ತೆಗೆದುಕೊ, ಅನಂತರ ನಾವು ಮಿಕ್ಕ ವಿಷಯವನ್ನು ಹೇಳುವೆವು.

೮೪-೮೫. ಹರನು ಹೇಳುತ್ತಾನೆ: ಎಲೈ ಸುರೋತ್ತಮರೇ, ನನ್ನ ಈ ಲಿಂಗವನ್ನು ದೇವತೆಗಳೆಲ್ಲರೂ ಪೂಜಿಸುವುದಾದರೆ ಇದನ್ನು ಹಿಂದಕ್ಕೆ ತೆಗೆದುಕೊಳ್ಳುತ್ತೇನೆ, ಇಲ್ಲವಾದರೆ ಸಾಧ್ಯವಿಲ್ಲವೆಂದು ಉತ್ತರಕೊಟ್ಟನು. ಆ ಮಾತನ್ನು ಕೇಳಿ ಆಗಬಹುದೆಂದು ನಾರಾಯಣನು ಅನುಮತಿಕೊಟ್ಟನು. ಆಮೇಲೆ ಚತುರ್ಮುಖನು ಅದನ್ನು ಪೂಜಿಸಲು ಚಿನ್ನದಂತೆ ಹೊಂಬಣ್ಣವಾಗಿರುವ ಆ ಲಿಂಗವನ್ನು ತಾನೇ ಮೊದಲು ಸ್ವೀಕರಿಸಿದನು.

೮೬-೮೮. ಅನಂತರ ಬ್ರಹನು ಆ ಹರನ ಪೂಜೆಗೆ ಅರ್ಹವಾದ ನಾಲ್ಕು ವರ್ಣಗಳನ್ನು ಏರ್ಪಡಿಸಿದನು. ಮತ್ತು ಆತನ ಪೂಜಾವಿಧಿಗೆ ಉಪಯುಕ್ತವಾದ ಹಿಂದೆ ಉಕ್ತವಾಗಿಯೂ ಈಗ ತನಗೆ ತಿಳಿದದ್ದಾಗಿಯೂ ಇರುವ ಅನೇಕ ಶಾಸ್ತ್ರಗಳನ್ನೂ

**ಆದ್ಯಂ ಶೈವಂ ಪರಿಖ್ಯಾತಮನ್ಯತ್ಪಾಶುಪತಂ ಮುನೇ ।**
**ತೃತೀಯಂ ಕಾಲದಮನಂ ಚತುರ್ಥಂ ಚ ಕಪಾಲಿಕಂ** ॥ ೮೭ ॥

**ಶಿವಶ್ಚಾಸೀತ್ಸ್ವಯಂ ಶಕ್ತಿರ್ವಸಿಷ್ಠಸ್ಯ ಪ್ರಿಯಃ ಸುತಃ ।**
**ತಸ್ಯ ಶಿಷ್ಯೋ ಬಭೂವಾಥ ಗೋಪಾಯನ ಇತಿ ಶ್ರುತಃ** ॥ ೮೮ ॥

**ಮಹಾಪಾಶುಪತಶ್ಚಾಸೀದ್ಭರದ್ವಾಜಸ್ತಪೋಧನಃ ।**
**ತಸ್ಯ ಶಿಷ್ಯೋಽಪ್ಯಭೂದ್ರಾಜಾ ಋಷಯಃ ಸೋಮಕೇಶ್ವರಃ** ॥ ೮೯ ॥

**ಕಾಲಾಸ್ಯೋ ಭಗವಾನಾಸೀದಾಪಸ್ತಂಬಸ್ತಪೋಧನಃ ।**
**ತಸ್ಯ ಶಿಷ್ಯೋ ಬಭೂವಾಥ ನಾಮ್ನಾ ಕ್ರಾಥೇಶ್ವರೋ ಮುನೇ** ॥ ೯೦ ॥

**ಮಹಾವ್ರತೀ ಚ ಧನದಸ್ತಸ್ಯ ಶಿಷ್ಯಶ್ಚ ವೀರ್ಯವಾನ್ ।**
**ಅರ್ಣೋದರ ಇತಿ ಖ್ಯಾತೋ ಜಾತ್ಯಾ ಶೂದ್ರೋ ಮಹಾತಪಾಃ** ॥ ೯೧ ॥

---

ಪ್ರಚಾರಗೊಳಿಸಿದನು. ಅದರಲ್ಲಿ ಮೊದಲನೆಯದು ಶೈವಶಾಸ್ತ್ರ, ಎರಡನೇಯದು ಪಾಶುಪತ, ಮೂರನೇಯದು ಕಾಲದಮನ, ನಾಲ್ಕನೇಯದು ಕಾಪಾಲಿಕ, ವಸಿಷ್ಠ ಪುತ್ರನಾದ ಶಕ್ತಿ ಎಂಬುವನು ಸಾಕ್ಷಾಚ್ಛಿವರೂಪಿಯಾಗಿ ಆ ಶೈವಶಾಸ್ತ್ರಕ್ಕೆ ಪ್ರಚಾರಕನಾದನು. ಅವನ ಶಿಷ್ಯನಾದ ಗೋಪಾಯನನೂ ಆ ಶಾಸ್ತ್ರದಿಂದ ಪ್ರಖ್ಯಾತನಾಗಿದ್ದನು.

೮೯. ತಪೋನಿಧಿಯಾದ ಭರದ್ವಾಜನು ಮಹಾಪಾಶುಪತಶಾಸ್ತ್ರಕ್ಕೆ ಪ್ರಕಾಶಕನಾದನು. ಅವನಲ್ಲಿ ಶಿಷ್ಯರಾಗಿ ಧೊರೆಯಾದ ಸೋಮಕೇಶ್ವರನೂ ಮತ್ತು ಅನೇಕ ಋಷಿಗಳೂ ಪ್ರಸಿದ್ಧರಾದರು.

೯೦-೯೧. ಆಪಸ್ತಂಬರು ಮೂರನೇ ಕಾಲದಮನಶಾಸ್ತ್ರಕ್ಕೆ ಪ್ರಕಾಶಕರಾದರು. ಅವರ ಶಿಷ್ಯನಾದ ಕ್ರಾಥೇಶ್ವರನೂ ಆ ಶಾಸ್ತ್ರದಿಂದ ಪ್ರಸಿದ್ಧಿಹೊಂದಿದನು. ಕುಬೇರನು ನಾಲ್ಕನೇ .ಕಾಪಾಲಿಕಶಾಸ್ತ್ರಕ್ಕೆ ಪ್ರವರ್ತಕನಾಗಿ ಮಹಾವ್ರತಿಯಾದನು. ಅವನಿಗೆ ಸಮರ್ಥನೂ, ತಪಸ್ವಿಯೂ, ಶೂದ್ರಜಾತಿಯವನೂ ಆದ ಶಿಷ್ಯನಿದ್ದನು. ಅವನು ಅರ್ಣೋದರನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದನು.

ಏವಂ ಸ ಭಗವಾನ್ಬ್ರಹ್ಮಾ ಪೂಜನಾಯ ಶಿವಸ್ಯ ತತ್ ।
ಕೃತ್ವಾ ತು ಚಾತುರಾಶ್ರಮ್ಯಂ ಸ್ವಮೇವ ಭವನಂ ಗತಃ ॥೯೨॥

ಗತೇ ಬ್ರಹ್ಮಣಿ ಶರ್ವೋಽಪಿ ಉಪಸಂಹೃತ್ಯ ತತ್ತದಾ ।
ಲಿಂಗಂ ಚಿತ್ರವನೇ ಸೂಕ್ಷ್ಮಂ ಪ್ರತಿಷ್ಠಾಪ್ಯ ಚಚಾರ ಹ ॥೯೩॥

ವಿಚರಂತಂ ತದಾ ಭೂಯೋ ಮಹೇಶಂ ಕುಸುಮಾಯುಧಃ ।
ಆರಾತ್ಸ್ಥಿತ್ವಾಗತೋ ಧನ್ವೀ ಸಂತಾಪಯಿತುಮುದ್ಯತಃ ॥೯೪॥

ತತಸ್ತಮಗ್ರತೋ ದೃಷ್ಟ್ವಾ ಕ್ರೋಧಾಧ್ಮಾತದೃಶಾ ಹರಃ ।
ಸ್ಮರಮಾಲೋಕಯಾಮಾಸ ಶಿಖಾಗ್ರಾಚ್ಚರಣಾಂತಿಕಂ ॥೯೫॥

ಆಲೋಕಿತಸ್ತ್ರಿನೇತ್ರೇಣ ಮದನೋ ದ್ಯುತಿಮಾನಪಿ ।
ಪ್ರಾದಹ್ಯತ ತದಾ ಬ್ರಹ್ಮನ್ಪಾದಾದಾರಭ್ಯ ಕಕ್ಷವತ್ ॥೯೬॥

ಪ್ರದಹ್ಯಮಾನೌ ಚರಣೌ ದೃಷ್ಟ್ವಾಸೌ ಕುಸುಮಾಯುಧಃ ।
ಉತ್ಸಸರ್ಜ ಧನುಃಶ್ರೇಷ್ಠಂ ತಜ್ಜಗಾಮಾಥ ಪಂಚಧಾ ॥೯೭॥

---

೯೨-೯೩. ಈ ರೀತಿಯಾಗಿ ಶಿವನ ಆ ಲಿಂಗವನ್ನು ಪೂಜಿಸುವುದಕ್ಕಾಗಿ ನಾಲ್ಕು ಆಶ್ರಮಗಳನ್ನು ಏರ್ಪಡಿಸಿ ಚತುರ್ಮುಖನು ತನ್ನ ಸ್ಥಾನವನ್ನು ಸೇರಿದನು. ಅವನು ಹೋದನಂತರ ಶಿವನು ತನ್ನ ಲಿಂಗವನ್ನು ಉಪಸಂಹಾರಮಾಡಿ ಸೂಕ್ಷ್ಮವಾದ ಆ ಲಿಂಗವನ್ನು ಚಿತ್ರವನದಲ್ಲಿ ಪ್ರತಿಷ್ಠೆಮಾಡಿ ಅಲ್ಲಿಂದ ಸಂಚಾರ ಹೊರಟನು.

೯೪-೯೬. ಅಲ್ಲಿ ಸಂಚರಿಸುತ್ತಿರುವ ಶಂಕರನನ್ನು ಮನ್ಮಥನು ಪುನಃ ಧನುರ್ಧಾರಿಯಾಗಿ ಸಮೀಪದಲ್ಲೇ ನಿಂತು ಸಂತಾಪಪಡಿಸಲು ಪ್ರಯತ್ನಿಸಿದನು. ಅನಂತರ ಮುಂದೆ ನಿಂತಿರುವ ಆ ಮನ್ಮಥನನ್ನು ಹರನು ಕೋಪದಿಂದ ಕಿಡಿಕಿಡಿಯಾದ ಕಣ್ಣುಗಳಿಂದ ಕಾಲಿನಿಂದ ತಲೆಯ ವರಿಗೂ ನೋಡಿದನು. ಒಡನೆಯೇ ಆ ಮನ್ಮಥನು ತೇಜಸ್ವಿಯಾಗಿದ್ದರೂ ಹರನ ಆ ಅವಲೋಕನದಿಂದ ಕಾಲುಮೊದಲು ತಲೆಯವರಿಗೂ ಹುಲ್ಲಿನ ಮೆದೆಯಂತೆ ಉರಿದು ಹೋದನು.

೯೭-೯೮. ಆ ಮನ್ಮಥನು ತನ್ನ ಕಾಲು ಸುಡುತ್ತಿರುವದನ್ನು ನೋಡಿ ತನ್ನ ಕೈಯಲ್ಲಿದ್ದ ಶ್ರೇಷ್ಠವಾದ ಧನುಸ್ಸನ್ನು ಕೆಳಕ್ಕೆ ಹಾಕಿದನು. ಆ ಧನುಸ್ಸೂ ಐದು

**ಯದಾಸೀನ್ಮುಷ್ಟಿಬಂಧೇತದ್ರುಕ್ಮಪೃಷ್ಠಂ ಮಹಾಪ್ರಭಂ।**
**ಸ ಚಂಪಕೇತರುರ್ಜಾತಃ ಸುಗಂಧಾಢ್ಯೋ ಮಹಾದ್ಯುತಿಃ ॥೯೮॥**

**ನಾಭಿಸ್ಥಾನಂ ಶುಭಾಕಾರಂ ಯದಾಸೀದ್ವಜ್ರಭೂಷಿತಂ।**
**ತಜ್ಜಾತಂ ಕೇಸರಾರಣ್ಯಂ ಬಕುಲಂ ನಾಮತೋ ಮುನೇ ॥೯೯॥**

**ಯಾ ಚ ಕೋಟೀಶೋಭಾ ಹ್ಯಾಸೀದಿಂದ್ರನೀಲವಿಭೂಷಿತಾ।**
**ಜಾತಾ ಸಾ ಪಾಟಲಾ ರಮ್ಯಾ ಭೃಂಗರಾಜಿವಿಭೂಷಿತಾ ॥೧೦೦॥**

**ನಾಹೋಪರಿ ತಥಾ ಮುಷ್ಟ್ಯಾ ಸ್ಥಾನಂ ಚಂದ್ರಮಣಿಪ್ರಭಂ।**
**ಪಂಚ ಗುಲ್ಮಾಭವಜ್ಜಾತೀ ಶಶಾಂಕಕಿರಣೋಜ್ಜ್ವಲಾ ॥೧೦೧॥**

**ಊರ್ಧ್ವಂ ಮುಷ್ಟ್ಯಾ ಅಧಃ ಕೋಟ್ಯೋಃ ಸ್ಥಾನಂ ವಿದ್ರುಮಭೂಷಿತಂ।**
**ತಸ್ಮಾದ್ಬಹುಪುಟಾ ಮಲ್ಲೀ ಸಂಜಾತಾ ವಿವಿಧಾ ಮುನೆ ॥೧೦೨॥**

**ಪುಷ್ಪೋಪಗಾನಿ ರಮ್ಯಾಣಿ ಸುರಭೀಣಿ ಚ ನಾರದ।**
**ಜಾತಿಯುಕ್ತಾನಿ ದೇವೇನ ಸ್ವಯಮಾಚರಿತಾನಿ ಚ ॥೧೦೩॥**

---

ರೀತಿಯಾಗಿ ವಿಭಾಗ ಹೊಂದಿತು. ಚಿನ್ನದ ಕವಲುಳ್ಳ ಪ್ರಕಾಶಮಾನವಾದ ಆ ಧನುಸ್ಸಿನ ಮುಷ್ಟಿಗ್ರಾಹ್ಯ (ಕೈಯಿನಿಂದ ಹಿಡಿಯುವ ಸ್ಥಳ) ವಾದ ಪ್ರದೇಶವು ಸುಗನ್ಧದಿಂದ ಪ್ರಕಾಶಮಾನವಾದ ಸಂಪಿಗೆಯ ಮರವಾಗಿ ಪರಿಣಮಿಸಿತು.

೯೯-೧೦೧. ವಜ್ರಭೂಷಿತವಾಗಿ ರಮಣೀಯವಾಗಿದ್ದ ಆ ಧನುಸ್ಸಿನ ನಾಭಿ ಪ್ರದೇಶವು (ಮಧ್ಯದ ಮೇಲ್ಭಾಗ) ವಕುಲಪುಷ್ಪದ ಅರಣ್ಯವಾಗಿ ಪರಿಣಮಿಸಿತು. ಆ ಅರಣ್ಯಕ್ಕೂ ವಕುಲವೆಂದೇ ಹೆಸರಾಯಿತು. ಇನ್ದ್ರನೀಲಮಣಿಗಳಿಂದ ಅಲಂಕೃತ ವಾದ ಆ ಧನುಸ್ಸಿನ ಕೊನೆಯ ಭಾಗವು ರಮ್ಯವಾದ ಪಾದರಿಯಾಗಿಯೂ ದುಂಬಿಗಳಿಂದ ಮನೋಹರವಾಗಿಯೂ ಆಯಿತು. ಮೌರ್ವೀ ಬಂಧನದ ಮೇಲ್ಭಾಗದಲ್ಲಿರುವ ಚನ್ದ್ರ ಕಾನ್ತಮಣಿಮಯವಾದ ಪ್ರದೇಶವು ಚನ್ದ್ರಕಿರಣಗಳಂತೆ ಶುಭ್ರವಾದ ಐದು ಸುತ್ತಿನ ಜಾಜಿಯಾಗಿ ಪರಿಣಮಿಸಿತು.

೧೦೨-೧೦೪. ಮುಷ್ಟಿಯ ಮೇಲ್ಭಾಗದಲ್ಲೂ ಕೋಟಿಯ (ಅಗ್ರಭಾಗದ) ಕೆಳಭಾಗದಲ್ಲೂ ಇರುವ ಹವಳದ ಕುಡಿಯಿಂದ ಭೂಷಿತವಾದ ಪ್ರದೇಶದಿಂದ ನಾನಾ ವಿಧವಾದ ಹಲವು ಸುತ್ತಿನ ಮಗ್ಗುಗಳುಳ್ಳ ಮಲ್ಲಿಗೆಯು ಉಂಟಾಯಿತು. ಈ ವೃಕ್ಷ

ಮುಮೋಚ ಮಾರ್ಗಣಾನ್ರಮ್ಯಾಂಚ್ಛರೀರೇ ದಹ್ಯತಿ ಸ್ಮರಃ ।
ಫಲೋಪಗಾನಿ ವೃಕ್ಷಾಣಿ ಸಂಭೂತಾನಿ ಸಹಸ್ರಶಃ ॥ ೧೦೪ ॥

ಚೂತಾದೀನಿ ಸುಗಂಧೀನಿ ಸ್ವಾದೂನಿ ವಿವಿಧಾನಿ ಚ ।
ಹರಪ್ರಸಾದಾಜ್ಜಾತಾನಿ ಭೋಜ್ಯಾನ್ಯಪಿ ಸುರೋತ್ತಮೈಃ ॥ ೧೦೫ ॥

ಏವಂ ದಗ್ಧ್ವಾ ಸ್ಮರಂ ರುದ್ರಃ ಸಂಯಮ್ಯ ಸ್ವತನುಂ ವಿಭುಃ ।
ಪುಣ್ಯಾರ್ಥೀ ಶಿಶಿರಾದ್ರಿಂ ಸ ಜಗಾಮ ತಪಸೇಽವ್ಯಯಃ ॥ ೧೦೬ ॥

ಏವಂ ಪುರಾ ದೇವವರೇಣ ಶಂಭುನಾ
ಕಾಮಸ್ತು ದಗ್ಧಃ ಸಶರಃ ಸಚಾಪಃ ।
ತತಸ್ತ್ವನಂಗೇತಿ ಮಹಾಧನುರ್ಧರೋ
ದೇವೈಃ ಸ್ತುತೋ ದೇವವರೈಸ್ತು ಪೂಜಿತಃ ॥ ೧೦೭ ॥

ಇತಿ ಶ್ರೀ ವಾಮನಪುರಾಣೇ ಪುಲಸ್ತ್ಯನಾರದಸಂವಾದೇ
ವಾಮನಪ್ರಾದುರ್ಭಾವೇ ಕಾಮದಾಹೋನಾಮ
ಷಷ್ಠೋಽಧ್ಯಾಯಃ

---

ಲತೆಗಳೆಲ್ಲವೂ ಸುಗಂಧಿಗಳಾದ ಹೂವುಗಳಿಂದ ಕೂಡಿ ಉತ್ತಮ ಜಾತಿಯವಾಗಿ ಮಾಡಲ್ಪಟ್ಟವು. ತನ್ನ ಶರೀರವು ಸುಟ್ಟುಹೋಗುತ್ತಿದ್ದರೂ, ಫಲಪುಷ್ಪಗಳಿಂದ ಕೂಡಿದ ಈ ಮರಗಳನ್ನೇ ಸಹಸ್ರಾರು ಬಾಣಗಳನ್ನಾಗಿ ಮನ್ಮಥನು ಪ್ರಯೋಗಿಸಿದನು.

೧೦೫-೧೦೭. ಈ ಪ್ರಕಾರ ಉತ್ಪನ್ನಗಳಾದ ಸುಗನ್ಧಿಯಾಗಿಯೂ ಸ್ವಾದ್ಯವಾಗಿಯೂ ಇರುವ ಮಾವಿನ ಮರವೇ ಮೊದಲಾದುವು ಹರನ ಅನುಗ್ರಹದಿಂದ ದೇವತೆಗಳಿಗೆ ಭೋಗ್ಯಗಳಾಗಿ ಪರಿಣಮಿಸಿದವು. ಈ ರೀತಿ ಮನ್ಮಥನನ್ನು ನಾಶಪಡಿಸಿ ಇನ್ದ್ರಿಯನಿಗ್ರಹವನ್ನು ಹೊಂದಿ ಪುಣ್ಯಶಾಲಿಗಳಿಂದ ಸುಸೇವಿತವಾಗಿರುವ ಹಿಮವತ್ಪರ್ವತಕ್ಕೆ ತಪಸ್ಸಿಗಾಗಿ ಶಂಕರನು ತೆರಳಿದನು. ಈ ಪ್ರಕಾರ ಚಾಪಬಾಣಸಹಿತನಾದ ಮನ್ಮಥನು ಮಹಾದೇವನಿಂದ ಸುಡಲ್ಪಟ್ಟು ಅನಂಗನೆಂದು ಪ್ರಸಿದ್ಧಿ ಹೊಂದಿದನು. ಅವನ ಸಾಹಸಕ್ಕಾಗಿ ಮೆಚ್ಚಿದ ದೇವತೆಗಳು ಅವನನ್ನು ಸ್ತೋತ್ರಮಾಡಿಯೂ ಪೂಜಿಸಿಯೂ ಸಂತೋಷಪಡಿಸಿದರು.

ಇಲ್ಲಿಗೆ, ಶ್ರೀ ವಾಮನಪುರಾಣದ ವಾಮನಾವತಾರ ಸಂದರ್ಭದಲ್ಲಿ
ಕಾಮದಹನವೆಂಬ ಆರನೆಯ ಅಧ್ಯಾಯವು ಮುಗಿದಿದೆ.

## ಅಧ್ಯಾಯಾರ್ಥ ಸಂಗ್ರಹ

ಈ ಅಧ್ಯಾಯದಲ್ಲಿ ತಪೋನಿರತರಾಗಿ ಬದರಿಕಾಶ್ರಮದಲ್ಲಿ ನೆಲಸಿದ್ದ ನರನಾರಾಯಣರ ತಪಸ್ಸನ್ನು ಕೆಡಿಸುವ ಉದ್ದೇಶದಿಂದ ಇಂದ್ರನು ರಂಭೆಯನ್ನು ಮನ್ಮಥ ವಸಂತರೊಡನೆ ಅಲ್ಲಿಗೆ ಕಳುಹಿಸಿದನೆಂದು ಹೇಳಲ್ಪಟ್ಟ ಕಥಾ ಸಂದರ್ಭದಲ್ಲಿ ಮನ್ಮಥನು ಹೇಗೆ ಅನಂಗನಾದನು ಎಂಬ ನಾರದರ ಉಪಪ್ರಶ್ನೆಗೆ ಸಮಾಧಾನವಾಗಿ ಪುಲಸ್ತ್ಯರು ಹರನಿಂದ ಮಾಡಲ್ಪಟ್ಟ ಮನ್ಮಥ ದೇಹನಾಶದಿಂದ ಅನಂಗ (ಅಂಗವಿಲ್ಲದವನು) ನೆಂದು ಮನ್ಮಥನು ಪ್ರಸಿದ್ಧಿ ಹೊಂದಿದನು ಎಂದು ಉತ್ತರಕೊಟ್ಟರು. ಮತ್ತು ಈಸಂದರ್ಭದಲ್ಲಿ ಮನ್ಮಥನಿಂದ ಈಶ್ವರನಿಗೆ ಉಂಟಾದ ಉನ್ಮಾದ ಮತ್ತು ಸಂತಾಪಗಳನ್ನೂ ವಿವರಿಸಿ ತನ್ನ ಸಂತಾಪವನ್ನು ಪಾಂಚಾಲಕನಲ್ಲಿ ಹಂಚಿ ದಾರುವನಕ್ಕೆ ಹೋದ ಶಂಕರನ ವೃತ್ತಾಂತವನ್ನೂ ಅನಂತರ ವಿಂಧ್ಯಪರ್ವತದಲ್ಲಿ ಪುನಃ ಉಂಟಾದ ಮನ್ಮಥನ ತೊಂದರೆಯನ್ನೂ ವಿವರಿಸಲಾಯಿತು. (ಈ ಸಂದರ್ಭದಲ್ಲಿ ತೇಜಸ್ವಿಯಾಗಿಯೂ ಜಿತೇಂದ್ರಿಯನಾಗಿಯೂ ಇದ್ದು ಮನ್ಮಥದಾಹದಿಂದ ವಿಜಯಶಾಲಿಯಾದ ಹರನು ಉನ್ಮಾದ ಮತ್ತು ಸಂತಾಪಾಸ್ತ್ರಗಳನ್ನು ಪ್ರಯೋಗಿಸುವ ಕಾಲದಲ್ಲೇ ಮನ್ಮಥನನ್ನು ಪರೋಕ್ಷದಲ್ಲಿದ್ದರೂ ನಾಶಪಡಿಸಬಹುದಾಗಿದ್ದಿತು. ಹಾಗೆ ನಾಶಪಡಿಸದೆ ತಾನು ಆ ಅಸ್ತ್ರಗಳಿಗೆ ಗುರಿಯಾಗಿ ಅದರ ಫಲವನ್ನು ಅನುಭವಿಸಿ ತಕ್ಕ ಪ್ರತೀಕಾರವನ್ನು ಕೈಕೊಂಡನೆಂಬ ಅಂಶವು ಕಾಮಸಂಬಂಧಿಯಾದ ಆತಂಕವು ಪ್ರಾಣಿಸಾಮಾನ್ಯಕ್ಕೂ ದುಸ್ಸಹವೆಂಬ ವಿಷಯವನ್ನು ತನ್ನ ಅನುಭವದಿಂದ ನಿದರ್ಶಿಸಿ ತೋರಿಸುವ ತಾತ್ಪರ್ಯದಿಂದ ಸಮಂಜಸಪಡಿಸತಕ್ಕದ್ದಾಗಿದೆ. "ಕಾಮ ಏಷ ಕ್ರೋಧ ಏಷ ರಜೋಗುಣ ಸಮುದ್ಭವಃ" ಎಂಬ ಗೀತಾವಚನವೂ ವಿಷಯಾನುರಾಗವೆಂಬ ಮನೋವೃತ್ತಿಯು ಚೇತನನಿಗೆ ಸರ್ವಜ್ಞಾನನಾಶಕವಾದ ದೊಡ್ಡ ಶತ್ರುವೆಂದು ಹೇಳುತ್ತದೆ. ಮನ್ಮಥನ ವ್ಯಾಪಾರವೆಲ್ಲವೂ ಇಂತಹ ಚಿತ್ತವೃತ್ತಿಯುಂಟಾಗಲು ಕಾರಣವಾಗುತ್ತದೆ.)

॥ ಶ್ರೀಃ ॥

# ಶ್ರೀವಾಮನಪುರಾಣಂ

## ಸಪ್ತಮೋಽಧ್ಯಾಯಃ

### ಪುಲಸ್ತ್ಯ ಉವಾಚ

ತತೋಽನಂಗಂ ವಿಭುರ್ದೃಷ್ಟ್ವಾ ಬ್ರಹ್ಮನ್ನಾರಾಯಣೋ ಮುನಿಃ ।
ವಿಹಸ್ಯೈವಂ ವಚಃ ಪ್ರಾಹ ಕಂದರ್ಪ ಇಹ ಆಸ್ಯತಾಂ ॥ ೧ ॥

ತದಕ್ಷುಬ್ಧತ್ವಮಾಕ್ಷ್ಯಾಸ್ಯ ಕಾಮೋ ವಿಸ್ಮಯಮಾಗತಃ ।
ವಸಂತೋಽಪಿ ಮಹಾಚಿಂತಾಂ ಜಗಾಮಾಶು ಮಹಾಮುನೇ ॥ ೨ ॥

ತತಶ್ಚಾಪ್ಸರಸೋ ದೃಷ್ಟ್ವಾ ಸ್ವಾಗತೇನಾಭಿಪೂಜ್ಯ ಚ ।
ವಸಂತಮಾಹ ಭಗವಾನೇಹ್ಯೇಹಿ ಸ್ಥೀಯತಾಮಿತಃ ॥ ೩ ॥

---

### ಏಳನೆಯ ಅಧ್ಯಾಯವು

೧-೩. ಪುಲಸ್ತ್ಯರು ಹೇಳುತ್ತಾರೆ: ಎಲೈ ಮಹಾಮುನಿಯೇ, ಅನಂತರ ಅನಂಗನನ್ನು ತನ್ನ ದಿವ್ಯದೃಷ್ಟಿಯಿಂದ ನೋಡಿ ನಾರಾಯಣನು ನಗುತ್ತಾ ಎಲೈ ಕಂದರ್ಪನೇ ಇಲ್ಲಿ ಬಾ ಕುಳಿತುಕೊ ಎಂದು ಹೇಳಲಾಗಿ ಸ್ವಲ್ಪವೂ ಚಿತ್ತವಿಕಾರವಿಲ್ಲದ ಸತ್ವಮಯನಾದ ನಾರಾಯಣನ ಹೃದಯವನ್ನು ವಿಮರ್ಶಿಸಿ ಮನ್ಮಥನೇ ಆಶ್ಚರ್ಯಗೊಂಡನು. ವಸಂತನೂ ಇಂಥವನನ್ನು ಜಯಿಸಲು ಬಂದಿರುವ ನಮ್ಮ ಪ್ರಯತ್ನವು ಹೇಗೆ ಯಶಸ್ವಿಯಾದೀತೆಂದು ಚಿಂತಾಪರವಶನಾದನು. ಅನಂತರ ಅಪ್ಸರಸ್ತ್ರೀಯರನ್ನು ಕರೆದು ಸ್ವಾಗತಾಭಿನಂದನಪೂರ್ವಕವಾಗಿ ಅವರನ್ನೂ ಸತ್ಕರಿಸಿ ವಸಂತನನ್ನು ಕುರಿತು ಅಯ್ಯಾ ವಸಂತನೇ ಇಲ್ಲಿ ಬಾ ಕುಳಿತುಕೋ ಎಂದು ಸತ್ಕರಿಸಲುಪಕ್ರಮಿಸಿದನು. [ನಮ್ಮನ್ನು ನೋಡಿದ ಮಾತ್ರದಿಂದಲೇ ಕಾಮಮೋಹಿತನಾಗಿ ಅವಿವೇಕಿಯಾಗಬೇಕು. ಇವನು ಮಾತ್ರ ನೋಡಿದರೂ ಮುಗ್ಧನಾಗದೆ ಸ್ವಾತ್ವಿಕಸ್ವಭಾವದಿಂದ ನಮ್ಮನ್ನೇ ಜಯಿಸಿರುತ್ತಾನೆ ಎಂದು ಮನ್ಮಥವಸಂತರಿಗೆ ಆಶ್ಚರ್ಯ ಮತ್ತು ಚಿಂತೆ.]

**ತತೋ ವಿಹಸ್ಯ ಭಗವಾನ್ಮಂಜರೀಂ ಕುಸುಮಾವೃತಾಂ ।**
**ಆದಾಯ ಪ್ರಾಕ್ಸುವರ್ಣಾಂಗೀಮೂರ್ವೋರ್ಬಾಲಾಂ ವಿನಿರ್ಮಮೇ ॥ ೪ ॥**

**ಊರೂದ್ಭವಾಂ ಸ ಕಂದರ್ಪೋ ದೃಷ್ಟ್ವಾ ಸರ್ವಾಂಗಸುಂದರೀಂ ।**
**ಅಮನ್ಯತ ತದಾನಂಗಃ ಕಿಮಿಯಂ ಸಾ ಪ್ರಿಯಾ ರತಿಃ ॥ ೫ ॥**

**ತದೇವ *ವಚನಂ ಚಾರು ಸ್ವಕ್ಷಿಭ್ರೂಕುಟಿಲಾಲಕಂ ।**
**ಸುನಾಸಾವಂಶಾಧರೋಷ್ಠಮಾಲೋಕನಪರಾಯಣಂ ॥ ೬ ॥**

**ತಾವೇವ ಚಾಪ್ಯವಿರಲೌ ಪೀವರೌ ಮಗ್ನಚೂಚುಕೌ ।**
**ರಾಜೇತೆಸ್ಯಾಃ ಕುಚೌ ಪೀನೌ ಸಜ್ಜನಾವಿವ ಸಂಹತೌ ॥ ೭ ॥**

**ತದೇವ ತನು ಚಾರ್ವಂಗ್ಯಾ ವಲಿತ್ರಯವಿಭೂಷಿತಂ ।**
**ಉದರಂ ರಾಜತೇ ಶ್ಲಕ್ಷ್ಣಂ ರೋಮಾವಲಿವಿಭೂಷಿತಂ ॥ ೮ ॥**

---

೪-೬. ಅನಂತರ ಮನ್ಮಥನನ್ನೇ ಮೋಹಗೊಳಿಸಲು ಉದ್ಯುಕ್ತನಾದ ನಾರಾಯಣನು ನಗುತ್ತಾ ಹೂವಿನಿಂದ ಕೂಡಿದ ಒಂದು ಗೊಂಚಲನ್ನು ತೆಗೆದುಕೊಂಡು ಅದನ್ನು ತನ್ನ ತೊಡೆಗೆ ಹೊಡೆದು ಸುವರ್ಣಾವಯವಗಳುಳ್ಳ ವಧುವನ್ನು ನಿರ್ಮಾಣ ಮಾಡಿದನು. ಆ ಊರ್ವಶಿಯನ್ನು ನೋಡಿ ಮನ್ಮಥನು ಮೋಹಿತನಾಗಿ ಸರ್ವಾಂಗ ಸುಂದರಿಯಾದ ಈ ವಧುವು ಆ ನನ್ನ ರತೀದೇವಿಯೇ ಎಂದು ಭ್ರಮೆಗೊಂಡನು. ರಮಣೀಯವಾದ ಕಣ್ಣು ಮತ್ತು ಹುಬ್ಬುಗಳುಳ್ಳ ವಕ್ರವಾದ ಮುಂಗುರುಳುಳ್ಳ ದೀರ್ಘವಾದ ನಾಸಿಕೆಯುಳ್ಳ ಕೆಂಪಾದ ತುಟಿಯುಳ್ಳ ನನ್ನನ್ನೇ ನೋಡುತ್ತಿರುವ ಆ ರತಿಯ ಮುಖದಂತೆಯೇ ಇವಳ ಮುಖವೂ ತೋರುತ್ತಿದೆ.

೭-೮. ರತಿಯ ಸ್ತನಗಳಂತೆಯೇ ಇವಳ ಸ್ತನಗಳೂ ಸಹ ಪರಸ್ಪರ ಎಡೆಬಿಡದೆಯೂ, ಸ್ಥೂಲಗಳಾಗಿಯೂ, ಅವನತವಾದ ಅಗ್ರಭಾಗ ಉಳ್ಳವುಗಳಾಗಿಯೂ ಸಜ್ಜನರಂತೆ ಒಂದನ್ನೊಂದು ಹೊಂದಿಕ್ಕೊಂಡಿವೆ. ಮಧ್ಯಭಾಗವೂ ಸಹ ರತಿಯ ಮಧ್ಯಭಾಗದಂತೆ ಕೃಶವಾಗಿ ವಲಿತ್ರಯದಿಂದಲೂ, ರೋಮರಾಜಿಯಿಂದಲೂ ಪ್ರಕಾಶಿಸುತ್ತಿದೆ.

---

* ಇಲ್ಲಿ 'ವದನಂ' ಎಂದು ಪಾಠವಿರಬೇಕೆಂದು ತೋರುತ್ತದೆ.

ರೋಮಾವಲೀ ಚ ಜಘನಾದ್ಯಾತಿ ಸ್ತನತಟದ್ವಯಂ।
ರಾಜತೇ ಭೃಂಗಮಾಲೇವ ಪುಲಿನಾತ್ಕಮಲಾಕರಂ ॥೯॥

ಜಘನಂ ತ್ವತಿವಿಸ್ತೀರ್ಣಂ ಭಾತ್ಯಸ್ಯಾ ರಸನಾವೃತಂ।
ಕ್ಷೀರೋದಮಥನೇ ನದ್ಧಂ ಭುಜಂಗೇನೇವ ಮಂದರಂ ॥೧೦॥

ಕದಲೀಸ್ತಂಭಸದೃಶೈರೂರ್ಧ್ವಮೂಲೈರಥೋರುಭಿಃ।
ವಿಭಾತಿ ಸಾ ಸುಚಾರ್ವಂಗೀ ಪದ್ಮಕಿಂಜಲ್ಕಸಂನಿಭಾ ॥೧೧॥

ಜಾನುನೀ ಗೂಢಗುಲ್ಫೇ ಚ ಶುಭೇ ಜಂಘೇ ತ್ವರೋಮಶೇ।
ವಿಭಾತ್ಯಸ್ಯಾಸ್ತಥಾ ಪಾದಾವಲಕ್ತಕಸಮತ್ವಿಷೌ ॥೧೨॥

ಇತಿ ಸಂಚಿಂತಯನ್ಕಾಮಸ್ತಾಮನಿಂದಿತಲೋಚನಾಂ।
ಕಾಮಾತುರೋಽಸೌ ಸಂಜಾತಃ ಕಿಮುತಾನ್ಯೋ ಜನೋ ಮುನೇ ॥೧೩॥

ಮಾಧವೋಽಪ್ಯುರ್ವಶೀಂ ದೃಷ್ಟ್ವಾ ಸಂಚಿಂತಯತಿ ನಾರದ।
ಕಿಂ ಸ್ವಿತ್ಕಾಮನರೇಂದ್ರಸ್ಯ ರಾಜಧಾನೀ ಸ್ವಯಂ ಸ್ಥಿತಾ ॥೧೪॥

---

ರೋಮಾವಲಿಯೂ ಸಹ ಮರಳಿನ ದಿಣ್ಣೆಯಿಂದ ಸರೋವರಕ್ಕೆ ಅಭಿಮುಖವಾಗಿ ಹೋಗುತ್ತಿರುವ ದುಂಬಿಗಳ ಪಂಕ್ತಿಯಂತೆ ಜಘನಪ್ರದೇಶದಿಂದ ಸ್ತನತಟದವರಿಗೂ ಪ್ರಸರಿಸಿದೆ.

೧೦-೧೨. ವಡ್ಯಾಣದಿಂದ ಕೂಡಿದ ವಿಸ್ತೀರ್ಣವಾದ ಜಘನವು ಕ್ಷೀರಸಮುದ್ರವನ್ನು ಮಥನಮಾಡುವಕಾಲದಲ್ಲಿ ಸರ್ಪದಿಂದ ಸುತ್ತಲ್ಪಟ್ಟ ಮಂದರಪರ್ವತದಂತೆ ಶೋಭಿಸುತ್ತಿದೆ. ಕೆಳಮುಖವಾಗಿರುವ ಬಾಳೆಯ ಕಂಭಗಳಂತೆ ತೊಡೆಗಳು ರಮಣೀಯವಾಗಿವೆ. ಕಮಲಗಳ ಕುಸುಮಗಳಂತೆ ಸುಕುಮಾರಿಯೂ ಆಗಿದ್ದಾಳೆ. ಮಂಡಿಗಳು ಗೂಢವಾದ ಗ್ರಂಥಿ (ಹರಡು) ಯುಳ್ಳವುಗಳಾಗಿಯೂ ಮೊಣಕಾಲುಗಳು ಕೂದಲಿಲ್ಲದೆ ರಮ್ಯಗಳಾಗಿಯೂ ಕಾಲುಗಳು ಅರಗಿನರಸದಂತೆ ಕೆಂಪಾಗಿಯೂ ಶೋಭಿಸುತ್ತಿವೆ.

೧೩-೧೪. ಈ ರೀತಿಯಾಗಿ ಆ ಸುಕುಮಾರಿಯಾದ ಊರ್ವಶಿಯನ್ನು ನೋಡಿ ಆಲೋಚಿಸುತ್ತಾ ಮನ್ಮಥನು ತಾನೇ ಅವಳಲ್ಲಿ ಕಾಮಾತುರನಾದನು. ಎಲೈ ಮುನಿಯೇ, ಮನ್ಮಥನ ಸ್ಥಿತಿಯೇ ಹೀಗಿರುವಾಗ ಇತರರ ಪಾಡೇನು. ಹರಿಯೂ

**ಅಜ್ಞಾತಾ ಶಶಿನೋ ನೂನಮಿಯಂ ಕಾಂತಿರ್ನಿಶಾಕ್ಷಯೇ ।**
**ರವಿರಶ್ಮಿಪ್ರತಾಪಾರ್ತಿಭೀತಾ ಶರಣಮಾಗತಾ** ॥ ೧೫ ॥

**ಇತ್ಥಂ ಸಂಚಿಂತಯನ್ನೇವ ಅವಷ್ಟಭ್ಯಾಪ್ಸರೋಗಣಂ ।**
**ತಸ್ಥೌ ಮುನಿರಿವ ಧ್ಯಾನಮಾಸ್ಥಿತಃ ಸ ತು ಮಾಧವಃ** ॥ ೧೬ ॥

**ತತಃ ಸ ವಿಸ್ಮಿತಾನ್ಸರ್ವಾನ್ಕಂದರ್ಪಾದೀನ್ಮಹಾಮುನೇ ।**
**ದೃಷ್ಟ್ವಾ ಪ್ರೋವಾಚ ವಚನಂ ಸ್ಮಿತಂ ಕೃತ್ವಾ ಶುಭವ್ರತಃ** ॥ ೧೭ ॥

**ಇಯಂ ಮಮೋರುಸಂಭೂತಾ ಕಾಮಾಪ್ಸರಸಮಾಧವೀ ।**
**ನೀಯತಾಂ ಸುರಲೋಕಾಯ ದೀಯತಾಂ ವಾಸವಾಯ ಚ** ॥ ೧೮ ॥

---

ಕೂಡ ಅಂತಹ ಊರ್ವಶಿಯನ್ನು ನೋಡಿ ಮನ್ಮಥನ ರಾಜಧಾನಿಯೇ ಈ ರೀತಿ ಅವತರಿಸಿದೆ ಎಂದು ತಿಳಿದು ವಿಸ್ಮಿತನಾದನು. ಬಹುಶಃ ರಾತ್ರಿಯು ಕಳೆದಮೇಲೆ ಕೆಳಕ್ಕೆ ಬಿದ್ದ ಚಂದ್ರನಿಂದಲೂ ತಿಳಿಯಲ್ಪಡದ ಅವನ ಕಾಂತಿಯು ಸೂರ್ಯರಶ್ಮಿಯಿಂದ ಭಯಪಟ್ಟು ಇಲ್ಲಿ ಶರಣಾಗತವಾಗಿ ಬಂದಿರಬಹುದು.

೧೬-೧೮. ಈ ಪ್ರಕಾರವಾಗಿ ಆಲೋಚಿಸುತ್ತಾ ಮಾಧವನು ಅಪ್ಸರಸ್ಸುಗಳನ್ನೆಲ್ಲಾ ಜಿತೇಂದ್ರಿಯತೆಯಿಂದ ತಡೆದು ಮುನಿಯಂತೆ ಧ್ಯಾನಶೀಲನಾಗಿ ಕುಳಿತನು. ಧ್ಯಾನದ ದೃಷ್ಟಿಯಿಂದ ಕರ್ತವ್ಯಕಾರ್ಯವನ್ನು ನಿರ್ಧರಿಸಿ ಊರ್ವಶಿಯ ರೂಪಲಾವಣ್ಯದಿಂದ ಆಶ್ಚರ್ಯಭರಿತರಾಗಿರುವ ಮನ್ಮಥನೇ ಮೊದಲಾದವರನ್ನು ಕುರಿತು ನಗುತ್ತಾ ಹೀಗೆ ಹೇಳುತ್ತಾನೆ. (ಇಲ್ಲಿ ಈ ನಗುವಿಗೆ ಎಲ್ಲರನ್ನೂ ಮೋಹಗೊಳಿಸುವ ನೀನೇ ನನ್ನಿಂದ ಮೋಹಗೊಳಿಸಲ್ಪಟ್ಟು ಪರಾಜಿತನಾಗಿದ್ದೀಯೆ ಎಂಬ ಉಪಹಾಸದಲ್ಲಿ ತಾತ್ಪರ್ಯ.) ಈ ಊರ್ವಶಿಯು ನನ್ನ ತೊಡೆಯಿಂದ ಹುಟ್ಟಿದವಳು. ಇವಳನ್ನು ಮಾಧವನಿಂದ ಉತ್ಪನ್ನಳಾದ ಅಪ್ಸರಸ್ಸೆಂದು ಭಾವಿಸು. ಇವಳನ್ನು ಇಂದ್ರಲೋಕಕ್ಕೆ ಕರೆದುಕೊಂಡುಹೋಗಿ ಇಂದ್ರನಿಗೆ ಒಪ್ಪಿಸು ಎಂದನು. (ಇಲ್ಲಿ ಶುಭವ್ರತಃ ಎಂಬ ವಿಶೇಷಣವು ಊರ್ವಶಿಯ ವಿಷಯದಲ್ಲಿ ತನಗೆ ಸ್ವಲ್ಪವೂ ಕಾಮದೋಷವಿಲ್ಲವೆಂಬುದನ್ನು ಸೂಚಿಸುತ್ತದೆ.)

ಇತ್ಯುಕ್ತಾಃ ಕಂಪಮಾನಾಸ್ತೇ ಜಗ್ಮುರ್ಗೃಹ್ಯೋರ್ವಶೀಂ ದಿವಂ।
ಸಹಸ್ರಾಕ್ಷಾಯ ತೇ ಪ್ರೋಚೂರೂಪಯೌವನಶಾಲಿನೀಂ ॥ ೧೯ ॥

ಆಚಖ್ಯುಶ್ಚರಿತಂ ತಾಭ್ಯಾಂ ಧರ್ಮಜ್ಞಾಭ್ಯಾಂ ಮಹಾಮುನೇ।
ದೇವರಾಜಾಯ ಕಾಮಾದ್ಯಾಸ್ತತೋಽಭೂದ್ವಿಸ್ಮಯಃ ಪರಂ ॥ ೨೦ ॥

ಏತಾದೃಶಂ ಹಿ ಚರಿತಂ ಖ್ಯಾತಿಮಗ್ರ್ಯಾಂ ಜಗಾಮಹ।
ಪಾತಾಲೇಷು ತಥಾ ಮರ್ತ್ಯೇ ದಿಕ್ಷ್ವಷ್ಟಾಸು ಜಗಾಮ ಚ ॥ ೨೧ ॥

ಏಕದಾ ನಿಹತೇ ರೌದ್ರೇ ಹಿರಣ್ಯಕಶಿಪೌ ಮುನೇ।
ಅಭಿಷಿಕ್ತಸ್ತದಾ ರಾಜ್ಯೇ ಪ್ರಹ್ಲಾದೋ ನಾಮ ದಾನವಃ ॥ ೨೨ ॥

ತಸ್ಮಿಂಚ್ಛಾಸತಿ ದೈತ್ಯೇಂದ್ರೇ ದೇವಬ್ರಾಹ್ಮಣಪೂಜಕೇ।
ಮಖಾನ್ಭೂಮ್ಯಾಂ ನೃಪತಯೋ ಯಜಂತೇ ವಿಧಿವತ್ತದಾ ॥ ೨೩ ॥

---

೧೯-೨೧. ಹೀಗೆ ಹೇಳಲ್ಪಟ್ಟ ಮನ್ಮಥನೇ ಮೊದಲಾದವರು ನಾರಾಯಣನ ಮಹಿಮೆಯನ್ನು ನೋಡಿ ಭಯದಿಂದ ನಡುಗುತ್ತಾ ಅವನ ಆಜ್ಞೆಯಂತೆ ಊರ್ವಶಿಯನ್ನು ಸ್ವರ್ಗಲೋಕಕ್ಕೆ ಕೊಂಡೊಯ್ದರು. ರೂಪಯೌವನಶಾಲಿನಿಯಾದ ಊರ್ವಶಿಯನ್ನು ಇಂದ್ರನಿಗೆ ಒಪ್ಪಿಸಿ ಧರ್ಮಜ್ಞರಾದ ನರನಾರಾಯಣರ ಚರಿತ್ರೆಯನ್ನೂ ಹೇಳಿದರು. ಇಂದ್ರನೂ ಇವರ ಚರಿತ್ರೆಯಿಂದ ಆಶ್ಚರ್ಯಭರಿತನಾದನು. ಈ ವಿಧವಾದ ಈ ವೃತ್ತಾಂತವು ಪಾತಾಲಲೋಕದಲ್ಲಿಯೂ, ಮನುಷ್ಯಲೋಕದಲ್ಲಿಯೂ, ಅಷ್ಟದಿಕ್ಕುಗಳಲ್ಲಿಯೂ ಬಹಳ ಖ್ಯಾತಿಹೊಂದಿತು.

೨೨-೨೫. ಒಂದಾನೊಂದು ಕಾಲದಲ್ಲಿ ಕ್ರೂರನಾದ ಹಿರಣ್ಯಕಶಿಪುವು ಕೊಲ್ಲಲ್ಪಟ್ಟ ತರುವಾಯ ಪ್ರಹ್ಲಾದನೆಂಬ ದಾನವನು ಅವನ ರಾಜ್ಯದಲ್ಲಿ ಅಭಿಷಿಕ್ತನಾದನು. ದೇವಬ್ರಾಹ್ಮಣಪೂಜಕನಾದ ಆ ಪ್ರಹ್ಲಾದನು ರಾಜ್ಯವಾಳುತ್ತಿರುವಾಗ ರಾಜರುಗಳೆಲ್ಲರೂ ಭೂಮಿಯಲ್ಲಿ ಯಜ್ಞಯಾಗಾದಿಗಳಲ್ಲಿ ನಿರತರಾಗಿದ್ದರು. ಬ್ರಾಹ್ಮಣರೆಲ್ಲರೂ ತಪಸ್ಸು (ಕೃಚ್ಛ್ರಚಾಂದ್ರಾಯಣಾದಿಕಾಯಕ್ಲೇಶಸಾಧ್ಯವಾದದ್ದು) ಧರ್ಮ (ಯಜ್ಞಯಾಗನಿತ್ಯನೈಮಿತ್ತಿಕಕರ್ಮಗಳು) ತೀರ್ಥಯಾತ್ರೆ ಮೊದಲಾದ ಆಶ್ರಮಕರ್ಮದಲ್ಲಿ ನಿರತರಾಗಿದ್ದರು. ವೈಶ್ಯರು ಪಶುಪಾಲನವೃತ್ತಿಯಲ್ಲೂ, ಶೂದ್ರರು

ಬ್ರಾಹ್ಮಣಾಶ್ಚ ತಪೋಧರ್ಮಂ ತೀರ್ಥಯಾತ್ರಾಂ ಚ ಕುರ್ವತೇ ।
ವೈಶ್ಯಾಶ್ಚ ಪಶುವೃತ್ತಿಸ್ಥಾಃ ಶೂದ್ರಾಃ ಶುಶ್ರೂಷಣೇ ರತಾಃ ॥ ೨೪ ॥

ಚಾತುರ್ವರ್ಣ್ಯಂ ತತಸ್ತ್ರಸ್ಥಾವಾಶ್ರಮೇ ಧರ್ಮಕರ್ಮಣಿ ।
ಅವರ್ತಂತ ತತೋ ದೇವಾ ವೃತ್ತ್ಯಾ ಯುಕ್ತಾಭವನ್ಮುನೇ ॥ ೨೫ ॥

ತತಸ್ತು ಚ್ಯವನೋ ನಾಮ ಭಾರ್ಗವೇಂದ್ರೋ ಮಹಾತಪಾಃ ।
ಜಗಾಮ ನರ್ಮದಾಂ ಸ್ನಾತುಂ ತೀರ್ಥಂ ನೈನಾಕುಲೇಶ್ವರಂ ॥ ೨೬ ॥

ತತ್ರ ದೃಷ್ಟ್ವಾ ಮಹಾದೇವಂ ನದೀಂ ಸ್ನಾತುಮುವಾತರತ್ ।
ಅವತೀರ್ಣಂ ಪ್ರಜಗ್ರಾಹ ನಾಗಃ ಕೇಕರಲೋಹಿತಃ ॥ ೨೭ ॥

ಗೃಹೀತಸ್ತೇನ ನಾಗೇನ ಸಸ್ಮಾರ ಮನಸಾ ಹರಿಂ ।
ಸಂಸ್ಮೃತೇ ಪುಂಡರೀಕಾಕ್ಷೇ ನಿರ್ವಿಷೋಭೂನ್ಮಹೋರಗಃ ॥ ೨೮ ॥

ನೀತಸ್ತೇನಾತಿರೌದ್ರೇಣ ಪನ್ನಗೇನ ರಸಾತಲಂ ।
ನಿರ್ವಿಷಶ್ಚಾಪಿ ತತ್ಯಾಜ ಚ್ಯವನಂ ಭುಜಗೋತ್ತಮಃ ॥ ೨೯ ॥

---

ಬ್ರಾಹ್ಮಣಾದಿವರ್ಣತ್ರಯದ ಸೇವೆಯಲ್ಲಿಯೂ ಆಸಕ್ತರಾಗಿದ್ದರು. ನಾಲ್ಕು ವರ್ಣದವರೂ ಅವರವರ ಆಶ್ರಮಕ್ಕೆ ತಕ್ಕ ಧರ್ಮಾನುಷ್ಠಾನದಲ್ಲಿ ನಿರತರಾಗಿದ್ದುದರಿಂದ ದೇವತೆಗಳೂ ಯಜ್ಞಯಾಗಾದಿಗಳಲ್ಲಿ ಗೌರವಿಸಲ್ಪಡುತ್ತಾ ತಮ್ಮ ವೃತ್ತಿಯಿಂದ ತೃಪ್ತರಾಗಿದ್ದರು.

೨೬-೨೯. ಚ್ಯವನನೆಂಬ ಒಬ್ಬ ಭಾರ್ಗವವಂಶದ ಮಹಾತಪಸ್ವಿ ಇದ್ದನು ಅವನು ಸ್ನಾನಮಾಡಲು ನರ್ಮದಾನದಿಗೆ ಹೋಗಿ ಅಲ್ಲಿ ನೈನಾಕುಲೇಶ್ವರವೆಂದು ಪ್ರಸಿದ್ಧವಾದ ತೀರ್ಥದಲ್ಲಿ ಸ್ನಾನಕ್ಕಾಗಿ ಇಳಿದನು. ಮಹಾದೇವನ ದರ್ಶನಮಾಡಿ ಅಲ್ಲಿ ಸ್ನಾನಮಾಡಲು ನದಿಗೆ ಇಳಿದ ಇವನನ್ನು ಅಲ್ಲಿದ್ದ ಕೇಕರಲೋಹಿತವೆಂಬ ಸರ್ಪವು ಹಿಡಿದುಕೊಂಡಿತು. ಹಾಗೆ ಸರ್ಪದಿಂದ ಗ್ರಹಿಸಲ್ಪಟ್ಟ ಚ್ಯವನನು ಮನಸ್ಸಿನಿಂದಲೇ ಹರಿಯನ್ನು ಧ್ಯಾನಮಾಡಿದನು. ಹರಿಯ ಸ್ಮರಣೆಯನ್ನು ಮಾಡಿದೊಡನೆಯೇ ಆ ಸರ್ಪವು ನಿರ್ವಿಷವಾಯಿತು. ಭಯಂಕರವಾದ ಆ ಸರ್ಪದಿಂದ ಪಾತಾಲಲೋಕಕ್ಕೆ ಒಯ್ಯಲ್ಪಟ್ಟ ಚ್ಯವನನೂ ವಿಷರಹಿತವಾದ ಆ ಸರ್ಪದಿಂದ ಬಿಡಲ್ಪಟ್ಟನು.

ಸಂತ್ಯಕ್ತಮಾತ್ರೋ ನಾಗೇನ ಚ್ಯವನೋ ಭಾರ್ಗವೋತ್ತಮಃ ।
ಚಚಾರ ನಾಗಕನ್ಯಾಭಿಃ ಪೂಜ್ಯಮಾನಃ ಸಮಂತತಃ ॥ ೩೦ ॥

ವಿಚರನ್ಸ್ರವಿವೇಶಾಥ ದಾನವಾನಾಂ ಮಹತ್ಪುರಂ ।
ಸಂಪೂಜ್ಯಮಾನೋ ದೈತ್ಯೇಂದ್ರೈಃ ಪ್ರಹ್ಲಾದೋಥ ದದರ್ಶ ತಂ ॥ ೩೧ ॥

ಭೃಗುಪುತ್ರೋ ಮಹಾತೇಜಾಃ ಪೂಜಾಂ ಚಕ್ರೇ ಯಥಾರ್ಹತಃ ।
ಸಂಪೂಜಿತೋಽಪವಿಷ್ಟಶ್ಚ ಪೃಷ್ಟಶ್ಚಾನಾಮಯಂ ಪ್ರತಿ ॥ ೩೨ ॥

ಸ ಚೋವಾಚ ಮಹಾತೇಜಾ ಮಹಾತೀರ್ಥೇ ಮಹಾಫಲಂ ।
ಸ್ನಾತುಮೇವಾಗತೋಽಸ್ಮ್ಯದ್ಯ ದ್ರಷ್ಟುಂ ವೈನಾಕುಲೇಶ್ವರಂ ॥ ೩೩ ॥

ನದ್ಯಾಮೇವಾವತೀರ್ಣೋಽಸ್ಮಿ ಗೃಹೀತಶ್ಚಾಹಿನಾ ಬಲಾತ್ ।
ಸಮಾನೀತೋಽಸ್ಮಿ ಪಾತಾಲೇ ದೃಷ್ಟಶ್ಚಾತ್ರ ಭವಾನಪಿ ॥ ೩೪ ॥

ಏತಚ್ಛ್ರುತ್ವಾ ಚ ವಚನಂ ಚ್ಯವನಸ್ಯ ದಿತೀಶ್ವರಃ ।
ಪ್ರೋವಾಚ ಧರ್ಮಸಂಯುಕ್ತಂ ಸ ವಾಕ್ಯಂ ವಾಕ್ಯಕೋವಿದಃ ॥ ೩೫ ॥

---

೩೦-೩೨. ಆ ಸರ್ಪದಿಂದ ಬಿಡಲ್ಪಟ್ಟೊಡನೆಯೇ ಭೃಗುಪುತ್ರನಾದ ಆ ಚ್ಯವನನು ಅಲ್ಲಿ ನೆಲಸಿರುವ ನಾಗಕನ್ಯಕೆಗಳಿಂದ ಸತ್ಕರಿಸಲ್ಪಟ್ಟವನಾಗಿ ಸಂಚರಿಸಲಾರಂಭಿಸಿದನು. ಹೀಗೆಯೇ ಸಂಚರಿಸುತ್ತಾ ದಾನವರ ಮಹಾಗರವನ್ನು ಪ್ರವೇಶಿಸಿದನು. ದೈತ್ಯಶ್ರೇಷ್ಠರೆಲ್ಲರೂ ಅವನನ್ನು ಸತ್ಕರಿಸಿದರು. ಅಲ್ಲಿದ್ದ ಪ್ರಹ್ಲಾದನೂ ಅವನನ್ನು ನೋಡಿದನು. ಭೃಗುಪುತ್ರನಾದ ಚ್ಯವನನು ಪ್ರಹ್ಲಾದನನ್ನು ಗೌರವಿಸಿದನು. ಪ್ರಹ್ಲಾದನೂ ಸಹ ಅವನನ್ನು ಸತ್ಕರಿಸಿ ಕುಳ್ಳಿರಿಸಿಕೊಂಡು ಯೋಗಕ್ಷೇಮವನ್ನು ವಿಚಾರಿಸಿದನು. ಚ್ಯವನಋಷಿಯೂ ಸಹ ಪ್ರತ್ಯುತ್ತರ ಹೇಳುತ್ತಾನೆ.

೩೩-೩೫. ಮಹಾತಪಸ್ವಿಯಾದ ಆ ಋಷಿಯು ಮಹಾಫಲಪ್ರದನಾದ ವೈನಾಕುಲೇಶ್ವರನನ್ನು ದರ್ಶನಮಾಡಿ ಮಹಾತೀರ್ಥದಲ್ಲಿ ಸ್ನಾನಮಾಡಲು ಬಂದಿದ್ದೆನು. ಅಲ್ಲಿ ನದಿಯ ಸ್ನಾನಕ್ಕಾಗಿ ಇಳಿದ ನನ್ನನ್ನು ಸರ್ಪವು ಬಲಾತ್ಕಾರದಿಂದ ಹಿಡಿದುಕೊಂಡಿತು. ಆ ಸರ್ಪದಿಂದಲೇ ನಾನು ಈ ಪಾತಾಲಕ್ಕೆ ಒಯ್ಯಲ್ಪಟ್ಟೆನು. ಪೂಜ್ಯನಾದ ನಿನ್ನ ದರ್ಶನವೂ ಇಲ್ಲಿ ಲಭಿಸಿತು ಎಂದನು. ಈ ಮಾತನ್ನು ಕೇಳಿ ಪ್ರಹ್ಲಾದನು ಆ ಮುನಿಯನ್ನು ಕುರಿತು ಧರ್ಮಪರವಾದ ಮಾತನ್ನು ಹೇಳುತ್ತಾನೆ.

## ಪ್ರಹ್ಲಾದ ಉವಾಚ

**ಭಗವನ್ಕಾನಿ ತೀರ್ಥಾನಿ ಪೃಥಿವ್ಯಾಂ ಕಾನಿ ಚಾಂಬರೇ ।**
**ರಸಾತಲೇ ಚ ಕಾನಿ ಸ್ಯುರೇತದ್ವಕ್ತುಂ ತ್ವಮರ್ಹಸಿ ॥ ೩೭ ॥**

## ಚ್ಯವನ ಉವಾಚ

**ಪೃಥಿವ್ಯಾಂ ನೈಮಿಷಂ ತೀರ್ಥಮಂತರಿಕ್ಷೇ ಚ ಪುಷ್ಕರಂ ।**
**ಚಕ್ರತೀರ್ಥಂ ಮಹಾಬಾಹೋ ರಸಾತಲಸ್ಯತಂ ವಿದುಃ ॥ ೩೭ ॥**

## ಪುಲಸ್ತ್ಯ ಉವಾಚ

**ಶ್ರುತ್ವಾ ತದ್ಭಾರ್ಗವವಚೋ ದೈತ್ಯರಾಜೋ ಮಹಾಮುನೇ ।**
**ನೈಮಿಷಂ ಗಂತುಕಾಮೋಽಭೂದ್ದಾನವಾನಿದಮಬ್ರವೀತ್ ॥ ೩೮ ॥**

## ಪ್ರಹ್ಲಾದ ಉವಾಚ

**ಉತ್ತಿಷ್ಠಧ್ವಂ ಗಮಿಷ್ಯಾಮಃ ಸ್ನಾತುಂ ತೀರ್ಥಂ ಹಿ ನೈಮಿಷಂ ।**
**ದ್ರಕ್ಷ್ಯಾಮ ಪುಂಡರೀಕಾಕ್ಷಂ ಪೀತವಾಸಸಮಚ್ಯುತಂ ॥ ೩೯ ॥**

---

೩೬-೩೭. ಪ್ರಹ್ಲಾದನು ಕೇಳುತ್ತಾನೆ: ಪೂಜ್ಯನೇ, ಭೂಮಿಯಲ್ಲೂ, ಆಕಾಶದಲ್ಲೂ, ಪಾತಾಲದಲ್ಲೂ ಉತ್ತಮವಾದ ಮಹಾತೀರ್ಥಗಳು ಯಾವುವು ಇದನ್ನು ದಯವಿಟ್ಟು ಅಪ್ಪಣೆಕೊಡಿಸಬೇಕು. ಇದನ್ನು ಕೇಳಿ ಚ್ಯವನರು ಭೂಮಿಯಲ್ಲಿ ನೈಮಿಷತೀರ್ಥವೂ, ಅಂತರಿಕ್ಷದಲ್ಲಿ ಪುಷ್ಕರತೀರ್ಥವೂ, ಪಾತಾಲದಲ್ಲಿ ಚಕ್ರತೀರ್ಥವೂ ಮಹಾತೀರ್ಥಗಳೆಂದು ದೊಡ್ಡವರು ಹೇಳುತ್ತಾರೆ ಎಂದು ಪ್ರತ್ಯುತ್ತರವನ್ನು ಹೇಳಿದರು.

೩೮-೩೯. ಪುಲಸ್ತ್ಯರು ಹೇಳುತ್ತಾರೆ: ಆ ಚ್ಯವನಋಷಿಗಳ ಮಾತನ್ನು ಕೇಳಿದೊಡನೆಯೇ ದೈತ್ಯರಾಜನಾದ ಪ್ರಹ್ಲಾದನು ನೈಮಿಷಕ್ಷೇತ್ರಕ್ಕೆ ಹೊರಡಲು ಇಚ್ಛೆಯುಳ್ಳವನಾಗಿ ದಾನವರನ್ನು ಕುರಿತು, ಎಲೈ ದಾನವೋತ್ತಮರೇ, ಏಳಿರಿ ನೈಮಿಷ ತೀರ್ಥದಲ್ಲಿ ಸ್ನಾನಮಾಡಿ ಅಲ್ಲಿ ನೆಲಸಿರುವ ಪೀತಾಂಬರಧಾರಿಯಾದ ಪುಂಡರೀಕಾಕ್ಷನನ್ನು ಸೇವಿಸೋಣ ಎಂದು ತೀರ್ಥಯಾತ್ರಾಸನ್ನಾಹದಲ್ಲಿ ಮಗ್ನನಾದನು.

## ಪುಲಸ್ತ್ಯ ಉವಾಚ

ಇತ್ಯುಕ್ತ್ವಾ ದಾನವೇಂದ್ರೇಣ ಸರ್ವೇ ತೇ ದೈತ್ಯದಾನವಾಃ।
ಚಕ್ರುರುದ್ಯೋಗಮತುಲಂ ನಿರ್ಜಗ್ಮುಶ್ಚ ರಸಾತಲಾತ್ ॥೪೦॥

ತೇ ಸಮಭ್ಯೇತ್ಯ ದೈತೇಯಾ ದಾನವಾಶ್ಚ ಮಹಾಬಲಾಃ।
ನೈಮಿಷಾರಣ್ಯಮಾಗಮ್ಯ ಸ್ನಾನಂ ಚಕ್ರುರ್ಮುದಾನ್ವಿತಾಃ ॥೪೧॥

ತತೋ ದಿತೀಶ್ವರಃ ಶ್ರೀಮಾನ್ಮೃಗಯಾಂ ಸ ಚಚಾರ ಹ।
ಚರನ್ಸರಸ್ವತೀಂ ಪುಣ್ಯಾಂ ದದರ್ಶ ವಿಮಲೋದಕಾಂ ॥೪೨॥

ತಸ್ಯಾ ದೂರೇ ಮಹಾಶಾಖಂ ಸಾಲವೃಕ್ಷಂ ಶರೈಶ್ಚಿತಂ।
ದದರ್ಶ ಬಾಣಾನಪರಾನ್ಮುಖೇ ಲಗ್ನಾನ್ಪರಸ್ಪರಂ ॥೪೩॥

ತತಸ್ತಾನದ್ಭುತಾಕಾರಾನ್ಬಾಣಾನ್ನಾಗೋಪವೀತಕಾನ್।
ದೃಷ್ಟ್ವಾತುಲಂ ತದಾ ಚಕ್ರೇ ಕ್ರೋಧಂ ದೈತ್ಯೇಶ್ವರಃ ಕಿಲ ॥೪೪॥

ಸ ದದರ್ಶ ತತೋ ದೂರಾತ್ಕೃಷ್ಣಾಜಿನಧರೌ ಮುನೀ।
ಸಮುನ್ನತ ಜಟಾಭಾರೌ ತಪಸ್ಯಾಸಕ್ತಮಾನಸೌ ॥೪೫॥

---

೪೦-೪೫. ಪುಲಸ್ತ್ಯರು ಹೇಳುತ್ತಾರೆ: ಹೀಗೆ ದಾನವರಾಜನಾದ ಪ್ರಹ್ಲಾದನಿಂದ ಆಜ್ಞಾಪಿಸಲ್ಪಟ್ಟ ಆ ದೈತ್ಯದಾನವರೆಲ್ಲರೂ ಬಹಳ ಸಮಾರಂಭದಿಂದ ಪಾತಾಲವನ್ನು ಬಿಟ್ಟು ಪ್ರಯಾಣಹೊರಟರು. ಮಹಾಬಲಶಾಲಿಗಳಾದ ಆ ದೈತ್ಯದಾನವರುಗಳೆಲ್ಲರೂ ಒಟ್ಟಿಗೆ ನೈಮಿಷಾರಣ್ಯಕ್ಕೆ ಬಂದು ಸೇರಿ ಅಲ್ಲಿ ಸಂತೋಷದಿಂದ ಸ್ನಾನಮಾಡಿದರು. ಆಗ ಅಲ್ಲಿ ಬಂದಿದ್ದ ಪ್ರಹ್ಲಾದನು ಬೇಟೆಗಾಗಿ ಅಲ್ಲೆಲ್ಲಾ ಸಂಚರಿಸತೊಡಗಿದನು. ಹೀಗೆ ಸಂಚರಿಸುತ್ತಾ ಅಲ್ಲಿಯೇ ಇದ್ದ ಪ್ರಸನ್ನ ಜಲವುಳ್ಳ ಸರಸ್ವತೀನದಿಯನ್ನು ನೋಡಿದನು. ಅದರ ಸಮೀಪದಲ್ಲಿ ದೊಡ್ಡದಾದ ಒಂದು ಸರ್ಜವೃಕ್ಷವು ಬಾಣಗಳಿಂದ ಆವೃತವಾಗಿದ್ದಿತು. ಕೆಲವು ಬಾಣಗಳು ಮುಂಭಾಗದಲ್ಲಿ ಒಂದಕ್ಕೊಂದು ಸೇರಿಕೊಂಡಿದ್ದವು.

೪೪-೪೭. ಸರ್ಪಗಳಿಂದ ಸುತ್ತಲ್ಪಟ್ಟಿದ್ದ ಆಶ್ಚರ್ಯಕರವಾದ ಆ ಬಾಣಗಳನ್ನು ನೋಡಿ ದೈತ್ಯೇಶ್ವರನಾದ ಪ್ರಹ್ಲಾದನು ಬಹಳ ಕೋಪಗೊಂಡನು. ಮತ್ತು ಅದರ ಸಮೀಪದಲ್ಲಿಯೇ ಕೃಷ್ಣಾಜಿನವನ್ನು ಧರಿಸಿ ಜಟಾಧಾರಿಗಳಾಗಿ ತಪಸ್ಸಿನಲ್ಲಿ ನಿರತರಾದ

**ತಯೋಶ್ಚ ಪಾರ್ಶ್ವಯೋರ್ದಿವ್ಯೇ ಧನುಷೀ ಲಕ್ಷಣಾನ್ವಿತೇ।**
**ಶಾಂರ್ಗಮಾಜಗವಂ ಚೈವ ಅಕ್ಷಯ್ಯೌ ಚ ಮಹೇಷುಧೀ ॥ ೪೬ ॥**

**ತೌ ದೃಷ್ಟ್ವಾಮನ್ಯತ ತದಾ ದಾಂಬಿಕಾವಿತಿ ದಾನವಃ।**
**ತತಃ ಪ್ರೋವಾಚ ವಚನಂ ತಾವುಭೌ ಪುರುಷೋತ್ತಮೌ ॥ ೪೭ ॥**

**ಕಿಂ ಭವದ್ಭ್ಯಾಂ ಸಮಾರಬ್ಧೋ ದಂಭೋ ಧರ್ಮವಿನಾಶನಃ।**
**ಕ್ವ ತಪಃ ಕ್ವ ಜಟಾಭಾರಃ ಕ್ವ ಚೇಮೌ ಪ್ರವರಾಯುಧೌ ॥ ೪೮ ॥**

**ಅಥೋವಾಚ ನರೋ ದೈತ್ಯಂ ಕಾ ತೇ ಚಿಂತಾ ದಿತೀಶ್ವರ।**
**ಸಾಮರ್ಥ್ಯೇ ಸತಿ ಯತ್ಕುರ್ಯಾತ್ತತ್ಸಂಪದ್ಯೇತ ತಸ್ಯ ಹಿ ॥ ೪೯ ॥**

**ಅಥೋವಾಚ ದಿತೀಶಸ್ತೌ ಕಾ ಶಕ್ತಿರ್ಯುವಯೋರಿಹ।**
**ಮಯಿ ತಿಷ್ಠತಿ ದೈತ್ಯೇಂದ್ರೇ ಧರ್ಮಸೇತುಪ್ರವರ್ತಕೇ। ॥ ೫೦ ॥**

---

ನರನಾರಾಯಣರನ್ನೂ ನೋಡಿದನು. ಅವರ ಸಮೀಪದಲ್ಲಿ ದಿವ್ಯಲಕ್ಷಣೋಪೇತವಾದ ಎರಡು ಧನುಸ್ಸುಗಳೂ (ಶಾಙ್ಗ ಮತ್ತು ಅಜಗವ) ಅಕ್ಷಯ್ಯವಾದ ಬತ್ತಳಿಕೆಗಳೂ ಕಂಡುಬಂದವು. ತಪಸ್ಸೂ ಧನುರ್ಬಾಣಗಳೂ ಪರಸ್ಪರ ವಿರುದ್ಧವೆಂದು ಭಾವಿಸಿ ಪ್ರಹ್ಲಾದನು ಅವರನ್ನು ಡಾಂಭಿಕರಾದ ತಪಸ್ವಿಗಳೆಂದು ತಿಳಿದು ಹೀಗೆ ಹೇಳಿದನು.

೪೮-೫೦. ನೀವುಗಳು ಧರ್ಮಕ್ಕೆ ವಿರುದ್ಧವಾದ ಈ ಡಂಭಾಚಾರವನ್ನು ಏತಕ್ಕೆ ಪ್ರಾರಂಭಿಸಿರುವಿರಿ. ತಪಸ್ಸೆಲ್ಲಿ! ಜಟಾಭಾರವೆಲ್ಲಿ! ಈ ಆಯುಧಗಳೆಲ್ಲಿ ಇವೆಲ್ಲವೂ ಪರಸ್ಪರ ವಿರುದ್ಧಗಳಾಗಿವೆ. ಇದನ್ನು ಕೇಳಿ ನರನು ಪ್ರಹ್ಲಾದನನ್ನು ಕುರಿತು, ಎಲೈ ದಿತೀಶ್ವರನೇ ಈ ವಿಚಾರವಾದ ಚಿಂತೆಯು ನಿನಗೇಕೆ ಸಾಮರ್ಥ್ಯವಿದ್ದವನು ಯಾವ ಕೆಲಸಕ್ಕೆ ಕೈಹಾಕುತ್ತಾನೆಯೋ ಅದರ ಫಲವು ಅವನಿಗಿದ್ದೇ ಇದೆ ಎಂದು ಪ್ರತ್ಯುತ್ತರವಿತ್ತನು. ಅನಂತರ ಪ್ರಹ್ಲಾದನು ಆಗ್ರಹದಿಂದ ಧರ್ಮಸ್ಥಾಪಕನಾದ ನಾನು ದೈತ್ಯರಾಜನಾಗಿರುವಾಗ ಧರ್ಮವಿರುದ್ಧವಾದ ಈ ಕಾರ್ಯವನ್ನು ನಡೆಸುವ ವಿಷಯದಲ್ಲಿ ನಿಮಗೇನು ಸಾಮರ್ಥ್ಯವಿದೆ ಎಂದು ಆಕ್ಷೇಪಿಸಿದನು.

ನರಸ್ತಂ ಪ್ರತ್ಯುವಾಚಾಥ ಆವಾಭ್ಯಾಂ ಶಕ್ತಿರೂರ್ಜಿತಾ ।
ನ ಕಶ್ಚಿಚ್ಛಕ್ನುಯಾಜ್ಜೇತುಂ ನರನಾರಾಯಣೌ ಯುಧಿ ॥ ೫೧ ॥

ದೈತ್ಯೇಶ್ವರಸ್ತತಃ ಕ್ರುದ್ಧಃ ಪ್ರತಿಜ್ಞಾಮಾರುರೋಹ ಚ ।
ಯಥಾಕಥಂಚಿಜ್ಜೇಷ್ಯಾಮಿ ನರನಾರಾಯಣೌ ರಣೇ ॥ ೫೨ ॥

ಇತ್ಯೇವಮುಕ್ತ್ವಾ ವಚನಂ ಮಹಾತ್ಮಾ
ದಿತೀಶ್ವರಃ ಸ್ಥಾಪ್ಯ ಬಲಂ ವನಾಂತೇ ।
ವಿತತ್ಯ ಚಾಪಂ ಗುಣಮಾವಿಕೃಷ್ಯ ।
ತಲಧ್ವನಿಂ ಘೋರತರಂ ಚಕಾರ ॥ ೫೩ ॥

ತತೋ ನರಸ್ತ್ವಾಜಗವಂ ಹಿ ಚಾಪ
ಮಾನಮ್ಯ ಬಾಣಾನ್ಸುಬಹೂನ್ಶಿತಾಗ್ರಾನ್ ।
ಮುಮೋಚ ತಾನಪ್ರತಿಮೈಃ ಪೃಷತ್ಕೈ
ಶ್ಚಿಚ್ಛೇದ ದೈತ್ಯಸ್ತಪನೀಯ ಪುಂಖೈಃ ॥ ೫೪ ॥

ಛಿನ್ನಾನ್ಸಮೀಕ್ಷ್ಯಾಥ ನರಃ ಪೃಷತ್ಕಾ
ನ್ದೈತ್ಯೇಶ್ವರೇಣಾಪ್ರತಿಮೇನ ಸಂಖ್ಯೇ ।

---

೫೧-೫೩. ಅಂತಹ ಪ್ರಹ್ಲಾದನನ್ನು ಕುರಿತು ನರನು ಪರಾಕ್ರಮಶಾಲಿಗಳಾದ ನಮ್ಮನ್ನು ಜಯಿಸಲು ಯಾರೂ ಸಮರ್ಥರಾಗಿಲ್ಲ ಎಂದನು. ಅನಂತರ ಕ್ರೋಧ ಹೊಂದಿದ ಪ್ರಹ್ಲಾದನು ವೀರಜನ ಸ್ವಭಾವಕ್ಕೆ ತಕ್ಕಂತೆ ಎಷ್ಟು ಶ್ರಮವಾದರೂ ಸರಿ ಈ ನರನಾರಾಯಣರನ್ನು ಜಯಿಸಿಯೇ ಜಯಿಸುವೆನೆಂದು ಪ್ರತಿಜ್ಞೆಮಾಡಿದನು. ಹೀಗೆ ಪ್ರತಿಜ್ಞೆಮಾಡಿ ತನ್ನ ಸೈನ್ಯವನ್ನೆಲ್ಲಾ ಕಾಡಿನಲ್ಲಿಟ್ಟು ಧನುಸ್ಸನ್ನು ಸೆಳೆದು ಮೌರ್ವಿಯನ್ನು ಕಟ್ಟಿ ಟಂಕಾರಧ್ವನಿಯನ್ನು ಮಾಡುತ್ತಾ ಯುದ್ಧಸನ್ನದ್ಧನಾದನು.

೫೪-೫೭. ಅನಂತರ ನರನು ಅಜಗವವೆಂಬ ಧನುಸ್ಸನ್ನು ಬಗ್ಗಿಸಿ ನಿಶಿತವಾದ ಅನೇಕ ಬಾಣಗಳನ್ನು ಪ್ರಹ್ಲಾದನ ಮೇಲೆ ಪ್ರಯೋಗಿಸಲಾಗಿ ಆ ಬಾಣಗಳೆಲ್ಲವನ್ನೂ ಅಸದೃಶಗಳಾದ ತನ್ನ ಸುವರ್ಣಪುಂಖಗಳಾದ ಬಾಣಗಳಿಂದ ಪ್ರಹ್ಲಾದನು ಕತ್ತರಿಸಿದನು. ತನ್ನ ಬಾಣಗಳೆಲ್ಲವೂ ದೈತ್ಯರಾಜನಿಂದ ಖಂಡಿತವಾದದ್ದನ್ನು ನೋಡಿ ಕೋಪಗೊಂಡ ನರನು ಪುನಃ ಮಹಾಧನುಸ್ಸನ್ನು ಸ್ವೀಕರಿಸಿ ಅನೇಕ ಬಾಣಗಳನ್ನು

ಕ್ರುದ್ಧಃ ಸಮಾನಮ್ಯ ಮಹಾಧನುಸ್ತತೋ ।
ಮುಮೋಚ ಚಾನ್ಯಾನ್ವಿವಿಧಾನ್ಪೃಷತ್ಕಾನ್ ॥ ೫೫ ॥

ಏಕಂ ನರೋ ದ್ವೌ ದಿತಿಜೇಶ್ವರಶ್ಚ
ತ್ರೀನ್ಧರ್ಮಸೂನುಶ್ಚತುರೋ ದಿತೀಶಃ ।
ನರಸ್ತು ಬಾಣಾನ್ಪ್ರಮುಮೋಚ ಪಂಚ ।
ಷಡ್ದೈತ್ಯನಾಥೋ ನಿಶಿತಾನ್ಪೃಷತ್ಕಾನ್ ॥ ೫೬ ॥

ಸ ಚರ್ಷಿಮುಖ್ಯೋ ದ್ವಿಚತುಶ್ಚ ದೈತ್ಯೋ
*ನರಸ್ತು ಷಟ್ತ್ರೀಣಿ ಚ ದೈತ್ಯಮುಖ್ಯಃ ।
ಷಟ್ಸಪ್ತ ಚಾಷ್ಟೌ ನವಷಣ್ನರೇಣ ।
ದ್ವಿಸಪ್ತತಿಂ ದೈತ್ಯಪತಿಃ ಸಸರ್ಜ ॥ ೫೭ ॥

ಶತಂ ನರಸ್ತ್ರೀಣಿ ಶತಾನಿ ದೈತ್ಯಃ
ಷಡ್ಧರ್ಮಪುತ್ರೋ ದಶದೈತ್ಯರಾಜಃ ।
ತತೋಥ ಸಂಖ್ಯೇಯುತರಾನ್ಹಿ ಬಾಣಾ ।
ನ್ಮುಮೋಚತುಸ್ತೌ ಸುಭೃಶಂ ಹಿ ಕೋಪಾತ್ ॥ ೫೮ ॥

---

ಪ್ರಹ್ಲಾದನ ಮೇಲೆ ಸುರಿಸಿದನು. ನರನು ಒಂದು ಬಾಣ ಬಿಟ್ಟರೆ ದಿತೀಶ್ವರನು ಎರಡು ಬಾಣ, ಅನಂತರ ನರನು ಮೂರು ಬಾಣ, ದಿತೀಶ್ವರನು ನಾಲ್ಕು ಬಾಣ, ಪುನಃ ನರನು ಐದು ಬಾಣ, ಪ್ರಹ್ಲಾದನು ಅದಕ್ಕೆ ಪ್ರತಿಯಾಗಿ ಆರು ಬಾಣ ಈ ರೀತಿಯಾಗಿ ಬಾಣಗಳನ್ನು ಬಿಡುತ್ತಾ ಕಾದಲಾರಂಭಿಸಿದರು.

೫೭-೫೮. ಅನಂತರವೂ ನರನು ದೈತ್ಯನ ಮೇಲೆ ಎಂಟು ಬಾಣಗಳನ್ನು ಬಿಡಲಾಗಿ ಪ್ರಹ್ಲಾದನು ಅದಕ್ಕೆ ಪ್ರತಿಯಾಗಿ ಒಂಭತ್ತು ಬಾಣಗಳನ್ನೂ ಪುನಃ ನರನು ಹದಿಮೂರು ಹದಿನಾಲ್ಕು ಹದಿನೈದು ಈ ರೀತಿ ಬಾಣಗಳನ್ನು ಬಿಡಲಾಗಿ ಪ್ರಹ್ಲಾದನು ಅದಕ್ಕೆ ಪ್ರತಿಯಾಗಿ ಎಪ್ಪತ್ತೆರಡು ಬಾಣಗಳನ್ನು ಪ್ರಯೋಗಿಸಿದನು. ನರನು ನೂರು ಬಾಣ ಬಿಟ್ಟರೆ ಪ್ರಹ್ಲಾದನು ಮುನ್ನೂರು ಬಾಣಗಳನ್ನೂ ಪುನಃ ನರನು ಆರುನೂರು ಬಾಣಗಳನ್ನು ಬಿಟ್ಟರೆ ದೈತ್ಯರಾಜನು ಸಾವಿರ ಬಾಣಗಳನ್ನೂ ಪ್ರತಿಯಾಗಿ ಪ್ರಯೋಗಿಸಿ ಇಬ್ಬರೂ ಅಸಂಖ್ಯಾತ ಬಾಣಗಳನ್ನು ಪ್ರಯೋಗಿಸಿ ಬಹಳ ಕೋಪದಿಂದ ಯುದ್ಧ

---

* ಇಲ್ಲಿ ನರೆತು ಎಂದು ಪಾಠವಿರಬೇಕೆಂದು ತೋರುತ್ತದೆ.

ತತೋ ನರೋ ಬಾಣಗಣೈರಸಂಖ್ಯೈ
ರವಾಸ್ತರದ್ಭೂಮಿಮಥೋ ದಿಶಃ ಖಂ ।
ಸ ಚಾಪಿ ದೈತ್ಯಪ್ರವರಃ ಪೃಷತ್ಕೈ ।
ಶ್ಚಿಚ್ಛೇದ ವೇಗಾತ್ತಪನೀಯಪುಂಖೈಃ ॥ ೫೯ ॥

ತತಃ ಪತತ್ರಿಭಿರ್ವೀರೌ ಸುಭೃಶಂ ನರದಾನವೌ ।
ತದಾ ವರಾಸ್ತ್ರೈರ್ಯುಯುಧಾತೇ ಘೋರರೂಪೈಃ ಪರಸ್ಪರಂ ॥ ೬೦ ॥

ತತಸ್ತು ದೈತ್ಯೇನ ವರಾಸ್ತ್ರಪಾಣಿನಾ
ಚಾಪೇ ನಿಯುಕ್ತಂ ತು ಪಿತಾಮಹಾಸ್ತ್ರಂ ।
ನರಸ್ತು ಚಾಪೇ ಪರಮಾಯುಧೇ ಪುನ ।
ರ್ಯುಯೋಜ ನಾರಾಯಣಮಸ್ತ್ರಮುಗ್ರಂ ॥ ೬೧ ॥

ದೈತ್ಯಾಧಿಪೇನಾಥ ಪುನರ್ಮಹಾಸ್ತ್ರ ।
ಮಾಗ್ನೇಯಮಾಜೌ ಯುಗಪತ್ಪ್ರಯುಕ್ತಂ ।
ಮಹೇಶ್ವರಾಸ್ತ್ರಂ ಪುರುಷೋತ್ತಮೇನ ।
ಸಮಂ ಸಮಾಹತ್ಯ ನಿಪೇತತುಸ್ತೌ ॥ ೬೨ ॥

---

ಮಾಡಿದರು. ಅನಂತರ ನರನು ಪ್ರಹ್ಲಾದನ ಪರಾಕ್ರಮವನ್ನು ನೋಡಿ ಅಸಂಖ್ಯಾತ ಬಾಣಗಳಿಂದ ಭೂಮಿ ಅಂತರಿಕ್ಷ ಮತ್ತು ದಿಕ್ಕುಗಳು ಎಲ್ಲವನ್ನೂ ಆಚ್ಛಾದಿಸಿದನು. ದೈತ್ಯೇಶ್ವರನೂ ಸಹ ಆ ಬಾಣಗಳನ್ನೆಲ್ಲಾ ಸ್ವರ್ಣಪುಂಖವುಳ್ಳ ತನ್ನ ಬಾಣಗಳಿಂದ ಕತ್ತರಿಸಿದನು.

೬೦-೬೨. ಈ ರೀತಿ ಬಾಣಗಳಿಂದ ಯುದ್ಧಮಾಡಿ ವಿಜಯಗಳಿಸುವ ಉತ್ಕಟೇಚ್ಛೆಯಿಂದ ಆ ನರ ಮತ್ತು ಪ್ರಹ್ಲಾದ ಇವರಿಬ್ಬರೂ ಮಹಾಸ್ತ್ರಗಳಿಂದಲೂ ಯುದ್ಧ ಮಾಡಲುಪಕ್ರಮಿಸಿದರು. ಮೊದಲು ಪ್ರಹ್ಲಾದನು ಪಿತಾಮಹಾಸ್ತ್ರ (ಬ್ರಹ್ಮಾಸ್ತ್ರ) ವನ್ನು ಮಹಾಧನುಸ್ಸಿನಲ್ಲಿ ಯೋಜನೆಮಾಡಿದನು. ಅದಕ್ಕೆ ಪ್ರತಿಯಾಗಿ ನರನು ನಾರಾಯಣಾಸ್ತ್ರವನ್ನು ತನ್ನ ಮಹಾಯುಧವಾದ ಧನುಸ್ಸಿನಲ್ಲಿ ಸೇರಿಸಿದನು. ಇದನ್ನು ತಿಳಿದ ದೈತ್ಯಾಧಿಪನು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ನಾರಾಯಣನೂ ಸಹ ಮಾಹೇಶ್ವರಾಸ್ತ್ರವನ್ನು ಪ್ರತಿಯಾಗಿ ಪ್ರಯೋಗಮಾಡಿದನು. ಆ ಎರಡು ಅಸ್ತ್ರಗಳೂ ಪರಸ್ಪರ ಹೊಡೆದಾಡಿ ನೆಲಕ್ಕೆ ಬಿದ್ದವು.

**ಬ್ರಹ್ಮಾಸ್ತ್ರೇ ತು ಪ್ರಶಮಿತೇ ಪ್ರಹ್ಲಾದಃ ಕ್ರೋಧಮೂರ್ಛಿತಃ ।**
**ಗದಾಂ ಪ್ರಗೃಹ್ಯ ತರಸಾ ಪ್ರಚಸ್ಕಂದ ರಥೋತ್ತಮಾತ್ ॥ ೬೩ ॥**

**ಗದಾಪಾಣಿಂ ಸಮಾಯಾಂತಂ ದೈತ್ಯಂ ನಾರಾಯಣಸ್ತದಾ ।**
**ದೃಷ್ಟ್ವಾ ತತ್ಪೃಷ್ಠತಶ್ಚಕ್ರೇ ನರಂ ಯೋದ್ಧುಮನಾಃ ಸ್ವಯಂ ॥ ೬೪ ॥**

**ತತೋ ದಿತೀಶಃ ಸಗದಃ ಸಮಾದ್ರವ**
**ತ್ಸಶಾಂರ್ಗಬಾಣಂ ತಪಸಾಂ ನಿಧಾನಂ ।**
**ಖ್ಯಾತಂ ಪುರಾಣರ್ಷಿ ಮುದಾರವಿಕ್ರಮಂ ।**
**ನಾರಾಯಣಂ ನಾರದ ಲೋಕಪಾಲಂ ॥ ೬೫ ॥**

**ಇತಿ ಶ್ರೀ ವಾಮನಪುರಾಣೇ ಪ್ರಹ್ಲಾದಯುದ್ಧಂ ನಾಮ**
**ಸಪ್ತಮೋಽಧ್ಯಾಯಃ**

---

೬೩-೬೫. ಬ್ರಹ್ಮಾಸ್ತ್ರವೂ ಸಹ ನಾರಾಯಣಾಸ್ತ್ರದಿಂದ ಶಾಂತವಾದದ್ದನ್ನು ನೋಡಿ ಬಹಳ ಕೋಪಗೊಂಡ ಪ್ರಹ್ಲಾದನು ಗದೆಯನ್ನು ಸ್ವೀಕರಿಸಿ ರಥದಿಂದ ಇಳಿದು ನಾರಾಯಣನನ್ನು ತಡೆದನು. (ಆಕ್ರಮಿಸಿದನು) ಗದಾಪಾಣಿಯಾಗಿ ಬಂದ ದೈತ್ಯನನ್ನು ನೋಡಿ ನಾರಾಯಣನು ನರನನ್ನು ಹಿಂದಕ್ಕೆ ಬಿಟ್ಟು ತಾನೇ ಯುದ್ಧಕ್ಕೆ ಮುಂದಾಳಾಗಿ ನಿಂತನು. ಅನಂತರ ಆ ಪ್ರಹ್ಲಾದನು. ಗದಾಯುಧಧಾರಿಯಾಗಿ ಶಾಙ್ಗಬಾಣಧಾರಿಯಾಗಿಯೂ ತಪೋನಿಧಿಯಾಗಿಯೂ ಲೋಕನಾಥನಾಗಿಯೂ ಇರುವ ನಾರಾಯಣನನ್ನು ಓಡಿಸಿಕೊಂಡು ಬಂದನು.

ಇಲ್ಲಿಗೆ ಶ್ರೀ ವಾಮನ ಪುರಾಣದಲ್ಲಿ ಪ್ರಹ್ಲಾದ ಯುದ್ಧವೆಂಬ
ಏಳನೆಯ ಅಧ್ಯಾಯುವು ಮುಗಿದಿದೆ.



## ಅಧ್ಯಾಯಾರ್ಥ ಸಂಗ್ರಹ



ಈ ಅಧ್ಯಾಯದಲ್ಲಿ ತಾನು ಅನಂಗನಾಗಿದ್ದರೂ ನಾರಾಯಣನನ್ನು ಮೋಹಗೊಳಿಸಲು ಬದರಿಕಾಶ್ರಮಕ್ಕೆ ತೆರಳಿದ ಮನ್ಮಥನು ವಿಜಯಶಾಲಿಯಾಗದೆ ನಾರಾಯಣನಿಂದ ಸೃಷ್ಟಳಾದ ಊರ್ವಶಿಯಲ್ಲಿ ತಾನೇ ಮೋಹಿತನಾದನು. ನಾರಾಯಣನ ಅಪ್ಪಣೆಯಂತೆ ಅವಳನ್ನು ಇಂದ್ರಲೋಕಕ್ಕೆ ಕೊಂಡೊಯ್ದು ಇಂದ್ರನಿಗೆ ಒಪ್ಪಿಸಿ ತಾನು ಈ ಕಾರ್ಯದಲ್ಲಿ ವಿಜಯಶಾಲಿಯಾಗದಿರಲು ನಾರಾಯಣನ ಜಿತೇಂದ್ರಿಯತ್ವ ಮತ್ತು ಮಹಿಮೆಗಳೇ ಕಾರಣವೆಂದು ಸ್ವಾಮಿಯಾದ ಇಂದ್ರನಿಗೆ ಅರಿಕೆಮಾಡಿದನು. ನಂತರ ತೀರ್ಥಗಳ ಮಹಿಮೆಯನ್ನು ಪ್ರಸ್ತಾಪಿಸಲು ಉಪೋದ್ಘಾತರೂಪವಾಗಿ ಚ್ಯವನಋಷಿಯ ವೃತ್ತಾಂತವನ್ನು ಉಪಕ್ರಮಿಸಿ ಪಾತಾಲಲೋಕಕ್ಕೆ ಒಯ್ಯಲ್ಪಟ್ಟ ಅವನಿಂದ ದೈತ್ಯರಾಜನಾದ ಪ್ರಹ್ಲಾದನಿಗೆ ಮಹಾತೀರ್ಥಗಳು ಉಪದೇಶಿಸಲ್ಪಟ್ಟವು. ಆ ತೀರ್ಥಯಾತ್ರೆಯಲ್ಲಿ ಆಸಕ್ತನಾದ ಪ್ರಹ್ಲಾದನು ನೈಮಿಷತೀರ್ಥಕ್ಕೆ ಬಂದು ಸ್ನಾನಾದಿಗಳನ್ನು ನೆರವೇರಿಸಿದನು. ಅಲ್ಲಿ ಸಂಚರಿಸುವಾಗ ನರನಾರಾಯಣರ ತಪಸ್ಸನ್ನೂ ಪರಾಕ್ರಮವನ್ನೂ ನೋಡಿ ವೀರಸ್ವಭಾವದಿಂದ ಅವರೊಡನೆ ಘೋರವಾದ ಯುದ್ಧಕ್ಕೆ ಪ್ರಯತ್ನಿಸಿದನು ಎಂದು ನಿರೂಪಿಸಲಾಯಿತು. ಈ ಯುದ್ಧವು ಪ್ರಹ್ಲಾದ ವರಪ್ರಾಪ್ತಿಗೆ ಉಪೋದ್ಘಾತರೂಪವಾಗಿ ಆರಂಭಿಸಲ್ಪಟ್ಟಿತು.



॥ ಶ್ರೀಃ ॥

# ಶ್ರೀವಾಮನಪುರಾಣಂ

## ಅಷ್ಟಮೋಽಧ್ಯಾಯಃ

### ಪುಲಸ್ತ್ಯ ಉವಾಚ

ಶಾಂಗರ್ಪಾಣಿನಮಾಯಾಂತಂ ದೃಷ್ಟ್ವಾಽಗ್ರೇ ದಾನವೇಶ್ವರಃ ।
ಪರಿಭ್ರಾಮ್ಯ ಗದಾಂ ವೇಗಾನ್ಮೂರ್ಧ್ನಿ ಸಾಧ್ಯಮತಾಡಯತ್ ॥ ೧ ॥

ತಾಡಿತಸ್ಯಾಥ ಗದಯಾ ಧರ್ಮಪುತ್ರಸ್ಯ ನಾರದ ।
ನೇತ್ರಾಭ್ಯಾಮಪತದ್ವಾರಿ ವಹ್ನಿವರ್ಷನಿಭಂ ಭುವಿ ॥ ೨ ॥

ಮೂರ್ಧ್ನಿ ನಾರಾಯಣಸ್ಯಾಪಿ ಸಾ ಗದಾ ದಾನವಾರ್ಪಿತಾ ।
ಜಗಾಮ ಶತಧಾ ಬ್ರಹ್ಮನ್ಶೈಲಶೃಂಗೇ ಯಥಾಶನಿಃ ॥ ೩ ॥

ತತೋ ನಿವೃತ್ಯ ದೈತ್ಯೇಂದ್ರಃ ಸಮಾಸ್ಥಾಯ ರಥಂ ದ್ರುತಂ ।
ಆದಾಯ ಕಾರ್ಮುಕಂ ವೀರಸ್ತೂಣಾದ್ಬಾಣಂ ಸಮಾದದೇ ॥ ೪ ॥

---

## ಎಂಟನೆಯ ಅಧ್ಯಾಯವು

೧-೪. ಶಾರ್ಙ್ಗಪಾಣಿಯಾಗಿ ಎದುರಾಗಿ ಬರುತ್ತಿರುವ ನಾರಾಯಣನನ್ನು ನೋಡಿ ಪ್ರಹ್ಲಾದನು ಗದೆಯನ್ನು ತಿರುಗಿಸಿ ವೇಗದಿಂದ ನಾರಾಯಣನ ತಲೆಯ ಮೇಲೆ ಹೊಡೆದನು. ಹಾಗೆ ಹೊಡೆಯಲ್ಪಟ್ಟ ನಾರಾಯಣನ ಕಣ್ಣುಗಳಿಂದ ಬೆಂಕಿಯಂತೆ ಬಿಸಿಯಾದ ಕಣ್ಣೀರು ಭೂಮಿಯಲ್ಲಿ ಸುರಿಯಿತು. ಪ್ರಹ್ಲಾದನಿಂದ ಪ್ರಹರಿಸಲ್ಪಟ್ಟ ಆ ಗದೆಯೂ ಸಹ ನಾರಾಯಣನ ತಲೆಯಮೇಲೆ ಪರ್ವತಶಿಖರದ ಮೇಲೆ ಬಿದ್ದ ವಜ್ರಾಯುಧದಂತೆ ಪುಡಿಪುಡಿಯಾಯಿತು. ಅನಂತರ ಪ್ರಹ್ಲಾದನು ರಥವನ್ನೇರಿ ಧನುಸ್ಸನ್ನು ಹಿಡಿದು ಬತ್ತಳಿಕೆಯಿಂದ ಬಾಣವನ್ನು ತೆಗೆದುಕೊಂಡು ಪುನಃ ಯುದ್ಧಕ್ಕೆ ಸಿದ್ಧನಾದನು.

ಆನಮ್ಯ ಚಾಪಂ ವೇಗೇನ ಗಾರ್ಧ್ರಪತ್ರಾನ್ಶಿಲೀ ಮುಖಾನ್ ।
ಮುಮೋಚ ಸಾಧ್ಯಾಯ ತದಾ ಕ್ರೋಧಾಂಧೀಕೃತಮಾನಸಃ ॥ ೫ ॥

ತಾನಾಪತತ ಏವಾಶು ಬಾಣಾಂಶ್ಚಂದ್ರಾರ್ಧಸನ್ನಿಭಾನ್ ।
ಚಿಚ್ಛೇದ ಬಾಣೈರಪರೈರ್ನಿರ್ಬಿಭೇದ ಚ ದಾನವಂ ॥ ೬ ॥

ತತೋ ನಾರಾಯಣಂ ದೈತ್ಯೋ ದೈತ್ಯಂ ನಾರಾಯಣಃ ಶರೈಃ ।
ಆವಿಧ್ಯೇತಾಂ ತದಾನ್ಯೋನ್ಯಂ ಮರ್ಮಭಿದ್ಭಿರಜಿಂಹಗೈಃ ॥ ೭ ॥

ತತೋಽಂಬರೇ ಸನ್ನಿಪಾತೋ ದೇವಾನಾಮಭವನ್ಮುನೇ ।
ದಿದೃಕ್ಷೂಣಾಂ ತದಾ ಯುದ್ಧಂ ಲಘುಚಿತ್ರಂ ಚ ಸುಷ್ಠು ಚ ॥ ೮ ॥

ತತಃ ಸುರಾಣಾಂ ದುಂದುಭ್ಯಃ ಅವಾದ್ಯಂತ ಮಹಾಸ್ವನಾಃ ।
ಪುಷ್ಪವರ್ಷಮನೌಪಮ್ಯಂ ಮುಮುಚುಃ ಸಾಧ್ಯದೈತ್ಯಯೋಃ । ॥ ೯ ॥

---

೫-೭. ಅನಂತರ ಪ್ರಹ್ಲಾದನು ಧನುಸ್ಸನ್ನು ವೇಗದಿಂದ ಸೆಳೆದು *ಹದ್ದಿನಗರಿಗಳಿಂದ ವೇಗಶಾಲಿಗಳಾದ ಬಾಣಗಳನ್ನು ಬಹಳ ಕುಪಿತನಾಗಿ ನಾರಾಯಣನಮೇಲೆ ಪ್ರಯೋಗಿಸಿದನು. ಅರ್ಧಚಂದ್ರಾಕಾರಗಳಾದ ಆ ಬಾಣಗಳನ್ನು ಬರುತ್ತಿರುವಾಗಲೇ ನಾರಾಯಣನು ಕತ್ತರಿಸಿದನು. ಪ್ರಹ್ಲಾದನನ್ನೂ ಬಹಳ ಘಾಸಿಪಡಿಸಿದನು. ಅನಂತರವೂ ನಾರಾಯಣನನ್ನು ಪ್ರಹ್ಲಾದನೂ ಪ್ರಹ್ಲಾದನನ್ನು ನಾರಾಯಣನೂ ಸಹ ತೀವ್ರವಾದ ಬಾಣಗಳಿಂದ ಪರಸ್ಪರ ಯುದ್ಧದಲ್ಲಿ ನಿರತರಾದರು.

೮-೧೦. ಅನಂತರ ಬಹಳ ಲಾಘವದಿಂದಲೂ ವಿಚಿತ್ರವಾಗಿಯೂ ನಡೆಯುತ್ತಿರುವ ಈ ಯುದ್ಧವನ್ನು ನೋಡಲು ಕುತೂಹಲದಿಂದ ದೇವತೆಗಳು ಆಕಾಶದಲ್ಲಿ ಗುಂಪುಗುಂಪಾಗಿ ಸೇರಿದರು. ದೇವತೆಗಳ ದುಂದುಭಿಗಳು ಬಹಳ ಶಬ್ದಮಾಡುತ್ತಾ ಆಕಾಶದಲ್ಲೆಲ್ಲಾ ಮೊಳಗಿದವು. ಯುದ್ಧದಿಂದ ಆಶ್ಚರ್ಯಪಟ್ಟ ದೇವತೆಗಳು ನಾರಾಯಣ

---

* ಬಾಣಗಳಿಗೆ ವೇಗವನ್ನುಂಟುಮಾಡಲು ಬುಡದಲ್ಲಿ ಹದ್ದಿನ ಗರಿಗಳನ್ನು ಕಟ್ಟುತ್ತಾರೆ.

**ತತಃ ಪಶ್ಯತ್ಸು *ದೈತ್ಯೇಷು ಗಗನಸ್ಥೇಷು ತಾವುಭೌ ।**
**ಅಯುಧ್ಯೇತಾಂ ಮಹೇಷ್ವಾಸೌ ಪ್ರೇಕ್ಷಕಪ್ರೀತಿವರ್ಧನಂ ॥ ೧೦ ॥**

**ಬಬಂಧತುಸ್ತದಾಕಾಶಂ ತಾವುಭೌ ಶರವೃಷ್ಟಿಭಿಃ ।**
**ದಿಶಶ್ಚ ವಿದಿಶಶ್ಚೈವ ಛಾದಯೇತಾಂ ಶರೋತ್ಕರೈಃ ॥ ೧೧ ॥**

**ತತೋ ನಾರಾಯಣಶ್ಚಾಪಂ ಸಮಾಕೃಷ್ಯ ಮಹಾಮುನೇ ।**
**ಬಿಭೇದ ಮಾರ್ಗಣೈಸ್ತೀಕ್ಷ್ಣೈಃ ಪ್ರಹ್ಲಾದಂ ಸರ್ವಮರ್ಮಸು ॥ ೧೨ ॥**

**ತದಾ ದೈತ್ಯೇಶ್ವರಃ ಕ್ರುದ್ಧಶ್ಚಾಪಮಾನಮ್ಯ ವೇಗವಾನ್ ।**
**ಬಿಭೇದ ಹೃದಯೇ ಬಾಹ್ವೋರ್ವದನೇ ಚ ನರೋತ್ತಮಂ ॥ ೧೩ ॥**

**ತತೋಽಸ್ಯತೋ ದೈತ್ಯಪತೇಃ ಕಾರ್ಮುಕಂ ಮುಷ್ಟಿಬಂಧನಾತ್ ।**
**ಚಿಚ್ಛೇದೈಕೇನ ಬಾಣೇನ ಚಂದ್ರಾರ್ಧಾಕಾರವರ್ಚಸಾ ॥ ೧೪ ॥**

**ಅಪಶ್ಯತ ಧನುಶ್ಛಿನ್ನಂ ಚಾಪಮಾದಾಯ ಚಾಪರಂ ।**
**ಅಧಿಜ್ಯಂ ಲಾಘವಾತ್ಕೃತ್ವಾ ವವರ್ಷ ನಿಶಿತಾನ್ಶರಾನ್ ॥ ೧೫ ॥**

---

ಮತ್ತು ಪ್ರಹ್ಲಾದ ಇಬ್ಬರಮೇಲೆಯೂ ಅಸದೃಶವಾದ ಹೂಮಳೆಗರೆದರು. ಆಕಾಶದಲ್ಲಿ ಆ ದೇವತೆಗಳು ನೋಡುತ್ತಿರುವಾಗಲೇ ಅವರಿಗೆ ಸಂತೋಷವಾಗುವಂತೆ ಈ ವೀರರು ಯುದ್ಧವನ್ನು ನಡೆಸಿದರು.

೧೧-೧೩. ಈ ಪ್ರಕಾರ ಇಬ್ಬರೂ ಬಾಣವರ್ಷದಿಂದ ಆಕಾಶವನ್ನೂ ದಿಕ್ಕುಗಳನ್ನೂ ಆಚ್ಛಾದಿಸಿದರು. ಅನಂತರ ನಾರಾಯಣನು ಧನುಸ್ಸನ್ನು ವೇಗವಾಗಿ ಸೆಳೆದು ತೀಕ್ಷ್ಣವಾದ ಅನೇಕ ಬಾಣಗಳಿಂದ ಪ್ರಹ್ಲಾದನನ್ನು ಮರ್ಮಸ್ಥಾನಗಳಲ್ಲೆಲ್ಲಾ ಭೇದಿಸಿದನು. ಕೋಪಗೊಂಡ ಪ್ರಹ್ಲಾದನೂ ಸಹ ನಾರಾಯಣನ ಹೃದಯ ತೋಳುಗಳು ಮತ್ತು ಮುಖ ಇವುಗಳನ್ನು ಪ್ರತಿ ಬಾಣಗಳಿಂದ ಭೇದಿಸಿದನು.

೧೪ ೧೫. ಈ ರೀತಿ ಬಾಣಗಳನ್ನು ಬಿಡುತ್ತಿರುವ ಪ್ರಹ್ಲಾದನ ಧನುಸ್ಸನ್ನು ನಾರಾಯಣನು ಅರ್ಧಚಂದ್ರಬಾಣದಿಂದ ಕತ್ತರಿಸಿ ಕೆಳಕ್ಕೆ ಕೆಡವಿದನು. ಅದು ಛಿನ್ನವಾಗಿ ಕೈಯಿಂದ ಬಿದ್ದದ್ದನ್ನು ನೋಡಿ ಪ್ರಹ್ಲಾದನು ತ್ವರೆಯಿಂದ ಬೇರೆ ಧನುಸನ್ನು

---

* ಇಲ್ಲಿ ದೇವೇಷು ಎಂದು ಪಾಠವಿರಬೇಕು.

ತಾನಪ್ಯಸ್ಯ ಶರಾನ್ಸಾಧ್ಯಶ್ಛಿತ್ವಾ ಬಾಣೈರವಾಕಿರತ್ ।
ಕಾರ್ಮುಕಂ ಚ ಕ್ಷುರಪ್ರೇಣ ಚಿಚ್ಛೇದ ಪುರುಷೋತ್ತಮಃ ॥ ೧೬ ॥

ಛಿನ್ನಂ ಛಿನ್ನಂ ಧನುರ್ದೈತ್ಯಸ್ತ್ವನ್ಯದನ್ಯತ್ಸಮಾದದೇ ।
ಸಮಾದತ್ತಂ ತದಾ ಸಾಧ್ಯೋ ಮುನೇ ಚಿಚ್ಛೇದ ಲಾಘವಾತ್ ॥ ೧೭ ॥

ಸಂಛಿನ್ನೇಷ್ವಥ ಚಾಪೇಷು ಜಗ್ರಾಹ ದಿತಿಜೇಶ್ವರಃ ।
ಪರಿಘಂ ದಾರುಣಂ ದೀರ್ಘಂ ಸರ್ವಲೋಹಮಯಂ ದೃಢಂ ॥ ೧೮ ॥

ಪರಿಗೃಹ್ಯಾಥ ಪರಿಘಂ ಭ್ರಾಮಯಾಮಾಸ ದಾನವಃ ।
ಭ್ರಾಮ್ಯಮಾಣಂ ಸ ಚಿಚ್ಛೇದ ನಾರಾಚೇನ ಮಹಾಮುನೇ ॥ ೧೯ ॥

ಛಿನ್ನೇ ತು ಪರಿಘೇ ಶ್ರೀಮಾನ್ಪ್ರಹ್ಲಾದೋ ದಾನವೇಶ್ವರಃ ।
ಮುದ್ಗರಂ ಭ್ರಾಮ್ಯ ವೇಗೇನ ಪ್ರಚಿಕ್ಷೇಪ ನರೋತ್ತಮೇ ॥ ೨೦ ॥

ತಮಾಪತಂತಂ ಬಲವಾನ್ಮಾರ್ಗಣೈರ್ದಶಭಿರ್ಮುನೇ ।
ಚಿಚ್ಛೇದ ದಶಧಾ ಸಾಧ್ಯಃ ಸಚ್ಛಿನ್ನೋಽನ್ಯಪತದ್ಭುವಿ ॥ ೨೧ ॥

---

ಸ್ವೀಕರಿಸಿ ಹೆದೆ ಏರಿಸಿ ತೀಕ್ಷ್ಣವಾದ ಅನೇಕ ಬಾಣಗಳನ್ನು ನಾರಾಯಣನ ಮೇಲೆ ಸುರಿಸಿದನು. ಆ ಬಾಣಗಳೆಲ್ಲವನ್ನೂ ನಾರಾಯಣನು ಕತ್ತರಿಸಿದನು. ಧನುಸ್ಸನ್ನೂ ಕತ್ತರಿಸಿ ಕೆಳಕ್ಕೆ ಕೆಡವಿದನು. ಹೀಗೆಯೇ ಪ್ರಹ್ಲಾದನಿಂದ ಸ್ವೀಕರಿಸಲ್ಪಟ್ಟ ಧನುಸ್ಸುಗಳೆಲ್ಲವನ್ನೂ ನಾರಾಯಣನು ಕತ್ತರಿಸುತ್ತ ಬಂದನು.

೧೮-೨೦. ನಾರಾಯಣನು ಧನುಸ್ಸನ್ನೆಲ್ಲಾ ಕತ್ತರಿಸುತ್ತ ಬರಲಾಗಿ ಪ್ರಹ್ಲಾದನು ಲೋಹಮಯವಾದ ಪರಿಘಾಯುಧವನ್ನು (ಒನಕೆ) ತೆಗೆದುಕೊಂಡು ಅದನ್ನು ಪ್ರಯೋಗಿಸಲು ಭಯಂಕರ ವೇಗದಿಂದ ತಿರುಗಿಸಿದನು. ಹಾಗೆ ತಿರುಗಿಸಲ್ಪಡುತ್ತಿದ್ದ ಆ ಪರಿಘಾಯುಧವನ್ನು ನಾರಾಯಣನು ಬಾಣದಿಂದ ಕತ್ತರಿಸಿದನು. ಅನಂತರ ಪ್ರಹ್ಲಾದನು ಮುದ್ಗರಾಯುಧ (ದೊಣ್ಣೆ) ವನ್ನು ತಿರುಗಿಸಿ ನಾರಾಯಣನಮೇಲೆ ಪ್ರಯೋಗಿಸಿದನು.

೨೧-೨೩. ತನ್ನ ಮೇಲೆ ಬರುತ್ತಿರುವ ಆ ಮುದ್ಗರಾಯುಧವನ್ನು ಹತ್ತು ಬಾಣಗಳಿಂದ ನಾರಾಯಣನು ಕತ್ತರಿಸಿದನು. ಅದೂ ಭೂಮಿಯಲ್ಲಿ ಬಿದ್ದಿತು.

**ಮುದ್ಗರೇ ವಿತಥೇ ಜಾತೇ ಪಾಶಮಾದಾಯ ವೇಗವಾನ್ ।**
**ಪ್ರಚಿಕ್ಷೇಪ ನರಾಗ್ರ್ಯಾಯ ತಂ ಚ ಚಿಚ್ಛೇದ ಧರ್ಮಜಃ ॥ ೨೨ ॥**

**ಪಾಶೇ ಛಿನ್ನೇ ತತೋ ದೈತ್ಯಃ ಶಕ್ತಿಮಾದಾಯ ಚಿಕ್ಷಿಪೇ ।**
**ತಾಂ ಚ ಚಿಚ್ಛೇದ ಬಲವಾನ್ಕ್ಷುರಪ್ರೇಣ ಮಹಾತಪಾಃ ॥ ೨೩ ॥**

**ಛಿನ್ನೇಷು ತೇಷು ಶಸ್ತ್ರೇಷು ದಾನವೋಽನ್ಯನ್ಮಹದ್ಧನುಃ ।**
**ಸಮಾದಾಯ ತತೋ ಬಾಣೈರವತಸ್ತಾರ ನಾರದ ॥ ೨೪ ॥**

**ತತೋ ನಾರಾಯಣೋ ದೇವೋ ದೈತ್ಯನಾಥಂ ಜಗದ್ಗುರುಃ ।**
**ನಾರಾಚೇನಾಜಘಾನಾಥ ಹೃದಯೇಽಸುರತಾಪನಃ ॥ ೨೫ ॥**

**ಸ ಭಿನ್ನಹೃದಯೋ ಬ್ರಹ್ಮನ್ದೇವೇನಾದ್ಭುತಕರ್ಮಣಾ ।**
**ನಿಪಪಾತ ರಥೋಪಸ್ಥೇ ತಮಪೋವಾಹ ಸಾರಥಿಃ ॥ ೨೬ ॥**

**ಸ ಸಂಜ್ಞಾಂ ತ್ವಚಿರೇಣೈವ ಪ್ರತಿಲಭ್ಯ ದಿತೀಶ್ವರಃ ।**
**ಸುದೃಢಂ ಚಾಪಮಾದಾಯ ಭೂಯೋಽಯೋದ್ಧುಮುಪಾಗತಃ ॥ ೨೭ ॥**

---

ಮುದ್ಗರಾಯುಧವೂ ವ್ಯರ್ಥವಾದಮೇಲೆ ಪ್ರಹ್ಲಾದನು ಪಾಶಾಯುಧವನ್ನು ಪ್ರಯೋಗಿಸಿದನು. ಅದನ್ನೂ ನಾರಾಯಣನು ಕತ್ತರಿಸಿದನು. ಪಾಶವೂ ನಾಶವಾದಮೇಲೆ ಪ್ರಹ್ಲಾದನು ಶಕ್ತ್ಯಾಯುಧದಿಂದ ಪ್ರಹರಿಸಿದನು. ಅದನ್ನೂ ನಾರಾಯಣನು ಬಾಣದಿಂದ ನಾಶಪಡಿಸಿದನು.

೨೪-೨೭. ಶಸ್ತ್ರಗಳೆಲ್ಲವೂ ನಾಶವಾಗಲಾಗಿ ಪ್ರಹ್ಲಾದನು ಮತ್ತೊಂದು ಮಹಾಧನುಸ್ಸನ್ನು ತೆಗೆದುಕೊಂಡು ಪುನಃ ಬಾಣಗಳಿಂದ ಮಳೆಗರೆದನು. ಅನಂತರ ಜಗದ್ಗುರುವಾದ ನಾರಾಯಣನು ತೀಕ್ಷ್ಣವಾದ ಬಾಣದಿಂದ ಪ್ರಹ್ಲಾದನ ಹೃದಯಕ್ಕೆ ಹೊಡೆಯಲು ಅವನು ಹೃದಯ ಭೇದನವನ್ನು ಹೊಂದಿ ರಥದ ಹತ್ತಿರ ಕೆಳಗೆ ಬಿದ್ದನು. ಅವನನ್ನು ಕೊಂಡೊಯ್ದು ಸಾರಥಿಯು ಉಪಚರಿಸಲು ಒಡನೆಯೇ ಸಂಜ್ಞೆಯನ್ನು ಪಡೆದ ಪ್ರಹ್ಲಾದನು ಬೇರೆ ಧನುಸ್ಸನ್ನು ಹೊಂದಿ ಪುನಃ ಯುದ್ಧಕ್ಕೆ ಬಂದನು.

ತಮಾಗತಂ ಸಂನಿರೀಕ್ಷ್ಯ ಪ್ರತ್ಯುವಾಚ ನರಾಗ್ರಜಃ ।
ಗಚ್ಛ ದೈತ್ಯೇಂದ್ರ ಯೋತ್ಸ್ಯಾಮಃ ಪ್ರಾತಸ್ತ್ವಾಹ್ನಿಕಮಾಚರ ॥ ೨೮ ॥

ಏವಮುಕ್ತೋ ದಿತೀಶಸ್ತು ಸಾಧ್ಯೇನಾದ್ಭುತಕರ್ಮಣಾ ।
ಜಗಾಮ ನೈಮಿಷಾರಣ್ಯಂ ಕ್ರಿಯಾಂ ಚಕ್ರೇ ತದಾಹ್ನಿಕೀಂ ॥ ೨೯ ॥

ಏವಂ ಯುಧ್ಯತಿ ದೇವೇ ಚ ಪ್ರಾಹ್ಲಾದೋಥಾಸ್ಮರನ್ಮನೇ ।
ರಾತ್ರೌ ಚಿಂತಯತೇ ಯುದ್ಧೇ ಕಥಂ ಜೇಷ್ಯಾಮಿ ದಾಂಭಿಕಂ ॥ ೩೦ ॥

ಏವಂ ನಾರಾಯಣೇನಾಸೌ ಸಹಾಯುಧ್ಯತ ನಾರದ ।
ದಿವ್ಯಂ ವರ್ಷಸಹಸ್ರಂ ತು ದೈತ್ಯೋ ದೇವಂ ನ ಚಾಜಯತ್ ॥ ೩೧ ॥

ತತೋ ವರ್ಷಸಹಸ್ರಾಂತೇ ಹ್ಯಜಿತೇ ಪುರುಷೋತ್ತಮೇ ।
ಪೀತವಾಸಸಮಭ್ಯೇತ್ಯ ದಾನವೋ ವಾಕ್ಯಮಬ್ರವೀತ್ ॥ ೩೨ ॥

ಕಿಮರ್ಥಂ ದೇವದೇವೇಶ ಸಾಧ್ಯಂ ನಾರಾಯಣಂ ಹರಿಂ ।
ವಿಜೇತುಂ ನಾದ್ಯ ಶಕ್ನೋಮಿ ಏತನ್ಮೇ ಕಾರಣಂ ವದ ॥ ೩೩ ॥

---

೨೮-೩೧. ಹಾಗೆ ಯುದ್ಧಕ್ಕೆ ಬಂದ ಪ್ರಹ್ಲಾದನನ್ನು ನೋಡಿ ನಾರಾಯಣನು ಎಲೈ ದೈತ್ಯೇಂದ್ರನೇ, ಆಹ್ನಿಕವನ್ನು ಮಾಡುಹೋಗು ಬೆಳಿಗ್ಗೆ ಪುನಃ ಯುದ್ಧ ಮಾಡೋಣ ಎಂದನು. ಹೀಗೆ ಹೇಳಲ್ಪಟ್ಟ ಪ್ರಹ್ಲಾದನು ನೈಮಿಷಾರಣ್ಯಕ್ಕೆ ಹೋಗಿ ಆಹ್ನಿಕಕ್ರಿಯೆಗಳೆಲ್ಲವನ್ನೂ ಮುಗಿಸಿದನು. ನಾರಾಯಣನ ಯುದ್ಧಕೌಶಲವನ್ನು ಸ್ಮರಿಸಿಕೊಂಡು ಈ ದಾಂಭಿಕನನ್ನು ಯುದ್ಧದಲ್ಲಿ ಹೇಗೆ ಜಯಿಸಲಿ ಎಂದು ರಾತ್ರಿಯಲ್ಲೂ ಚಿಂತಿಸುತ್ತಿದ್ದನು. ಎಲೈ ನಾರದನೇ, ಈ ರೀತಿ ನಾರಾಯಣನೊಡನೆ ದಿವ್ಯ ವರ್ಷಸಹಸ್ರಪರ್ಯಂತ ಯುದ್ಧಮಾಡಿದರೂ ಪ್ರಹ್ಲಾದನು ಜಯಿಸಲಾಗಲಿಲ್ಲ.

೩೨-೩೪. ಈ ಪ್ರಕಾರ ವರ್ಷಸಹಸ್ರಾಂತಪರ್ಯಂತ ಯುದ್ಧಮಾಡಿದರೂ ನಾರಾಯಣನನ್ನು ಜಯಿಸಲು ಸಾಧ್ಯವಾಗದಿರಲು ಪ್ರಹ್ಲಾದನು ಮಹಾವಿಷ್ಣುವಿನ ಸಮೀಪಕ್ಕೆ ಹೋಗಿ ಎಲೈ ದೇವೇಶನೇ, ಇಷ್ಟು ಯುದ್ಧಮಾಡಿದರೂ ಈ ನಾರಾಯಣನನ್ನು ಜಯಿಸಲು ನಾನು ಸಮರ್ಥನಾಗಲಿಲ್ಲ. ಇದಕ್ಕೇನು ಕಾರಣ ದಯವಿಟ್ಟು ಹೇಳಬೇಕು ಎಂದು ಪ್ರಾರ್ಥಿಸಿದನು. ಆಗ ಎಲೈ ಪ್ರಹ್ಲಾದನೇ ಮಹಾಪರಾಕ್ರಮಿ

ಪೀತವಾಸಾ ಉವಾಚ

ದುರ್ಜಯೋಽಸೌ ಮಹಾಬಾಹುಸ್ತ್ವಯಾ ಪ್ರಹ್ಲಾದ ಧರ್ಮಜಃ ।
ಸಾಧ್ಯೋ ವಿಪ್ರವರೋ ಧೀಮಾನ್ಮೃಧೇ ದೇವಾಸುರೈರಪಿ ॥ ೩೪ ॥

ಪ್ರಹ್ಲಾದ ಉವಾಚ

ಯದ್ಯಸೌ ದುರ್ಜಯೋ ದೇವ ಮಯಾ ಸಾಧ್ಯೋ ರಣಾಜಿರೇ ।
ತತ್ಕಥಂ ಯತ್ಪ್ರತಿಜ್ಞಾತಂ ತದಸತ್ಯಂ ಭವಿಷ್ಯತಿ ॥ ೩೫ ॥

ಹೀನಪ್ರತಿಜ್ಞೋ ದೇವೇಶ ಕಥಂ ಜೀವೇತ ಮಾದೃಶಃ ।
ತಸ್ಮಾತ್ತವಾಗ್ರತೋ ವಿಷ್ಣೋ ಕರಿಷ್ಯೇ ಕಾಯಶೋಷಣಂ ॥ ೩೬ ॥

ಪುಲಸ್ತ್ಯ ಉವಾಚ

ಇತ್ಯೇವಮುಕ್ತ್ವಾ ವಚನಂ ದೇವಾಗ್ರೇ ದಾನವೇಶ್ವರಃ ।
ಶಿರಃ ಸ್ನಾತಸ್ತದಾ ತಸ್ಥೌ ಗೃಣನ್ಬ್ರಹ್ಮ ಸನಾತನಂ ॥ ೩೭ ॥

ತತೋ ದೈತ್ಯಪತಿಂ ವಿಷ್ಣುಃ ಪೀತವಾಸಾಽಬ್ರವೀದ್ವಚಃ ।
ಗಚ್ಛ ಜೇಷ್ಯಸಿ ಭಕ್ತ್ಯಾ ತಂ ನ ಯುದ್ಧೇನ ಕದಾಚನ ॥ ೩೮ ॥

---

ಯಾಗಿಯೂ, ಬ್ರಾಹ್ಮಣನಾಗಿಯೂ, ಬುದ್ಧಿಶಾಲಿಯಾಗಿಯೂ ಇರುವ ಇವನನ್ನು ಜಯಿಸಲು ನಿನಗೆ ಸಾಧ್ಯವಿಲ್ಲ. ದೇವಾಸುರರೂ ಇವನನ್ನು ಜಯಿಸಲಾರರು.

೩೫-೩೬. ಎಲೈ ದೇವೇಶನೇ, ಈ ಸಾಧ್ಯನನ್ನು ನಾನು ಯುದ್ಧದಲ್ಲಿ ಜಯಿಸಲು ಸಾಧ್ಯವಾಗದಿದ್ದಲ್ಲಿ ನಾನು ಮೊದಲು ಮಾಡಿದ ಪ್ರತಿಜ್ಞೆಯು ಅಸತ್ಯವಾದೀತು, ಪ್ರತಿಜ್ಞಾಭಂಗದಿಂದ ಅವಮಾನಿತನಾದ ನಾನು ಹೇಗೆ ತಾನೆ ಬದುಕಿರಬಹುದು. ಆದುದರಿಂದ ನಿನ್ನ ಎದುರಿಗೆ ಪ್ರಾಯೋಪವೇಶದಿಂದ ಕಾಯಶೋಷಣೆಮಾಡಿ ಪ್ರಾಣ ತ್ಯಾಗ ಮಾಡುತ್ತೇನೆ.

೩೭-೪೦. ಪುಲಸ್ತ್ಯರು ಹೇಳುತ್ತಾರೆ: ಈ ರೀತಿಯಾಗಿ ಪ್ರಹ್ಲಾದನು ಹೇಳಿ ವಿಷ್ಣುವಿನ ಎದುರಿಗೆ ಶಿರಸ್ನಾನಮಾಡಿ ವೇದವನ್ನು ಪಠನಮಾಡುತ್ತಾ ಪ್ರಾಯೋಪ ವೇಶಮಾಡಿ ಕುಳಿತನು. ಅನಂತರ ವಿಷ್ಣುವು ಪ್ರಹ್ಲಾದನನ್ನು ಕುರಿತು. ಆ ಸಾಧ್ಯನನ್ನು ಯುದ್ಧದಲ್ಲಿ ಜಯಿಸಲು ನಿನಗೆ ಯಾವಾಗಲೂ ಸಾಧ್ಯವಿಲ್ಲ. ಭಕ್ತಿಯಿಂದ ಜಯಿಸುತ್ತೀಯೆ ಹೋಗು ಎಂದನು. ಆಗ ಪ್ರಹ್ಲಾದನು ಎಲೈ ಪ್ರಭುವೇ, ಇವನು

### ಪ್ರಹ್ಲಾದ ಉವಾಚ

ಅಸೌ ಯದ್ಯಜಯೋ ದೇವ ತ್ರೈಲೋಕ್ಯೇಷ್ವಪಿ ಸುವ್ರತ ।
ನ ಸ್ಥಾತುಂ ತ್ವತ್ಪ್ರಸಾದೇನ ಶಕ್ಯಂ ಕಿಮುತ ರೋಷತಃ ॥ ೩೯ ॥
ಮಯಾ ಜಿತಂ ದೇವದೇವ ತ್ರೈಲೋಕ್ಯಮಪಿ ಸುವ್ರತ ।
ಜಿತೋಽಯಂ ತ್ವತ್ಪ್ರಸಾದೇನ ಶಕ್ರಃ ಕಿಮುತ ಧರ್ಮಜಃ ॥ ೪೦ ॥

### ಪೀತವಾಸಾ ಉವಾಚ

ಸೋಽಹಂ ದಾನವಶಾರ್ದೂಲ ಲೋಕಾನಾಮನುಕಂಪಯಾ ।
ಧರ್ಮಪ್ರವರ್ತನಾರ್ಥಾಯ ತಪಶ್ಚರ್ಯಾಂ ಸಮಾಸ್ಥಿತಃ ॥ ೪೧ ॥
ತಸ್ಮಾದ್ಯದೀಚ್ಛಸಿ ಜಯಂ ತಮಾರಾಧಯ ದಾನವ ।
ತಂ ಪರಾಜೇಷ್ಯಸೇ ಭಕ್ತ್ಯಾ ತಸ್ಮಾಚ್ಛುಶ್ರೂಷ ಧರ್ಮಜಂ ॥ ೪೨ ॥

### ಪುಲಸ್ತ್ಯ ಉವಾಚ

ಇತ್ಯುಕ್ತಃ ಪೀತವಸ್ತ್ರೇಣ ದಾನವೇಂದ್ರೋ ಮಹಾತ್ಮನಾ ।
ಅಬ್ರವೀದ್ವಚನಂ ಹೃಷ್ಟಃ ಸಮಾಹೂಯಾಂಧಕಂ ಮುನೇ ॥ ೪೩ ॥

---

ಮೂರು ಲೋಕದಲ್ಲಿ ಯಾರಿಂದಲೂ ಅಜೇಯನೇ ಆಗಿರುವ ಪಕ್ಷದಲ್ಲಿ ನಿನಗೂ ಅಜೇಯನೇ ಆದಂತಾಯಿತು. ನಿನ್ನ ಅನುಗ್ರಹವನ್ನು ಹೊಂದಿ ಬದುಕಲು ಸಾಧ್ಯವಿಲ್ಲದ ಇವನು ನಿನ್ನ ರೋಷಕ್ಕೆ ಪಾತ್ರನಾಗಿ ಹೇಗೆ ನಿಂತಾನು. ನಿನ್ನ ಅನುಗ್ರಹದಿಂದ ನಾನು ಮೂರು ಲೋಕವನ್ನೂ ಇಂದ್ರನನ್ನೂ ಜಯಿಸಿರುವೆನು. ಈ ಸಾಧ್ಯನು ಎಷ್ಟರವನು. ನನ್ನನ್ನು ಅನುಗ್ರಹಿಸು. ನಾನು ಜಯಶಾಲಿಯಾಗುವೆನು ಎಂದನು.

೪೧-೪೩. ವಿಷ್ಣುವು ಹೇಳುತ್ತಾನೆ: ಎಲೈ ದಾನವೇಂದ್ರನೇ, ಧರ್ಮಪ್ರವರ್ತನದಿಂದ ಪ್ರಪಂಚಕ್ಕೆ ಹಿತವನ್ನು ಉಂಟುಮಾಡುವ ಉದ್ದೇಶದಿಂದ ನಾನೇ ದಯೆಯಿಂದ ಆ ಸಾಧ್ಯರೂಪನಾಗಿ ತಪಶ್ಚರ್ಯೆಯನ್ನಾಶ್ರಯಿಸಿರುತ್ತೇನೆ. ಆದುದರಿಂದ ನಿನಗೆ ಜಯವನ್ನು ಹೊಂದುವ ಇಚ್ಛೆ ಇದ್ದಲ್ಲಿ ಅವನನ್ನು ಆರಾಧಿಸು. ಭಕ್ತಿಯಿಂದ ಅವನನ್ನು ಸ್ವಾಧೀನಪಡಿಸಿಕೊಂಡು ಜಯಶಾಲಿಯಾಗುತ್ತೀಯೆ. ಆದುದರಿಂದ ಅವನ ಪ್ರೀತಿಗೆ ಪಾತ್ರನಾಗಿ ಅವನನ್ನೇ ಸೇವಿಸು. ಪುಲಸ್ತ್ಯರು ಹೇಳುತ್ತಾರೆ: ಎಲೈ ನಾರದನೇ ಈ ರೀತಿ ವಿಷ್ಣುವಿನಿಂದ ಉಪದೇಶಿಸಲ್ಪಟ್ಟ ಪ್ರಹ್ಲಾದನು ಸಂತುಷ್ಟನಾಗಿ ಅಂಧಕನನ್ನು ಕರೆದು ಹೇಳುತ್ತಾನೆ.

## ಪ್ರಹ್ಲಾದ ಉವಾಚ

ದೈತ್ಯಾಶ್ಚ ದಾನವಾಶ್ಚೈವ ಪರಿಪಾಲ್ಯಾಸ್ತ್ವಯಾಂಧಕ ।
ಮಯೋತ್ಸೃಷ್ಟಮಿದಂ ರಾಜ್ಯಂ ಪ್ರತೀಚ್ಛ ತ್ವಂ ಮಹೀಭುಜ ॥ ೪೪ ॥

ಇತ್ಯೇವಮುಕ್ತೋ ಜಗ್ರಾಹ ರಾಜ್ಯಂ ಹೈರಣ್ಯಲೋಚನಃ ।
ಪ್ರಹ್ಲಾದೋಽಪಿ ತದಾ ಗಚ್ಛೆತ್ಪುಣ್ಯಂ ಬದರಿಕಾಶ್ರಮಂ ॥ ೪೫ ॥

ದೃಷ್ಟ್ವಾ ನಾರಾಯಣಂ ದೇವಂ ನರಂ ಚ ದಿತಿಜೇಶ್ವರಃ ।
ಕೃತಾಂಜಲಿಪುಟೋ ಭೂತ್ವಾ ವವಂದೇ ಚರಣೌ ತಯೋಃ ॥ ೪೬ ॥

ತಮುವಾಚ ಮಹಾತೇಜಾ ವಾಕ್ಯಂ ನಾರಾಯಣೋಽವ್ಯಯಃ ।
ಕಿಮರ್ಥಂ ಪ್ರಣತೋಽಸೀಹ ಮಾಮಜಿತ್ವಾ ಮಹಾಸುರ ॥ ೪೭ ॥

## ಪ್ರಹ್ಲಾದ ಉವಾಚ

ಕಸ್ತ್ವಾಂ ಜೇತುಂ ಪ್ರಭೋ ಶಕ್ತಃ ಕಸ್ತ್ವತ್ತಃ ಪುರುಷೋಽಧಿಕಃ ।
ತ್ವಂ ಹಿ ನಾರಾಯಣೋಽನಂತಃ ಪೀತವಾಸಾ ಜನಾರ್ದನಃ ॥ ೪೮ ॥

---

೪೪-೪೬. ಎಲೈ ಅಂಧಕನೇ, ನಾನು ಈ ರಾಜ್ಯವನ್ನು ಬಿಟ್ಟಿದ್ದೇನೆ. ದೈತ್ಯರನ್ನೂ ದಾನವರನ್ನೂ ರಕ್ಷಿಸುವ ಭಾರವೆಲ್ಲವೂ ಇನ್ನು ಮುಂದೆ ನಿನಗೇ ಸೇರಿದ್ದು. ಈ ನನ್ನ ರಾಜ್ಯವನ್ನು ಸ್ವೀಕರಿಸು. ನೀನೇ ಧೊರೆಯಾಗಿದ್ದೀಯೆ ಎಂದನು. ಹೀಗೆ ಪ್ರಹ್ಲಾದನಿಂದ ಹೇಳಲ್ಪಟ್ಟ ಅಂಧಕನು ರಾಜ್ಯವನ್ನು ಸ್ವೀಕರಿಸಿ ರಾಜನಾದನು. ಅನಂತರ ಪ್ರಹ್ಲಾದನು ಪುಣ್ಯಕರವಾದ ಬದರಿಕಾಶ್ರಮಕ್ಕೆ ಹೋದನು. ಅಲ್ಲಿರುವ ನರನಾರಾಯಣರನ್ನು ನೋಡಿ ಅಂಜಲಿಬಂಧಪೂರ್ವಕವಾಗಿ ಅವರ ಪಾದಪದ್ಮಗಳಿಗೆ ನಮಸ್ಕರಿಸಿದನು.

೪೭-೪೮. ಈ ರೀತಿ ನಮಸ್ಕರಿಸಿದ ಪ್ರಹ್ಲಾದನನ್ನು ಕುರಿತು ಪ್ರಭುವಾದ ನಾರಾಯಣನು ಎಲೈ ಅಸುರೇಂದ್ರನೇ, ನನ್ನನ್ನು ಜಯಿಸದೆ ಏತಕ್ಕೆ ಹೀಗೆ ನಮಸ್ಕರಿಸುತ್ತಿದ್ದೀಯೆ ಎಂದನು. ಅದಕ್ಕೆ ಪ್ರಹ್ಲಾದನು ಹೇಳುತ್ತಾನೆ: ಹೆ ಪ್ರಭುವೇ, ನಿನ್ನನ್ನು ಜಯಿಸಲು ನಾನು ಎಷ್ಟರವನು. ನಿನಗಿಂತಲೂ ಉತ್ಕೃಷ್ಟನಾದ ಪುರುಷನು ಪ್ರಪಂಚದಲ್ಲಿ ಯಾವನಿದ್ದಾನೆ. ನೀನೇ ಪೀತಾಂಬರಧಾರಿಯಾದ ಅನಾದ್ಯನಂತನಾದ

**ತ್ವಂ ದೇವಃ ಪುಂಡರೀಕಾಕ್ಷಸ್ತ್ವಂ ವಿಷ್ಣುಃ ಶಾಂರ್ಗಚಾಪಧೃಕ್ ।**
**ತ್ವಮವ್ಯಯೋ ಮಹೇಶಾನ ಶಾಶ್ವತಃ ಪುರುಷೋತ್ತಮ ॥ ೪೯ ॥**

**ತ್ವಾಂ ಯೋಗಿನಶ್ಚಿಂತಯಂತಿ ಚಾರ್ಚಯಂತಿ ಮನೀಷಿಣಃ ।**
**ಜಪಂತಿ ಸ್ನಾತಕಾಸ್ತ್ವಾಂ ಚ ಯಜಂತಿ ತ್ವಾಂ ಚ ಯಾಜ್ಞಿಕಾಃ ॥ ೫೦ ॥**

**ತ್ವಮಚ್ಯುತೋ ಹೃಷೀಕೇಶಶ್ಚಕ್ರಪಾಣಿರ್ಧರಾಧರಃ ।**
**ಮಹಾಮೀನೋ ಹಯಶಿರಾಸ್ತ್ವಮೇವ ವರಕಚ್ಛಪಃ ॥ ೫೧ ॥**

**ಹಿರಣ್ಯಾಕ್ಷರಿಪುಃ ಶ್ರೀಮಾನ್ಭಗವಾನ್ಕಾರ್ಯಸೂಕರಃ ।**
**ಮತ್ಪಿತುರ್ನಾಶಮಕರೋರ್ಭಗವಾನಪಿ ಕೇಸರೀ ॥ ೫೨ ॥**

---

ನಾರಾಯಣನಾಗಿದ್ದೀಯೆ. ನೀನೇ ಪುಂಡರೀಕಾಕ್ಷನೂ ಸರ್ವವ್ಯಾಪಕನಾದ ಮಹಾ ವಿಷ್ಣುವೂ ಮಹೇಶ್ವರನೂ ಪುರುಷೋತ್ತಮನೂ ಆಗಿದ್ದೀಯೆ.

೫೦-೫೧. ಯೋಗಿಗಳು ಅಂತರ್ಮುಖರಾಗಿ ನಿನ್ನನ್ನೇ ಧ್ಯಾನಿಸುತ್ತಾರೆ. ಸದಸದ್ವಿವೇಕಿಗಳಾದ ಜ್ಞಾನಿಗಳು ನಿನ್ನನ್ನೇ ಪೂಜಿಸುತ್ತಾರೆ. ಸ್ನಾತಕರು ನಿನ್ನನ್ನೇ ಜಪಿಸುತ್ತಾ ವ್ರತಧಾರಿಗಳಾಗುತ್ತಾರೆ. ಯಜ್ಞಯಾಗಾದಿಗಳನ್ನು ಮಾಡುವವರೆಲ್ಲರೂ ಸರ್ವಕರ್ಮಸಮಾರಾಧ್ಯನಾದ ನಿನ್ನನ್ನೇ ಯಾಗಾದಿ ಕರ್ಮಗಳಿಂದ ಪೂಜಿಸುತ್ತಾರೆ. ಅಚ್ಯುತ, ಹೃಷೀಕೇಶ, ಚಕ್ರಪಾಣಿ, ಧರಾಧರ ಎಂಬ ಪದಗಳ ಮುಖ್ಯಾರ್ಥಕ್ಕೆ ನೀನೇ ಪಾತ್ರನಾಗಿದ್ದೀಯೆ. ಶಿಷ್ಟಪರಿಪಾಲನಕ್ಕೆ ಅಂಗವಾಗಿ ದುಷ್ಟರನ್ನು ನಿಗ್ರಹಿಸಲು ಮಹಾಮೀನನಾಗಿಯೂ ಆದಿಕೂರ್ಮನಾಗಿಯೂ ಅವತರಿಸಿದವನು ನೀನೇ ಆಗಿದ್ದೀಯೆ. ಸೃಷ್ಟಿಕಾರ್ಯಕ್ಕಾಗಿ ಸೃಷ್ಟಿಸಿದ ಚತುರ್ಮುಖನಿಗೆ ಸರ್ವಜ್ಞತೆಯನ್ನುಂಟುಮಾಡಲು ಹಯಗ್ರೀವಾವತಾರವನ್ನು ಧರಿಸಿ ವೇದಗಳನ್ನು ಉಪದೇಶಮಾಡಿದವನೂ ನೀನೇ.

೫೨-೫೩. ಹಿರಣ್ಯಾಕ್ಷನನ್ನು ನಾಶಪಡಿಸಿ ಜಗತ್ತನ್ನು ರಕ್ಷಿಸಿದವನೂ ನೀನೇ. ದಯೆಯಿಂದ ನಿಕೃಷ್ಟವಾದ ಸೂಕರಾವತಾರವನ್ನು ಹೊಂದಿ ಲೋಕವನ್ನು ಉದ್ಧರಿಸಿದವನೂ ನೀನೇ. ನರಸಿಂಹಾವತಾರವನ್ನು ಧರಿಸಿ ನನ್ನ ತಂದೆಯನ್ನು ಕೊಂದವನೂ

ಬ್ರಹ್ಮಾ ತ್ರಿನೇತ್ರೋಽಮರರಾಡ್ಹುತಾಶಃ
ಪ್ರೇತಾಧಿಪೋ ನೀರಪತಿಃ ಸಮೀರಃ ।
ಸೂರ್ಯೋ ಮೃಗಾಂಕೋಽಚಲಜಂಗಮಾದ್ಯೋ ।
ಭವಾನ್ವಿಭೋ ನಾಥ ಖಗೇಂದ್ರಕೇತೋ ॥ ೫೩ ॥

ತ್ವಂ ಪೃಥ್ವೀ ಜ್ಯೋತಿರಾಕಾಶಂ ಜಲಂ ಭೂತ್ವಾ ಸಹಸ್ರಶಃ ।
ತ್ವಯಾ ವ್ಯಾಪ್ತಂ ಜಗತ್ಸರ್ವಂ ಕಸ್ತ್ವಾಂ ಜೇಷ್ಯತಿ ಮಾಧವ ॥ ೫೪ ॥

ಭಕ್ತ್ಯಾ ಯದಿ ಹೃಷೀಕೇಶ ತೋಷಮೇಷಿ ಜಗದ್ಗುರೋ ।
ನಾನ್ಯಥಾ ತ್ವಂ ಪ್ರಶಕ್ಯೋಽಸಿ ಜೇತುಂ ಸರ್ವಗತೋಽವ್ಯಯಃ ॥ ೫೫ ॥

ಭಗವಾನುವಾಚ

ಪರಿತುಷ್ಟೋಽಸ್ಮಿ ತೇ ದೈತ್ಯ ಸ್ತವೇನಾನೇನ ಸುವ್ರತ ।
ಭಕ್ತ್ಯಾ ತ್ವನನ್ಯಯಾ ಚಾಹಂ ತ್ವಯಾ ದೈತ್ಯ ಪರಾಜಿತಃ ॥ ೫೬ ॥

ಪರಾಜಿತಶ್ಚ ಪುರುಷೋ ದೈತ್ಯ ದಂಡಂ ಪ್ರಯಚ್ಛತಿ ।
ದಂಡಾರ್ಥಂ ತೇ ಪ್ರದಾಸ್ಯಾಮಿ ವರಂ ವೃಣು ಯಮಿಚ್ಛಸಿ ॥ ೫೭ ॥

---

ನೀನೇ. ಬ್ರಹ್ಮ, ರುದ್ರ, ಇಂದ್ರ, ಅಗ್ನಿ ಮೊದಲಾದ ದೇವತೆಗಳಲ್ಲಿಯೂ ದಿಕ್ಪಾಲಕರುಗಳಲ್ಲಿಯೂ ಅನುಪ್ರವೇಶಹೊಂದಿ ಆಯಾಯ ರೂಪದಿಂದ ಜಗತ್ತನ್ನು ರಕ್ಷಿಸುತ್ತಿರುವ ಗರುಡಧ್ವಜನೇ ನೀನಾಗಿರುವೆ.

೫೪-೫೫. ಭೂಮಿ, ಆಕಾಶ, ಜಲ ಮೊದಲಾದ ಶಕ್ತಿರೂಪವಾದ ಪಂಚಭೂತಗಳಿಂದ ಅನೇಕ ರೂಪಿಯಾಗಿ ತೋರುತ್ತಿರುವವನೂ ನೀನೇ. ನಿನ್ನಿಂದಲೇ ಪ್ರಪಂಚವೆಲ್ಲವೂ ವ್ಯಾಪ್ತವಾಗಿದೆ. ಇಂತಹ ನಿನ್ನನ್ನು ಜಯಿಸುವ ಯಾವನು ತಾನೆ ಇದ್ದಾನೆ. ಭಕ್ತಿಯಿಂದ ಸಂತೋಷಗೊಂಡ ನಿನ್ನನ್ನು ಜಯಿಸಬಹುದೇ ಹೊರತು ಬೇರೆ ರೀತಿಯಲ್ಲಿ ನಿನ್ನ ಜಯವು ಯಾರಿಗೂ ಸಾಧ್ಯವಿಲ್ಲ.

೫೬-೫೭. ಪ್ರಹ್ಲಾದನನ್ನು ಕುರಿತು ಭಗವಂತನು ಹೇಳುತ್ತಾನೆ. ಎಲೈ, ಭಕ್ತನಾದ ದೈತ್ಯೇಂದ್ರನೇ ನಿನ್ನ ಈ ಸ್ತುತಿಯಿಂದ ನಾನು ಸಂತುಷ್ಟನಾಗಿರುತ್ತೇನೆ. ಏಕಾಂತವಾದ ಈ ನಿನ್ನ ಭಕ್ತಿಯಿಂದ ನಾನು ಪರಾಜಿತನೂ ಆಗಿರುವೆನು ಪರಾಜಿತನಾದವನು ಅಪರಾಧದ ಪ್ರತಿಫಲವಾಗಿ ದಂಡವನ್ನು ಕೊಡಬೇಕೆಂಬುದು ಲೋಕದಲ್ಲಿ ವಾಡಿಕೆಯಾಗಿದೆ ಆದ್ದರಿಂದ ಸೋತು ಹೋಗಿ ನಿನಗೆ ಅಧೀನನಾಗಿರುವ ನಾನು ದಂಡರೂಪವಾಗಿ ವರವನ್ನು ಕೊಡುತ್ತೇನೆ. ನಿನಗೆ ಬೇಕಾದ ವರವನ್ನು ಕೇಳಿಕೊ. (ಎಂದನು)

ಪ್ರಹ್ಲಾದ ಉವಾಚ

ನಾರಾಯಣಂ ವರಂ ಯಾಚೇ ಯತ್ತ್ವಂ ಮೇ ದಾತುಮರ್ಹಸಿ ।
ತನ್ಮೇ ಪಾಪಂ ಲಯಂ ಯಾತು ಶಾರೀರಂ ಮಾನಸಂ ತಥಾ ॥ ೫೮ ॥

ವಾಚಿಕಂ ಚ ಜಗನ್ನಾಥ ಯತ್ತ್ವಯಾ ಸಹ ಯುಧ್ಯತಃ ।
ನರೇಣ ಯದ್ವಾಪ್ಯಭವದ್ವರಮೇನಂ ಪ್ರಯಚ್ಛ ಮೇ ॥ ೫೯ ॥

ನಾರಾಯಣ ಉವಾಚ

ಏವಂ ಭವತು ದೈತ್ಯೇಂದ್ರ ಪಾಪಂ ತೇ ಯಾತು ಸಂಕ್ಷಯಂ ।
ದ್ವಿತೀಯಂ ಪ್ರಾರ್ಥಯ ವರಂ ತಂ ದದಾಮಿ ತವಾಸುರ ॥ ೬೦ ॥

ಪ್ರಹ್ಲಾದ ಉವಾಚ

ಯಾಯಾ ಜಾಯೇತ ಮೇ ಬುದ್ಧಿಃ ಸಾ ಸಾ ವಿಷ್ಣೋ ತ್ವದಾಶ್ರಿತಾ ।
ದೇವಾರ್ಚನೇ ಚ ನಿರತಾ ತ್ವಚ್ಚಿತ್ತಾ ತ್ವತ್ಪರಾಯಣಾ ॥ ೬೧ ॥

---

೫೮-೫೯. ಪ್ರಹ್ಲಾದನು ಹೇಳುತ್ತಾನೆ, ಎಲೈ. ಪ್ರಭುವೇ, ಸಂತುಷ್ಟನಾದ ನೀನು ನನಗೆ ವರವನ್ನು ಕೊಡಲು ಇಷ್ಟಪಟ್ಟಲ್ಲಿ. ನಿನ್ನೊಡನೆಯೂ, ನರನೊಡನೆಯೂ ಅವಿವೇಕದಿಂದ ಯುದ್ಧ ಮಾಡಿದ ನನಗೆ ಶಾರೀರವಾಗಿಯೂ, ಮಾನಸಿಕವಾಗಿಯೂ, ವಾಚಿಕವಾಗಿಯೂ ಸಂಭವಿಸಿದ ಅಪರಾಧದಿಂದ ಯಾವ ಯಾವ ಪಾಪಗಳುಂಟಾಗಿವೆಯೋ ಅವೆಲ್ಲವೂ ನಾಶವಾಗಲಿ. ಇದೇ ನಾನು ಅಪೇಕ್ಷಿಸುವ ವರ

೬೦-೬೧. ಅನಂತರ ನಾರಾಯಣನು, ಎಲೈ, ದೈತ್ಯೇಂದ್ರನೇ ನೀನು ಅಪೇಕ್ಷಿಸಿದಂತೆ ನಿನ್ನ ಪಾಪವೆಲ್ಲವೂ ನಾಶವಾಗಲಿ, ಎರಡನೇ ವರವನ್ನು ಕೇಳಿಕೊ, ಕೊಡುವೆನು ಎಂದನು. (ನನ್ನ ಅನುಗ್ರಹಮಾತ್ರದಿಂದ ಪಾಪಕ್ಷಯವು ಸಿದ್ಧವಾಗಿದೆಯೇ ಇದೆ. ಆದ್ದರಿಂದ ಬೇರೆ ವರವನ್ನು ಕೇಳಿಕೊ ಎಂದು ತಾತ್ಪರ್ಯ.) ಪ್ರಹ್ಲಾದನು ಹೇಳುತ್ತಾನೆ, ಎಲೈ ವಿಷ್ಣುವೇ ನನಗೆ ಉಂಟಾಗುವ ಎಲ್ಲಾ ಬುದ್ಧಿಯೂ ಐಹಿಕವಾದ ಅರ್ಥಕಾಮುಗಳಿಂದ ಪರಾಙ್ಮುಖವಾಗಿ ಯಾವಾಗಲೂ ನಿನ್ನನ್ನೇ ಆಶ್ರಯಿಸಿಕೊಂಡು ನಿನ್ನ ಪೂಜೆಯಲ್ಲಿಯೂ, ಧ್ಯಾನದಲ್ಲಿಯೂ ಅಭಿಮುಖವಾಗಿ ಸ್ಥಿರವಾಗಿ ನಿಲ್ಲಲಿ. [ಮುಮುಕ್ಷುವಾದ ಭಕ್ತನು ಭಕ್ತಿಜ್ಞಾನಗಳಿಂದ ಬೇರೆಯಾದ ಯಾವ ಫಲವನ್ನೂ ಭಗವಂತನಲ್ಲಿ ಪ್ರಾರ್ಥಿಸಬಾರದೆಂಬ ವೈಷ್ಣವಧರ್ಮವು ಇಲ್ಲಿ ಸೂಚಿತವಾಗಿದೆ. ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯಂತಃ ಪರಸ್ಪರಂ ಕಥಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೆ, ಎಂಬ ಗೀತಾವಚನವು ಇದರಿಂದ ಸೂಚಿಸಲ್ಪಡುತ್ತಿದೆ].

ನಾರಾಯಣ ಉವಾಚ

ಏವಂ ಭವಿಷ್ಯತ್ಯಸುರ ವರಮನ್ಯಂ ಯಮಿಚ್ಛಸಿ ।
ತಂ ವೃಣೀಷ್ವ ಮಹಾಬಾಹೋ ಪ್ರದಾಸ್ಯಾಮ್ಯವಿಚಾರಯನ್ ॥ ೬೨ ॥

ಪ್ರಹ್ಲಾದ ಉವಾಚ

ಸರ್ವಮೇವ ಮಯಾ ಲಬ್ಧಂ ತ್ವತ್ಪ್ರಸಾದಾದಧೋಕ್ಷಜ ।
ತ್ವತ್ಪಾದಪಂಕಜಾಭ್ಯಾಂ ಹಿ ರತಿರಸ್ತು ಸದಾ ಮಮ ॥ ೬೩ ॥

ನಾರಾಯಣ ಉವಾಚ

ಏವಮಸ್ತ್ವಪರಂ ಚಾಸ್ತು ನಿತ್ಯಮೇವಾಕ್ಷಯೋಽವ್ಯಯಃ ।
ಅಜರಶ್ಚಾಮರಶ್ಚಾಪಿ ಮತ್ಪ್ರಸಾದಾದ್ಭವಿಷ್ಯಸಿ ॥ ೬೪ ॥

---

೬೨-೬೩. ಪ್ರಹ್ಲಾದನ ಭಕ್ತಿಯನ್ನು ಪರೀಕ್ಷಿಸಲು ಪುನಃ ನಾರಾಯಣನು ಹೇಳುತ್ತಾನೆ. ಎಲೈ ಅಸುರಶ್ರೇಷ್ಠನೇ ಹಾಗೆಯೇ ಆಗಲಿ. ಬೇರೆ ವರವನ್ನು ಕೇಳು. [ಅರ್ಥಕಾಮಾಭಿಲಾಷೆಯು ಇವನಿಗೆ ಇದೆಯೋ ಇಲ್ಲವೋ ಎಂಬ ಪರೀಕ್ಷೆಯೇ ಪುನಃ ಪುನಃ ಈ ರೀತಿಯಾದ ಪ್ರಶ್ನೆಗೆ ತಾತ್ಪರ್ಯ.] ಪ್ರಹ್ಲಾದನು ಹೇಳುತ್ತಾನೆ. ಎಲೈ ಅಧೋಕ್ಷಜನೇ ನಿನ್ನ ಅನುಗ್ರಹದಿಂದ ಎಲ್ಲವೂ ನನಗೆ ಉಂಟಾಗಿದೆ. (ಮತ್ತಾವುದನ್ನೂ ಅಪೇಕ್ಷಿಸಬೇಕಾದ್ದಿಲ್ಲವೆಂದು ಭಾವ,) ನಿನ್ನ ಪಾದಕಮಲಗಳಲ್ಲಿ ದೃಢವಾದ ಪ್ರೀತಿಯು ನನಗೆ ಉಂಟಾಗಲಿ. ಇದಕ್ಕಿಂತಲೂ ಬೇರೆಯಾದ ಯಾವ ಭೋಗ್ಯವಸ್ತುವೂ ನನಗೆ ಇಲ್ಲವೆಂದು ತಾತ್ಪರ್ಯ.

೬೪-೬೬. ಈ ಪ್ರಕಾರವಾಗಿ ಪ್ರಹ್ಲಾದನ ದೃಢವಾದ ಭಕ್ತಿಯನ್ನೂ ಅವನ ಅರ್ಥಕಾಮಪರಾಙ್ಮುಖತೆಯನ್ನೂ ಪರೀಕ್ಷಿಸಿ ಇವನು ಪರಮವೈಷ್ಣವನೆಂದು ನಿರ್ಧರಿಸಿ ಅವನ ಕೋರಿಕೆಗೆ ತಕ್ಕಂತೆ ಎಲ್ಲವನ್ನೂ ಅನುಗ್ರಹಿಸಲು ನಾರಾಯಣನು ಹೇಳುತ್ತಾನೆ. ಇದೂ ಆಗಲಿ ನೀನು ಅಪೇಕ್ಷಿಸುವ ಎಲ್ಲ ಇಷ್ಟವೂ ಆಗಲಿ ಇನ್ನು ಮುಂದೆಯೂ ನೀನು ನನ್ನ ಅನುಗ್ರಹದಿಂದ ಜರಾಮರಣರಹಿತನಾಗಿ ಚಿರಂಜೀವಿಯಾಗಿ ಪ್ರಕಾಶಿಸು. ಎಲೈ ದೈತ್ಯಶ್ರೇಷ್ಠನೇ ಇನ್ನು ನೀನು ನಿನ್ನ ವಾಸಸ್ಥಾನಕ್ಕೆ ಹೊರಡು. ಮಾಡತಕ್ಕ ಸ್ವವ್ಯಾಪಾರಗಳಲ್ಲಿ ನಿರತನಾಗು. ನಿತ್ಯಭಕ್ತನಾಗಿ ನನ್ನನ್ನೇ ಸೇವಿಸುತ್ತಿರುವ ನಿನಗೆ ಯಾವ ಕರ್ಮವೂ ಬಂಧಕವಾಗುವುದಿಲ್ಲ. (ಫಲಾಭಿಸನ್ಧಿಪೂರ್ವಕವಾದ ಕರ್ಮಗಳು

ಗಚ್ಛ ತ್ವಂ ದೈತ್ಯಶಾರ್ದೂಲಸ್ವಮಾವಾಸಂ ಕ್ರಿಯಾರತಃ ।
ನ ಕರ್ಮಬಂಧೋ ಭವತೋ ಮಚ್ಚಿತ್ತಸ್ಯ ಭವಿಷ್ಯತಿ ॥ ೬೫ ॥

ಪ್ರಶಾಸಯನ್ನಮೂನ್ದೈತ್ಯಾನ್ರಾಜ್ಯಂ ಪಾಲಯ ಶಾಶ್ವತಂ ।
ಸ್ವಜಾತಿ ಸದೃಶಂ ದೈತ್ಯ ಕುರು ಧರ್ಮಮನುತ್ತಮಂ ॥ ೬೬ ॥

---

ಫಲರೂಪವಾದ ಸುಖದುಃಖಾನುಭವದಿಂದ ವಾಸನಾಪರಂಪರೆಗೆ ಕಾರಣಗಳಾಗಿ ಆ ಮೂಲಕ ಸಂಸಾರವೆಂಬ ಬಂಧಕ್ಕೆ ಕಾರಣವಾಗುತ್ತವೆ. ಫಲಾಭಿಸಂಧಿ ಇಲ್ಲದೆ ಭಗವತ್ಕೈಂಕರ್ಯಬುದ್ಧಿಯಿಂದ ಮಾಡಲ್ಪಡುವ ಕರ್ಮಗಳು ಈರೀತಿ ಬನ್ಧಕವಾಗುವುದಿಲ್ಲ ಮತ್ತು ಭಕ್ತಿಯ ಅಭಿವೃದ್ಧಿಗೂ ಕಾರಣವಾಗುತ್ತವೆ ಎಂದು ತಾತ್ಪರ್ಯ.) ಆದುದರಿಂದ ರಾಜನಾಗಿ ಇದ್ದುಕೊಂಡು 'ಈ ದೈತ್ಯರನ್ನು ರಕ್ಷಿಸುವುದೇ ನಿನ್ನ ಶಾಶ್ವತವಾದ ಧರ್ಮ, ಸ್ವಜಾತಿ ಸಿದ್ಧವಾದ ಈ ವರ್ಣಾಶ್ರಮ ಧರ್ಮವನ್ನು ಅವಶ್ಯ ನೆರವೇರಿಸಲೇಬೇಕು. (ಜ್ಞಾನಿಯಾಗಿದ್ದರೂ ಸ್ವಧರ್ಮವನ್ನು ಬಿಡಬಾರದೆಂದು ತಾತ್ಪರ್ಯ.) ಇಲ್ಲಿ ಜ್ಞಾನಿಯಾದವನಿಗೂ ಭಕ್ತನಾದವನಿಗೂ ಸಹ ವರ್ಣಾಶ್ರಮೋಚಿತವಾದ ಕರ್ಮಾನುಷ್ಠಾನವು ನಿಯತವಾದದ್ದು. ಜ್ಞಾನಿಗೆ ಜ್ಞಾನೋತ್ಪತ್ತಿಗೆ ಮೊದಲು ಜ್ಞಾನೋತ್ಪತ್ತಿಗೆ ಪ್ರತಿಬಂಧಕವಾದ ಪಾಪಗಳನ್ನು ನಾಶಪಡಿಸುವುದಕ್ಕೂ ಜ್ಞಾನವುಂಟಾದನಂತರ ಆ ಜ್ಞಾನದಲ್ಲಿ ಅತಿಶಯವನ್ನು ಉಂಟುಮಾಡುವುದಕ್ಕೂ ಕರ್ಮಾನುಷ್ಠಾನದ ಆವಶ್ಯಕತೆಯು ತಪ್ಪಿದ್ದಲ್ಲ. ಭಕ್ತನಿಗೂ ಸಹ ಭಕ್ತ್ಯುತ್ಪತ್ತಿಗೆ ಮೊದಲು ಅದರ ಪ್ರತಿಬಂಧಕದ ನಿವೃತ್ತಿಗಾಗಿಯೂ ಭಕ್ತಿಯುಂಟಾದನಂತರ ಅದರ ದಾರ್ಢ್ಯಕ್ಕೂ ಅದು ಪ್ರೀತಿರೂಪವಾಗಿ ಭೋಗ್ಯವಾಗುವುದಕ್ಕೂ ಕರ್ಮಾನುಷ್ಠಾನವು ಅವಶ್ಯಕ. ಅಂದರೆ ಅಜ್ಞಾನಿಗೂ ಜ್ಞಾನಿಗೂ ಅಭಕ್ತನಿಗೂ ಭಕ್ತನಿಗೂ ಅನುಷ್ಠಾನದಲ್ಲಿ ಫಲಭೇದವೇ ಹೊರತು ಸರ್ವಥಾ ಕರ್ಮಪರಿತ್ಯಾಗವು ಯಾರಿಗೂ ಯಾವಾಗಲೂ ಯುಕ್ತವಲ್ಲ. ಆದ್ದರಿಂದ ರಾಜ್ಯಪರಿಪಾಲನರೂಪವಾದ ಕ್ಷತ್ರಿಯಧರ್ಮವು ಭಕ್ತಿಯೋಗದಿಂದ ಕೃತಕೃತ್ಯನಾಗಿರುವ ನಿನ್ನಿಂದಲೂ ಬಿಡಲ್ಪಡತಕ್ಕದ್ದಲ್ಲವೆಂದು ತಾತ್ಪರ್ಯ ಫಲಸಂಗಕರ್ತೃತ್ವ ತ್ಯಾಗಪೂರ್ವಕವಾದ ಕರ್ಮವು ಯಾರಿಗೂ ಬಂಧಕವಾಗುವುದಿಲ್ಲ. ಈ ವಿಚಾರವು ಭಗವದ್ಗೀತೆಯ ಕರ್ಮಯೋಗಪ್ರಕರಣದಲ್ಲಿ ವಿಸ್ತಾರವಾಗಿ ಉಪದೇಶಿಸಲ್ಪಟ್ಟಿದೆ.)

### ಪುಲಸ್ತ್ಯ ಉವಾಚ

ಇತ್ಯುಕ್ತೋ ಲೋಕನಾಥೇನ ಪ್ರಹ್ಲಾದೋ ದೇವಮಬ್ರವೀತ್ ।
ಕಥಂ ರಾಜ್ಯಂ ಸಮಾದಾಸ್ಯೆ ಪರಿತ್ಯಕ್ತಂ ಜಗದ್ಗುರೋ ॥ ೬೭ ॥

ತಮುವಾಚ ಜಗತ್ಸ್ವಾಮೀ ಗಚ್ಛ ತ್ವಂ ನಿಜಮಾಶ್ರಮಂ ।
ಹಿತೋಪದೇಷ್ಟಾ ದೈತ್ಯಾನಾಂ ದಾನವಾನಾಂ ತಥಾ ಭವ ॥ ೬೮ ॥

ನಾರಾಯಣೇನೈವಮುಕ್ತಃ ಸ ತದಾ ದೈತ್ಯನಾಯಕಃ ।
ಪ್ರಣಿಪತ್ಯ ವಿಭುಂ ತುಷ್ಟೋ ಜಗಾಮ ನಗರಂ ನಿಜಂ ॥ ೬೯ ॥

ದೃಷ್ಟಃ ಸಭಾಜಿತಶ್ಚಾಪಿ ದಾನವೈರಂಧಕೇನ ಚ ।
ನಿಮಂತ್ರಿತಶ್ಚ ರಾಜ್ಯಾಯ ನ ಪ್ರತ್ಯೈಚ್ಛತ್ಸ ನಾರದ ॥ ೭೦ ॥

ರಾಜ್ಯಂ ಪರಿತ್ಯಜ್ಯ ಮಹಾಸುರೇಂದ್ರೋ ।
ನ್ಯಯೋಜಯತ್ಸತ್ಪಥಿ ದಾನವೇಂದ್ರಾನ್ ॥
ಧ್ಯಾಯನ್ಸ್ಮರನ್ಕೇಶವಮಪ್ರಮೇಯಂ ।
ತಸ್ಥೌ ತದಾ ಯೋಗವಿಶುದ್ಧದೇಹಃ ॥ ೭೧ ॥

---

೬೭-೬೯ ಪುಲಸ್ತ್ಯರು ಹೇಳುತ್ತಾರೆ:—ಹೀಗೆ ನಾರಾಯಣನಿಂದ ಆಜ್ಞಾಪಿಸಲ್ಪಟ್ಟ ಪ್ರಹ್ಲಾದನು ಎಲೈ ಜಗದ್ಗುರುವೇ ರಾಜ್ಯವನ್ನು ಮತ್ತೊಬ್ಬನಿಗೆ ಕೊಟ್ಟಾಯಿತು. ಆ ತ್ಯಕ್ತವಾದ ರಾಜ್ಯವನ್ನು ಪುನಃ ಹೇಗೆ ತೆಗೆದುಕೊಳ್ಳಲಿ ಎಂದನು. ಅಂತಹ ಪ್ರಹ್ಲಾದನನ್ನು ಕುರಿತು ಜಗತ್ಪ್ರಭುವಾದ ನಾರಾಯಣನು ನೀನು ನಿನ್ನ ವಾಸಸ್ಥಾನಕ್ಕೆ ಹೋಗಿ ಅಲ್ಲಿಯೇ ಇರಬೇಕು, ರಾಜ್ಯವು ನಿನಗೆ ಲಭಿಸದಿದ್ದಲ್ಲಿ ದೈತ್ಯರಿಗೂ, ದಾನವರಿಗೂ ಭಾಗವತಧರ್ಮವನ್ನು ವಿಶದಪಡಿಸಿ ಹಿತೋಪದೇಶತತ್ಪರನ್ನಾಗಿ ಇರು, ಎಂದು ಅಪ್ಪಣೆ ಮಾಡಿದನು. ಹೀಗೆ ನಾರಾಯಣನಿಂದ ಆಜ್ಞಾಪಿಸಲ್ಪಟ್ಟ ಪ್ರಹ್ಲಾದನು ಸಂತುಷ್ಟನಾಗಿ ಪ್ರಭುವನ್ನು ನಮಸ್ಕರಿಸಿ ತನ್ನ ನಗರಕ್ಕೆ ಹೊರಟು ಹೋದನು.

೭೦-೭೧. ಅಲ್ಲಿ ದಾನವರಿಂದಲೂ ಅನ್ಧಕನಿಂದಲೂ ಗೌರವದಿಂದ ಸತ್ಕರಿಸಲ್ಪಟ್ಟನು. ಅವರು ರಾಜನಾಗಿರಲು ಪ್ರಹ್ಲಾದನನ್ನು ಪ್ರಾರ್ಥಿಸಿದರು. ಆದರೆ ಪ್ರಹ್ಲಾದನು ಅದಕ್ಕೆ ಒಪ್ಪಲಿಲ್ಲ. ರಾಜ್ಯವನ್ನು ಬಿಟ್ಟು ದಾನವರನ್ನು ಹಿತೋಪದೇಶದಿಂದ ಸನ್ಮಾರ್ಗಕ್ಕೆ ತರುತ್ತಾ ಭಗವಂತನ ಧ್ಯಾನಸ್ಮರಣೆಗಳಿಂದ ಭಕ್ತಿಯೋಗ

**ಏವಂ ಪುರಾ ನಾರದ ದಾನವೇಂದ್ರೋ ॥**
**ನಾರಾಯಣೇನೋತ್ತಮಪೂರುಷೇಣ ।**
**ಪರಾಜಿತಶ್ಚಾಪಿ ವಿಮುಚ್ಯ ರಾಜ್ಯಂ**
**ತಸ್ಥೌ ಮನೋ ಧಾತರಿ ಸನ್ನಿವೇಶ್ಯ ॥ ೭೨ ॥**

**ಇತಿ ಶ್ರೀ ವಾಮನಪುರಾಣೆ ಪ್ರಹ್ಲಾದವರಪ್ರದಾನೊ ನಾಮಾಷ್ಟಮೋಽಧ್ಯಾಯಃ**

---

ನಿಷ್ಠನಾಗಿ ಪರಿಶುದ್ಧಸ್ವಭಾವದಿಂದಲೇ ಇರುತ್ತಿದ್ದನು. ಎಲೈ ನಾರದನೇ ಹೀಗೆ ಪ್ರಹ್ಲಾದನು ಪರಮಪುರುಷನಿಂದ ಯುದ್ಧದಲ್ಲಿ ಪರಾಜಿತನಾಗಿ ರಾಜ್ಯವನ್ನೂ ಬಿಟ್ಟು ಭಗವಂತನಲ್ಲಿಯೇ ನಿಶ್ಚಲಮನಸ್ಸುಳ್ಳವನಾಗಿ ಸುಖಿಯಾದನು.

ಇಲ್ಲಿಗೆ ಶ್ರೀ ವಾಮನಪುರಾಣದಲ್ಲಿ ಪ್ರಹ್ಲಾದವರಪ್ರದಾನವೆಂಬ
ಎಂಟನೆಯ ಅಧ್ಯಾಯವು ಮುಗಿದಿದೆ.

## ಅಧ್ಯಾಯಾರ್ಥ ಸಂಗ್ರಹ

ಈ ಅಧ್ಯಾಯದಲ್ಲಿ ಪ್ರಹ್ಲಾದನ ಯುದ್ಧವನ್ನೇ ಮುಂದುವರಿಸಿ ಕೊನೆಗೂ ಅವನಿಗೆ ಯುದ್ಧದಲ್ಲಿ ಪರಾಜಯವೇ ಲಭಿಸಿತೆಂದೂ ಅನಂತರ ವಿಷ್ಣುವಿನಲ್ಲಿ ಮೊರೆಯಿಟ್ಟು ಪ್ರಾರ್ಥಿಸಿದ ಪ್ರಹ್ಲಾದನಿಗೆ ಯುದ್ಧವನ್ನು ಬಿಟ್ಟು ಭಕ್ತಿಯಿಂದಲೇ ಅವನನ್ನು ಜಯಿಸಬೇಕೇ ಹೊರತು ಬೇರೆ ಉಪಾಯವಿಲ್ಲವೆಂದೂ ಆ ನಾರಾಯಣನು ಮಹಾವಿಷ್ಣುವಿನ ಅವತಾರವೆಂದೂ ಉಪದೇಶವು ಲಭಿಸಿತು. ಅದರಂತೆ ನಾರಾಯಣನನ್ನೇ ಪ್ರಾರ್ಥಿಸಿ ಅವನ ಅನುಗ್ರಹದಿಂದ ದೃಢವಾದ ಭಕ್ತಿಯನ್ನು ಹೊಂದಿ ವೈಷ್ಣವಾಗ್ರೇಸರನಾಗಿ ರಾಜ್ಯವನ್ನು ಬಿಟ್ಟರೂ ಭಕ್ತಿಯೋಗದಿಂದ ಪ್ರಹ್ಲಾದನು ಕೃತಕೃತ್ಯನಾಗಿಯೂ ಸುಖಿಯಾಗಿಯೂ ಇದ್ದನೆಂದು ಪ್ರತಿಪಾದಿಸಲಾಯಿತು. ಪ್ರಸಂಗ ಸಂಗತಿಯಿಂದ ವರ್ಣಾಶ್ರಮೋಚಿತವಾದ ಕರ್ಮಾನುಷ್ಠಾನವು ಯಾವ ಅಧಿಕಾರಿಗೂ ತಪ್ಪಿದ್ದಲ್ಲವೆಂದೂ ಪ್ರತಿಪಾದಿಸಲಾಯಿತು.

॥ ಶ್ರೀಃ ॥

# ಶ್ರೀವಾಮನಪುರಾಣಂ

## ನವಮೋಽಧ್ಯಾಯಃ

ನಾರದ ಉವಾಚ

ನೇತ್ರಹೀನಃ ಕಥಂ ರಾಜ್ಯೇ ಪ್ರಹ್ಲಾದೇನಾಂಧಕೋ ಮುನೇ ।
ಅಭಿಷಿಕ್ತೋ ಜಾನತಾಪಿ ರಾಜ್ಯಧರ್ಮಂ ಸನಾತನಂ ॥ ೧ ॥

ಪುಲಸ್ತ್ಯ ಉವಾಚ

ಲಬ್ಧ ಚಕ್ಷುರಸೌ ಭೂಯೋ ಹಿರಣ್ಯಾಕ್ಷೇಪಿ ಜೀವತಿ ।
ತತೋಽಭಿಷಿಕ್ತೋ ದೈತ್ಯೇನ ಪ್ರಹ್ಲಾದೇನ ನಿಜೇ ಪದೇ ॥ ೨ ॥

ನಾರದ ಉವಾಚ

ಸ ಚ ರಾಜ್ಯೇಽಭಿಷಿಕ್ತಸ್ತು ಕಿಮಾಚರತ ಸುವ್ರತ ।
ದೇವಾದಿಭಿಃ ಸಹ ಕಥಂ ಸಮಾಸ್ತೇ ತದ್ವದಾಶುಮೇ ॥ ೩ ॥

---

## ಒಂಭತ್ತನೆಯ ಅಧ್ಯಾಯವು

೧-೨. ನಾರದರು ಹೇಳುತ್ತಾರೆ, ಎಲೈ, ಋಷಿಯೇ ಅನೂಚಾನವಾಗಿ ಬಂದಿರುವ ರಾಜಧರ್ಮವನ್ನು ತಿಳಿದವನಾದರೂ ಪ್ರಹ್ಲಾದನು ಕಣ್ಣಿಲ್ಲದ ಅಂಧಕನನ್ನು ಹೇಗೆ ರಾಜ್ಯದಲ್ಲಿ ಅಭಿಷೇಕಮಾಡಿದನು. ಪುಲಸ್ತ್ಯರು ಹೇಳುತ್ತಾರೆ. ಹಿರಣ್ಯಾಕ್ಷನು ಬದುಕಿರುವಾಗಲೇ ಪುನಃ ಅಂಧಕನು ಕಣ್ಣನ್ನು ಹೊಂದಿದ್ದರಿಂದ ಅರ್ಹನೆಂದು ತಿಳಿದೇ ಪ್ರಹ್ಲಾದನು ತನ್ನ ಸ್ಥಾನದಲ್ಲಿ ಅವನನ್ನು ರಾಜನನ್ನಾಗಿ ಏರ್ಪಡಿಸಿದನು.

೩. ರಾಜ್ಯದಲ್ಲಿ ಅಭಿಷೇಕ ಹೊಂದಿದ ಆ ಅಂಧಕನು ಅಸಾಧಾರಣವಾದ ಯಾವ ಯಾವ ಕಾರ್ಯಗಳನ್ನು ನಡೆಸಿದನು. ದೇವತೆಗಳೊಡನೆ ಅವನು ಹೇಗೆ ಇರುತ್ತಿದ್ದನು ಇವನ್ನು ಹೇಳಬೇಕೆಂದು ಪುನಃ ನಾರದರು ಕೇಳುತ್ತಾರೆ.

## ಪುಲಸ್ತ್ಯ ಉವಾಚ

ರಾಜ್ಯೇಽಭಿಷಿಕ್ತೋ ದೈತ್ಯೇಂದ್ರೋ ಹೈರಣ್ಯಾಕ್ಷಸ್ತದಾಂಧಕಃ ।
ತಪಸಾರಾಧ್ಯ ದೇವೇಶಂ ಶೂಲಪಾಣಿಂ ತ್ರಿಲೋಚನಂ ॥ ೪ ॥

ಅಜೇಯತ್ವಮವಧ್ಯತ್ವಂ ಸುರಸಿದ್ಧರ್ಷಿಪನ್ನಗೈಃ ।
ಅದಾಹ್ಯತ್ವಂ ಹುತಾಶೇನ ಅಕ್ಲೇದ್ಯತ್ವಂ ಜಲೇನ ಚ ॥ ೫ ॥

ಏವಂ ಸ ವರಲಬ್ಧಸ್ತು ದೈತ್ಯೋ ರಾಜ್ಯಮಪಾಲಯತ್ ।
ಶುಕ್ರಂ ಪುರೋಹಿತಂ ಕೃತ್ವಾ ಸಮುಧ್ಯಾಸ್ತೇ ತತೋಂಧಕಃ ॥ ೬ ॥

ತತಶ್ಚಕ್ರೇ ಸಮುದ್ಯೋಗಂ ದೇವಾನಾಮುಂಧಕೋಽಸುರಃ ।
ಆಕ್ರಮ್ಯ ವಸುಧಾಂಸರ್ವಾನ್ಮನುಜೇಂದ್ರಾನ್ಪರಾಜಯತ್ ॥ ೭ ॥

ಪರಾಜಿತ್ಯ ಮಹೀಪಾಲಾನ್ಸಹಾಯಾರ್ಥಂ ನಿಯೋಜ್ಯ ಚ ।
ತತಸ್ತು ಮೇರುಶಿಖರಂ ಜಗಾಮಾದ್ಭುತದರ್ಶನಂ ॥ ೮ ॥

---

೪-೬. ಪುಲಸ್ತ್ಯರು ಹೇಳುತ್ತಾರೆ. ಹಿರಣ್ಯಾಕ್ಷನ ಪುತ್ರನಾದ ಅಂಧಕನು ರಾಜ್ಯಾಭಿಷೇಕ ಹೊಂದಿದ ಮೇಲೆ ತೀವ್ರವಾದ ತಪಸ್ಸಿನಿಂದ ಶಂಕರನನ್ನು ಸಂತೋಷ ಪಡಿಸಿ ಅವನ ಅನುಗ್ರಹದಿಂದ ದೇವತೆಗಳು, ಸಿದ್ಧರು ಮೊದಲಾದವರಿಂದಲೂ ಅಜೇಯತ್ವವನ್ನು ಹೊಂದಿದನು. ಹಾಗೆಯೇ ಬೆಂಕಿಯು ತನ್ನನ್ನು ಸುಡದಂತೆಯೂ ನೀರೂ ಸಹ ಕ್ಲೇದಪಡಿಸಿ (ಬೆವರಿಸಿ) ನಾಶಪಡಿಸದಂತೆಯೂ ವರವನ್ನು ಹೊಂದಿ ಬಲದರ್ಪಿತನಾಗಿ ಶುಕ್ರಾಚಾರ್ಯರನ್ನು ಪುರೋಹಿತರನ್ನಾಗಿ ಮಾಡಿಕೊಂಡು ರಾಜ್ಯ ಪರಿಪಾಲನೆ ಮಾಡಲಾರಂಭಿಸಿದನು.

೭-೮. ಅನಂತರ ಬಲದರ್ಪಿತನಾದ ಅಂಧಕನು ದೇವತೆಗಳ ಮೇಲೆ ಯುದ್ಧ ಹೂಡಲುಪಕ್ರಮಿಸಿ ಮೊದಲು ಭೂಮಿಯನ್ನೆಲ್ಲಾ ಆಕ್ರಮಿಸಿ ಅನೇಕ ರಾಜರುಗಳಿಗೆ ಪರಾಜಯವನ್ನುಂಟುಮಾಡಿದನು. ಸೋತು ಸ್ವಾಧೀನರಾದ ರಾಜರುಗಳನ್ನೆಲ್ಲಾ ತನ್ನ ಸಹಾಯಕ್ಕೆ ನಿಯಮಿಸಿಕೊಂಡು ಅಮರಾವತಿಯನ್ನು ಮುತ್ತಿ ಹಿಡಿಯಲು ಸ್ವರ್ಗದ ದಾರಿಯಾದ ಮೇರುಪರ್ವತದ ಶಿಖರಕ್ಕೆ ಹೋಗಿ ಸೇರಿದನು. ಇಂದ್ರನೂ

**ಶಕ್ರೋಽಪಿ ಸುರಸೈನ್ಯಾನಿ ಸಮುದ್ಯೋಜ್ಯ ಮಹಾಗಜಂ ।**
**ಸಮಾರುಹ್ಯಾಮರಾವತ್ಯಾಂ ಗುಪ್ತಿಂ ಕೃತ್ವಾ ಪುನರ್ಯಯೌ ॥ ೯ ॥**

**ಶಕ್ರಸ್ಯಾನು ತಥೈವಾನ್ಯೇ ಲೋಕಪಾಲಾ ಮಹೌಜಸಃ ।**
**ಆರುಹ್ಯವಾಹನಂ ಸ್ವಂ ಸ್ವಂ ಸ್ವಾಯುಧಾ ನಿರ್ಯಯುರ್ಬಹಿಃ ॥ ೧೦ ॥**

**ದೇವಸೇನಾಪಿ ಚ ಸಮಂ ಶಕ್ರೇಣಾದ್ಭುತಕರ್ಮಣಾ ।**
**ನಿರ್ಜಗಾಮಾತಿವೇಗೇನ ಗಜವಾಜಿರಥಾದಿಭಿಃ ॥ ೧೧ ॥**

**ಅಗ್ರತೋ ದ್ವಾದಶಾದಿತ್ಯಾಃ ಪೃಷ್ಠತಶ್ಚ ತ್ರಿಲೋಚನಃ ।**
**ಮಧ್ಯೇಽಷ್ಟೌವಸವೋ ವಿಶ್ವೇ ಸಾಧ್ಯಾಶ್ವಿಮರುತಾಂ ಗಣೈಃ ॥**
**ಯಕ್ಷವಿದ್ಯಾಧರಾದ್ಯಾಶ್ಚ ಸ್ವಂ ಸ್ವಂ ವಾಹನಮಾಸ್ಥಿತಾಃ ॥ ೧೨ ॥**

**ನಾರದ ಉವಾಚ**

**ರುದ್ರಾದೀನಾಂ ವದಸ್ವೇಹ ವಾಹನಾನಿ ಚ ಸರ್ವಶಃ ।**
**ಏಕೈಕಸ್ಯಾಪಿ ಧರ್ಮಜ್ಞ ಪರಂ ಕೌತೂಹಲಂ ಮಮ ॥ ೧೩ ॥**

---

ಸಹ ಇದನ್ನು ತಿಳಿದು ದೇವತೆಗಳ ಸೈನ್ಯವನ್ನೂ ತನ್ನ ವಾಹನವಾದ ಐರಾವತವನ್ನೂ ಸಜ್ಜುಗೊಳಿಸಿ ಆ ಐರಾವತವನ್ನೇರಿ ಅಮರಾವತಿಗೆ ಬಂದು ಅದರ ರಕ್ಷಣೆಗೆ ಎಲ್ಲ ಸಾಧನಗಳನ್ನೂ ಏರ್ಪಡಿಸಿ ಪುನಃ ಯುದ್ಧಭೂಮಿಯಾದ ಮೇರುಶಿಖರಕ್ಕೆ ಬಂದು ನಿಂತನು.

೧೦-೧೨. ಮಹಾ ಪರಾಕ್ರಮಶಾಲಿಗಳಾದ ದಿಕ್ಪಾಲಕರೆಲ್ಲರೂ ಧೊರೆಯಾದ ಇಂದ್ರನನ್ನು ಅನುಸರಿಸಿ ಆಯುಧಸಮೇತರಾಗಿ ತಮ್ಮ ತಮ್ಮ ವಾಹನಗಳನ್ನೇರಿ ಹೊರಟರು. ದೇವತೆಗಳ ಸೈನ್ಯವೂ ಕೂಡ ತಮ್ಮ ತಮ್ಮ ಗಜಾಶ್ವಗಳೊಡನೆ ವೇಗ ದಿಂದ ಇಂದ್ರನೊಡನೆ ಹೊರಟಿತು. ಸೈನ್ಯದ ಮುಂಭಾಗದಲ್ಲಿ ದ್ವಾದಶಾದಿತ್ಯರೂ ಹಿಂಭಾಗದಲ್ಲಿ ಶಂಕರನೂ, ಮಧ್ಯದಲ್ಲಿ ಮರುತ್ತುಗಳು ವಿಶ್ವದೇವತೆಗಳು ಸಾಧ್ಯರು ಇವರಿಂದೊಡಗೂಡಿದ ಅಷ್ಟವಸುಗಳು ಯಕ್ಷರು ಗಂಧರ್ವರು ಇವರೇ ಮೊದಲಾದ ವಾಹನಶಾಲಿಗಳಾದ ದೇವತೆಗಳೂ ಸೇರಿದರು.

೧೩-೧೪. ನಾರದರು ಕೇಳುತ್ತಾರೆ. ರುದ್ರಾದಿದೇವತೆಗಳಿಗೆ ಯಾವ ಯಾವ ವಾಹನಗಳಿವೆ ಎಂಬುದನ್ನು ಕೇಳಲು ಕುತೂಹಲಿಯಾಗಿರುತ್ತೇನೆ ದಯವಿಟ್ಟು

## ಪುಲಸ್ತ್ಯ ಉವಾಚ

ಶೃಣುಷ್ವ ಕಥಯಿಷ್ಯಾಮಿ ಸರ್ವೇಷಾಮಪಿ ನಾರದ ।
ವಾಹನಾನಿ ಸಮಾಸೇನ ಏಕೈಕಸ್ಯಾನುಪೂರ್ವಶಃ ॥ ೧೪ ॥

ದನುಹಸ್ತತಲೋತ್ಪನ್ನಂ ಮಹಾಸತ್ವಂ ಮಹಾಗಜಂ ।
ಶ್ವೇತವರ್ಣಂ ಮಹಾವೀರ್ಯಂ ದೇವರಾಜಸ್ಯ ವಾಹನಂ ॥ ೧೫ ॥

ರುದ್ರೌಜಃಸಂಭವಂ ಭೀಮಂ ಕೃಷ್ಣವರ್ಣಂ ಮನೋಜವಂ
ಪೌಂಡ್ರಕಂ ನಾಮ ಮಹಿಷಂ ಧರ್ಮರಾಜಸ್ಯ ನಾರದ ॥ ೧೬ ॥

ರುದ್ರಕರ್ಣಮಲೋದ್ಭೂತಂ ಶ್ಯಾಮಂ ಜಲಧಿ ಸಂಜ್ಞಕಂ ।
ಶಿಶುಮಾರಂ ದಿವ್ಯಗತಿಂ ವಾಹನಂ ವರುಣಸ್ಯಚ ॥ ೧೭ ॥

ರೌದ್ರಂ ಶಕಟಚಕ್ರಾಕ್ಷಂ ಶೈಲಾಕಾರಂ ನರೋತ್ತಮಂ ।
ಅಂಬಿಕಾಪಾದಸಂಭೂತಂ ವಾಹನಂ ಧನದಸ್ಯ ತು ॥ ೧೮ ॥

ಏಕಾದಶಾನಾಂ ರುದ್ರಾಣಾಂ ವಾಹನಾನಿ ಮಹಾಮುನೇ ।
ಗಂಧರ್ವಾಶ್ಚ ಮಹಾವೀರ್ಯಾ ಭುಜಗೇಂದ್ರಾಃ ಸುದಾರುಣಾಃ ॥
ಶ್ವೇತಾನಿ ಸೌರಭೇಯಾಣಿ ವೃಷಾಣ್ಯುಗ್ರಜವಾನಿ ಚ ॥ ೧೯ ॥

---

ಒಬ್ಬೊಬ್ಬರಿಗೂ ಇರುವ ವಾಹನವನ್ನು ಹೇಳಬೇಕು. ಇದನ್ನು ಕೇಳಿ ಪುಲಸ್ತ್ಯರು ಎಲೈ .ನಾರದನೇ ದೇವತೆಗಳಿಗೆಲ್ಲಾ ಒಟ್ಟಿನಲ್ಲೂ ಬೇರೆಬೇರೆಯಾಗಿಯೂ ಇರುವ ವಾಹನಗಳನ್ನು ಹೇಳುತ್ತೇನೆ. ಕೇಳು ಎಂದು ಹೇಳಲಾರಂಭಿಸಿದರು.

೧೫-೧೯. ದನುವಿನ ಹಸ್ತದಿಂದ ಉತ್ಪನ್ನವಾದ ಮಹಾಬಲಶಾಲಿಯಾದ ಬಿಳಿಯ ಆನೆಯು ಇಂದ್ರನ ವಾಹನವಾಗಿದೆ. ರುದ್ರನ ತೇಜಸ್ಸಿನಿಂದ ಉತ್ಪನ್ನವಾದ ಭಯಂಕರವಾದ ಪೌಂಡ್ರಕವೆಂಬ ಹೆಸರುಳ್ಳ ಕರಿಯ ಕೋಣವು ಯಮನ ವಾಹನ. ರುದ್ರನ ಕಿವಿಯ ಮಲದಿಂದ ಉದ್ಭವಹೊಂದಿದ ಜಲಧಿಯೆಂಬ ಹೆಸರುಳ್ಳ ವೇಗಶಾಲಿಯಾದ ಕಪ್ಪಾದ ಮಕರವು (ಮೊಸಳೆ) ವರುಣನ ವಾಹನ. ಅಂಬಿಕೆಯ ಪಾದದಿಂದ ಉತ್ಪನ್ನವಾದ ಬಂಡಿಯುಚಕ್ರದಂತೆ ದುಂಡಾದ ಕಣ್ಣುಳ್ಳ ಉನ್ನತನಾಗಿ ಭಯಂಕರನಾದ ಮನುಷ್ಯನು ಕುಬೇರನ ವಾಹನ. ಏಕಾದಶರುದ್ರರುಗಳಿಗೆ ಬಲಶಾಲಿಗಳಾದ ಗಂಧರ್ವರೂ ದಾರುಣವಾದ ಸರ್ಪವಿಶೇಷಗಳೂ ಬಿಳಿಯ ಹಸುಗಳು ಎತ್ತುಗಳು ಇವು ವಾಹನಗಳಾಗಿವೆ.

**ರಥಂ ಚಂದ್ರಮಸಶ್ಚಾರ್ಧಸಹಸ್ರಂ ಹಂಸವಾಹನಂ ।**
**ಹಯೋಷ್ಟ್ರರಥವಾಹಾಶ್ಚ ಆದಿತ್ಯಾ ಮುನಿಸತ್ತಮ ॥ ೨೦ ॥**

**ಕುಂಜರಸ್ಥಾಶ್ಚ ವಸವೋ ಯಕ್ಷಾಶ್ಚ ನರವಾಹನಾಃ ।**
**ಕಿನ್ನರಾ ಭುಜಗಾರೂಢಾ ಹಯಾರೂಢೌ ತಥಾಶ್ವಿನೌ ॥ ೨೧ ॥**

**ಸಾರಂಗಾಧಿಷ್ಠಿತಾ ಬ್ರಹ್ಮನ್ಮರುತೋ ಘೋರದರ್ಶನಾಃ ।**
**ಶುಕಾರೂಢಾಶ್ಚ ಕವಯೋ ಗಂಧರ್ವಾಶ್ಚ ಪದಾತಿನಃ ॥ ೨೨ ॥**

**ಆರುಹ್ಯ ವಾಹನಾನ್ಯೇವಂ ಸ್ವಾನಿ ಸ್ವಾನ್ಯಮರೋತ್ತಮಾಃ ।**
**ಸನ್ನಹ್ಯ ನಿರ್ಯಯುರ್ಹೃಷ್ಟಾ ಯುದ್ಧಾಯ ಸುಮಹೌಜಸಃ ॥ ೨೩ ॥**

**ನಾರದ ಉವಾಚ**

**ಗದಿತಾನಿ ಸುರಾದೀನಾಂ ವಾಹನಾನಿ ತ್ವಯಾ ಮುನೇ ।**
**ದೈತ್ಯಾನಾಂ ವಾಹನಾನ್ಯೇವ ಯಥಾವದ್ವಕ್ತುಮರ್ಹಸಿ ॥ ೨೪ ॥**

---

೨೦-೨೨. ಐದುನೂರು ಹಂಸಗಳಿಂದ ಹೊಯ್ಯಲ್ಪಡುವ ರಥವು ಚಂದ್ರನಿಗೆ ವಾಹನ. ದ್ವಾದಶಾದಿತ್ಯರಿಗೆ ಕುದುರೆ ಒಂಟೆ ರಥ ಇವು ವಾಹನಗಳು. ಅಷ್ಟವಸುಗಳು ಆನೆಯೇ ವಾಹನವಾಗಿ ಉಳ್ಳವರು. ಯಕ್ಷರೆಲ್ಲಾ ನರವಾಹನರು. ಕಿನ್ನರರುಗಳು ಸರ್ಪವಾಹನವುಳ್ಳವರು. ಅಶ್ವಿನೀದೇವತೆಗಳಿಗೆ ಕುದುರೆಯೇ ವಾಹನ. ಮರುತ್ತುಗಳು ಜಿಂಕೆಯೇ ವಾಹನವಾಗಿ ಉಳ್ಳವರು. ಕವಿಗಳೆಂಬ ದೇವತೆಗಳಿಗೆ ಗಿಣಿಯೇ ವಾಹನ. ಗಂಧರ್ವರು ಕೇವಲ ಕಾಲಾಳುಗಳು.

೨೩-೨೪. ಈ ವಿಧವಾದ ತಮ್ಮ ತಮ್ಮ ವಾಹನಗಳನ್ನೇರಿ ದೇವತೆಗಳೆಲ್ಲರೂ ಸನ್ನದ್ಧರಾಗಿ ಉತ್ಸಾಹದಿಂದ ಯುದ್ಧಕ್ಕೆ ಹೊರಟರು. ಪುನಃ ನಾರದರು ಪುಲಸ್ತ್ಯರನ್ನು ಕುರಿತು, ಎಲೈ ಮುನಿಶ್ರೇಷ್ಠನೇ ದೇವತೆಗಳ ವಾಹನವನ್ನೆಲ್ಲಾ ನೀನು ಹೇಳಿದ್ದಾಯಿತು. ಪ್ರತಿಪಕ್ಷಿಗಳಾದ ದೈತ್ಯರ ವಾಹನಗಳನ್ನೂ ಇದೇ ರೀತಿ ಅಪ್ಪಣೆ ಕೊಡಿಸಬೇಕೆಂದು ಕೇಳುತ್ತಾರೆ.

## ಪುಲಸ್ತ್ಯ ಉವಾಚ

ಶೃಣುಷ್ವ ದಾನವಾದೀನಾಂ ವಾಹನಾನಿ ದ್ವಿಜೋತ್ತಮ ।
ಕಥಯಿಷ್ಯಾಮಿ ತತ್ತ್ವೇನ ಯಥಾವಚ್ಛ್ರೋತುಮರ್ಹಸಿ ॥ ೨೫ ॥

ಅಂಧಕಸ್ಯ ರಥೋ ದಿವ್ಯೋ ಯುಕ್ತಃ ಪರಮವಾಜಿಭಿಃ ।
ಕೃಷ್ಣವರ್ಣಃ ಸಹಸ್ರಾರಃ ತ್ರಿನಲ್ವಪರಿಮಾಣವಾನ್ ॥ ೨೬ ॥

ಪ್ರಹ್ಲಾದಸ್ಯ ರಥೋ ದಿವ್ಯಶ್ಚಂದ್ರವರ್ಣೈರ್ಹಯೋತ್ತಮೈಃ ।
ಉಹ್ಯಮಾನಸ್ತಥಾಷ್ಟಾಭಿಃ ಶ್ವೇತರುಕ್ಮಮಯಃ ಶುಭಃ ॥ ೨೭ ॥

ವಿರೋಚನಸ್ಯ ಚ ಗಜಃ ಕುಜಂಭಸ್ಯ ತುರಂಗಮಃ ।
ಜಂಭಸ್ಯತು ರಥೋ ದಿವ್ಯೋ ಹಯೈಃಕಾಂಚನಸಂನಿಭೈಃ ॥ ೨೮ ॥

ಶಂಕುಕರ್ಣಸ್ಯ ತುರಗೋ ಹಯಗ್ರೀವಸ್ಯ ಕುಂಜರಃ ।
ರಥೋಮಯಸ್ಯ ವಿಖ್ಯಾತೋ ದುಂದುಭೇಶ್ಚ ಮಹೋರಗಃ ॥ ೨೯ ॥

---

೨೫-೨೭. ಪುಲಸ್ತ್ಯರು ಹೇಳುತ್ತಾರೆ. ಎಲೈ, ದ್ವಿಜೋತ್ತಮನೇ ದಾನವರ ವಾಹನಗಳನ್ನು ಹೇಳುತ್ತೇನೆ ಕೇಳು. ಕೃಷ್ಣವರ್ಣವುಳ್ಳ ಸಾವಿರ ಹಾರೆಕಾಲಿನಿಂದ ಕೂಡಿದ ಮೂರುನಲ್ವದ ಪರಿಮಾಣವುಳ್ಳ ಉತ್ತಮವಾದ ಕುದುರೆಗಳುಳ್ಳ ದಿವ್ಯರಥವು ಅಂಧಕನಿಗೆ ವಾಹನ, (ನಲ್ವವೆಂದರೆ ४೦೦ ಗೇಣು ವುಳ್ಳ ದೀರ್ಘಪರಿಮಾಣ, ಮೂರು ನಲ್ವಗಳೆಂದರೆ ೧೨೦೦ ಗೇಣಿನ ಉದ್ದವೆಂದರ್ಥ. ಇದು ೩೦೦ ಗಜವೆಂದು ಹೇಳ ಬಹುದು.) ಚಂದ್ರನಂತೆ ಶುಭ್ರವಾದ ಎರಡು ಕುದುರೆಗಳುಳ್ಳ ಚಿನ್ನ, ಬೆಳ್ಳಿ ಇವು ಗಳಿಂದ ಮಾಡಲ್ಪಟ್ಟ ದಿವ್ಯರಥವು ಪ್ರಹ್ಲಾದನ ವಾಹನ.

೨೮-೩೦. ವಿರೋಚನನಿಗೆ ಗಜವೇ ವಾಹನ, ಕುಂಜಭನಿಗೆ ಕುದುರೆ, ಜಂಭನಿಗೆ ಹೊಂಬಣ್ಣವುಳ್ಳ ಕುದುರೆಗಳಿಂದ ಕೂಡಿದ ದಿವ್ಯರಥ, ಶಂಕುಕರ್ಣನಿಗೆ ಕುದುರೆ, ಹಯಗ್ರೀವನಿಗೆ ಆನೆ, ಮಯನಿಗೆ ಪ್ರಖ್ಯಾತವಾದ ರಥ, ದುಂದುಭಿಗೆ ಮಹಾಸರ್ಪ, ಶಂಬರನಿಗೆ ವಿಮಾನ, ಅಯಶ್ಶಂಕುವಿಗೆ ಸಿಂಹ ಇವೇ ವಾಹನಗಳು.

ಶಂಬರಸ್ಯ ವಿಮಾನೋ ಭೂದಯಃಶಂಕೋರ್ಮೃಗಾಧಿಪಃ ।
ಬಲಿವೃತ್ರೌಚ ಬಲಿನೌ ಗದಾಮುಸಲಧಾರಿಣೌ ॥ ೩೦ ॥

ಪದ್ಭ್ಯಾಂ ದೈವತಸೈನ್ಯಾನಿ ಅಭಿದ್ರವಿತುಮುದ್ಯತೌ ।
ತತೋ ರಣೋಭೂತ್ತುಮುಲಃ ಸಂಕುಲೋತಿಭಯಂಕರಃ ॥ ೩೧ ॥

ರಜಸಾ ಸಂವೃತೋ ಲೋಕಃ ಪಿಂಗವರ್ಣೇನ ನಾರದ ।
ನಾಜ್ಞಾಸೀಚ್ಚ ಪಿತಾ ಪುತ್ರಂ ನ ಪುತ್ರಃ ಪಿತರಂ ತಥಾ ॥ ೩೨ ॥

ಸ್ವಾನೇ ವಾನ್ಯೇ ನಿಜಘ್ನುರ್ವೈ ಪರಾನನ್ಯೇಚ ಸುವ್ರತ ।
ಅಭಿದ್ರುತೋ ಮಹಾವೇಗೋ ರಥೋಪರಿ ರಥಸ್ತದಾ ॥ ೩೩ ॥

ಗಜೋ ಮತ್ತಗಜೇಂದ್ರಂಚ ಸಾದೀ ಸಾದಿನಮನ್ವಗಾತ್ ।
ಪದಾತಿರಪಿ ಸಂಕ್ರುದ್ಧಃ ಪದಾತಿನಮಥೋಲ್ಬಣಂ ॥ ೩೪ ॥

ಪರಸ್ಪರಂ ಚ ಪ್ರತ್ಯಘ್ನನ್ನನ್ಯೋನ್ಯ ಜಯಕಾಂಕ್ಷಿಣಃ ।
ತತಸ್ತು ಸಂಕುಲೇ ತಸ್ಮಿನ್ಯುದ್ಧೇ ದೈವಾಸುರೇ ಮುನೇ ॥ ೩೫ ॥

---

ಆ ಸಮಯದಲ್ಲಿ ಬಲಶಾಲಿಗಳಾದ ಬಲಿ ಮತ್ತು ವೃತ್ರ ಇಬ್ಬರೂ ಗದೆ ಮತ್ತು /ಒನಕೆ ಇವನ್ನು ಧರಿಸಿ ಕಾಲಾಳುಗಳಾಗಿ ಬಂದು ದೇವತೆಗಳ ಸೈನ್ಯವನ್ನು ಎದುರಿಸಲು ಪ್ರಯತ್ನಿಸಿದರು.

೩೧-೩೪ ಅನಂತರ ಬಹಳ ಭಯಂಕರವಾದ ಖಡಾಖಡಿ ಯುದ್ಧವೇ ಪ್ರಾರಂಭವಾಯಿತು. ಪ್ರಪಂಚವೆಲ್ಲವೂ ಪಿಂಗವರ್ಣವುಳ್ಳ (ಕೆಂಪುಬೆರತ ಬೂದು) ಧೂಳಿಗಳಿಂದ ಆವೃತವಾಯಿತು. ತಂದೆಯು ಮಗನನ್ನೂ ಮಗನು ತಂದೆಯನ್ನೂ ಗುರುತಿಸಿ ತಿಳಿಯಲಾಗಲಿಲ್ಲ. ಆ ಸಂದರ್ಭದಲ್ಲಿ ತಿಳಿಯದೇ ತಮ್ಮವರನ್ನೇ ತಾವು ಹೊಡೆಯಲಾರಂಭಿಸಿದರು. ಕೆಲವರು ಮಾತ್ರ ಶತ್ರುಗಳಿಗೆ ಪೆಟ್ಟುಕೊಟ್ಟರು. ರಥದ ಮೇಲೆ ರಥಗಳು ಮಹಾವೇಗದಿಂದ ಬಿದ್ದವು. ಆನೆಗಳು ಮದ್ದಾನೆಗಳನ್ನೂ ಕುದುರೆ ಸವಾರರು ಮತ್ತೊಬ್ಬ ಸವಾರನನ್ನೂ ಅನುಸರಿಸಿ ಹೆಣಗಾಡಲುಪಕ್ರಮಿಸಿದರು.

೩೫-೩೯. ಈ ಪ್ರಕಾರ ದೇವತೆಗಳೂ ದಾನವರೂ ಸಹ ವಿಜಯಾಕಾಂಕ್ಷೆಯಿಂದ ಪರಸ್ಪರ ಪ್ರತಿಯುದ್ಧ ಮಾಡಿದರು. ಅನಂತರ ಪ್ರತಿಹತಿಯಿಂದ ಭಯಂಕರ

**ಪ್ರಾವರ್ತತ ನದೀ ಘೋರಾ ಶಮಯಂತೀ ರಣೇ ರಜಃ ।**
**ಅಸೃಕ್ತೋಯಾ ರಥಾವರ್ತಾ ಯೋಧಸಂಘಟ್ಟವಾಹಿನೀ ॥ ೩೬ ॥**

**ಗಜಕುಂಭಮಹಾಕೂರ್ಮಾ ಶರಮೀನಾ ದುರತ್ಯಯಾ ।**
**ತೀಕ್ಷ್ಣಾಗ್ರಪ್ರಾಸಮಕರಾ ಮಹಾಸಿಗ್ರಾಹವಾಹಿನೀ ॥ ೩೭ ॥**

**ಅಂತ್ರಶೈವಾಲಸಂಕೀರ್ಣಾ ಪತಾಕಾಫೇನಮಾಲಿನೀ ।**
**ಗೃಧ್ರಕಂಕಮಹಾಹಂಸಾ ಶ್ಯೇನಚಕ್ರಾಹ್ವಮಂಡಿತಾ ॥ ೩೮ ॥**

**ವರವಾಯಸಕಾದಂಬಾ ಗೋಮಾಯುಶ್ವಾಪದಾಕುಲಾ ।**
**ಪಿಶಾಚಮುನಿಸಂಕೀರ್ಣಾ ದುಸ್ತರಾ ಪ್ರಾಕೃತೈರ್ಜನೈಃ ॥ ೩೯ ॥**

**ರಥಪ್ಲವೈಃ ಸಂತರಂತಃ ಶೂರಾಸ್ತಾಂ ಪ್ರಜಗಾಹಿರೇ ।**
**ಆಗುಲ್ಫಾಹವಮಜ್ಜಂತಃ ಸೂದಯಂತಃ ಪರಸ್ಪರಂ ॥**
**ಸಮುತ್ತರಂತೋ ವೇಗೇನ ಯೋಧಾ ಜಯಧನೇಪ್ಸವಃ ॥ ೪೦ ॥**

---

ವಾದ ಮಹಾಯುದ್ಧ ನಡೆದು ರಕ್ತವೆಂಬ ನೀರಿನಿಂದ ಧೂಳಿಯನ್ನಡಗಿಸುತ್ತಾ ರಥಗಳೆಂಬ ಸುಳಿಗಳನ್ನೂ ಯೋಧರ ಸಮ್ಮರ್ದವೆಂಬ ಪ್ರವಾಹವನ್ನೂ ಆನೆಗಳ ಕುಂಭಸ್ಥಲವೆಂಬ ಆಮೆಗಳನ್ನೂ ಬಾಣಗಳೆಂಬ ಮೀನುಗಳನ್ನೂ ಪ್ರಾಸಾಯುಧಗಳ ಅಗ್ರಭಾಗಗಳೆಂಬ ಮೊಸಳೆಗಳನ್ನೂ ಮಹಾಖಡ್ಗಗಳೆಂಬ ಸಣ್ಣ ಮೊಸಳೆಗಳನ್ನೂ ಹೊಂದಿದ ಘೋರವಾದ ರಕ್ತದ ಹೊಳೆಯೇ ಹೊರಟಿತು. ಮತ್ತು ಆ ನದಿಯು ಕರುಳುಗಳೆಂಬ ಪಾಚಿಗಳಿಂದಲೂ, ನೊರೆಗಳ ಪರಂಪರೆ ಎಂಬ ಪತಾಕೆಗಳಿಂದಲೂ, ಹದ್ದುಗಳೆಂಬ ಹಂಸಗಳಿಂದಲೂ, ಗಿಡಗಗಳೆಂಬ ಚಕ್ರವಾಕ ಪಕ್ಷಿಗಳಿಂದಲೂ, ಕಾಗೆಗಳೆಂಬ ಕಲಹಂಸಗಳಿಂದಲೂ, ನರಿಗಳೆಂಬ ಜಲಚರಘಾತಕ ಪ್ರಾಣಿಗಳಿಂದಲೂ, ಅಲ್ಲಲ್ಲಿ ಸಂಚರಿಸುವ ಪಿಶಾಚಿಗಳೆಂಬ ಋಷಿಗಳಿಂದಲೂ ಕೂಡಿ ಸಾಮಾನ್ಯ ಜನಗಳಿಂದ ದಾಟಲಶಕ್ಯವಾದ ಘೋರವಾದ ಮಹಾನದಿಯಾಗಿ ಪರಿಣಮಿಸಿತು.

೪೦-೪೧. ಆ ರಕ್ತನದಿಯನ್ನು ರಥಗಳೆಂಬ ದೋಣಿಗಳಿಂದ ದಾಟುತ್ತಾ ಅಲ್ಲಲ್ಲಿ ಸಂಚರಿಸಿ, ಕಾಲುಮುಳುಗುವವರಿಗೂ ಮುಳುಗಿ ಶತ್ರುಗಳನ್ನು ಕೊಲ್ಲುತ್ತಾ ವೇಗದಿಂದ ದಾಟುತ್ತಾ ವಿಜಯಾಭಿಲಾಷೆಯಿಂದ ಅನೇಕ ಶೂರರು ಪ್ರವೇಶಿಸಿದರು.

ತತಸ್ತು ರೌದ್ರೇ ಸುರದೈತ್ಯಸಾದನೇ
ಮಹಾಹವೇ ಭೀರುಭಯಂಕರೇಽಥ ।
ರಕ್ಷಾಂಸಿ ಯಕ್ಷಾಶ್ಚ ಸುಸಂಪ್ರಹೃಷ್ಟಾಃ
ಪಿಶಾಚಯೂಥಾಸ್ತ್ವಭಿರೇಮಿರೇ ಚ ॥ ೪೧ ॥

ಪಿಬಂತ್ಯಸೃಗ್ಗಾಢತರಂ ಭಟಾನಾ
ಮಾಲಿಂಗ್ಯ ಮಾಂಸಾನಿ ಚ ಭಕ್ಷಯಂತಿ ।
ವಸಾಂ ವಿಲುಂಪಂತಿ ಚ ವಿಸ್ಫುರಂತಿ
ಗರ್ಜಂತ್ಯಥಾನ್ಯೋನ್ಯಮುಖೋ ವಯಾಂಸಿ ॥ ೪೨ ॥

ಮುಂಚಂತಿ ಫೇತ್ಕಾರರವಾಞ್ಶಿವಾಶ್ಚ
ಕ್ರಂದಂತಿ ಯೋಧಾ ಭುವಿ ವೇದನಾರ್ತಾಃ ।
ಶಸ್ತ್ರಪ್ರತಪ್ತಾನಿ ಪಿಬಂತಿ ಚಾನ್ಯೇ
ಯುದ್ಧಂ ಶ್ಮಶಾನಪ್ರತಿಮಂ ಬಭೂವ ॥ ೪೩ ॥

---

ದೇವದಾನವರಿಗೆ ನಾಶಕವಾದ ಆ ಮಹಾಯುದ್ಧವು ಭೀರುಗಳಿಗೆ ಭಯಂಕರವಾಗಿ ರೌದ್ರಾಕಾರ ಹೊಂದಿದಮೇಲೆ ಯಕ್ಷರಾಕ್ಷಸರು ಸಂತೋಷಪಟ್ಟರು. ಪಿಶಾಚಿಗಳು ಅಭಿಮತಲಾಭದಿಂದ ನಲಿದವು.

೪೨-೪೩. ಮತ್ತು ಆ ಯುದ್ಧಭೂಮಿಯಲ್ಲಿ ಮಾಂಸಾಹಾರಿಗಳಾದ ಪಕ್ಷಿಗಳು ಭಟರುಗಳ ರಕ್ತವನ್ನು ಯಥೇಷ್ಟವಾಗಿ ಪಾನಮಾಡುತ್ತಾ ಮಾಂಸವನ್ನು ತಬ್ಬಿಕೊಂಡು ಭಕ್ಷಿಸುತ್ತಾ ವಸೆ (ಹೃದಯದ ಮೇಲಿನ ಪೊರೆ) ಯನ್ನು ಕೆದರುತ್ತಾ ಇಲ್ಲಿ ಅಲ್ಲಿ ಓಡಾಡುತ್ತಾ ಗರ್ಜಿಸುತ್ತಾ ಸಂತೋಷಿಸಿದವು. ನರಿಗಳು ಮಾಂಸವನ್ನು ಭಕ್ಷಿಸಿ ಸಂತೋಷದಿಂದ ಫೇತ್ಕಾರಮಾಡತೊಡಗಿದವು. ಯೋಧರುಗಳು ಆಯುಧ ಪ್ರಹಾರ ದಿಂದುಂಟಾದ ನೋವಿನಿಂದ ಭೂಮಿಯಲ್ಲಿ ಬಿದ್ದು ಚೀತ್ಕರಿಸುತ್ತಿದ್ದರು. ಹೊಸ ಹೊಸ ಶಸ್ತ್ರಪಾತದಿಂದ ಬಿಸಿಯಾಗಿ ಹೊರಡುವ ರಕ್ತವನ್ನು ಪಿಶಾಚಾದಿಗಳು ಪಾನಮಾಡಿ ತೃಪ್ತಿಹೊಂದಿದವು. ಒಟ್ಟಿನಲ್ಲಿ ಆ ಯುದ್ಧವು ಸ್ಮಶಾನದಂತೆ ಭಯಂಕರವಾಗಿ ತೋರಿತು.

ತಸ್ಮಿನ್ ಶಿವಾಘೋರತರೇ ಪ್ರವೃತ್ತೇ
ಸುರಾಸುರಾಣಾಂ ಸುಭಯಂಕರೇ ಹಿ ।
ಯುದ್ಧೇ ಬಭೌ ಪ್ರಾಣಪಣೋಪವಿದ್ಧಂ
ದ್ವಂದ್ವೇತಿ ಶಾಸ್ತ್ರಜ್ಞಗತಂ ದುರೋದರಂ ॥ ೪೪ ॥

ಹಿರಣ್ಯಚಕ್ಷೋಸ್ತನಯೋ ರಣೇಽಂಧಕೋ
ರಥೇ ಸ್ಥಿತೋ ವಾಜಿ ಸಹಸ್ರಯೋಜಿತೇ ।
ಮತ್ತೇಭ ಪೃಷ್ಠಸ್ಥಿತಮುಗ್ರತೇಜಸಂ
ಸಮೇಯಿವಾನ್ದೇವಪತಿಂ ಶತಕ್ರತುಂ ॥ ೪೫ ॥

ಸಮಾಪತಂತಂ ಮಹಿಷಾಧಿರೂಢಂ
ಯಮಂ ಪ್ರತೀಚ್ಛನ್ಸ್ಬಲವಾನ್ದಿತೀಶಃ ।
ಪ್ರಹ್ಲಾದ ನಾಮಾ ತುರಗಾಷ್ಟ ಯುಕ್ತಂ
ರಥಂ ಸಮಾಸ್ಥಾಯ ಸಮುದ್ಯತಾಸ್ತ್ರಃ ॥ ೪೬ ॥

ವಿರೋಚನಶ್ಚಾಪಿ ಜಲೇಶ್ವರಂ ತ್ವಗಾ
ಜ್ಜಂಭಸ್ತ್ವಥಾಗಾದ್ಧನದಂ ಬಲಾಢ್ಯಂ ।
ವಾಯುಂ ಸಮಭ್ಯಾಚ್ಛತ ಸಂಚರೋಽಥ
ಮಯೋ ಹುತಾಶಂ ಯುಯುಧೇ ಮುನೀಂದ್ರ ॥ ೪೭ ॥

---

೪೪-೪೫. ನರಿಗಳ ಕೂಗುಗಳಿಂದ ಭಯಂಕರವಾದ ಆ ದೇವಾಸುರ ಯುದ್ಧದಲ್ಲಿ ಪ್ರಾಣದ ಹಂಗನ್ನೇ ತೊರೆದು ವೀರರು ಯುದ್ಧಮಾಡಿದರು. ಅವರ ಆ ವ್ಯವಹಾರವು ಶಾಸ್ತ್ರಜ್ಞರ ದೃಷ್ಟಿಯಿಂದ ಪ್ರಾಣವೆಂಬ ಪಣವಿಟ್ಟು ನಡೆಸಿದ ಜೂಜಿನಂತೆ ತೋರುತ್ತಿದ್ದಿತು. ಅನಂತರ ಹಿರಣ್ಯಾಕ್ಷನ ಪುತ್ರನಾದ ಅಂಧಕನು ಸಹಸ್ರ ಕುದುರೆಗಳಿಂದ ಕೂಡಿದ ರಥದಲ್ಲಿ ಕುಳಿತು ಐರಾವತದ ಮೇಲೆ ಕುಳಿತಿರುವ ತೇಜಸ್ವಿಯಾದ ಇಂದ್ರನನ್ನು ಎದುರಿಸಲು ಹತ್ತಿರ ಬಂದನು.

೪೬-೪೭. ಹೀಗೆಯೇ ಪ್ರಹ್ಲಾದನೆಂಬ ದೈತ್ಯನು ಎಂಟು ಕುದುರೆಗಳಿಂದ ಕೂಡಿದ ರಥದಲ್ಲಿ ಕುಳಿತು ಶಸ್ತ್ರವನ್ನು ಸಜ್ಜುಗೊಳಿಸುತ್ತಾ, ಎದುರಾಗಿ ಬರುತ್ತಿರುವ ಮಹಿಷವಾಹನನಾದ ಯಮನನ್ನು ಎದುರಿಸಲು ಬಂದನು. ವಿರೋಚನನು ವರುಣ

ಅನ್ಯೇ ಹಯಗ್ರೀವಮುಖಾ ಮಹಾಬಲಾ
ದಿತೇಸ್ತನೂಜಾ ದನುಪುಂಗವಾಶ್ಚ ।
ಸುರಾನ್ಹುತಾಶಾರ್ಕ ವಸೂರಗೇಶ್ವರಾನ್
ದ್ವಂದ್ವಂ ಸಮಾಸಾದ್ಯ ಮಹಾಬಲಾನ್ವಿತಾಃ ॥ ೪೪ ॥

ಗರ್ಜಂತ್ಯಥಾನ್ಯೋನ್ಯಮುಪೇತ್ಯ ಯುದ್ಧೇ
ಚಾಪಾನಿ ಕರ್ಷಂತ್ಯತಿ ವೇಗಿತಾಶ್ಚ ।
ಮುಂಚಂತಿ ನಾರಾಚ ಗಣಾನ್ಸಹಸ್ರಶ
ಆಗಚ್ಛಹೇ ತಿಷ್ಠಸಿ ಕಿಂ ಬಿಭೇಷಿ ॥ ೪೯ ॥

ಶರೈಸ್ತು ತೀಕ್ಷ್ಣೈರಭಿತಾಪಯಂತೋ
ಮಂದಾಕಿನೀವೇಗನಿಭಾಂ ವಹಂತೀಂ ।
ಪ್ರಾವರ್ತಯಂತೋ ಭಯದಾಂ ನದೀಂ ಚ
ಹ್ಯಸ್ತ್ರೈರಮೋಘೈರಭಿ ತಾಡಯಂತಃ ॥ ೫೦ ॥

ತ್ರೈಲೋಕ್ಯಮಾಕಾಂಕ್ಷಿಭಿರುಗ್ರವೇಗೈಃ
ಸುರಾಸುರೈರ್ನಾರದ ಸಂಪ್ರಬುದ್ಧೈಃ ।

---

ನನ್ನೂ ಜಂಭನು ಬಲಶಾಲಿಯಾದ ಕುಬೇರನನ್ನೂ, ಶತಸಂಚರನು ವಾಯುವನ್ನೂ ಮಯನು ಅಗ್ನಿಯನ್ನೂ ಎದುರಿಸಲು ಹೀಗೆಯೇ ಸಿದ್ಧರಾದರು.

೪೮-೪೯. ಹಯಗ್ರೀವನೇ ಮೊದಲಾದ ಇತರ ದಾನವರೂ ದೈತ್ಯರೂ ಸಹ ಅಗ್ನಿ, ಸೂರ್ಯ, ಅಷ್ಟವಸುಗಳು ಶೇಷಾದಿಗಳು ಇವರೆಲ್ಲರನ್ನೂ ದ್ವಂದ್ವ ಯುದ್ಧದಿಂದ ತಡೆದು, ಮಹಾ ಬಲದಿಂದ ಆಕ್ರಮಿಸುತ್ತಾ ಪರಸ್ಪರ ಯುದ್ಧದಿಂದ ಗರ್ಜಿಸುತ್ತಾ, ಧನುಸ್ಸನ್ನು ಸೆಳೆದು ವೇಗದಿಂದ ಬಾಣಗಳನ್ನು ಬಿಡುತ್ತಾ ಎಲೋ, ಯುದ್ಧಕ್ಕೆ ಬಾ, ಏತಕ್ಕೆ ನಿಂತಿದ್ದೀಯೆ! ಭಯಪಟ್ಟೆಯಾ! ಎಂದು ಅನೇಕಬಾರಿ ವೀರನಾದದಿಂದ ಕೂಗುತ್ತ ಪ್ರತಿಭಟಿಸಿದರು.

೫೦-೫೧. ಹೀಗೆ ತೀಕ್ಷ್ಣವಾದ ಬಾಣಗಳಿಂದ ಪ್ರತಿಪಕ್ಷಿಯನ್ನು ಸಂತಾಪಗೊಳಿಸುತ್ತಾ ಮಹಾಸ್ತ್ರಗಳಿಂದ ಪ್ರಹರಿಸುತ್ತಾ, ಗಂಗಾನದಿಯಂತೆ ವೇಗವಾಗಿ ಹರಿಯುವ ಭಯಂಕರವಾದ ರಕ್ತನದಿಯನ್ನೇ ಆ ದೇವಾಸುರರು ಉಂಟುಮಾಡಿದರು. ಮೂರು

**ಪಿಶಾಚರಕ್ಷೋಗಣಪುಷ್ಟಿವರ್ಧನೀ**
**ಮುತ್ತರ್ತುಮಿಚ್ಛದ್ಭಿರಸೃಙ್ನದೀ ಬಭೌ** **॥ ೫೧ ॥**

**ವಾದ್ಯಂತಿ ತೂರ್ಯಾಣಿ ಸುರಾಸುರಾಣಾಂ**
**ಪಶ್ಯಂತಿ ಖಸ್ಥಾ ಮುನಿ ಸಿದ್ಧಸಂಘಾಃ ।**
**ನಯಂತಿ ತಾನಪ್ಸರಸೋ ರಣಾಗ್ರಾ**
**ದ್ಧತಾ ರಣೇ ಯೇಭಿ ಮುಖಾಸ್ತು ಶೂರಾಃ** **॥ ೫೨ ॥**

**ಇತಿ ಶ್ರೀ ವಾಮನಪುರಾಣೇ ದೇವಾಸುರಯುದ್ಧಂ ನಾಮ**
**ನವಮೋಽಧ್ಯಾಯಃ**

---

ಲೋಕವನ್ನೂ ಆಕ್ರಮಿಸಬೇಕೆಂಬ ಆಶೆಯಿಂದ ತೇಜಸ್ವಿಗಳಾದ ಆ ದೇವಾಸುರರು, ಪಿಶಾಚಿಗಳಿಗೂ ರಾಕ್ಷಸರಿಗೂ ಸಂತೋಷಕರವಾದ ಆ ರಕ್ತಪ್ರವಾಹವನ್ನೂ ದಾಟಿ ವಿಜಯಹೊಂದಲು ಪ್ರಯತ್ನಿಸಿದರು. ಎರಡು ಪಕ್ಷದಲ್ಲಿಯೂ ಯುದ್ಧೋತ್ಸಾಹ ಸೂಚಕಗಳಾದ ರಣಭೇರಿಗಳು ಮೊಳಗಿದವು. ಮುನಿಗಳೂ ಸಿದ್ಧರೂ ಆಕಾಶದಲ್ಲೇ ನಿಂತು ನೋಡುತ್ತಿದ್ದಾರೆ. ಯುದ್ಧದಲ್ಲಿ ಅಭಿಮುಖರಾಗಿ ನಿಂತು ಕೊಲ್ಲಲ್ಪಟ್ಟ ಶೂರರನ್ನು ಅಪ್ಸರ ಸ್ತ್ರೀಯರು ಯುದ್ಧಭೂಮಿಯಿಂದ ಸ್ವರ್ಗಸುಖಕ್ಕಾಗಿ ಕರೆದು ಕೊಂಡು ಹೋಗುತ್ತಿದ್ದಾರೆ.

(ಮುಂದಿನ ಅಧ್ಯಾಯದಲ್ಲಿ ಹೇಳಲಾಗುವ ಅಂಧಕನ ವಿಜಯಕ್ಕೆ
ಉಪೋದ್ಘಾತರೂಪವಾಗಿ ಈ ಅಧ್ಯಾಯದಲ್ಲಿ ದಾನವ
ಪರಾಕ್ರಮವನ್ನು ಪ್ರಪಂಚಿಸಲಾಗಿದೆ.)

ಇಲ್ಲಿಗೆ ಶ್ರೀ ವಾಮನಪುರಾಣದಲ್ಲಿ ದೇವಾಸುರ ಯುದ್ಧವೆಂಬ
ಒಂಭತ್ತನೆಯ ಅಧ್ಯಾಯವು ಮುಗಿದಿದೆ.



॥ ಶ್ರೀಃ ॥

# ಶ್ರೀ ವಾ ಮ ನ ಪು ರಾ ಣಂ

## ದಶಮೋಽಧ್ಯಾಯಃ

### ಪುಲಸ್ತ್ಯ ಉವಾಚ

**ತತಃ ಪ್ರವೃತ್ತೇ ಸಂಗ್ರಾಮೇ ಭೀರೂಣಾಂ ಭಯವರ್ಧನೇ ।**
**ಸಹಸ್ರಾಕ್ಷೋ ಮಹಾಚಾಪಮಾದಾಯ ವ್ಯಸೃಜಚ್ಛರಾನ್ ॥ ೧ ॥**

**ಅಂಧಕೋಽಪಿ ಮಹಾವೇಗಂ ಧನುರಾಕೃಷ್ಯ ಭಾಸ್ವರಂ ।**
**ಪುರಂದರಾಯ ಚಿಕ್ಷೇಪ ಶರಾನ್ ಬರ್ಹಿಣವಾಸಸಃ ॥ ೨ ॥**

**ತಾನನ್ಯೋಽನ್ಯಂ ಸುತೀಕ್ಷ್ಣಾಗ್ರೈಃ ಶರೈಃ ಸನ್ನತಪರ್ವಭಿಃ ।**
**ರುಕ್ಮಪುಂಖೈರ್ಮಹಾವೇಗೈರಾಜಘ್ನತುರುಭಾವಪಿ ॥ ೩ ॥**

**ತತಃ ಕ್ರುದ್ಧಃ ಶತಮುಖಃ ಕುಲಿಶಂ ಭ್ರಾಮ್ಯ ಪಾಣಿನಾ ।**
**ಚಿಕ್ಷೇಪ ದೈತ್ಯರಾಜಾಯ ತಂ ದದರ್ಶ ತಥಾಂಧಕಃ ॥ ೪ ॥**

---

### ಹತ್ತನೆಯ ಅಧ್ಯಾಯವು

೧-೩. ಅನಂತರ ಭಯಂಕರವಾದ ಆ ಯುದ್ಧವು ಹೀಗೆ ನಡೆಯುತ್ತಿರುವಾಗ ಇಂದ್ರನು ಮಹಾಧನುಸ್ಸನ್ನು ಸಿದ್ಧಪಡಿಸಿ ಅಂಧಕನ ಮೇಲೆ ಅನೇಕ ಬಾಣಗಳನ್ನು ಸುರಿಸಿದನು. ಅಂಧಕನೂ ಅದಕ್ಕೆ ಪ್ರತಿಯಾಗಿ ತನ್ನ ಉಜ್ವಲವಾದ ಧನುಸ್ಸಿನಿಂದ ನವಿಲುಗರಿಗಳಿಂದ ಭೂಷಿತವಾದ ಅನೇಕ ಬಾಣಗಳನ್ನು ಇಂದ್ರನ ಮೇಲೆ ಪ್ರಯೋಗಿಸಿದನು. ಹೀಗೆ ಇಬ್ಬರೂ ಹರಿತಗಳಾದ ವೇಗಶಾಲಿಗಳಾದ ರುಕ್ಮಪುಂಖಗಳಾದ ಬಾಣಗಳಿಂದ ಪರಸ್ಪರ ಹೋರಾಡಿದರು.

೪-೭. ಅನಂತರ ಕುಪಿತನಾದ ಇಂದ್ರನು ವಜ್ರಾಯುಧವನ್ನು ತಿರುಗಿಸಿ ಅಂಧಕನ ಮೇಲೆ ಪ್ರಯೋಗಿಸಿದನು. ಅಂಧಕನು ಅದನ್ನು ನೋಡಿ ಅನೇಕ ಬಾಣ

ಆಜಘಾನ ಚ ಬಾಣೌಘೈರಸ್ತ್ರೈಃ ಶಸ್ತ್ರೈಃ ಸ ನಾರದ ।
ತಾನ್ಭಸ್ಮಸಾತ್ತದಾ ಚಕ್ರೇ ನಾಗಾನಿವ ಹುತಾಶನಃ ॥ ೫ ॥

ತತೋಽತಿವೇಗಿತಂ ವಜ್ರಂ ದೃಷ್ಟ್ವಾ ಬಲವತಾಂ ವರಃ ।
ಸಮಾಪ್ಲುತ್ಯ ರಥಾತ್ತಸ್ಥೌ ಭುವಿ ಬಾಹುಸಹಾಯವಾನ್ ॥ ೬ ॥

ರಥಂ ಸಾರಥಿನಾ ಸಾರ್ಧಂ ಸಾಶ್ವಧ್ವಜ ಸಕೂಬರಂ।
ಭಸ್ಮ ಕೃತ್ವಾಥ ಕುಲಿಶಮಂಧಕಂ ಸಮುಪಾಯಯೌ ॥ ೭ ॥

ತಮಾಪತಂತಂ ವೇಗೇನ ಮುಷ್ಟಿನಾಹತ್ಯ ಭೂತಲೇ ।
ಪಾತಯಾಮಾಸ ಬಲವಾನ್ಜಗರ್ಜ ಚ ತದಾಂಧಕಃ ॥ ೮ ॥

ತಂ ಗರ್ಜಮಾನಂ ವೀಕ್ಷ್ಯಾಥ ವಾಸವಃ ಸಾಯಕೈರ್ದೃಢಂ।
ವವರ್ಷ ತಾನ್ನೀರಯಿತುಮಭ್ಯಯಾತ್ಸ ಶತಕ್ರತುಂ ॥ ೯ ॥

ಆಜಘಾನ ತಲೇನೇಭಂ ಕುಂಭಮಧ್ಯೇ ತವಾಕರಂ ।
ಜಾನುನಾಥ ಸಮಾಹತ್ಯ ವಿಷಾಣಂ ಪ್ರಬಭಂಜ ಚ ॥ ೧೦ ॥

---

ಗಳಿಂದಲೂ ಶಸ್ತ್ರಾಸ್ತ್ರಗಳಿಂದಲೂ ವಜ್ರಾಯುಧವನ್ನು ಹೊಡೆದನು. ಆದರೂ ಆ ವಜ್ರವು ಆ ಬಾಣಗಳನ್ನೆಲ್ಲಾ ಖಾಂಡವಾಗ್ನಿಯು ಸರ್ಪಗಳನ್ನು ಭಸ್ಮಮಾಡಿದಂತೆ ದಹಿಸ್ಸಿತು. ಅನಂತರ ಆ ವಜ್ರದ ವೇಗವನ್ನು ನಿರೀಕ್ಷಿಸಿ ರಥದಿಂದ ಕೆಳಕ್ಕೆ ಧುಮಿಕಿ ಬಾಹುಸಹಾಯಕನಾಗಿ ಕೆಳಗೆ ನಿಂತನು. ನಂತರ ಆ ವಜ್ರಾಯುಧವು ಅವನ ರಥವನ್ನೂ ಕುದುರೆ ಧ್ವಜ, ಮೂಕಿ ಮೊದಲಾದ ಸಮಸ್ತ ಭಾಗಗಳೊಡನೆ ಸಾರಥಿಯನ್ನೂ ಸುಟ್ಟು ಭಸ್ಮಮಾಡಿ ಅಂಧಕನನ್ನು ನಾಶಪಡಿಸಲು ಅವನ ಸಮೀಪಕ್ಕೆ ಬಂದಿತು.

೮-೧೧. ಆ ಪ್ರಕಾರ ವೇಗವಾಗಿ ಬರುತ್ತಿರುವ ವಜ್ರಾಯುಧವನ್ನು ಮುಷ್ಟಿಯಿಂದ ಹೊಡೆದು ನೆಲದಲ್ಲಿ ಕೆಡವಿದನು. ಅದನ್ನು ಹೊಡೆದದ್ದರಿಂದ ಅಂಧಕನು ಗರ್ಜನೆಯನ್ನೂ ಮಾಡಿದನು. ಹಾಗೆ ವಜ್ರದ ವಿಜಯದಿಂದ ಗರ್ಜಿಸುತ್ತಿರುವ ಅಂಧಕನನ್ನು ಇಂದ್ರನು ಬಾಣಗಳಿಂದ ಬಲವಾಗಿ ಪ್ರಹರಿಸಲು ಅಂಧಕನು ತನ್ನ ಪರಾಕ್ರಮವನ್ನು ತೋರಿಸಲು ಇಂದ್ರನ ಸಮೀಪಕ್ಕೆ ಬಂದನು. ತನ್ನ ಅಂಗೈಯ್ಯಿನಿಂದ ಇಂದ್ರನ ಆನೆಯನ್ನು ಕುಂಭಸ್ಥಲದ ಮಧ್ಯದಲ್ಲಿ ಅಪ್ಪಳಿಸಿ ಮಂಡಿಯಿಂದ ಅದರ

**ವಾಮಮುಸ್ಯ ತದಾ ಪಾರ್ಶ್ವಂ ಸಮಾಹತ್ಯಾಂಧಕಸ್ತ್ವರನ್ ।**
**ಗಜೇಂದ್ರಂ ಪಾತಯಾಮಾಸ ಪ್ರಹಾರೈರ್ಜರ್ಜರೀಕೃತಂ** ॥ ೧೧ ॥

**ಗಜೇಂದ್ರಾತ್ಪತಮಾನಾಚ್ಚ ಅವಪ್ಲುತ್ಯ ಶತಕ್ರತುಃ ।**
**ಪಾಣಿನಾ ವಜ್ರಮಾದಾಯ ಪ್ರವಿವೇಶಾಮರಾವತೀಂ** ॥ ೧೨ ॥

**ಪರಾಙ್ಮುಖೇ ಸಹಸ್ರಾಕ್ಷೇ ತದ್ದೈವತ ಬಲಂ ಮಹತ್ ।**
**ಪಾತಯಾಮಾಸ ದೈತ್ಯೇಂದ್ರಃ ಪಾದಮುಷ್ಟಿತಲಾದಿಭಿಃ** ॥ ೧೩ ॥

**ತತೋ ವೈವಸ್ವತೋ ದಂಡಂ ಪರಿಭ್ರಾಮ್ಯ ದ್ವಿಜೋತ್ತಮ ।**
**ಸಮಭ್ಯಧಾವತ್ಪ್ರಹ್ಲಾದಂ ಹಂತುಕಾಮಃ ಸುರೋತ್ತಮಃ** ॥ ೧೪ ॥

**ತಮಾಪತಂತಂ ಬಾಣೌಘೈರ್ವವರ್ಷ ವಿನದನ್ಮುಹುಃ ।**
**ಹಿರಣ್ಯಕಶಿಪೋಃ ಪುತ್ರಶ್ಚಾಪಮಾನಮ್ಯ ವೇಗವಾನ್** ॥ ೧೫ ॥

**ತಾಂ ಬಾಣವೃಷ್ಟಿಮತುಲಾಂ ದಂಡೇನಾಹತ್ಯ ಭಾಸ್ಕರಿಃ ।**
**ಶಾತಯಿತ್ವಾ ಪ್ರಚಿಕ್ಷೇಪ ದಂಡಂ ಲೋಕಭಯಂಕರಂ** ॥ ೧೬ ॥

---

ಸೊಂಡಿಲನ್ನು ನೋಯಿಸಿ ಕೊಂಬನ್ನೂ ಮುರಿದುಹಾಕಿದನು. ವೇಗದಿಂದ ಆ ಆನೆಯ ಎಡಪಾರ್ಶ್ವದಲ್ಲಿ ಹೊಡೆದು ಏಟಿನಿಂದ ತರತರಗುಟ್ಟುತ್ತಿದ್ದ ಆನೆಯನ್ನು ಕೆಳಕ್ಕೂ ಕೆಡವಿದನು.

೧೨-೧೪. ಅನಂತರ ಹಾಗೆ ಕೆಳಕ್ಕೆ ಬಿದ್ದ ಆನೆಯಿಂದ ಇಂದ್ರನು ಹಾರಿ ವಜ್ರಾಯುಧವನ್ನು ಕೈಯ್ಯಿನಿಂದ ತೆಗೆದುಕೊಂಡು ಅಮರಾವತಿಗೆ ಪ್ರವೇಶಿಸಿದನು. ಇಂದ್ರನು ಪರಾಙ್ಮುಖನಾಗಿ ಹೊರಟು ಹೋದಮೇಲೆ ನಿರಾಶ್ರಯವಾದ ಆ ದೇವ ಸೈನ್ಯವನ್ನು ಅಂಧಕನು ಪಾದ, ಮುಷ್ಟಿ ಮತ್ತು ಅಂಗೈ ಇವುಗಳ ಪ್ರಹಾರದಿಂದ ಎಲ್ಲವನ್ನೂ ಕೆಳಕ್ಕೆ ಕೆಡವಿದನು. ಅನಂತರ ಯಮನು ಕಾಲದಂಡವನ್ನು ತಿರುಗಿಸಿ ತನಗೆ ಎದುರಾಗಿ ಬಂದ ಪ್ರಹ್ಲಾದನನ್ನು ಕೊಲ್ಲಲು ಅಭಿಮುಖವಾಗಿ ಓಡಿದನು.

೧೫-೧೮ ಹಾಗೆ ಬರುತ್ತಿರುವ ಯಮದಂಡವನ್ನು ಪ್ರಹ್ಲಾದನು ವೇಗಶಾಲಿಯಾದ ತನ್ನ ಬಾಣವೃಷ್ಟಿಯಿಂದ ಎದುರಿಸಿ ಗರ್ಜಿಸಿದನು. ಆಗ ಪ್ರಹ್ಲಾದನ ಬಾಣಗಳನ್ನೆಲ್ಲಾ ದಂಡಾಯುಧದಿಂದ ತಡೆದು ಯಮನು ಭಯಂಕರವಾದ ಆ ದಂಡಾಯುಧವನ್ನು ಸಜ್ಜುಗೊಳಿಸಿ ಪ್ರಯೋಗಿಸಿದನು. ಯಮನಿಂದ ಬಿಡಲ್ಪಟ್ಟ

**ಸ ವಾಯುಪಥಮಾಸ್ಥಾಯ ಧರ್ಮರಾಜಕರೇ ಸ್ಥಿತಃ ।**
**ಜಜ್ವಾಲ ಕಾಲಾಗ್ನಿನಿಭೋ ಯದ್ವದ್ದಗ್ಧುಂ ಜಗತ್ತ್ರಯಂ ॥ ೧೭ ॥**

**ಜಾಜ್ವಲ್ಯಮಾನಮಾಯಾಂತಂ ದಂಡಂ ದೃಷ್ಟ್ವಾ ದಿತೇಃ ಸುತಾಃ ।**
**ಪ್ರಾಕ್ರೋಶಂತಿ ಹತಃ ಕಷ್ಟಂ ಪ್ರಹ್ಲಾದೋಽಯಂ ಯಮೇನ ಹಿ ॥ ೧೮ ॥**

**ತಮಾಕ್ರಂದಿತಮಾಕರ್ಣ್ಯ ಹಿರಣ್ಯಾಕ್ಷಸುತೋಂಧಕಃ ।**
**ಪ್ರೋವಾಚ ಮಾಭೈಷ್ಟ ಮಯಿ ಸ್ಥಿತೇ ಕೋಽಯಂ ಸುರಾಧಮಃ ॥ ೧೯ ॥**

**ಇತ್ಯೇವಮುಕ್ತ್ವಾ ವಚನಂ ವೇಗೇನಾಭಿಸಸಾರ ಚ ।**
**ಜಗ್ರಾಹ ಪಾಣಿನಾ ದಂಡಂ ಸವ್ಯಹಸ್ತೇನ ನಾರದ ॥ ೨೦ ॥**

**ತಮಾದಾಯ ತತೋ ವೇಗಾದ್ಭ್ರಾಮಯಾಮಾಸ ಚಾಂಧಕಃ ।**
**ಜಗರ್ಜ ಚ ಮಹಾನಾದಂ ಯಥಾ ಪ್ರಾವೃಷಿ ತೋಯದಃ ॥ ೨೧ ॥**

**ಪ್ರಹ್ಲಾದಂ ರಕ್ಷಿತಂ ದೃಷ್ಟ್ವಾ ದಂಡಾದ್ದೈತ್ಯೇಶ್ವರೇಣ ಹಿ ।**
**ಸಾಧುವಾದಂ ತದಾ ಚಕ್ರುರ್ದೈತ್ಯದಾನವಯೂಥಪಾಃ ॥ ೨೨ ॥**

---

ದಂಡಾಯುಧವು ಆಕಾಶ ಮಾರ್ಗವನ್ನು ಹೊಂದಿ ಜಗತ್ತನ್ನು ನಾಶಪಡಿಸುವ ಕಾಲಾಗ್ನಿಯಂತೆ ಜ್ವಲಿಸಿತು. ಹಾಗೆ ಜ್ವಲಿಸುತ್ತ ಬರುತ್ತಿರುವ ಆ ದಂಡವನ್ನು ನೋಡಿ ದೈತ್ಯರೆಲ್ಲರೂ ಅಯ್ಯೋ ಕಷ್ಟ ಕಷ್ಟ ಈ ಪ್ರಹ್ಲಾದನು ಯಮನಿಂದ ಕೊಲ್ಲಲ್ಪಟ್ಟನು ಎಂದು ಕೂಗಲಾರಂಭಿಸಿದರು

೧೯-೨೦. ಆ ಕೂಗನ್ನು ಕೇಳಿ ಹಿರಣ್ಯಾಕ್ಷ ಪುತ್ರನಾದ ಅಂಧಕನು ಭಯ ಪಡಬೇಡಿ ನಾನಿರುವಾಗ ಯಾವ ಸುರಾಧಮನು ಪ್ರಹ್ಲಾದನನ್ನು ಕೊಲ್ಲಲು ಸಾಧ್ಯವೆಂದು ಅಭಯವನ್ನಿತ್ತು ತ್ವರೆಯಿಂದ ಓಡಿಬಂದು ಆ ಯಮದಂಡವನ್ನು ಕೈಯ್ಯಿನಿಂದ ಹಿಡಿದು ನಿಲ್ಲಿಸಿದನು.

೨೧-೨೪. ಮತ್ತು ಎಡಗೈಯ್ಯಿನಿಂದ ಅದನ್ನು ಹಿಡಿದುಕೊಂಡು ವೇಗವಾಗಿ ತಿರುಗಿಸುತ್ತಾ ಅಂಧಕನು ವರ್ಷಾಕಾಲದ ಮೇಘದಂತೆ ಗರ್ಜಿಸಿದನು. ಆರೀತಿ ಪ್ರಹ್ಲಾದನು ಯಮದಂಡದಿಂದಲೂ ರಕ್ಷಿಸಲ್ಪಟ್ಟನೆಂದು ತಿಳಿದು ದೈತ್ಯದಾನವ ಸೈನ್ಯಾಧಿಪತಿಗಳೆಲ್ಲರೂ ಶಹಬಾಸ್ ಎಂದು ಹೇಳುತ್ತಾ ಹರ್ಷಗೊಂಡರು. ಈ ಪ್ರಕಾರ

**ಭ್ರಾಮ್ಯಮಾಣಂ ಮಹಾದಂಡಂ ದೃಷ್ಟ್ವಾ ಭಾನುಸುತೋ ಮುನೇ ।**
**ದುಃಸಹಂ ದುರ್ಧರಂ ಮತ್ವಾ ಅಂತರ್ಧಾನಮುಗಾದ್ಯಮಃ ॥ ೨೩ ॥**

**ಅಂತರ್ಹಿತೇ ಧರ್ಮರಾಜೇ ಪ್ರಹ್ಲಾದೋಽಪಿ ಮಹಾಮುನೇ ।**
**ದಾರಯಾಮಾಸ ಬಲವಾನ್ದೇವಸೈನ್ಯಂ ಸಮಂತತಃ ॥ ೨೪ ॥**

**ವರುಣಃ ಶಿಶುಮಾರಸ್ಥೋ ಬದ್ಧ್ವಾ ಪಾಶೈರ್ಮಹಾಸುರಾನ್ ।**
**ಗದಯಾ ದಾರಯಾಮಾಸ ತಮಭ್ಯಾಗಾದ್ವಿರೋಚನಃ ॥ ೨೫ ॥**

**ತೋಮರೈರ್ವಜ್ರಸಂಸ್ಪರ್ಶೈಃ ಶಕ್ತಿಭಿರ್ಮಾರ್ಗಣೈರಪಿ ।**
**ಜಲೇಶಂ ತಾಡಯಾಮಾಸ ಮುದ್ಗರೈರ್ವಜ್ರಸಂನಿಭೈಃ ॥ ೨೬ ॥**

**ತತಸ್ತಂ ಗದಯಾಭ್ಯೇತ್ಯ ಪಾತಯಿತ್ವಾ ಧರಾತಲೇ ।**
**ಅಭಿದ್ರುತ್ಯ ಬಬಂಧಾಶು ಪಾಶೈರ್ಮತ್ತಗಜಂ ಬಲೀ ॥ ೨೭ ॥**

**ತಾನ್ಪಾಶಾಞ್ಶತಧಾ ಚಕ್ರೇ ವೇಗಾಚ್ಚ ದನುಜೇಶ್ವರಃ ।**
**ವರುಣಂ ಚ ಸಮಭ್ಯೇತ್ಯ ಮಧ್ಯೇ ಜಗ್ರಾಹ ನಾರದ ॥ ೨೮ ॥**

---

ತಿರುಗಿಸಲ್ಪಡುತ್ತಿರುವ ಆ ದಂಡವನ್ನು ನೋಡಿ ಯಮನು ಇದು ದುಸ್ಸಹವೆಂದೂ ಧರಿಸಲು ಸಾಧ್ಯವಲ್ಲವೆಂದೂ ತಿಳಿದು ಅಂತರ್ಧಾನ ಹೊಂದಿದನು. ಯಮನು ಅಂತರ್ಧಾನ ಹೊಂದಿದಮೇಲೆ ಪ್ರಹ್ಲಾದನು ಆಶ್ರಯವಿಲ್ಲದ ಆ ದೇವಸೈನ್ಯವನ್ನು ಬಹುಮಟ್ಟಿಗೂ ಘಾಸಿಪಡಿಸಿದನು.

೨೫-೨೭. ಆಗ ಮೊಸಳೆಯ ವಾಹನನಾದ ವರುಣನು ಅಸುರರೆಲ್ಲರನ್ನೂ ಪಾಶಾಯುಧದಿಂದ ಬಿಗಿದು ಗದೆಯಿಂದ ಪ್ರಹರಿಸಿ ಉಪದ್ರವಪಡಿಸಿದನು. ಅದನ್ನು ನೋಡಿ ವಿರೋಚನನು ವರುಣನೊಡನೆ ಯುದ್ಧಕ್ಕೆ ನಿಂತನು. ವಜ್ರಾಯುಧದಂತೆ ಕಠಿನವಾಗಿರುವ ಭರ್ಜಿಗಳಿಂದಲೂ ಶಕ್ತಿ, ಬಾಣ, ಮುದ್ಗರ ಈ ಆಯುಧಗಳಿಂದಲೂ ವರುಣನನ್ನು ಬಹಳವಾಗಿ ಪ್ರಹರಿಸಿದನು. ಅನಂತರ ಗದಾಪಾಣಿಯಾದ ವರುಣನು ಅವನನ್ನು ಬಂದು ಎದುರಿಸಿ ಗದೆಯಿಂದಲೇ ಹೊಡೆದು ನೆಲಕ್ಕೆ ಕೆಡವಿದನು. ಮತ್ತು ಅವನ ವಾಹನವಾದ ಆನೆಯನ್ನು ಪಾಶದಿಂದ ಬಿಗಿದು ಕೆಡವಿದನು.

೨೮-೩೧. ವಿರೋಚನನು ಆ ಪಾಶಗಳನ್ನೆಲ್ಲಾ ಚೂರುಚೂರಾಗಿ ಖಂಡಿಸಿ ವರುಣನ ಹತ್ತಿರಕ್ಕೆ ಬಂದು ಅವನನ್ನು ಮಧ್ಯಭಾಗದಲ್ಲಿ ಹಿಡಿದುಕೊಂಡನು. ಪಾಶ

ತತೋ ದಂತೀ ಚ ದಂತಾಭ್ಯಾಂ ಪ್ರಚಿಕ್ಷೇಪ ತಥಾವ್ಯಯಃ।
ಮಮರ್ದ ಚ ತಥಾ ಪದ್ಭ್ಯಾಂ ಸಗದಂ ಸಲಿಲೇಶ್ವರಂ ॥ ೨೯ ॥

ತಂ ವಧ್ಯಮಾನಂ ವೀಕ್ಷ್ಯಾಥ ಶಶಾಂಕಃ ಶಿಶಿರಾಂಶುಮಾನ್।
ಅಭ್ಯೇತ್ಯ ತಾಡಯಾಮಾಸ ಮಾರ್ಗಣೈಃ ಕಾಯದಾರಣೈಃ ॥ ೩೦ ॥

ಸಂಮರ್ದ್ಯಮಾನಃ ಶಿಶಿರಾಂಶುಬಾಣೈಃ।
ಅವಾಪ ವ್ರೀಡಾಂ ಪರಮಾಂ ಗಜೇಂದ್ರಃ।
ಶ್ಲಿಷ್ಟಶ್ಚ ವೇಗಾತ್ಪಂಸುಸಾಮಧೀಶಂ
ಮುಹುರ್ಮುಹುಃ ಪಾದತಲೈರ್ಮಮರ್ದ ॥ ೩೧ ॥

ಸಂಮರ್ದ್ಯಮಾನೋ ವರುಣೋ ಗಜೇಂದ್ರಂ
ಪದ್ಭ್ಯಾಂ ಸುಗಾಢಂ ಜಗೃಹೇ ಮಹರ್ಷೇ।
ಪಾದೇಷು ಭೂಮಿಂ ಕರಯೋಃ ಸ್ಪೃಶಂಶ್ಚ
ಮೂರ್ಧಾನಮುಲ್ಲಾಸ್ಯ ಬಲಾನ್ಮಹಾತ್ಮಾ ॥ ೩೨ ॥

ಗೃಹ್ಯಾಂಗುಲೀಭಿಶ್ಚ ಗಜಸ್ಯ ಪುಚ್ಛಂ
ಕೃತ್ವೇಹ ಬಂಧಂ ಭುಜಗೇಶ್ವರೇಣ।
ಉತ್ಪಾಟ್ಯ ಚಿಕ್ಷೇಪ ವಿರೋಚನಂ ಹಿ
ಸಕುಂಜರಂ ಖೇ ಸನಿಯಂತೃವಾಹಂ ॥ ೩೩ ॥

---

ಬಂಧವು ತಪ್ಪಿದ ನಂತರ ಅವನ ಆನೆಯೂ ಕೊಂಬುಗಳಿಂದ ವರುಣನನ್ನು ಮೇಲಕ್ಕೆ ಎಸೆಯಿತು. ಕೆಳಕ್ಕೆ ಬಿದ್ದ ವರುಣನನ್ನು ಪುನಃ ಕಾಲುಗಳಿಂದ ಗದೆಯೊಡನೆ ಮರ್ದಿಸಿತು. ಆರೀತಿ ಅಪಾಯಕ್ಕೆ ಸಿಕ್ಕಿರುವ ವರುಣನನ್ನು ನೋಡಿ ಚಂದ್ರನು ಬಂದು ನಿಶಿತವಾದ ಬಾಣದಿಂದ ಆ ಆನೆಯನ್ನು ಬಹಳವಾಗಿ ಪ್ರಹರಿಸಿದನು. ಚಂದ್ರನ ಬಾಣಗಳಿಂದ ಏಟು ತಿಂದು ಮತ್ತಷ್ಟೂ ರೇಗಿದ ಆ ಆನೆಯು ವೇಗದಿಂದ ವರುಣನನ್ನು ಬಾರಿಬಾರಿಗೂ ಕಾಲುಗಳಿಂದ ಉಜ್ಜಿ ಮರ್ದಿಸಿತು

೩೨-೩೩. ಆರೀತಿ ಮರ್ದಿಸಲ್ಪಟ್ಟರೂ ಮಹಾತ್ಮನಾದ ವರುಣನು ಕಾಲುಗಳಿಂದಲೇ ಆ ಆನೆಯನ್ನು ಬಲವಾಗಿ ಹಿಡಿದುಕ್ಕೊಂಡು ಅದರ ಪಾದವಲ್ಲಿ ಲಗ್ನನಾಗಿ ಕೈಗಳಿಂದ ಭೂಮಿಯನ್ನು ಮುಟ್ಟುತ್ತಾ ಮೆಲ್ಲಗೆ ತಲೆಯನ್ನು ಎತ್ತಿ ಬೆರಳುಗಳಿಂದ ಆ ಆನೆಯ ಬಾಲವನ್ನು ಹಿಡಿದುಕೊಂಡು ತನ್ನ ಸರ್ಪದಿಂದ ಅದನ್ನು ಬಂಧಿಸಿ ಅದರ ಬಲದಿಂದ ಆ ವಿರೋಚನನನ್ನು ಅವನ ಆನೆಯೊಡನೆ ಆಕಾಶಕ್ಕೆ ಎಸೆದನು.

ಕ್ಷಿಪ್ತೋ ಜಲೇಶೇನ ವಿರೋಚನಸ್ತು
ಸಕುಂಜರೋ ಭೂಮಿತಲೇ ಪಪಾತ ।
ಸ್ವರ್ಗಾತ್ಸ್ವಯಂತ್ರಾರ್ಗಲಹರ್ಮ್ಯಭೂಮಿ
ಪುರಂ ಸುಕೇಶೇರಿವ ಭಾಸ್ಕರೇಣ ॥ ೩೪ ॥

ತತೋ ಜಲೇಶಃ ಸಗದಃ ಸಪಾಶಃ
ಸಮಭ್ಯಧಾವದ್ದಿತಿಜಂ ನಿಹಂತುಂ ।
ತತಃ ಸಮಾಕ್ರಂದಮನುತ್ತಮಂ ತೈ
ರ್ಮುಕ್ತಂ ಹಿ ದೈತ್ಯೈರ್ಘನರಾವತುಲ್ಯಂ ॥ ೩೫ ॥

ಹಾಹಾ ಹತೋಽಸೌ ವರುಣೇನ ವೀರೋ
ವಿರೋಚನೋ ದಾನವಸೈನ್ಯಪಾಲಃ ।
ಪ್ರಹ್ಲಾದ ಹೇ ಜಂಭಕುಜಂಭಕಾದ್ಯಾ
ರಕ್ಷಧ್ವಮಭ್ಯೇತ್ಯ ಸಹಾಂಧಕೇನ ॥ ೩೬ ॥

ಅಹೋ ಮಹಾತ್ಮಾ ಬಲವಾನ್ಜಲೇಶಃ
ಸಂಚೂರ್ಣಯನ್ದೈತ್ಯಭಟಾನ್ಸವಾಹಾನ್ ।
ಪಾಶೇನ ಬದ್ಧ್ವಾ ಗದಯಾ ನಿಹಂತಿ
ಯಥಾ ಪಶೂನ್ವಾಜಿಮುಖೇ ಮಹೇಂದ್ರಃ ॥ ೩೭ ॥

---

೩೪-೩೭ ವರುಣನಿಂದ ಮೇಲಕ್ಕೆ ಎಸೆಯಲ್ಪಟ್ಟ ಆ ವಿರೋಚನನು ವಾಹನವಾದ ಆನೆಯೊಡನೆ ಭೂಮಿಯಲ್ಲಿ ಬಿದ್ದನು. ಹಾಗೆ ಬಿದ್ದ ವಿರೋಚನನು ಸೂರ್ಯನಿಂದ ಆಕಾಶದಿಂದ ಕೆಳಕ್ಕೆ ತಳ್ಳಲ್ಪಟ್ಟ ಸುಕೇಶಿಯ ನಗರದಂತೆ ತೋರಿದನು. ಹಾಗೆ ಬಿದ್ದ ವಿರೋಚನನನ್ನು ಕೊಲ್ಲಲು ಗದಾಪಾಶಸಹಿತನಾಗಿ ವರುಣನು ಓಡಿ ಬಂದನು. ಆ ಸಮಯದಲ್ಲಿ ಅಯ್ಯೋ, ಅಯ್ಯೋ, ದಾನವಸೇನಾಪತಿಯಾದ ವಿರೋಚನನು ವರುಣ ನಿಂದ ಕೊಲ್ಲಲ್ಪಡುತ್ತಿದ್ದಾನೆ. ಎಲೈ ಪ್ರಹ್ಲಾದನೇ, ಜಂಭನೇ, ಕುಜಂಭನೇ ನೀವು ಎಲ್ಲಿರುವಿರಿ. ಅಂಧಕನೊಡನೆ ಬೇಗ ಬಂದು ಇವನನ್ನು ರಕ್ಷಿಸಿರಿ ಎಂದೂ

ಶ್ರುತ್ವಾಥ ಶಬ್ದಂ ದಿತಿಜೈಃ ಸಮೀರಿತಂ
ಜಂಭಪ್ರಧಾನಾ ದಿತಿಜೇಶ್ವರಾಸ್ತತಃ ।
ಸಮಭ್ಯಧಾವಂಸ್ತ್ವರಿತಾ ಜಲೇಶ್ವರಂ
ಯಥಾ ಪತಂಗಾ ಜ್ವಲಿತಂ ಹುತಾಶನಂ ॥ ೩೮ ॥

ತಾನಾಗತಾನ್ವೈ ಪ್ರಸಮೀಕ್ಷ್ಯ ದೇವಃ
ಪ್ರಾಹ್ಲಾದಿಮುತ್ಸೃಜ್ಯ ವಿತತ್ಯ ಪಾಶಂ ।
ಗದಾಂ ಸಮುದ್ಭ್ರಾಮ್ಯ ಜಲೇಶ್ವರಸ್ತು
ದುದ್ರಾವ ತಾರ್ಜಂಭಮುಖಾನರಾತೀನ್ ॥ ೩೯ ॥

ಜಂಭಂ ಚ ಪಾಶೇನ ತಥಾ ವಿಹತ್ಯ
ತಾರಂ ತಲೇನಾಶನಿಸಂನಿಭೇನ ।
ಪಾದೇನ ವೃತ್ರಂ ತರಸಾ ಕುಜಂಭಂ
ನಿಪಾತಯಾಮಾಸ ಬಲಂ ಚ ಮುಷ್ಟ್ಯಾ ॥ ೪೦ ॥

ತೇನಾರ್ದಿತಾ ದೇವವರೇಣ ದೈತ್ಯಾಃ
ಸಂಪ್ರಾದ್ರವನ್ದಿಕ್ಷು ವಿಮುಕ್ತಶಸ್ತ್ರಾಃ ।

---

೩೮-೩೯. ಮಹಾತ್ಮನಾದ ವರುಣನು ದೈತ್ಯಭಟರೆಲ್ಲರನ್ನೂ ವಾಹನಸಮೇತರನ್ನಾಗಿ ಪುಡಿಪುಡಿ ಮಾಡುತ್ತಾ ಪಾಶದಿಂದ ಬಂಧಿಸಿ ಇಂದ್ರನು ಅಶ್ವಮೇಧದಲ್ಲಿ ಪಶುಗಳನ್ನು ಕೊಂದಂತೆ ಗದೆಯಿಂದ ಕೊಲ್ಲುತ್ತಿದ್ದಾನೆ. ಈ ಪ್ರಕಾರವಾದ ದೈತ್ಯರ ಆರ್ತನಾದವನ್ನು ಕೇಳಿ ಜಂಭನೇ ಮೊದಲಾದ ದೈತ್ಯಪ್ರಮುಖರು ವೇಗದಿಂದ ಪತಂಗದ ಹುಳುಗಳು ಅಗ್ನಿಯನ್ನು ಮುತ್ತುವಂತೆ ಓಡಿಬಂದು ವರುಣನನ್ನು ಮುತ್ತಿದರು. ಹಾಗೆ ವೇಗದಿಂದ ಬಂದ ಅವರನ್ನು ನೋಡಿ ಜಲೇಶ್ವರನಾದ ವರುಣನು ಪ್ರಹ್ಲಾದ ಪುತ್ರನಾದ ವಿರೋಚನನ್ನು ಬಿಟ್ಟು ಪಾಶವನ್ನು ವಿಸ್ತರಿಸುತ್ತಾ ಗದೆಯನ್ನು ತಿರುಗಿಸುತ್ತಾ ಅವರನ್ನು ಅಟ್ಟಿಸಿಕೊಂಡು ಹೊರಟನು.

೪೦-೪೩. ಜಂಭನನ್ನು ಪಾಶದಿಂದಲೂ ತಾರನನ್ನು ವಜ್ರಸದೃಶವಾದ ಅಂಗೈಯ್ಯಿನ ಏಟಿನಿಂದಲೂ ವೃತ್ರನನ್ನು ಕಾಲಿನಿಂದಲೂ ಕುಜಂಭನನ್ನು ಮುಷ್ಟಿಯಿಂದಲೂ ಪ್ರಹರಿಸಿ ವರುಣನು ಅವರನ್ನೆಲ್ಲಾ ಕೆಡವಿದನು. ಆ ಪ್ರಕಾರ ವರುಣನಿಂದ ಮರ್ದಿಸಲ್ಪಟ್ಟ ದೈತ್ಯರೆಲ್ಲರೂ ಆಯುಧಗಳನ್ನು ತ್ಯಜಿಸಿ ದಿಕ್ಕಾಪಾಲಾಗಿ ಓಡಿದರು. ಅದನ್ನು

**ತತೋಽಂಧಕಃ ಸ ತ್ವರಿತೋಽಭ್ಯುಪೇಯಾ**
**ದ್ರಣಾಯ ಯೋದ್ಧುಂ ಜಲನಾಯಕೇನ** ॥ ೪೧ ॥

**ತಮಾಪತಂತಂ ಗದಯಾ ಜಘಾನ**
**ಪಾಶೇನ ಬದ್ಧ್ವಾ ವರುಣೋಽಸುರೇಶಂ ।**
**ತಂ ಪಾಶಮಾವಿಧ್ಯ ಗದಾಂ ಪ್ರಗೃಹ್ಯ**
**ಚಿಕ್ಷೇಪ ದೈತ್ಯಃ ಸ ಜಲೇಶ್ವರಾಯ** ॥ ೪೨ ॥

**ಸಮಾಪತಂತಂ ಪ್ರಸಮೀಕ್ಷ್ಯ ಪಾಶಂ**
**ಗದಾಂ ಚ ದಾಕ್ಷಾಯಣಿನಂದನಸ್ತು ।**
**ವಿವೇಶ ವೇಗಾತ್ಪಯಸಾಂ ನಿಧಾನಂ**
**ತತೋಽಂಧಕೋ ದೇವಬಲಂ ಮಮರ್ದ** ॥ ೪೩ ॥

**ತತೋ ಹುತಾಶಃ ಸುರಶತ್ರುಸೈನ್ಯಂ**
**ದದಾಹ ರೋಷಾತ್ಪವನಾವಧೂತಃ ।**
**ತಮಭ್ಯಯಾದ್ದಾನವ ವಿಶ್ವಕರ್ಮಾ**
**ಮಯೋ ಮಹಾಬಾಹುರುದಗ್ರವೀರ್ಯಃ** ॥ ೪೪ ॥

**ತಮಾಪತಂತಂ ಸಹ ಶಂಬರೇಣ**
**ಸಮೀಕ್ಷ್ಯ ವಹ್ನಿಃ ಪವನೇನ ಸಾರ್ಧಂ ।**

---

ನೋಡಿ ಅಂಧಕನು ವೇಗದಿಂದ ವರುಣನೊಡನೆ ಯುದ್ಧಮಾಡಲು ಓಡಿಬಂದನು. ಅವನನ್ನೂ ವರುಣನು ಪಾಶದಿಂದ ಕಟ್ಟಿ ಗದೆಯಿಂದ ಪ್ರಹರಿಸಿದನು. ಅಂಧಕನು ಆ ಪಾಶವನ್ನು ಕಿತ್ತುಹಾಕಿ ಗದೆಯನ್ನು ತಿರುಗಿಸಿ ವರುಣನ ಮೇಲೆ ಪ್ರಯೋಗಿಸಿದನು. ತನ್ನ ಮೇಲೆ ಬರುತ್ತಿರುವ ಆ ಪಾಶವನ್ನೂ ಗದೆಯನ್ನೂ ನೋಡಿ ದಾಕ್ಷಾಯಣಿ ಪುತ್ರನಾದ ವರುಣನು ಬೇರೆ ಮಾರ್ಗತೋರದೆ ಸಮುದ್ರವನ್ನು ಹೊಕ್ಕನು ಅನಂತರ ಅಂಧಕನು ದೇವಸೈನ್ಯವನ್ನು ಬಹಳವಾಗಿ ಘಾಸಿಪಡಿಸಿದನು.

೪೪-೪೬. ಅನಂತರ ಅಗ್ನಿಯು ವಾಯುಸಮೇತನಾಗಿ ದಾನವಸೈನ್ಯವನ್ನು ಸುಡಲಾರಂಭಿಸಿದನು. ಅವನನ್ನು ಎದುರಿಸಲು ಪರಾಕ್ರಮಶಾಲಿಯಾದ ವಿಶ್ವಕರ್ಮನಾದ ಮಯನು ಎದುರಿಗೆ ಬಂದನು. ಅಗ್ನಿಯು ಹಾಗೆ ಬಂದ ಮಯನನ್ನು ಶಕ್ತಿಯಿಂದ ಪ್ರಹರಿಸಿ ಶಂಬರನ ಕುತ್ತಿಗೆಯನ್ನು ದಹಿಸಲು ಹಿಡಿದುಕೊಂಡನು. ಶಕ್ತಿಯಿಂದ

ಶಕ್ತ್ಯಾ ಮಯಂ ಶಂಬರಮೇತ್ಯ ಕಂಠೇ
ಸಂತಾಡ್ಯ ಜಗ್ರಾಹ ಬಲಾನ್ಮಹರ್ಷೇ ॥ ೪೫ ॥

ಶಕ್ತ್ಯಾ ಸಕೋಪಂ ವರಣೇ ವಿದಾರಿತೇ
ಸ ಭಿನ್ನದೇಹೋ ನ್ಯಪತತ್ಪೃಥಿವ್ಯಾಂ।
ಮಯಃ ಪ್ರಜಜ್ವಾಲ ಚ ಶಂಬರೋಽಪಿ
ಕಂಠೇ ವಿಲಗ್ನೇ ಜ್ವಲನೇ ಪ್ರದೀಪ್ತೇ ॥ ೪೬ ॥

ಸ ದಹ್ಯಮಾನೋ ದಿತಿಜೋಽಗ್ನಿನಾಥ
ಸುವಿಸ್ತರಂ ಘೋರರವಂ ರುರಾವ।
ಸಿಂಹಾಭಿಪನ್ನೋ ವಿಪಿನೇ ಯಥೈವ
ಮತಂಗಜಃ ಕ್ರಂದತಿ ವೇದನಾರ್ತಃ ॥ ೪೭ ॥

ತಂ ಶಬ್ದಮಾಕರ್ಣ್ಯ ಚ ಶಂಬರಸ್ಯ
ದೈತ್ಯೇಶ್ವರಃ ಕ್ರೋಧವಿರಕ್ತದೃಷ್ಟಿಃ।
ಆಃ ಕಿಂ ಕಿಮೇತನ್ನನು ಕೇನ ಯುದ್ಧೇ
ಜಿತೋ ಮಯಃ ಶಂಬರದಾನವಶ್ಚ ॥ ೪೮ ॥

---

ಕವಚವು ಸೀಳಲ್ಪಡಲಾಗಿ ದೇಹಭಂಗದಿಂದ ಮಯನು ಕೆಳಗೆ ಬಿದ್ದನು. ಅಗ್ನಿಯು ಅವನನ್ನು ಜ್ವಲಿಸಲಾರಂಭಿಸಿತು ಶಂಬರನೂ ಸಹ ಕುತ್ತಿಗೆಯಲ್ಲಿ ಹತ್ತಿದ ಅಗ್ನಿಯು ಬಲವಾಗಲಾಗಿ ನೆಲದಲ್ಲಿ ಬಿದ್ದನು.

೪೭-೪೮. ಅಗ್ನಿಯಿಂದ ಆ ಪ್ರಕಾರ ಸುಡಲ್ಪಡುತ್ತಿರುವ ಶಂಬರನು ಸಿಂಹ್ಮದಿಂದ ಹಿಡಿಯಲ್ಪಟ್ಟ ಆನೆಯಂತೆ ಘೋರವಾಗಿ ಕಿರುಚಿದನು. ಆ ಶಬ್ಧವನ್ನು ಕೇಳಿ ಅಂಧಕನು ಕೋಪದಿಂದ ಕೆಂಗಣ್ಣು ಬಿಡುತ್ತಾ ಆಃ ಇದೇನು ಮಯನನ್ನೂ ಶಂಬರನನ್ನೂ ಯುದ್ಧದಲ್ಲಿ ಜಯಿಸಿದವರಾರು ಎಂದು ಕೇಳಲು ದೈತ್ಯಭಟರು ಈ ಅಗ್ನಿಯಿಂದ ಸುಡಲ್ಪಡುತ್ತಿದ್ದಾರೆ ಜಾಗ್ರತೆಯಾಗಿ ಬಂದು ಇವರನ್ನು ರಕ್ಷಿಸು, ಈ ಅಗ್ನಿಯನ್ನು ತಡೆಯಲು ಯಾರಿಂದಲೂ ಸಾಧ್ಯವಿಲ್ಲವೆಂದು ಮೊರೆ ಇಟ್ಟರು.

ತತೋಽಬ್ರುವನ್ದೈತ್ಯಭಟಾ ದಿತೀಶಂ
ಪ್ರದಹ್ಯತೇಽನೇನ ಹುತಾಶನೇನ ।
ರಕ್ಷಸ್ವ ಚಾಭ್ಯೇತ್ಯ ನ ಶಕ್ಯತೇಽಭೋ
ಹುತಾಶನೋ ವಾರಯಿತುಂ ರಣಾಗ್ರೇ ॥ ೪೯ ॥

ಇತ್ಥಂ ಸ ದೈತ್ಯೈರಭಿ ನೋದಿತಸ್ತು
ಹಿರಣ್ಯಚಕ್ಷೋಸ್ತನಯೋ ಮಹರ್ಷೇ ।
ಉದ್ಯಮ್ಯ ವೇಗಾತ್ಪರಿಘಂ ಹುತಾಶಂ
ಸಮಾದ್ರವತ್ತಿಷ್ಠ ಇತಿ ಬ್ರುವನ್ಹಿ ॥ ೫೦ ॥

ಶ್ರುತ್ವಾಂಧಕಸ್ಯಾಪಿ ವಚೋಽವ್ಯಯಾತ್ಮಾ
ಸಂಕ್ರುದ್ಧಚಿತ್ತಸ್ತ್ವರಿತೋ ಹಿ ದೈತ್ಯಂ ।
ಉತ್ಪಾಟ್ಯ ಭೂಮ್ಯಾಂ ಚ ವಿನಿಷ್ಪಿಪೇಷ
ತತೋಽಂಧಕಃ ಪಾವಕಮಾಸಸಾದ ॥ ೫೧ ॥

ಸಮಾಜಘಾನಾಥ ಹುತಾಶನಂ ಹಿ
ವರಾಯುಧೇನಾಥ ವರಾಂಗಮಧ್ಯೇ ।
ಸಮಾಹತೋಽಗ್ನಿಃ ಪರಿಮುಚ್ಯ ಶಂಬರಂ
ತಥಾಂಧಕಂ ಸತ್ವರಿತೋಽಭ್ಯಧಾವತ್ ॥ ೫೨ ॥

---

೪೯-೫೨. ಈ ರೀತಿ ದೈತ್ಯರಿಂದ ಪ್ರೇರಿಸಲ್ಪಟ್ಟ ಅಂಧಕನು ಪರಿಘಾಯುಧವನ್ನು ಎತ್ತಿಹಿಡಿದು ನಿಲ್ಲು ನಿಲ್ಲು ಎಂದು ಹೇಳುತ್ತಾ ಅಗ್ನಿಯನ್ನು ಅಟ್ಟಿಸಿಕೊಂಡು ಬಂದನು. ಅಂಧಕನ ಆ ಮಾತನ್ನು ಕೇಳಿಯೂ ಸಾಹಸಿಯಾದ ಅಗ್ನಿಯು ಕೋಪದಿಂದ ಶಂಬರನನ್ನು ಹಿಡಿದು ಕೆಳಕ್ಕೆ ಅಪ್ಪಳಿಸಿ ಮರ್ದಿಸಿದನು. ಅಷ್ಟರಲ್ಲೇ ಅಂಧಕನು ಅಗ್ನಿಯ ಸಮೀಪಕ್ಕೆ ಬಂದು ಬಲವಾದ ಆಯುಧದಿಂದ ತಲೆಯ ಮಧ್ಯದಲ್ಲಿ ಹೊಡೆದನು. ಹಾಗೆ ಹೊಡೆಯಲ್ಪಟ್ಟ ಅಗ್ನಿಯು ಶಂಬರನನ್ನು ಬಿಟ್ಟು ಅಂಧಕನೊಡನೆ ಯುದ್ಧಕ್ಕೆ ಅಭಿಮುಖನಾದನು. ಅಭಿಮುಖನಾಗಿ ಬರುತ್ತಿರುವ ಆ ಅಗ್ನಿಯನ್ನು

ತಮಾಪತಂತಂ ಪರಿಘೇಣ ಭೂಯಃ
ಸಮಾಹನನ್ಮೂರ್ಧ್ನಿ ತದಾಂಧಕೋಽಪಿ ।
ಸ ತಾಡಿತೋಽಗ್ನಿರ್ದಿತಿಜೇಶ್ವರೇಣ
ಭಯಾತ್ಪ್ರದುದ್ರಾವ ರಣಾಜಿರಾದ್ಬಹಿಃ ॥ ೫೩ ॥

ತತೋಽಂಧಕೋ ಮಾರುತಚಂದ್ರಭಾಸ್ಕರಾನ್
ಸಾಧ್ಯಾನ್ಸಸೂನಶ್ವಿಮರುನ್ಮಹೋಗ್ರಾನ್ ।
ಯಾನ್ಯಾಶ್‌ಶರೇಣ ಸ್ಪೃಶತೇ ಪರಾಕ್ರಮೀ
ಪರಾಙ್ಮುಖಾಂಸ್ತಾನ್ಕೃತವಾನ್ರಣಾಜಿರಾತ್ ॥ ೫೪ ॥

ತತೋ ವಿಜಿತ್ಯಾಮರಸೈನ್ಯಮುಗ್ರಂ
ಸೇಂದ್ರಂ ಸರುದ್ರಂ ಸಯಮಂ ಸಸೋಮಂ ।
ಸಂಪೂಜ್ಯಮಾನೋ ದನುಪುಂಗವೈಸ್ತು
ತದಾಂಧಕೋ ಭೂಮಿಮುಪಾಜಗಾಮ ॥ ೫೫ ॥

ಆಸಾದ್ಯ ಭೂಮಿಂ ಕರದಾನ್ನರೇಂದ್ರಾ
ನ್ಕೃತ್ವಾ ವಶೇ ಸ್ಥಾಪ್ಯ ಚರಾಚರಂ ಚ ।
ಜಗತ್ಸಮಸ್ತಂ ಪ್ರವಿವೇಶ ಧೀಮಾನ್
ಪಾತಾಲಮಗ್ರ್ಯಂ ಪುರಮಶ್ಮಕಾಹ್ವಂ ॥ ೫೬ ॥

---

ಅಂಧಕನು ಪುನಃ ತಲೆಯ ಮೇಲೆ ಹೊಡೆದನು. ಹಾಗೆ ಹೊಡೆಯಲ್ಪಟ್ಟ ಅಗ್ನಿಯು ಭಯದಿಂದ ಯುದ್ಧಭೂಮಿಯನ್ನು ಬಿಟ್ಟು ಓಡಿದನು.

೫೪-೫೬ ಅನಂತರ ಅಂಧಕನು, ವಾಯು, ಚಂದ್ರ, ಸೂರ್ಯ, ಸಾಧ್ಯರು, ವಸುಗಳು, ಅಶ್ವಿನೀ ದೇವತೆಗಳು ಇವರನ್ನು ಎದುರಿಸಿದನು. ಅಂಧಕನ ಬಾಣ ಪ್ರಯೋಗವಾದೊಡನೆಯೇ ಇವರು ಒಬ್ಬಬ್ಬರಾಗಿ ಪರಾಙ್ಮುಖರಾಗಿ ಯುದ್ಧಭೂಮಿಯಿಂದ ಓಡಿದರು. ಅನಂತರ ಅಂಧಕನು ಇಂದ್ರ, ರುದ್ರ, ಯಮ, ಚಂದ್ರ ಇವರೊಡನೆ ದೇವಸೈನ್ಯವನ್ನೆಲ್ಲವನ್ನೂ ಜಯಿಸಿ ದನುಜರಿಂದ ಪ್ರಶಂಸಿಸಲ್ಪಟ್ಟು ಭೂಮಿಗೆ ಬಂದನು. ಭೂಮಿಯಲ್ಲಿದ್ದ ರಾಜರುಗಳನ್ನೆಲ್ಲಾ ಜಯಿಸಿ ಅದರಿಂದ ಕಪ್ಪವನ್ನು ತೆಗೆದುಕೊಳ್ಳಲೇರ್ಪಡಿಸಿ ಚರಾಚರ ಜಗತ್ತನ್ನೆಲ್ಲಾ ಸ್ವಾಧೀನಪಡಿಸಿಕೊಂಡನು. ಪಾತಾಳ ಲೋಕದಲ್ಲಿರುವ ಅಶ್ಮಕವೆಂಬ ತನ್ನ ರಾಜಧಾನಿಯಲ್ಲಿ

**ತತ್ರ ಸ್ಥಿತಸ್ಯಾಪಿ ಮಹಾಸುರಸ್ಯ**
**ಗಂಧರ್ವವಿದ್ಯಾಧರಸಿದ್ಧಸಂಘಾಃ ।**
**ಸಹಾಪ್ಸರೋಭಿಃ ಪರಿಚಾರಣಾಯ**
**ಪಾತಾಲಮಭ್ಯೇತ್ಯ ಸಮಾವಸನ್ಸ್ಮ ॥ ೫೭ ॥**

**ಇತಿ ಶ್ರೀ ವಾಮನ ಪುರಾಣೇ ಅಂಧಕವಿಜಯೋನಾಮ**
**ದಶಮೋಽಧ್ಯಾಯಃ**

ನೆಲಸಿದನು. ಅಲ್ಲಿಯೂ ಸಹ ಗಂಧರ್ವ ವಿದ್ಯಾಧರರೇ ಮೊದಲಾದ ದೇವತೆಗಳು ಅಪ್ಸರಸ್ತ್ರೀಯರುಗಳೊಡನೆ ಮಹಾಸುರನಾದ ಅಂಧಕನ ಪರಿಚರಣೆಗಾಗಿ ಪಾತಾಳ ಲೋಕದ ಅಶ್ಮಕನಗರದಲ್ಲಿ ಅಂಧಕನೊಡನೆಯೇ ವಾಸಮಾಡಿದರು.

ಇಲ್ಲಿಗೆ ಶ್ರೀ ವಾಮನಪುರಾಣದಲ್ಲಿ ಅಂಧಕವಿಜಯವೆಂಬ
ಹತ್ತನೆಯ ಅಧ್ಯಾಯವು ಮುಗಿದಿದೆ.

## ಅಧ್ಯಾಯಾರ್ಥ ಸಂಗ್ರಹ

ಈ ಅಧ್ಯಾಯದಲ್ಲಿಯೂ ಅಂಧಕನ ಯುದ್ಧವನ್ನು ಮುಂದುವರಿಸಿ ಅವನ ವಿಜಯವನ್ನು ಪ್ರತಿಪಾದಿಸಲಾಯಿತು. ಮತ್ತು ನಾರದರ ಉಪಪ್ರಶ್ನೆಗೆ ಉತ್ತರವಾಗಿ ಪ್ರಾರಂಭಿಸಿದ ಈ ಅಧ್ಯಾಯದಲ್ಲಿ ಮೊದಲನೇ ಅಧ್ಯಾಯದಲ್ಲಿ ನಾರದರು ವೈಷ್ಣವಾ ಗ್ರೇಸರನಾದ ಪ್ರಹ್ಲಾದನು ದೇವತೆಗಳ ಮೇಲೆ ಹೇಗೆ ಯುದ್ಧಮಾಡಿದನೆಂಬ ಪ್ರಶ್ನೆಗೆ ಸಮಾಧಾನವೂ ಇದರಿಂದ ಫಲಿತವಾಯಿತು. ವೈಷ್ಣವನಾದ ಪ್ರಹ್ಲಾದನು ರಾಜ್ಯ ಲೋಭದಿಂದಾಗಲಿ, ದ್ವೇಷದಿಂದಾಗಲಿ ದೇವತೆಗಳ ಮೇಲೆ ಯುದ್ಧ ಹೂಡಲಿಲ್ಲ. ರಾಜ್ಯವನ್ನು ಅಂಧಕನಿಗೆ ವಹಿಸಿದರೂ ಸ್ವಧರ್ಮವನ್ನು ಬಿಡಕೂಡದೆಂಬ ನಾರಾಯಣನ ಆಜ್ಞೆಯನ್ನನುಸರಿಸಿ ರಾಜನಾದ ಅಂಧಕನಿಗೆ ಅನುಯಾಯಿಯಾಗಿ ನಿಂತು ಕ್ಷತ್ರಿಯ ಧರ್ಮದಿಂದ ಯುದ್ಧಮಾಡಿಧನೆಂಬ ಉತ್ತರವು ಫಲಿತವಾಗುತ್ತದೆ ಈ ಯುದ್ಧದಿಂದ ಪ್ರಹ್ಲಾದನಿಗೆ ಯಾವ ಅರ್ಥಕಾಮುಗಳೂ ಲಭಿಸಲಿಲ್ಲ. ಸ್ವಧರ್ಮಪರಿಪಾಲನ ಮಾತ್ರವೇ ಪ್ರಹ್ಲಾದನ ಈ ಯುದ್ಧಕ್ಕೆ ಫಲ.

॥ ಶ್ರೀಃ ॥

# ಶ್ರೀವಾಮನಪುರಾಣಂ

## ಏಕಾದಶೋಽಧ್ಯಾಯಃ

### ನಾರದ ಉವಾಚ

**ಯದೇತದ್ಭವತಾ ಪ್ರೋಕ್ತಂ ಸುಕೇಶಿಪುರಮಂಬರಾತ್ ।**
**ಪಾತಿತಂ ಭುವಿ ಸೂರ್ಯೇಣ ತದಾಚಕ್ಷ್ವ ದ್ವಿಜೋತ್ತಮ ॥ ೧ ॥**

**ಸುಕೇಶೀತಿ ಚ ಕಶ್ಚಾಸೌ ಕೇನ ದತ್ತವರಶ್ಚ ಸಃ ।**
**ಕಿಮರ್ಥಂ ಪಾತಿತೋ ಭೂಮ್ಯಾಮಾಕಾಶಾದ್ಭಾಸ್ಕರೇಣ ಹಿ ॥ ೨ ॥**

### ಪುಲಸ್ತ್ಯ ಉವಾಚ

**ಶೃಣುಷ್ವಾವಹಿತೋ ಭೂತ್ವಾ ಕಥಾಮೇತಾಂ ಪುರಾತನೀಂ ।**
**ಯಥಾ ಶ್ರುತಾಂ ಮಯಾ ಪೂರ್ವಂ ಕಥ್ಯಮಾನಾಂ ಮಹಾಮುನೇ ॥ ೩ ॥**

**ಆಸೀನ್ನಿಶಾಚರಪತಿರ್ವಿದ್ಯುತ್ಕೇಶೀತಿ ವಿಶ್ರುತಃ ।**
**ತಸ್ಯ ಪುತ್ರೋ ಗುಣಜ್ಯೇಷ್ಠಃ ಸುಕೇಶಿರಭವನ್ಮುನೇ ॥ ೪ ॥**

---

## ಹನ್ನೊಂದನೆಯ ಅಧ್ಯಾಯವು.

೧-೨. ನಾರದರು ಪುನಃ ಪ್ರಶ್ನೆಮಾಡುತ್ತಾರೆ. ಎಲೈ ದ್ವಿಜೋತ್ತಮನೇ, ಸುಕೇಶಿಪುರವು ಆಕಾಶದಿಂದ ಸೂರ್ಯನಿಂದ ಕೆಳಕ್ಕೆ ತಳ್ಳಲ್ಪಟ್ಟಿತೆಂದು ತಾವುಹೇಳಿದ್ದೀರಿ. ಸುಕೇಶಿ ಎಂಬುವವನಾರು ಅವನು ಯಾರಿಂದ ವರವನ್ನು ಹೊಂದಿದ್ದನು. ಏತಕ್ಕಾಗಿ ಅವನ ನಗರವನ್ನು ಸೂರ್ಯನು ಕೆಳಕ್ಕೆ ತಳ್ಳಿದನು. ಈ ವಿಚಾರವನ್ನು ದಯವಿಟ್ಟು ಹೇಳಬೇಕು, ಎಂದು, ಇದಕ್ಕೆ ಪುಲಸ್ತ್ಯರು ಉತ್ತರ ಹೇಳುತ್ತಾರೆ.

೩-೫. ಎಲೈ ಮಹಾಮುನಿಯೇ, ಸಾವಧಾನದಿಂದ ಕೇಳು. ಪುರಾತನವಾದ ಈ ಕಥೆಯನ್ನು ನಾನು ಹೇಗೆ ದೊಡ್ಡವರಿಂದ ಕೇಳಿದ್ದೇನೆಯೋ ಹಾಗೆಯೇ ನಿನಗೆ ಹೇಳುತ್ತೇನೆ, ವಿದ್ಯುತ್ಕೇಶಿ ಎಂದು ಪ್ರಸಿದ್ಧನಾದ ಒಬ್ಬ ರಾಕ್ಷಸರಾಜನಿದ್ದನು ಅವನಿಗೆ

ತಸ್ಯ ತುಷ್ಟಸ್ತಥೇಶಾನಃ ಪುರಮಾಕಾಶಚಾರಿ ಯತ್ ।
ಪ್ರಾದಾದಜೇಯತ್ವಮಪಿ ಶತ್ರುಭಿಶ್ಚಾಪ್ಯವಧ್ಯತಾಂ ॥ ೫ ॥

ಸ ಚಾಪಿ ಶಂಕರಾತ್ಪ್ರಾಪ್ಯ ವರಂ ಗಗನಗಂ ಪುರಂ ।
ರೇಮೇ ನಿಶಾಚರೈಸ್ಸಾರ್ಧಂ ಸದಾ ಧರ್ಮಪಥೇ ಸ್ಥಿತಃ ॥ ೬ ॥

ಸ ಕದಾಚಿದತೋರಣ್ಯಂ ಮಾಗಧಂ ದಾನವೇಶ್ವರಃ ।
ತತ್ರಾಶ್ರಮಾಂಸ್ತು ದದೃಶೇ ಋಷೀಣಾಂ ಭಾವಿತಾತ್ಮನಾಂ ॥ ೭ ॥

ಮಹರ್ಷೀನ್ಸ ತದಾ ದೃಷ್ಟ್ವಾ ಪ್ರಣಿಪತ್ಯಾಭಿವಂದ್ಯ ಚ ।
ಪ್ರತ್ಯುವಾಚ ಋಷೀನ್ಸರ್ವಾನ್ಕೃತಾಸನಪರಿಗ್ರಹಃ ॥ ೮ ॥

ಸುಕೇಶಿರುವಾಚ

ಪ್ರಷ್ಟುಮಿಚ್ಛಾಮಿ ಭವತಃ ಸಂಶಯೋಽಯಂ ಹೃದಿ ಸ್ಥಿತಃ ।
ಕಥಯಂತು ಭವಂತೋ ಮೇ ನ ಚೈವಂ ಜ್ಞಾಪಯಾಮ್ಯಹಂ ॥ ೯ ॥

---

ಸುಕೇಶಿ ಎಂಬ ಗುಣಶಾಲಿಯಾದ ಒಬ್ಬ ಮಗನಾದನು ಅವನ ಗುಣದಿಂದ ಸಂತೋಷ ಪಟ್ಟ ಈಶ್ವರನು ಆಕಾಶದಲ್ಲೇ ಸಂಚರಿಸುವ ಒಂದು ನಗರವನ್ನೂ, ಅಜೇಯತ್ವವನ್ನೂ, ಶತ್ರುಗಳಿಂದ ಅವಧ್ಯತ್ವವನ್ನೂ ಸಹ ಅವನಿಗೆ ಕೊಟ್ಟನು.

೬-೮. ಸುಕೇಶಿಯು ಗಗನ ಸಂಚಾರಿಯಾದ ಆ ನಗರವನ್ನು ಶಂಕರನಿಂದ ವರವಾಗಿ ಹೊಂದಿ ಧರ್ಮಮಾರ್ಗದಿಂದ ರಾಕ್ಷಸರೊಡನೆ ಅಲ್ಲಿ ಸಂತೋಷದಿಂದಿದ್ದನು. ಆ ದಾನವೇಶ್ವರನು ಒಂದಾನೊಂದು ದಿನ ಮಾಗಧಾರಣ್ಯಕ್ಕೆ ಹೋದನು. ಆ ಅರಣ್ಯ ದಲ್ಲಿರುವ ಆಶ್ರಮಗಳನ್ನೆಲ್ಲಾ ನೋಡಿ ಅಲ್ಲಿದ್ದ ಯೋಗಿಗಳಾದ ಮಹರ್ಷಿಗಳನ್ನು ನೋಡಿ ಸಂತೋಷದಿಂದ ನಮಸ್ಕರಿಸಿ ಅವರಿಂದಲೂ ಆಸನಾದಿಗಳಿಂದ ಸತ್ಕರಿಸ ಲ್ಪಟ್ಟವನಾಗಿ ಆ ಋಷಿಗಳನ್ನು ಕುರಿತು ಹೀಗೆ ಹೇಳುತ್ತಾನೆ.

೯-೧೦. ಎಲೈ, ಋಷಿಶ್ರೇಷ್ಠರೇ, ತಾವು ದ್ವಿಜೋತ್ತಮರಾಗಿ ಜ್ಞಾನಿಗಳಾಗಿರು ವಿರಿ, ಈ ವಿಷಯವನ್ನು ತಮ್ಮಲ್ಲಿ ಕೇಳಿ ತಿಳಿಯಬೇಕೆಂದಿರುತ್ತೇನೆ. ನನಗೆ ಇದರಲ್ಲಿ ಸಂಶಯವುಂಟಾಗಿದೆ. ದಯವಿಟ್ಟು ತಾವು ಇದನ್ನು ಹೇಳಬೇಕು. ಇದು

ಕಿಂ ಸ್ವಿಚ್ಛ್ರೇಯಃ ಪರೇ ಲೋಕೇ ಕಿಮು ಚೇಹ ದ್ವಿಜೋತ್ತಮಾಃ ।
ಕೇನ ಪೂಜ್ಯಸ್ತಥಾ ಸತ್ಸು ಕೇನಾಸೌ ಸುಖಮೇಧತೇ ॥ ೧೦ ॥

ಪುಲಸ್ತ್ಯ ಉವಾಚ

ಇತ್ಥಂ ಸುಕೇಶಿವಚನಂ ನಿಶಮ್ಯ ಪರಮರ್ಷಯಃ ।
ಪ್ರೋಚುರ್ವಿಮೃಶ್ಯ ಶ್ರೇಯೋಽರ್ಥಮಿಹ ಲೋಕೇ ಪರತ್ರ ಚ ॥ ೧೧ ॥

ಋಷಯ ಊಚುಃ

ಶ್ರೂಯತಾಂ ಕಥಯಿಷ್ಯಾಮಸ್ತವ ರಾಕ್ಷಸಪುಂಗವ ।
ಯದ್ಧಿ ಶ್ರೇಯೋ ಭವೇದ್ವೀರ ಇಹ ಚಾಮುತ್ರ ಚಾವ್ಯಯಂ ॥ ೧೨ ॥

ಶ್ರೇಯೋ ಧರ್ಮಃ ಪರೇ ಲೋಕೇ ಇಹ ಚ ಕ್ಷಣದಾಚರ ।
ತಸ್ಮಿನ್ಸಮಾಶ್ರಿತೇ ಸತ್ಸು ಪೂಜ್ಯಸ್ತೇನ ಸುಖೀ ಭವೇತ್ ॥ ೧೩ ॥

---

ನನ್ನ ಪ್ರಾರ್ಥನೆಯೇ ಹೊರತು ಆಜ್ಞೆಯಲ್ಲ, ಪರಲೋಕದಲ್ಲೂ ಇಹಲೋಕದಲ್ಲೂ ಮನುಷ್ಯನಿಗೆ ಶ್ರೇಯಸ್ಕರವಾದದ್ದು ಯಾವದು, ಸತ್ಪುರುಷರಲ್ಲಿ ಪೂಜ್ಯತೆಯೂ ಏತರಿಂದ ಉಂಟಾದೀತು, ಇಲ್ಲಿ ಸುಖಿಯಾಗಿರುವುದಕ್ಕೂ ಕಾರಣವಾವುದು.

೧೧-೧೨. ಪುಲಸ್ತ್ಯರು ಹೇಳುತ್ತಾರೆ. ಸುಕೇಶಿಯ ಈ ಮಾತನ್ನು ಕೇಳಿ ಋಷಿಗಳು ವಿಚಾರಮಾಡಿ ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಯಾವದು ಶ್ರೇಯಸ್ಕರವೆಂಬುದನ್ನು ನಿರ್ಧರಿಸಿ ಹೇಳುತ್ತಾರೆ-ಎಲೈ, ರಾಕ್ಷಸರಾಜನೇ, ಉಭಯ ಲೋಕದಲ್ಲೂ ಶ್ರೇಯಸ್ಕರವಾವುದೆಂಬ ನಿನ್ನ ಪ್ರಶ್ನೆಗೆ ಉತ್ತರ ಹೇಳುತ್ತೇವೆ. ಕೇಳೋಣಾಗಲಿ, ಎಂದು ಋಷಿಗಳು ಹೇಳಲುಪಕ್ರಮಿಸಿದರು.

೧೩-೧೪. ಎಲೈ, ರಾಕ್ಷಸರಾಜನೇ, ಇಹಲೋಕದಲ್ಲಿಯೂ, ಪರಲೋಕದಲ್ಲಿಯೂ, ಶ್ರೇಯಸ್ಕರವಾದದ್ದು ಧರ್ಮ. ಇದನ್ನು ಆಶ್ರಯಿಸಿದ್ದೇ ಆದರೆ ಅವನಿಗೆ ಸತ್ಪುರುಷರಲ್ಲಿ ಪೂಜ್ಯತೆಯೂ, ಆತ್ಮಸುಖವೂ ಉಂಟಾಗುತ್ತದೆ. ಇದನ್ನು ಕೇಳಿ ಸುಕೇಶಿಯು ಧರ್ಮದ ಲಕ್ಷಣವೇನು, (ಸ್ವರೂಪಜ್ಞಾನಕ್ಕೆ ಅಪೇಕ್ಷಿತವಾದ ಅಸಾ

**ಸುಕೇಶಿರುವಾಚ**

**ಕಿಂ ಲಕ್ಷಣೋ ಭವೇದ್ಧರ್ಮಃ ಕಿಮಾಚರಣ ಸತ್ಕ್ರಿಯಃ।**
**ಯಮಾಶ್ರಿತ್ಯ ನ ಸೀದಂತಿ ದೇವಾದ್ಯಾಸ್ತು ತದುಚ್ಯತಾಂ ॥ ೧೪ ॥**

**ಋಷಯ ಊಚುಃ**

**ದೇವಾನಾಂ ಪರಮೋ ಧರ್ಮಃ ಸದಾ ಯಜ್ಞಾದಿಕಾಃ ಕ್ರಿಯಾಃ।**
**ಸ್ವಾಧ್ಯಾಯ ತತ್ವವೇದಿತ್ವಂ ವಿಷ್ಣುಪೂಜಾ ಇತಿ ಶ್ರುತಿಃ ॥ ೧೫ ॥**

**ದೈತ್ಯಾನಾಂ ಬಾಹುಶಾಲಿತ್ವಂ ಮಾತ್ಸರ್ಯಂ ಯುದ್ಧ ಸತ್ಕ್ರಿಯಾಃ।**
**ವಂದನಂ ನೀತಿಶಾಸ್ತ್ರಾಣಾಂ ಹರಭಕ್ತಿರುದಾಹೃತಾ ॥ ೧೬ ॥**

**ಸಿದ್ಧಾನಾಮುದಿತೋ ಧರ್ಮೋ ಯೋಗಸಿದ್ಧಿರನುತ್ತಮಾ।**
**ಸ್ವಾಧ್ಯಾಯೋ ಬ್ರಹ್ಮವಿಜ್ಞಾನಂ ಭಕ್ತಿ ರ್ವಿಷ್ಣೌ ಹರೇ ತಥಾ ॥ ೧೭ ॥**

---

ಧಾರಣ ಧರ್ಮ) ಯಾವ ಆಚರಣದಿಂದ ಅದು ಅಭಿವೃದ್ಧಿ ಹೊಂದಿ ಫಲಪ್ರದವಾದೀತು. ಅಂತಹ ಯಾವ ಧರ್ಮವನ್ನು ಹೊಂದಿ ದೇವತೆಗಳು ಕುಂದಿಲ್ಲದೆ ಉತ್ಕೃಷ್ಟರಾಗಿರುವರು ಎಂದು ಪುನಃ ಪ್ರಶ್ನೆ ಮಾಡಿದನು.

೧೫-೧೭. ಋಷಿಗಳು ಹೇಳುತ್ತಾರೆ, ಕೆಲವು ಅಧಿಕಾರಿಭೇದದಿಂದ ವಿಶೇಷ ಧರ್ಮವನ್ನು ವ್ಯವಸ್ಥೆ ಮಾಡಲಾಗಿದೆ. ದೇವತೆಗಳಿಗೆ ಯಜ್ಞಯಾಗಾದಿಗಳೇ ಉತ್ಕೃಷ್ಟವಾದ ಧರ್ಮ, ಮತ್ತು ವೇದಾರ್ಥ ತತ್ವಜ್ಞಾನ. ವಿಷ್ಣುಪೂಜಾ, ಇವುಗಳು ಮುಖ್ಯವಾದ ಧರ್ಮಗಳು- (ಇಲ್ಲಿ ಶ್ರುತಿಃ ಎಂದು ಹೇಳಿರುವದ್ದರಿಂದ ಇದು ಯುಕ್ತಿಯಿಂದ ನಾವು ಕಲ್ಪಿಸಿದುದಲ್ಲವೆಂತಲೂ ಪ್ರಾಮಾಣಿಕವಾದುದೆಂತಲೂ ತಾತ್ಪರ್ಯ.) ದೈತ್ಯರಿಗೆ ಪರಾಕ್ರಮ, ಮತ್ತೊಬ್ಬರ ಉತ್ಕರ್ಷಾ ಸಹಿಸ್ನುತೆ, ಯುದ್ಧವ್ಯಾಪಾರ, ಅದಕ್ಕಾಗಿ ದಂಡನೀತಿಶಾಸ್ತ್ರದ ಅಧ್ಯಯನ, ರುದ್ರನಲ್ಲಿ ಭಕ್ತಿ ಇವುಗಳು ಮುಖ್ಯವಾದ ಧರ್ಮಗಳು, ಸಿದ್ಧರಿಗೆ ಯೋಗಾಭ್ಯಾಸದಿಂದ ಸಿದ್ಧಿ ಹೊಂದುವಿಕೆ, ವೇದಾಧ್ಯಯನ, ಪರಬ್ರಹ್ಮಜ್ಞಾನ, ಹರಿಹರ ಇಬ್ಬರಲ್ಲಿಯೂ ಭಕ್ತಿ ಇವು ಮುಖ್ಯವಾದ ಧರ್ಮಗಳು.

ಉತ್ಕೃಷ್ಟೋಪಾಸನಂ ಜ್ಞೇಯಂ ನೃತ್ಯವಾದ್ಯೇಷು ವೇದಿತಾ ।
ಸರಸ್ವತ್ಯಾಂ ಸ್ಥಿರಾ ಭಕ್ತಿರ್ಗಾಂಧರ್ವೋ ಧರ್ಮ ಉಚ್ಯತೇ ॥ ೧೮ ॥

ವಿದ್ಯಾಧಾರಿತ್ವಮತುಲಂ ವಿಜ್ಞಾನಂ ಪೌರುಷೇ ಮತಿಃ ।
ವಿದ್ಯಾಧರಾಣಾಂ ಧರ್ಮೋಽಯಂ ಭವಾನ್ಯಾಂ ಭಕ್ತಿರೇವ ಚ ॥ ೧೯ ॥

ಗಾಂಧರ್ವವಿದ್ಯಾ ವೇದಿತ್ವಂ ಭಕ್ತಿರ್ಭಾನೌ ತಥಾ ಸ್ಥಿರಾ ।
ಕೌಶಲ್ಯಂ ಸರ್ವಶಿಲ್ಪಾನಾಂ ಧರ್ಮಃ ಕಿಂಪುರುಷಃ ಸ್ಮೃತಃ ॥ ೨೦ ॥

ಬ್ರಹ್ಮಚರ್ಯ ಮಮಾನಿತ್ವಂ ಯೋಗಾಭ್ಯಾಸರತಿರ್ದೃಢಾ ।
ಸರ್ವತ್ರ ಕಾಮಚಾರಿತ್ವಂ ಧರ್ಮೋಽಯಂ ಪೈತ್ರಿಕಃ ಸ್ಮೃತಃ ॥ ೨೧ ॥

ಬ್ರಹ್ಮಚರ್ಯಂ ಸದಾ ಸತ್ಯಂ ಜಪ್ಯಂ ಜ್ಞಾನಂ ಚ ರಾಕ್ಷಸ ।
ನಿಯಮೋ ಧರ್ಮವೇದಿತ್ವಮಾರ್ಷೋ ಧರ್ಮಃ ಪ್ರಚಕ್ಷತೇ ॥ ೨೨ ॥

ಸ್ವಾಧ್ಯಾಯೋ ಬ್ರಹ್ಮಚರ್ಯಂ ಚ ದಾನಂ ಯಜನಮೇವ ಚ ।
ಅಕಾರ್ಪಣ್ಯಮನಾಯಾಸೋ ದಯಾ ಹಿಂಸಾ ಕ್ಷಮಾದಯಃ ॥ ೨೩ ॥

---

೧೮-೨೦. ಗಂಧರ್ವರಿಗೆ ನೃತ್ಯವಾದ್ಯಾದಿಗಳಲ್ಲಿ ವಿಶೇಷಾಭಿಜ್ಞತೆ, ಸರಸ್ವತಿಯಲ್ಲಿ ಸ್ಥಿರವಾದ ಭಕ್ತಿ ಇದು ಉತ್ಕೃಷ್ಟೋಪಾಸನರೂಪವಾದ ಮುಖ್ಯ ಧರ್ಮ. ವಿದ್ಯಾಧರರಿಗೆ, ಅಪರಿಮಿತವಾದ ವಿದ್ಯೆಯನ್ನು ಹೊಂದಿರುವಿಕೆ, ಶಿಲ್ಪಶಾಸ್ತ್ರವಿಷಯಕವಾದ ವಿಶೇಷ ಪ್ರಜ್ಞೆ, ಪೌರುಷದಲ್ಲಿ ಅಭಿರುಚಿ, ಪಾರ್ವತಿಯಲ್ಲಿ ಭಕ್ತಿ ಇವು ಮುಖ್ಯವಾದ ಧರ್ಮಗಳು. ಕಿಂಪುರುಷರಿಗೆ, ನೃತ್ಯ ವಾದ್ಯ ಮೊದಲಾದ ಗಾಂಧರ್ವ ವಿದ್ಯಾಭಿರುಚಿ, ಸೂರ್ಯನಲ್ಲಿ ಭಕ್ತಿ, ಶಿಲ್ಪಕೌಶಲ, ಇವು ಮುಖ್ಯವಾದ ಧರ್ಮಗಳು.

೨೧-೨೨, ಬ್ರಹ್ಮಚರ್ಯ, ನಿರಹಂಕಾರಿತ್ವ, ದೃಢವಾದ ಯೋಗಾಭ್ಯಾಸರುಚಿ, ಇಚ್ಛಾನುಸಾರಿಯಾದ ಸರ್ವದೇಶ ಸಂಚಾರ, ಇದು ಪಿತೃದೇವತೆಗಳ ಧರ್ಮ, ಬ್ರಹ್ಮ, ಚರ್ಯ, ಯಾವಾಗಲೂ ಸತ್ಯಭಾಷಣ, ಮಹಾಮಂತ್ರಗಳ ಜಪ, ತತ್ವಜ್ಞಾನ, ನಿಯಮ, ಧರ್ಮಜ್ಞಾನ ಇವು ಋಷಿಗಳ ಧರ್ಮಗಳು.

೨೩-೨೫. ವೇದಾಧ್ಯಯನ, ಬ್ರಹ್ಮಚರ್ಯ, ದಾನ, ಯಜ್ಞ, ಚಿತ್ತಹರ್ಷ, ಅನಾಯಾಸಿಯಾಗಿರುವಿಕೆ, ದಯೆ, ಅಹಿಂಸೆ, ಕ್ಷಾಂತಿ, ಜಿತೇಂದ್ರಿಯತೆ, ಶುಚಿಸ್ವಭಾವ,

ಜಿತೇಂದ್ರಿಯತ್ವಂ ಶೌಚಂ ಚ ಮಾಂಗಲ್ಯಂ ಭಕ್ತಿರಚ್ಯುತೇ।
ಶಂಕರೇ ಭಾಸ್ಕರೇ ದೇವ್ಯಾಂ ಧರ್ಮೋऽಯಂ ಮಾನವಃ ಸ್ಮೃತಃ ॥ ೨೪ ॥

ಧನಾಧಿಪತ್ಯಂ ಭೋಗಾಶ್ಚ ಸ್ವಾಧ್ಯಾಯಃ ಶಂಕರಾರ್ಚನಂ।
ಅಹಂಕಾರಮಶೌಂಡೀರ್ಯಂ ಧರ್ಮೋऽಯಂ ಗುಹ್ಯಕೇಷ್ವಿತಿ ॥ ೨೫ ॥

ಪರದಾರಾವಮರ್ಶಿತ್ವಂ ಪಾರಕ್ಯಾರ್ಥೇ ಚ ಲೋಲುಪಾಃ।
ಸ್ವಾಧ್ಯಾಯಸ್ತ್ರ್ಯಂಬಕೇ ಭಕ್ತಿರ್ಧರ್ಮೋऽಯಂ ರಾಕ್ಷಸಃ ಸ್ಮೃತಃ ॥ ೨೬ ॥

ಅವಿವೇಕಸ್ತಥಾऽಜ್ಞಾನಂ ಶೌಚಹಾನಿರಸತ್ಯತಾ।
ಪಿಶಾಚಾನಾ ಮಯಂ ಧರ್ಮಃ ಸದಾಚಾಮಿಷಗೃಧ್ನುತಾ ॥ ೨೭ ॥

---

ಮಂಗಳದಲ್ಲಿ ಪ್ರೀತಿ, ವಿಷ್ಣುವಿನಲ್ಲಿಯೂ, ಶಂಕರನಲ್ಲಿಯೂ, ಸೂರ್ಯನಲ್ಲಿಯೂ, ದೇವಿಯಲ್ಲಿಯೂ ಭಕ್ತಿ ಇವುಗಳು ಮಾನವನ ಧರ್ಮ (ಇಲ್ಲಿ ಇವು ಒಟ್ಟಿನಲ್ಲಿ ಹೇಳಲ್ಪಟ್ಟಿವೆ, ವರ್ಣಾಶ್ರಮಾದಿ ಭೇದದಿಂದಲೂ ಅಧಿಕಾರಿ ಭೇದದಿಂದಲೂ ಇವು ವಿಭಾಗಿಸಲ್ಪಡತಕ್ಕವು) ಧನಾಧಿಪತಿತ್ವ, ಭೋಗ,ವೇದಾಧ್ಯಯನ, ಶಂಕರನ ಪೂಜೆ ಅಹಂಕಾರ ಅದಕ್ಷತೆ, ಇವು ಗುಹ್ಯಕರ ಧರ್ಮಗಳು.

೨೬-೨೭. ಪರದಾರಗಮನ, ಪರದ್ರವ್ಯದಲ್ಲಿ ಆಶೆ, ವೇದಾಧ್ಯಯನ, ರುದ್ರನಲ್ಲಿ ಭಕ್ತಿ, ಇವು ರಾಕ್ಷಸರ ಧರ್ಮಗಳು, ಅವಿವೇಕ, ಅಜ್ಞಾನ, ಅಶುಚಿಸ್ವಭಾವ, ಅಸತ್ಯಭಾಷಣ, ಯಾವಾಗಲೂ ಮಾಂಸಾಭಿಲಾಷೆ, ಇವು ಪಿಶಾಚಿಗಳ ಧರ್ಮಗಳು. ಈ ಹನ್ನೆರಡು ಆಯಾಯ ಧರ್ಮಸ್ಥಾನಗಳೆಂದು ಚತುರ್ಮುಖನಿಂದ ಹೇಳಲ್ಪಟ್ಟಿವೆ. ಈ ಆಚರಣೆಗಳಿಂದ ಉಂಟಾಗುವ ಹನ್ನೆರಡು ಧರ್ಮಗಳೇ ಆಯಾಯ ಅಧಿಕಾರಿಗೆ ಅನುಗುಣವಾದ ಫಲವನ್ನು ಉಂಟುಮಾಡುತ್ತವೆ. (ಇಲ್ಲಿ ಧರ್ಮದ ಲಕ್ಷಣವೇನು ಅದು ಯಾವ ಆಚರಣೆಯಿಂದ ಅಭಿವೃದ್ಧಿ ಹೊಂದಿ ಗಣ್ಯತೆಯನ್ನೂ ಸುಖವನ್ನೂ ಉಂಟುಮಾಡುತ್ತದೆ, ಎಂಬ ಸುಕೇಶಿಯ ಪ್ರಶ್ನೆಗೆ ಧರ್ಮದ ಲಕ್ಷಣವನ್ನು ಹೇಳದೇ ಅದಕ್ಕೆ ಆಶ್ರಯವಾಗಿರುವ ಆಚಾರವನ್ನು ಮಾತ್ರ ವಿವರಿಸಿದ್ದಾರೆ. ಇದರಲ್ಲಿ ಧರ್ಮದ ಲಕ್ಷಣವು ಅರ್ಥ ಸಿದ್ಧವೆಂದು ತಿಳಿಯಬೇಕು, ವಸ್ತುತಃ ಪರಮಾತ್ಮನ ಅನುಗ್ರಹ ಸಂಕಲ್ಪವೇ ಧರ್ಮ, ಅದಕ್ಕೆ ಪುಣ್ಯವೆಂದು ಹೆಸರು, ಅಂತಹ ಅನುಗ್ರಹ ಸಂಕಲ್ಪಕ್ಕೆ ವಿಷಯನಾದ ಚೇತನನನ್ನು ಧರ್ಮವಂತ, ಪುಣ್ಯಶಾಲಿ ಎಂದು ಹೇಳಬಹುದು. ಅಂತಹ ಅನುಗ್ರಹವನ್ನು ಹೊಂದಬೇಕಾದರೆ ಅವನ ಆಜ್ಞಾಸಿದ್ಧವಾದ ಸ್ವಧರ್ಮಗಳನ್ನು

**ಯೋನಯೋ ದ್ವಾದಶೈವೈತಾಸ್ತಾಸು ಧರ್ಮಾಶ್ಚ ರಾಕ್ಷಸ ।**
**ಬ್ರಹ್ಮಣಾ ಕಥಿತಾಃ ಪುಣ್ಯಾಃ ದ್ವಾದಶೈವ ಗತಿಪ್ರದಾಃ ॥ ೨೮ ॥**

**ಸುಕೇಶಿರುವಾಚ**

**ಭವದ್ಭಿರುಕ್ತಾ ಯೇ ಧರ್ಮಾಃ ಶಾಶ್ವತಾ ದ್ವಾದಶಾವ್ಯಯಾಃ ।**
**ತತ್ರ ಯೇ ಮಾನವಾ ಧರ್ಮಾಸ್ತಾನ್ಭೂಯೋ ವಕ್ತುಮರ್ಹಥ ॥ ೨೯ ॥**

**ಋಷಯ ಊಚುಃ**

**ಶೃಣುಷ್ವ ಮನುಜಾದೀನಾಂ ಧರ್ಮಾಂಸ್ತು ಕ್ಷಣದಾಚರ ।**
**ಯೇ ವಸಂತಿ ಮಹೀಪೃಷ್ಠೇ ನರಾ ದ್ವೀಪೇಷು ಸಪ್ತಸು ॥ ೩೦ ॥**

---

ಆಚರಿಸಬೇಕು. ಇಂತಹ ಅಧಿಕಾರಕ್ಕೆ ತಕ್ಕ ಆಚರಣೆಯಿಂದ ಅನುಗ್ರಹವನ್ನು ಹೊಂದಬೇಕು. ಮತ್ತೊಂದು ಅಧಿಕಾರಿಯ ಧರ್ಮವು ತನಗೆ ಸ್ವಧರ್ಮವಾಗುವುದಿಲ್ಲ. ಅದರ ಆಚರಣೆಯು ಭಗವಂತನ ನಿಗ್ರಹಕ್ಕೇ ಕಾರಣವಾಗುತ್ತದೆ. ಅನುಗ್ರಹ ರೂಪವಾದ ಅತೀಂದ್ರಿಯವಾದ ಆ ಧರ್ಮಕ್ಕೆ ಕಾರಣವಾದುದರಿಂದ ಈ ಯಜ್ಞ ಯಾಗಾದಿಗಳು ಧರ್ಮವೆಂದು ಹೇಳಲ್ಪಡುತ್ತವೆ. ಇವು ಧರ್ಮಾಭಿವ್ಯಕ್ತಿಸ್ಥಾನಗಳೇ ಹೊರತು ಮುಖ್ಯವಾದ ಧರ್ಮವೇ ಅಲ್ಲ. "ವೇದೋ ಖಿಲೋ ಧರ್ಮ ಮೂಲಮ್" ".ಸ್ವಧರ್ಮೇ ನಿಧನಂ ಶ್ರೇಯಃ" ಎಂಬ ಸ್ಮೃತಿವಚನಗಳಲ್ಲಿರುವ ಧರ್ಮಶಬ್ದಕ್ಕೂ ಧರ್ಮಸಾಧನಗಳಾದ ಯಜ್ಞಯಾಗಾದಿಗಳೆಂದೇ ಅರ್ಥ. "ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ" ಎಂಬ ಗೀತಾವಚನದಲ್ಲಿರುವ ಸ್ವಕರ್ಮಪದವೂ ವರ್ಣಾಶ್ರಮ ನಿಯತವಾದ ಅನುಗ್ರಹಕ್ಕೆ ಕಾರಣವಾದ ಯಜ್ಞಯಾಗಾದಿಗಳನ್ನೇ ಅವನ ಆರಾಧನರೂಪವನ್ನಾಗಿ ಬೋಧಿಸುತ್ತದೆ. ಆದುದರಿಂದ ಇಲ್ಲಿ ಧರ್ಮಕ್ಕೆ ತಕ್ಕ ಆಚರಣೆಗಳನ್ನು ನಿರ್ದೇಶಮಾಡಿದ್ದರೂ ಇದರಿಂದ ಧರ್ಮದ ಸ್ವರೂಪವೂ ಅರ್ಥಸಿದ್ಧವೆಂದು ತಿಳಿಯಬೇಕು.)

೨೯-೩೦. ಸುಕೇಶಿಯು ಪುನಃ ಪ್ರಶ್ನೆ ಮಾಡುತ್ತಾನೆ, ತಾವು ಅಪ್ಪಣೆಕೊಡಿಸಿದ ಶಾಶ್ವತವಾದ ಹನ್ನೆರಡು ಧರ್ಮಗಳನ್ನೂ ತಿಳಿದದ್ದಾಯಿತು. ಅವುಗಳಲ್ಲಿ ಮಾನವ ಧರ್ಮವನ್ನು ವಿಸ್ತಾರವಾಗಿ ಪುನಃ ಅಪ್ಪಣೆ ಕೊಡಿಸಬೇಕು. ಇದನ್ನು ಕೇಳಿದ ಋಷಿಗಳು, ಎಲೈ, ರಾಕ್ಷಸೋತ್ತಮನೇ, ಭೂಮಿಯ ಮೇಲೆ ಸಪ್ತದ್ವೀಪದಲ್ಲಿಯೂ ವಾಸಿಸುವ ಮನುಷ್ಯರೇ ಮೊದಲಾದವರ ಧರ್ಮವನ್ನು ಪುನಃ ಹೇಳುತ್ತೇವೆ ಕೇಳು ಎಂದು ಉಪಕ್ರಮಿಸಿದರು.

ಯೋಜನಾನಾಂ ಪ್ರಮಾಣೇನ ಪಂಚಾಶತ್ಕೋಟಿರಾಯತಾ ।
ಜಲೋಪರಿ ಮಹೀಯಂ ಹಿ ನೌರಿವಾಸ್ತೇ ಸರಿಜ್ಜಲೇ ।
ತಸ್ಯೋಪರಿ ಚ ದೇವೇಶೋ ಬ್ರಹ್ಮಾ ಶೈಲೇಂದ್ರಮುತ್ತಮಂ ॥ ೩೧ ॥

ಕರ್ಣಿಕಾಕಾರಮತ್ಯುಚ್ಚಂ ಸ್ಥಾಪಯಾಮಾಸ ಸತ್ತಮಃ ।
ಸ ಚೇಮಾಂ ನಿರ್ಮಮೇ ಪುಣ್ಯಾಂ ಪ್ರಜಾಂ ದೇವಶ್ಚತುರ್ದಿಶಂ ॥ ೩೨ ॥

ಸ್ಥಾನಾನಿ ದ್ವೀಪಸಂಜ್ಞಾನಿ ಕೃತವಾಂಶ್ಚ ಪ್ರಜಾಪತಿಃ ।
ತತ್ರ ಮಧ್ಯೇ ಚ ಕೃತವಾನ್ಜಂಬೂದ್ವೀಪಮಿತಿ ಶ್ರುತಂ ॥ ೩೩ ॥

ತಲ್ಲಕ್ಷಂ ಯೋಜನಾನಾಂ ಚ ಪ್ರಮಾಣೇನ ನಿಗದ್ಯತೇ ।
ತತೋ ಜಲನಿಧಿಃ ಕ್ಷಾರೋ ಬಾಹ್ಯತೋ ದ್ವಿಗುಣಃ ಸ್ಥಿತಃ ॥ ೩೪ ॥

ತಸ್ಯಾಪಿ ದ್ವಿಗುಣಃ ಪ್ಲಕ್ಷೋ ಬಾಹ್ಯತಃ ಸಂಪ್ರತಿಷ್ಠಿತಃ ।
ತತಸ್ತ್ವಿಕ್ಷುರಸೋದಶ್ಚ ಬಾಹ್ಯತೋ ವಲಯಾಕೃತಿಃ ॥ ೩೫ ॥

---

೩೧-೩೩. ಐವತ್ತುಕೋಟಿ ಯೋಜನ ವಿಸ್ತಾರವುಳ್ಳ ಈ ಭೂಮಂಡಲವು ನದಿಯ ನೀರಿನಲ್ಲಿ ದೋಣಿಯು ತೇಲುವಂತೆ ನೀರಿನ ಮೇಲೆ ತೇಲುತ್ತಿದೆ, ಆ ನೀರಿನ ಮೇಲೆ ಬ್ರಹ್ಮನು ಕಮಲದ ಮೊಗ್ಗಿನಂತಿರುವ ಎತ್ತರವಾದ ಬೆಟ್ಟವನ್ನಿಟ್ಟಿರುವನು, ಆ ಬ್ರಹ್ಮನೇ ಇದರ ನಾಲ್ಕು ದಿಕ್ಕಿನಲ್ಲಿಯೂ ಪುಣ್ಯಕರವಾದ ಕೆಲವು ಸ್ಥಾನಗಳನ್ನೇ ರ್ಪಡಿಸಿ ಅವುಗಳನ್ನು ದ್ವೀಪಗಳೆಂದು ಕರೆದನು. ಇಂತಹ ದ್ವೀಪಗಳ ಮಧ್ಯದಲ್ಲಿ ಜಂಬೂದ್ವೀಪವನ್ನು ಏರ್ಪಡಿಸಿರುತ್ತಾನೆಂದು ನಾವು ಕೇಳಿರುವೆವು.

೩೪-೩೬. ಆ ಜಂಬೂದ್ವೀಪದ ಪರಿಮಾಣವು ಲಕ್ಷಯೋಜನವೆಂದು ಹೇಳಲ್ಪಟ್ಟಿದೆ. ಅದರ ಹೊರಭಾಗದಲ್ಲಿ ಅದರ ದ್ವಿಗುಣ ಪರಿಮಾಣವುಳ್ಳ ಲವಣಸಮುದ್ರವು ವ್ಯಾಪಿಸಿದೆ. ಈ ಸಮುದ್ರವನ್ನೂ ಇದರ ದ್ವಿಗುಣ ಪರಿಮಾಣವುಳ್ಳ ಪ್ಲಕ್ಷದ್ವೀಪವು ಸುತ್ತುವರಿದಿದೆ. ಆ ಪ್ಲಕ್ಷದ್ವೀಪವನ್ನೂ ಅದರ ದ್ವಿಗುಣ ಪರಿಮಾಣವುಳ್ಳ ಇಕ್ಷು ಸಮುದ್ರವು ಹೊರಭಾಗದಲ್ಲಿ ವರ್ತುಲಾಕಾರದಿಂದ ಆವರಿಸಿದೆ. ಅದನ್ನೂ ಸಹ ಅದರ ದ್ವಿಗುಣ ಪರಿಮಾಣದ ಶಾಲ್ಮಲಿದ್ವೀಪವು ಸುತ್ತುವರಿದಿದೆ. ಈ ದ್ವೀಪವನ್ನೂ ಇದಕ್ಕೆ

ದ್ವಿಗುಣಃ ಶಾಲ್ಮಲಿದ್ವೀಪೋ ದ್ವಿಗುಣೋಽಸ್ಯ ಮಹೋದಧಿಃ ।
ಸುರೋದೋ ದ್ವಿಗುಣಸ್ತಸ್ಯ ತಸ್ಮಾಚ್ಚ ದ್ವಿಗುಣಃ ಕುಶಃ ॥ ೩೬ ॥

ಘೃತೋದೋ ದ್ವಿಗುಣಶ್ಚೈವ ಕುಶದ್ವೀಪಾತ್ಪ್ರಕೀರ್ತಿತಃ ।
ಘೃತೋದಾದ್ದ್ವಿಗುಣಃ ಕ್ರೌಂಚೋ ದಧ್ಯೋದೋ ದ್ವಿಗುಣಸ್ತತಃ ॥ ೩೭ ॥

ಸಮುದ್ರಾದ್ದ್ವಿಗುಣಃ ಶಾಕಃ ಶಾಕಾದ್ದುಗ್ಧಾಬ್ಧಿರುತ್ತಮಃ ।
ದ್ವಿಗುಣಃ ಸಂಸ್ಥಿತೋ ಯತ್ರ ಶೇಷಪರ್ಯಂಕಗೋ ಹರಿಃ ॥ ೩೮ ॥

ತಸ್ಮಾಚ್ಚ ಪುಷ್ಕರದ್ವೀಪಃ ಸ್ವಾದೂದಸ್ತದನಂತರಂ ।
ಏತೇಚ ದ್ವಿಗುಣಾಃ ಸರ್ವೇ ಪರಸ್ಪರಮವಸ್ಥಿತಾಃ ॥ ೩೯ ॥

ಚತ್ವಾರಿಂಶದಿಮಾಃ ಕೋಟ್ಯೋ ಲಕ್ಷಾಶ್ಚ ನವತಿಃ ಸ್ಮೃತಾಃ ।
ಯೋಜನಾನಾಂ ರಾಕ್ಷಸೇಂದ್ರ ಪಂಚ ಚಾತಿ ಸುವಿಸ್ತೃತಾಃ ॥ ೪೦ ॥

---

ದ್ವಿಗುಣವಾದ ಸುರಾಸಮುದ್ರವು ವ್ಯಾಪಿಸಿದೆ, ಇದನ್ನೂ ಆವರಿಸಿಕೊಂಡು ದ್ವಿಗುಣ ಪರಿಮಾಣದ ಕುಶದ್ವೀಪವಿದೆ.

೩೭-೪೦. ಈ ಕುಶ ದ್ವೀಪವನ್ನೂ ಇದಕ್ಕೆ ದ್ವಿಗುಣ ಪರಿಮಾಣದ ಘೃತ ಸಮುಗ್ರವು ಆವರಿಸಿದೆ. ಇಂತಹ ಘೃತ ಸಮುದ್ರಕ್ಕಿಂತಲೂ ದ್ವಿಗುಣವಾಗಿ ಕ್ರೌಂಚ ದ್ವೀಪವಿದೆ. ಅದನ್ನೂ ಅದಕ್ಕೆ ದ್ವಿಗುಣವಾದ ದಧಿ ಸಮುದ್ರವು ಆವರಿಸಿದೆ. ದಧಿ ಸಮುದ್ರಕ್ಕಿಂತಲೂ ದ್ವಿಗುಣವಾಗಿ ಶಾಕ ದ್ವೀಪವಿದೆ. ಅದೂ ತನಗಿಂತ ದ್ವಿಗುಣವಾದ ಕ್ಷೀರಸಮುದ್ರದಿಂದ ಆವರಿಸಲ್ಪಟ್ಟಿದೆ. ಆ ಕ್ಷೀರ ಸಮುದ್ರದಲ್ಲಿಯೇ ಶೇಷಶಾಯಿಯಾದ ನಾರಾಯಣನು ಯೋಗನಿದ್ರೆಯಿಂದ ಮಲಗಿರುತ್ತಾನೆ, ಅದರ ಮೇಲೆ ಪುಷ್ಕರ ದ್ವೀಪವಿದೆ. ಅದು ಸೀನೀರಿನ ಸಮುದ್ರದಿಂದ ಆವರಿಸಲ್ಪಟ್ಟಿದೆ. ಈ ಏಳು ದ್ವೀಪಗಳೂ ಇವುಗಳ ಸಮುದ್ರಗಳೂ ಒಂದರ ಮೇಲೊಂದು ದ್ವಿಗುಣ ಪರಿಮಾಣದಲ್ಲಿರುತ್ತವೆ. ಇವೆಲ್ಲವೂ ಸೇರಿ ನಲವತ್ತುಕೋಟಿ ತೊಂಭತ್ತೈದುಲಕ್ಷ ಯೋಜನದ ಪರಿಮಾಣವನ್ನು ಹೊಂದಿರುತ್ತವೆ.

ಜಂಬೂದ್ವೀಪಾತ್ಸಮಾರಭ್ಯ ಯಾವತ್ಕ್ಷೀರಾಬ್ಧಿರಂತತಃ ।
ಕೋಟ್ಯಶ್ಚತಸ್ರೋ ಲಕ್ಷಾಣಾಂ ದ್ವಾಪಂಚಾಶಚ್ಚ ರಾಕ್ಷಸ ॥ ೪೧ ॥

ಪುಷ್ಕರದ್ವೀಪಮಾನೋಽಯಂ ತಾವಾನಂತೇ ಮಹೋದಧಿಃ ।
ಲಕ್ಷಮಂಡಕಟಾಹೇನ ಸಮಂತಾದಭಿಪೂರಿತಂ ॥ ೪೨ ॥

ಏವಂ ದ್ವೀಪಾಸ್ತ್ವಮೀ ಸಪ್ತ ಪೃಥಗ್ಧರ್ಮಾಃ ಪೃಥಕ್ಕ್ರಿಯಾಃ ।
ಗದಿಷ್ಯಾಮಸ್ತವ ವಯಂ ಶೃಣುಷ್ವ ತ್ವಂ ನಿಶಾಚರ ॥ ೪೩ ॥

ಪ್ಲಕ್ಷಾದಿಷು ನರಾ ವೀರ ಯೇ ವಸಂತಿ ಸನಾತನಾಃ ।
ಶಾಕಾಂತೇಷು ನ ತೇಷ್ವಸ್ತಿ ಯುಗಾವಸ್ಥಾ ಕಥಂಚನ ॥ ೪೪ ॥

ಮೋದಂತೇ ದೇವವತ್ತೇಷಾಂ ಧರ್ಮೋ ದಿವ್ಯ ಉದಾಹೃತಃ ।
ಕಲ್ಪಾಂತೇ ಪ್ರಲಯಸ್ತೇಷಾಂ ನಿಗದ್ಯೇತ ಮಹಾಭುಜ ॥ ೪೫ ॥

---

೪೧-೪೩. ಜಂಬೂದ್ವೀಪವನ್ನು ಮೊದಲುಮಾಡಿಕೊಂಡು ಕ್ಷೀರಸಮುದ್ರದ ಕೊನೆಯವರಿಗೆ ನಾಲ್ಕುಕೋಟಿ ಎರಡುಲಕ್ಷದ ಐವತ್ತುಯೋಜನ ಪರಿಮಾಣವಾಗುತ್ತದೆ. ಪುಷ್ಕರದ್ವೀಪದ ಪರಿಮಾಣವೂ ಇಷ್ಟೇ ಆಗುತ್ತದೆ. ಆದರೆ ಕೊನೆಯಲ್ಲಿರುವ ಲಕ್ಷಯೋಜನವುಳ್ಳ ಸಮುದ್ರವು ಬ್ರಹ್ಮಾಂಡ ಕಪಾಲದಿಂದ ಎಲ್ಲಾ ಕಡೆಯಲ್ಲೂ ಸುತ್ತಲ್ಪಟ್ಟಿದೆ. ಈ ವಿಧವಾದ ಏಳು ದ್ವೀಪಗಳೂ ಬೇರೆ ಬೇರೆ ಧರ್ಮವುಳ್ಳವುಗಳು ಮತ್ತು ಬೇರೆ ಬೇರೆ ಆಚರಣೆಯುಳ್ಳವುಗಳು, ಎಲ್ಲವನ್ನೂ ಹೇಳುವೆವು ಸಾವಧಾನದಿಂದ ಕೇಳು.

೪೪-೪೭. ಪ್ಲಕ್ಷದ್ವೀಪ ಮೊದಲುಗೊಂಡು ಶಾಕದ್ವೀಪಪರ್ಯಂತದಲ್ಲಿ ವಾಸ ಮಾಡುವ ಜನಗಳಿಗೆ ಯುಗಭೇದದಿಂದುಂಟಾಗುವ ಧರ್ಮದ ಬದಲಾವಣೆಗಳಾವುವೂ ಇಲ್ಲ. ಅವರು ದೇವತೆಗಳಂತೆ ಸಂತುಷ್ಟರಾಗಿಯೂ ಶಾಶ್ವತರಾಗಿಯೂ ಇರುತ್ತಾರೆ. ಅವರಿಗೆ ಏಕರೂಪವಾದ ದಿವ್ಯಧರ್ಮವೇ ಇರುತ್ತದೆ. ಆದರೆ ಕಲ್ಪಾಂತದಲ್ಲಿ ಅವರಿಗೂ ಪ್ರಳಯ ಉಂಟು, ಯಾವ ಜನರು ಘೋರವಾದ ಪುಷ್ಕರದ್ವೀಪದಲ್ಲಿ ವಾಸಿಸುತ್ತಾರೋ ಅವರು ಪೈಶಾಚಧರ್ಮವನ್ನು ಆಶ್ರಯಿಸಿ ಫಲಾನುಭವದಿಂದ ಕರ್ಮನಾಶವುಂಟಾದ ನಂತರ ನಾಶಹೊಂದುತ್ತಾರೆ. ಅಂದರೆ ಕರ್ಮಾನುರೂಪವಾದ ದುಃಖಾನುಭವ,

ಯೋಜನಾಃ ಪುಷ್ಕರದ್ವೀಪೇ ವಸಂತೇ ರೌದ್ರದರ್ಶನೇ।
ಪೈಶಾಚಮಾಶ್ರಿತಾ ಧರ್ಮಂ ಕರ್ಮಾಂತೇ ತೇ ವಿನಾಶಿನಃ ॥ ೪೬ ॥

ಸುಕೇಶಿರುವಾಚ

ಕಿಮರ್ಥಂ ಪುಷ್ಕರದ್ವೀಪೋ ಭವದ್ಭಿಃ ಸಮುದಾಹೃತಃ।
ದುರ್ದರ್ಶಃ ಶೌಚರಹಿತೋ ಘೋರಃ ಕರ್ಮಾರ್ಥ ನಾಶಕೃತ್ ॥ ೪೭ ॥

ಋಷಯ ಊಚುಃ

ತಸ್ಮಿನ್ನಿಶಾಚರದ್ವೀಪೇ ನರಕಾಃ ಸಂತಿ ದಾರುಣಾಃ।
ರೌರವಾದ್ಯಾಸ್ತತೋ ರೌದ್ರಃ ಪುಷ್ಕರೋ ಘೋರದರ್ಶನಃ ॥ ೪೮ ॥

ಸುಕೇಶಿರುವಾಚ

ಕಿಯಂತ್ಯೇತಾನಿ ರೌದ್ರಾಣಿ ನರಕಾಣಿ ತಪೋಧನಾಃ।
ಕಿಯನ್ಮಾತ್ರಾಣಿ ಮಾರ್ಗೇಣ ಕಾ ಚ ತೇಷು ಸ್ವರೂಪತಾ ॥ ೪೯ ॥

---

ಅನಂತರ ನಾಶ, ಪುನಃ ಕರ್ಮವಾಸನೆಯಿಂದ ದೇಹಧಾರಣ, ಆದಕ್ಕೆ ತಕ್ಕ ಪೈಶಾಚ ಧರ್ಮಾನುಷ್ಠಾನ, ಅದರ ಫಲಾನುಭವ, ಅನಂತರ ನಾಶ, ಈ ವಿಧವಾದ ಪರಿವೃತ್ತಿ ಯುಳ್ಳವರೆಂದರ್ಥ.

೪೭-೪೯. ಸುಕೇಶಿಯು ಕೇಳುತ್ತಾನೆ. ನೋಡಲಶಕ್ಯವಾದುದೆಂದೂ ಅಶುಚಿಕರ ವಾದುದೆಂದೂ ಆ ಪುಷ್ಕರದ್ವೀಪವನ್ನು ಏತಕ್ಕೆ ಘೋರವೆಂದೂ ಉದಾಹರಿಸಿರುವಿರಿ. ಇದಕ್ಕೆ ಋಷಿಗಳು ಎಲೈ ರಾಕ್ಷಸರಾಜನೇ, ಆ ಪುಷ್ಕರದ್ವೀಪದಲ್ಲಿ ಭಯಂಕರವಾದ ರೌರವಾದಿ ನರಕಗಳು ಇರುವದ್ದರಿಂದ ಅದು ಘೋರದರ್ಶನವೆಂದು ನಾವು ಹೇಳಿದೆವು ಎಂದು ಪ್ರತ್ಯುತ್ತರ ಕೊಟ್ಟರು. ಪುನಃ ಸುಕೇಶಿಯು ಅಂತಹ ಭಯಂಕರವಾದ ನರಕಗಳು ಅಲ್ಲಿ ಎಷ್ಟಿವೆ ಅವುಗಳ ಪರಿಮಾಣವೇನು ಅವುಗಳ ಸ್ವರೂಪವೇನು ಎಂದು ಪ್ರಶ್ನೆಮಾಡಲು.

**ಋಷಯ ಊಚುಃ**

**ಶೃಣುಷ್ವ ರಾಕ್ಷಸಶ್ರೇಷ್ಠ ಪ್ರಮಾಣಂ ಲಕ್ಷಣಂ ತಥಾ ।**
**ಸರ್ವೇಷಾಂ ರೌರವಾದೀನಾಂ ಸಂಖ್ಯಾಯಾ ತ್ವೇಕವಿಂಶತಿಃ** ॥ ೫೦ ॥

**ದ್ವೇಸಹಸ್ರೇ ಯೋಜನಾನಾಂ ಜ್ವಲಿತಾಂಗಾರ ವಿಸ್ತೃತಃ ।**
**ರೌರವೋ ನಾಮ ನರಕಃ ಪ್ರಥಮಃ ಪರಿಕೀರ್ತಿತಃ** ॥ ೫೧ ॥

**ತಪ್ತತಾಮ್ರಮಯಿಾ ಭೂಮಿರಧಸ್ತಾದ್ವಹ್ನಿತಾಪಿತಾ ।**
**ದ್ವಿತೀಯೋ ದ್ವಿಗುಣಸ್ತಸ್ಮಾನ್ಮಹಾರೌರವ ಉಚ್ಯತೇ** ॥ ೫೨ ॥

**ತತೋಽಪಿ ವಿಸ್ತೃತಶ್ಚಾನ್ಯಸ್ತಾಮಿಸ್ರೋ ನರಕಃ ಸ್ಮೃತಃ ।**
**ಅಂಧತಾಮಿಸ್ರಕೋ ನಾಮ ಚತುರ್ಥೋ ದ್ವಿಗುಣಃ ಪರಃ** ॥ ೫೩ ॥

**ತತಸ್ತು ಕಾಲಸೂತ್ರೇತಿ ಪಂಚಮಃ ಪರಿಗೀಯತೇ ।**
**ಅಪ್ರತಿಷ್ಠಂ ತಥಾ ಷಷ್ಠಂ ಘಟೀ ಯಂತ್ರಂ ಚ ಸಪ್ತಮಂ** ॥ ೫೪ ॥

**ಅಸಿಪತ್ರವನಂ ಚಾನ್ಯತ್ಸಹಸ್ರಾಣಿ ದ್ವಿಸಪ್ತತಿಃ ।**
**ಯೋಜನಾನಾಂ ಪರಿಖ್ಯಾತಮಷ್ಟಮಂ ನರಕೋತ್ತಮಂ** ॥ ೫೫ ॥

---

೫೦-೫೨. ಋಷಿಗಳು ಹೇಳುತ್ತಾರೆ, ಎಲೈ ರಾಕ್ಷಸರಾಜನೇ ಕೇಳು. ನರಕಗಳ ಪ್ರಮಾಣ ಮತ್ತು ಲಕ್ಷಣಗಳನ್ನು ಹೇಳುತ್ತೇವೆ. ರೌರವವೇ ಮೊದಲಾದ ಎಲ್ಲಾ ನರಕಗಳ ಒಟ್ಟು ಸಂಖ್ಯೆ ಇಪ್ಪತ್ತೊಂದು, ಇವುಗಳಲ್ಲಿ ಮೊದಲನೆಯದು ರೌರವ, ಅದರ ಪರಿಮಾಣ ಎರಡು ಸಾವಿರ ಯೋಜನಗಳು, ಅದು ಜ್ವಲಿಸುತ್ತಿರುವ ಬೆಂಕಿಯ ಕೆಂಡಗಳಿಂದ ಆವರಿಸಲ್ಪಟ್ಟಿದೆ. ಎರಡನೇಯದು ಮಹಾರೌರವ, ಇದು ರೌರವಕ್ಕೆ ದ್ವಿಗುಣವಾದ ಪರಿಮಾಣ ಉಳ್ಳದ್ದು, ಇದರ ಭೂಮಿಯೆಲ್ಲವೂ ಕಾದಿರುವ ತಾಮ್ರ ಮಯವಾಗಿದೆ. ಕೆಳಗಡೆ ಯಾವಾಗಲೂ ಬೆಂಕಿಯ ತಾಪವಿದ್ದೇ ಇರುತ್ತದೆ.

೫೩-೫೫. ಅದಕ್ಕಿಂತಲೂ ವಿಸ್ತಾರವಾದ ತಾಮಿಸ್ರವೆಂಬುದು ಮೂರನೇಯದು. ಅದಕ್ಕಿಂತಲೂ ದ್ವಿಗುಣವಾದ ಅಂಧತಾಮಿಸ್ರವೆಂಬುದು, ನಾಲ್ಕನೆಯದು. ಅದ ಕ್ಕಿಂತಲೂ ಬೇರೆಯಾದ ಕಾಲಸೂತ್ರವೆಂಬುದು ಐದನೇಯ ನರಕವು. ಅಪ್ರತಿಷ್ಠ. ವೆಂಬುದು ಆರನೇಯದು. ಘಟೀಯಂತ್ರವೆಂಬುದು ಏಳನೇಯದು. ಅಸಿಪತ್ರವನ ವೆಂಬುದು ಎಪ್ಪತ್ತೆರಡುಸಾವಿರ ಯೋಜನ ವಿಸ್ತಾರವಾದ ಘೋರವಾದ ಎಂಟನೇ ನರಕವು.

**ನವಮಂ ತಪ್ತಕುಂಭಂ ಚ ದಶಮಂ ಕೂಟಶಾಲ್ಮಲಿಃ ।**
**ಕರಪತ್ರಸ್ತಥೈವೋಕ್ತಸ್ತಥಾನ್ಯಃ ಶ್ವಾನಭೋಜನಃ ॥ ೫೬ ॥**

**ಸಂದಂಶೋ ಲೋಹಪಿಂಡಶ್ಚ ಕರಂಭ ಸಿಕತಾ ತಥಾ ।**
**ಘೋರಾ ಕ್ಷಾರನದೀ ಚಾನ್ಯಾ ತಥಾಽನ್ಯಾ ಕೃಮಿಭೋಜನಾ ।**
**ತಥಾಷ್ಟಾದಶಮೀ ಪ್ರೋಕ್ತಾ ಘೋರಾ ವೈತರಣೀ ನದೀ ॥ ೫೭ ॥**

**ತಥಾಪರಃ ಶೋಣಿತಪೂಯಭೋಜನಃ**
**ಕ್ಷುರಾಗ್ರಧಾರೋ ನಿಶಿತಶ್ಚ ಚಕ್ರಕಃ ।**
**ಸಂಶೋಷಣೋ ನಾಮ ತಥಾಪಿ ಚಾಂತೇ**
**ಪ್ರೋಕ್ತಾಸ್ತವೈತೇ ನರಕಾಃ ಸುಕೇಶಿನ್ ॥ ೫೮ ॥**

**ಇತಿ ಶ್ರೀ ವಾಮನಪುರಾಣೆ ಪುಷ್ಕರದ್ವೀಪವರ್ಣನಂ**
**ನಾಮೈಕಾದಶೋಽಧ್ಯಾಯಃ**

---

೫೬-೫೭. ತಪ್ತಕುಂಭವೆಂಬುದು ಒಂಭತ್ತನೇಯದು. ಕೂಟಶಾಲ್ಮಲಿಯು ಹತ್ತನೇಯದು. ಕರಪತ್ರವೆಂಬುದು ಹನ್ನೊಂದನೇಯದು. ಶ್ವಾನಭೋಜನವೆಂಬುದು ಹನ್ನೆರಡನೇಯದು. ಸಂದಂಶವೆಂಬುದು ಹದಿಮೂರನೇಯದು. ಲೋಹಪಿಂಡ ವೆಂಬುದು ಹದಿನಾಲ್ಕನೇಯದು. ಕರಂಭಸಿಕತಾ ಎಂಬುದು ಹದಿನೈದನೇಯದು. ಕ್ಷಾರನದೀ ಕ್ರಿಮಿಭೋಜನಾ ಇವುಗಳು ಹದಿನಾರು, ಹದಿನೇಳನೇ ನರಕಗಳು. ಘೋರವಾದ ವೈತರಣೀ ನದಿಯು ಹದಿನೆಂಟನೆಯದು.

೫೮. ಹೀಗೆಯೇ ಶೋಣಿತಪೂಯ ಭೋಜನ, ಹರಿತವಾದ ಅಲಗುಳ್ಳ ಚಕ್ರಕ, ಮತ್ತು ಸಂಶೋಷಣ ಎಂಬ ಹೆಸರುಳ್ಳ ಮೂರು ನರಕಗಳು, ಈ ಪ್ರಕಾರ ಇಪ್ಪತ್ತೊಂದು ನರಕಗಳನ್ನೂ ನಿನಗೆ ಹೇಳಿದಂತಾಯಿತು.

ಇಲ್ಲಿಗೆ ಶ್ರೀ ವಾಮನಪುರಾಣದ ಪುಷ್ಕರದ್ವೀಪವರ್ಣನವೆಂಬ
ಹನ್ನೊಂದನೆಯ ಅಧ್ಯಾಯುವು ಮುಗಿದಿದೆ.



## ಅಧ್ಯಾಯಾರ್ಥ ಸಂಗ್ರಹ

ಈ ಅಧ್ಯಾಯದಲ್ಲಿ ಸುಕೇಶಿಯ ವೃತ್ತಾಂತವೇನೆಂದು ನಾರದರ ಉಪಪ್ರಶ್ನೆಗೆ ಸಮಾಧಾನ ಹೇಳಲುಪಕ್ರಮಿಸಿ ರಾಕ್ಷಸರಾಜನಾದ ವಿದ್ಯುತ್ಕೇಶಿಯ ಮಗನು ಸುಕೇಶಿ ಎಂದೂ ಅವನ ತಪಸ್ಸಿನಿಂದ ಸಂತುಷ್ಟನಾದ ಶಂಕರನು ಅವನಿಗೆ ಗಗನಚಾರಿಯಾದ ನಗರವನ್ನೂ ಅಜೇಯತ್ವ, ಮತ್ತು ಅವಧ್ಯತ್ವವನ್ನೂ ವರವನ್ನಾಗಿ ಅನುಗ್ರಹಿಸಿದ ನೆಂದೂ ಹೇಳಲಾಯಿತು. ಅವನ ವೃತ್ತಾಂತವನ್ನು ಹೇಳುವ ಪ್ರಸಂಗದಲ್ಲಿ ಅವನು ಮಾಗಧಾರಣ್ಯಕ್ಕೆ ಹೋದ ಸಮಯದಲ್ಲಿ ಅಲ್ಲಿ ಆಶ್ರಮವಾಸಿಗಳಾಗಿದ್ದ ಋಷಿಗಳನ್ನು ಕುರಿತು ಧರ್ಮವಿಷಯಕವಾದ ಜಿಜ್ಞಾಸೆಯನ್ನು ನಡೆಸಿದನು. ಋಷಿಗಳೆಲ್ಲರೂ ವಿಮರ್ಶೆಮಾಡಿ ಧರ್ಮದ ಲಕ್ಷಣವನ್ನೂ ಆ ಧರ್ಮಕ್ಕೆ ಆಶ್ರಯವಾದ ಕ್ರಿಯಾ ಕಲಾಪಗಳನ್ನೂ ವಿವರಿಸಿದರು. ಅಧಿಕಾರಿಭೇದದಿಂದ ನಿಯಮಿತವಾಗಿರುವ ಕ್ರಿಯಾ ಕಲಾಪಗಳನ್ನು ಕೇಳಿ, ಸುಕೇಶಿಯು ಮಾನವ ಧರ್ಮವನ್ನು ವಿಶೇಷವಾಗಿ ಕೇಳಲುಪ ಕ್ರಮಿಸಿದನು. ಅದಕ್ಕೆ ಉತ್ತರವಾಗಿ ಋಷಿಗಳು ದೇಶಭೇದದಿಂದ ಭಿನ್ನವಾದ ಧರ್ಮವನ್ನೂ ಅದರ ಕ್ರಿಯೆಗಳನ್ನೂ ವಿವರಿಸಲುಪಕ್ರಮಿಸಿ ವಿಸ್ತಾರವಾದ ಬ್ರಹ್ಮಾಂಡದ ಸ್ವರೂಪಪರಿಮಾಣಗಳನ್ನೂ ಅದರಲ್ಲಡಗಿರುವ ಜಂಬೂದ್ವೀಪವೇ ಮೊದಲಾದ ಸಪ್ತ ದ್ವೀಪಗಳನ್ನೂ ವಿವರಿಸಿ ಘೋರವಾದ ಪುಷ್ಕರದ್ವೀಪವನ್ನೂ ವರ್ಣಿಸಿದರು. ಆ ಪುಷ್ಕರ ದ್ವೀಪವು ಘೋರವಾಗಲು ಕಾರಣವೇನೆಂಬ ಉಪಪ್ರಶ್ನೆಗೆ ಉತ್ತರವಾಗಿ ಅದರಲ್ಲಿರುವ ಇಪ್ಪತ್ತೊಂದು ನರಕಗಳನ್ನೂ ಉದಾಹರಿಸಿ ಉಪಪಾದಿಸಲಾಯಿತು.

॥ ಶ್ರೀಃ ॥

# ಶ್ರೀವಾಮನಪುರಾಣಂ

## ದ್ವಾದಶೋಽಧ್ಯಾಯಃ

ಸುಕೇಶಿರುವಾಚ

ಕರ್ಮಣಾ ನರಕಾನೇತಾನ್ಕೇನ ಗಚ್ಛಂತಿ ವೈ ಕಥಂ।
ಏತದ್ವದತ ವಿಪ್ರೇಂದ್ರಾಃ ಪರಂ ಕೌತೂಹಲಂ ಮಮ ॥ ೧ ॥

ಋಷಯ ಊಚುಃ

ಕರ್ಮಣಾ ಯೇನ ಯೇನೇಹ ಯಾಂತಿ ಶಾಲಕಟಂಕಟ।
ಸ್ವಕರ್ಮಫಲಭೋಗಾರ್ಥಂ ನರಕಾನ್ಮೇ ಶೃಣುಷ್ವ ತಾನ್ ॥ ೨ ॥

ವೇದ ದೇವ ದ್ವಿಜಾತೀನಾಂ ಯೈರ್ನಿಂದಾ ಸತತಂ ಕೃತಾ।
ಯೇ ಪುರಾಣೇತಿಹಾಸಾರ್ಥಾನ್ನಾಭಿನಂದಂತಿ ಪಾಪಿನಃ ॥ ೩ ॥

---

## ಹನ್ನೆರಡನೆಯ ಅಧ್ಯಾಯವು

೧-೨. ಪುನಃ ಸುಕೇಶಿಯು ಎಲೈ ವಿಪ್ರಶ್ರೇಷ್ಠರೇ, ಯಾವ ಯಾವ ಕರ್ಮಗಳಿಂದ ಇಂತಹ ನರಕವನ್ನು ಹೊಂದುತ್ತಾರೆ ಎಂಬುದನ್ನು ಕೇಳಲು ನನಗೆ ಕುತೂಹಲವುಂಟಾಗುತ್ತಿದೆ. ದಯವಿಟ್ಟು ಹೇಳಬೇಕು ಎಂದು ಕೇಳಲಾಗಿ ಋಷಿಗಳು ಯಾವ ಯಾವ ಕರ್ಮ ಫಲದ ಭೋಗಕ್ಕಾಗಿ ಈ ನರಕಗಳೇರ್ಪಟ್ಟಿವೆ ಎಂಬುದನ್ನು ಹೇಳುತ್ತೇವೆ ಎಂದು ಉಪಕ್ರಮಿಸುತ್ತಾರೆ. (ಶಾಲಕಟಂಕಟ ಎಂದು ದೈತರಾಜನಾದ ಸುಕೇಶಿಯ ಅಡ್ಡ ಹೆಸರು.)

೩-೪. ನಾಸ್ತಿಕ್ಯವನ್ನು ಹೊಂದಿ ದೇವತೆಗಳನ್ನೂ, ಭಗವದಾಜ್ಞಾರೂಪವಾದ ವೇದಗಳನ್ನೂ, ಬ್ರಾಹ್ಮಣರನ್ನೂ ಯಾರು ಯಾವಾಗಲೂ ನಿಂದಿಸುತ್ತಾರೆಯೋ ಮತ್ತು

**ಗುರುನಿಂದಾಕರಾ ಯೇ ಚ ಮಖವಿಘ್ನಕರಾಶ್ಚ ಯೇ।**
**ದಾತುರ್ನಿವಾರಕಾ ಯೇ ಚ ತೇಷು ತೇ ನಿಪತಂತಿ ಹಿ ॥ ೪ ॥**

**ಸುಹೃದಂ ಪತಿಸೋದರ್ಯಸ್ವಾಮಿಭೃತ್ಯಪಿತಾ ಸುತೈಃ।**
**ಯಾಜ್ಯಾಧ್ಯಾಪಕಯೋಶ್ಚೈವ ಕೃತೋ ಭೇದೋಧಮೈರ್ಮಿಥಃ ॥ ೫ ॥**

**ಕನ್ಯಾಮೇಕಸ್ಯ ದತ್ತ್ವಾ ಚ ದದತ್ಯನ್ಯಸ್ಯ ಯೇಽಧಮಾಃ।**
**ಕರಪತ್ರೇಣ ಪಾಟ್ಯಂತೇ ತೇ ದ್ವಿಧಾ ಯಮಕಿಂಕರೈಃ ॥ ೬ ॥**

**ಪರೋಪತಾಪಜನಕಾಶ್ಚಂದನೋ ಶೀರಹಾರಿಣಃ।**
**ಬಾಲವ್ಯಜನಹರ್ತಾರಃ ಕರಂಭ ಸಿಕತಾಶ್ರಿತಾಃ ॥ ೭ ॥**

**ನಿಮಂತ್ರಿತೋಽನ್ಯತೋ ಭುಂಕ್ತೇ ಶ್ರಾದ್ಧೇ ದೈವೇಥ ಪೈತೃಕೇ।**
**ಸ ದ್ವಿಧಾಕೃಷ್ಯತೇ ಮರ್ತ್ಯಸ್ತೀಕ್ಷ್ಣತುಂಡೈಃ ಖಗೋತ್ತಮೈಃ ॥ ೮ ॥**

---

ತಮ್ಮ ದುಷ್ಕೃತದೋಷದಿಂದ ಪುರಾಣೇತಿಹಾಸಗಳನ್ನು ಯಾರು ನಂಬುವುದಿಲ್ಲವೋ, ಯಾರು ಗುರುನಿಂದಾಪರರೋ, ಯಾರು ಯಜ್ಞವಿಘ್ನಕಾರಿಗಳೋ, ಯಾರು ದಾನ ಮಾಡುವವರನ್ನು ತಡೆಯುತ್ತಾರೆಯೋ ಅಂಥವರು ಈ ನರಕಗಳಲ್ಲಿ ಬೀಳುತ್ತಾರೆ.

೫-೭. ಸ್ನೇಹಿತರು, ದಂಪತಿಗಳು, ಅಣ್ಣತಮ್ಮಂದಿರು, ಸ್ವಾಮಿಭೃತ್ಯರು, ತಂದೆ ಮಕ್ಕಳು, ಯಜಮಾನಾಧ್ಯಾಪಕರು ಇವರುಗಳಲ್ಲಿ ಪರಸ್ಪರ ಭೇದವನ್ನು ಯಾರು ಉಂಟುಮಾಡುತ್ತಾರೆಯೋ, ಮತ್ತು ಮೊದಲು ಒಬ್ಬನಿಗೆ ವಾಗ್ದಾನರೂಪದಿಂದ ಕನ್ಯೆಯನ್ನು ಕೊಟ್ಟು ಅನಂತರ ಮತ್ತೊಬ್ಬನಿಗೆ ಯಾರು ವಿವಾಹ ಮಾಡಿಕೊಡುತ್ತಾರೆಯೋ, ಅಂತಹ ಅಧಮರು ಯಮಕಿಂಕರರಿಂದ ತಲೆ ಎರಡು ಭಾಗವಾಗುವಂತೆ ಸೀಳಲ್ಪಡುತ್ತಾರೆ. ಮತ್ತು ವ್ಯರ್ಥವಾಗಿ ಮತ್ತೊಬ್ಬರನ್ನು ಸಂತಾಪಪಡಿಸುವವರೂ, ಗಂಧ ಮತ್ತು ಲಾಮಂಚ ಇವೆರಡನ್ನು ಚೌರ್ಯದಿಂದ ಅಪಹರಿಸುವವರೂ ಮತ್ತು ಹುಡುಗರನ್ನೂ, ಬೀಸಣಿಗೆಗಳನ್ನೂ, ಕಳುವು ಮಾಡುವವರೂ ಕರಭಂಸಿಕತಾ ಎಂಬ ನರಕಕ್ಕೆ ಸೇರುತ್ತಾರೆ.

೮-೧೧. ಶ್ರದ್ಧಾಪೂರ್ವಕವಾಗಿ ಆಚರಿಸಲ್ಪಡುವ ದೇವಕಾರ್ಯದಲ್ಲಿಯೂ, ಪಿತೃಕಾರ್ಯದಲ್ಲಿಯೂ, ಒಪ್ಪಿಗೆಯಿಂದ ಆಹ್ವಾನಿಸಲ್ಪಟ್ಟೂ ಅದನ್ನು ಬಿಟ್ಟು ಮತ್ತೊಂದು ಕಡೆಗೆ ಯಾರು ಭೋಜನಕ್ಕೆ ಹೋಗುತ್ತಾರೆಯೋ, ಅಂತಹ ಮನುಷ್ಯರು

ಮರ್ಮಾಣಿ ಯಸ್ತು ಸಾಧೂನಾಂ ತುದನ್ವಾಗ್ಭಿರ್ನಿಕೃಂತತಿ ।
ತಸ್ಯೋಽಪರಿ ತುದಂತಸ್ತು ತುಂಡೈಸ್ತಿಷ್ಠಂತಿ ಪತ್ರಿಣಃ ॥ ೯ ॥

ಯಃ ಕರೋತಿ ಚ ಪೈಶುನ್ಯಂ ಸಾಧೂನಾಮನ್ಯಥಾ ಮತಿಃ ।
ವಜ್ರತುಂಡನಿಭಾ ಜಿಹ್ವಾಮಾಕರ್ಷಂತೇಽಸ್ಯ ವಾಯಸಾಃ ॥ ೧೦ ॥

ಪಿತೃ ಮಾತೃ ಗುರೂಣಾಂ ಚ ಯೇಽವಜ್ಞಾಂ ಚಕ್ರುರುದ್ಧತಾಃ ।
ಮಜ್ಜಂತಿ ಪೂಯವಿಣ್ಮೂತ್ರೇ ತ್ವಕ್ಪ್ರತಿಷ್ಠೇಹ್ಯಧೋಮುಖಾಃ ॥ ೧೧ ॥

ದೇವತಾತಿಥಿಭೃತ್ಯೇಷು ಭೂತೇಷ್ವಭ್ಯಾಗತೇಷು ಚ ।
ಅಭುಕ್ತವತ್ಸು ಯೇಽಶ್ನಂತಿ ಬಾಲಪಿತ್ರಗ್ನಿಮಾತೃಷು ॥ ೧೨ ॥

ದುಷ್ಟಾ ಸೃಕ್ಪೂಯನಿರ್ಯಾಸಂ ಭುಂಜತೇ ತ್ವಧಮಾ ಇಮೇ ।
ಸೂಚೀಮುಖಾಶ್ಚ ಜಾಯಂತೇ ಕ್ಷುಧಾರ್ತಾ ಗಿರಿವಿಗ್ರಹಾಃ ॥ ೧೩ ॥

---

ನಿಶಿತವಾದ ಕೊಕ್ಕುಗಳುಳ್ಳ ಪಕ್ಷಿಗಳಿಂದ ಸೀಳಲ್ಪಡುತ್ತಾರೆ. ಸಾಧುಜನಗಳ ಹೃದಯುವನ್ನು ಯಾವನೊಬ್ಬನು ಪರುಷವಾದ ಮಾತಿನಿಂದ ವ್ಯಥೆ ಪಡಿಸುತ್ತಾನೋ, ಅಂತಹವನ ತಲೆಯ ಮೇಲೆ ಹರಿತವಾದ ಕೊಕ್ಕುಗಳಿಂದ ಕುಟುಕುತ್ತಾ ಪಕ್ಷಿಗಳು ಕೂರುತ್ತವೆ. ಯಾವನು ತಾನು ಅನ್ಯಥಾಬುದ್ಧಿಯಿಂದ ಭ್ರಾಂತನಾಗಿ ಸಾಧುಗಳ ತತ್ವಾಭಿಪ್ರಾಯದಲ್ಲಿ ಪೈಶುನ್ಯವನ್ನು (ಕಿರುಕುಳ) ಪ್ರಕಾಶಪಡಿಸುತ್ತಾನೋ ಅಂತಹವನ ನಾಲಗೆಯನ್ನು ವಜ್ರದಂತೆ ಕಠಿನವಾದ ಕೊಕ್ಕುಳ್ಳ ಕಾಗೆಗಳು ಹಿಡಿದು ಎಳೆಯುತ್ತವೆ.

೧೧-೧೩. ತಂದೆ, ತಾಯಿ, ಮತ್ತು ಇತರ ಗುರುಜನಗಳ ವಿಷಯದಲ್ಲಿ ಉದ್ಧತರಾಗಿ ಯಾರು ಅನಾದರವನ್ನು ತೋರಿಸುತ್ತಾರೋ, ಅವರು ಕೀವು, ಮಲ, ಮೂತ್ರಗಳುಳ್ಳ ಹಳ್ಳದಲ್ಲಿ ಚರ್ಮವೆಲ್ಲ ಮುಳುಗುವ ಪರ್ಯಂತವೂ ತಲೆಕೆಳಗಾಗಿ ಮುಳುಗುತ್ತಾರೆ, ದೇವತೆಗಳು, ಅತಿಥಿಗಳು, ಆಶ್ರಿತರು, ಇತರ ಪ್ರಾಣಿಗಳು, ಅಭ್ಯಾಗತರು ಮಾತಾಪಿತೃಗಳು, ಸಣ್ಣ ಹುಡುಗರು, ಅಗ್ನಿ ಇವರುಗಳಿಗೆ ಉಪಯೋಗಿಸಲ್ಪಡುವದಕ್ಕೆ ಮುಂಚಿತವಾಗಿ ಯಾರು ಊಟಮಾಡುತ್ತಾರೆಯೋ, ಅಂತಹ ಜನರು ಬಹಳ ನಿಂದಿತರಾಗಿ ರಕ್ತ ಕೀವು ಇವುಗಳ ಧಾರೆಯನ್ನು ಇಲ್ಲಿ ಭುಂಜಿಸುತ್ತಾರೆ. ಮತ್ತು ದೊಡ್ಡ ದೇಹವುಳ್ಳವರಾಗಿ ಹಸಿವಿನಿಂದ ದುಃಖಪಟ್ಟು ಯಮಭಟರಿಂದ ಬಾಯಿನಲ್ಲಿ ಇರಿಯಲ್ಪಟ್ಟ ಸೂಜಿಗಳಿಂದ ಆರ್ತರಾಗುತ್ತಾರೆ.

ಏಕಪಂಕ್ತ್ಯುಪವಿಷ್ಟಾನಾಂ ವಿಷಮಂ ಭೋಜಯಂತಿ ಯೇ ।
ವಿಡ್ಭೋಜನಂ ರಾಕ್ಷಸೇಂದ್ರ ನರಕಂ ತೇ ವ್ರಜಂತಿ ಚ ॥ ೧೪ ॥

ಏಕ ಸಾರ್ಥಪ್ರಯಾತಾಶ್ಚ ಪಶ್ಯಂತಶ್ಚಾರ್ಥಿನಂ ನರಾಃ ।
ಅಸಂವಿಭಜ್ಯ ಭುಜಂತಿ ತೇ ಯಾಂತಿ ಶ್ಲೇಷ್ಮಭೋಜನಂ ॥ ೧೫ ॥

ಗೋಬ್ರಾಹ್ಮಣಾಗ್ನಯಃ ಸ್ಪೃಷ್ಟಾಯೈರುಚ್ಛಿಷ್ಟೈಶ್ಚ ಕಾಮತಃ ।
ಕ್ಷಿಪ್ಯಂತೇ ಹಿ ಕರಾಸ್ತೇಷಾಂ ತಪ್ತಕುಂಭೇ ಸುದಾರಣೇ ॥ ೧೬ ॥

ಸೂರ್ಯೇಂದುತಾರಕಾ ದೃಷ್ಟಾಯೈರುಚ್ಛಿಷ್ಟೈಶ್ಚ ಕಾಮತಃ ।
ತೇಷಾಂ ನೇತ್ರಗತೋ ವಹ್ನಿರ್ಧಮ್ಯತೇ ಯಮಕಿಂಕರೈಃ ॥ ೧೭ ॥

ಮಿತ್ರಜಾಯಾಥ ಜನನೀ ಜ್ಯೇಷ್ಠೋ ಭ್ರಾತಾ ಪಿತಾ ಸ್ವಸಾ ।
ಜಾಮಯೋ ಗುರವೋ ವೃದ್ಧಾ ಯೈಸ್ಸಂಸ್ಪೃಷ್ಟಾಃ ಪದಾ ನೃಭಿಃ ॥ ೧೮ ॥

---

೧೪-೧೭. ಒಂದೇ ಪಂಕ್ತಿಯಲ್ಲಿ ಕುಳಿತಿರುವವರಿಗೆ ಯಾರು ಭೇದದಿಂದ ವಿಷಮವಾಗಿ ಭೋಜನ ಮಾಡಿಸುತ್ತಾರೆಯೋ, ಅವರು ಮಲಭೋಜನವುಳ್ಳ ನರಕವನ್ನು ಹೊಂದುತ್ತಾರೆ. ಮತ್ತು ಒಂದೇ ಗುಂಪಿನಲ್ಲಿ ಪ್ರಯಾಣಮಾಡಿದವರು ತಮ್ಮ ಗುಂಪಿಗೆ ಸೇರಿರುವ ಅರ್ಥಿಯಾದವನನ್ನು ವಂಚಿಸಿ ಅವನಿಗೆ ಕೊಡದೆ ಯಾರು ತಾವೇ ಭಕ್ಷಿಸಿ ತೃಪ್ತರಾಗುತ್ತಾರೆಯೋ, ಅವರು ಶ್ಲೇಷ್ಮ ಭೋಜನವುಳ್ಳ, ನರಕಕ್ಕೆ ಹೋಗುತ್ತಾರೆ. ಯಾರು ಅಶುಚಿಗಳಾಗಿದ್ದು ಗೋವು, ಬ್ರಾಹ್ಮಣ, ಮತ್ತು ಅಗ್ನಿ ಇವುಗಳನ್ನು ಮುಟ್ಟುತ್ತಾರೆಯೋ, (ಇಚ್ಛೆಯಿಂದ) ಅವರ ನೇತ್ರಾಗ್ನಿಯನ್ನು ಯಮಕಿಂಕರರು ಊದಿ ವೃದ್ಧಿಪಡಿಸುತ್ತಾರೆ. ಆ ಅಗ್ನಿಯಿಂದ ಅವನ ಕಣ್ಣೇ ಸುಡುವಂತೆ ಮಾಡುತ್ತಾರೆ.

೧೮-೨೦. ಮಿತ್ರನ ಹೆಂಡತಿ, ಮತ್ತು ತಾಯಿ, ದೊಡ್ಡಅಣ್ಣ, ತಂದೆ, ತಂಗಿ, ಮನೆಯ ಹೆಂಗಸರು, ವೃದ್ಧರಾದ ಗುರುಜನಗಳು, ಇವರನ್ನು ಬುದ್ಧಿ ಪೂರ್ವಕವಾಗಿ ಕಾಲಿನಿಂದ ಯಾರು ಒದೆಯುತ್ತಾರೋ ಅವರು ಬೆಂಕಿಯಲ್ಲಿ ಕಾಯಿಸಿದ ಲೋಹದ ಸರಪಣಿಯಿಂದ ಕಟ್ಟಲ್ಪಟ್ಟ ಪಾದವುಳ್ಳವರಾಗಿ ಮಂಡಿಯವರಿಗೂ ಬೆಂಕಿಯಿಂದ ಹತ್ತಿಸ

ಬದ್ಧಾಂಪ್ಸ್ರಿಯಸ್ತೇ ನಿಗಡೈರ್ಲೋಹೈರ್ವಹ್ನಿಪ್ರತಾಪಿತೈಃ ।
ಕ್ಷಿಪ್ಯಂತೇ ರೌರವೇ ಘೋರೇ ಹ್ಯಾಜಾನುಪರಿದಾಹಿನಃ ॥ ೧೯ ॥

ಪಾಯಸಂ ಕೃಸರಂಮಾಂಸಂ ವೃಥಾ ಭುಕ್ತಾನಿ ಯೈರ್ನರೈಃ ।
ತೇಷಾಮಯೋಗುಡಾಸ್ತಪ್ತಾಃ ಕ್ಷಿಪ್ಯಂತೇ ವದನೇಽದ್ಭುತಾಃ ॥ ೨೦ ॥

ಗುರು ದೇವ ದ್ವಿಜಾತೀನಾಂ ವೇದಾನಾಂ ಚ ನರಾಧಮೈಃ ।
ನಿಂದಾನಿಶಂ ಶ್ರುತಾ ಯೈಸ್ತು ಪಾಪಾನಾಮಭಿಕುರ್ವತಾಂ ॥ ೨೧ ॥

ತೇಷಾಂ ಲೋಹಮಯಾಃ ಕೀಲಾ ವಹ್ನಿವರ್ಣಾಃ ಪುನಃ ಪುನಃ ।
ಶ್ರವಣೇಷು ನಿಖನ್ಯಂತೇ ಧರ್ಮರಾಜಸ್ಯ ಕಿಂಕರೈಃ ॥ ೨೨ ॥

ಪ್ರಪಾ ದೇವಕುಲಾರಾಮ ವಿಪ್ರವೇಶ್ಮ ಸಭಾ ಮಠಾನ್ ।
ವಾಪೀ ಕೂಪತಡಾಗಾಂಶ್ಚ ಭಂಕ್ತ್ವಾ ವಿಧ್ವಂಸಯಂತಿ ಯೇ ॥ ೨೩ ॥

ತೇಷಾಂ ವಿಲಪತಾಂ ಚರ್ಮ ದೇಹತಃ ಕ್ರಿಯತೇ ಪೃಥಕ್ ।
ಕರ್ತರೀಭಿಃ ಸುತೀಕ್ಷ್ಣಾಭಿಃ ಸುರೌದ್ರೈರ್ಯಮಕಿಂಕರೈಃ ॥ ೨೪ ॥

---

ಲ್ಪಟ್ಟು ರೌರವ ನರಕದಲ್ಲಿ ಎಸೆಯಲ್ಪಡುತ್ತಾರೆ. ಮತ್ತು ಪಾಯಸ, ಕೃಸರ, (ಚಿಗಳಿ) ಮಾಂಸ ಇವುಗಳನ್ನು ಕಾರಣವಿಲ್ಲದೆ ಯಾರು ಭೋಜನಮಾಡುತ್ತಾರೋ, ಅವರ ಬಾಯಿನಲ್ಲಿ ಕಾಯಿಸಿದ ಕಬ್ಬಿಣದ ಗುಂಡುಗಳು ಹಾಕಲ್ಪಡುತ್ತವೆ. [ಪಾಯಸವೇ ಮೊದಲಾದ ಉತ್ಕೃಷ್ಟ ಭಕ್ಷ್ಯಭೋಜ್ಯಗಳನ್ನು ತನಗೋಸ್ಕರ ಮಾಡಿ ಭುಂಜಿಸ ಬಾರದೆಂದು ಶಾಸ್ತ್ರವಿದೆ. ಉತ್ಸವ ದಿವಸದಲ್ಲಿಯೂ ಅತಿಥಿಗಳಿಗಾಗಿಯೂ ಮಾಡ ಬಹುದೆಂದು ತಾತ್ಪರ್ಯ. "ನಾತ್ಮಾರ್ಥಮಭಿರೂಪಮನ್ನಂಪಾಚಯೇತ್" ಎಂದು ಆಪಸ್ತಂಬರೂ ಹೇಳಿರುವರು.]

೨೦-೨೪. ಗುರು, ದೇವತೆ, ಬ್ರಾಹ್ಮಣ ಇವರುಗಳ ನಿಂದೆಯನ್ನು ಯಾರಾ ಪರೂ ಮಾಡುತ್ತಿದ್ದರೆ, ಆ ನಿಂದೆಯನ್ನು ಪ್ರೀತಿಯಿಂದ ಕೇಳುವ ಪಾಪಿಗಳಾದ ನರಾ ಧಮರ ಕಿವಿಯಲ್ಲಿ ಬೆಂಕಿಯಿಂದ ಕೆಂಪಗೆ ಕಾಯಿಸಿದ ಲೋಹದ ಸಲಾಕಿಗಳನ್ನು ಯಮಭಟರು ಬಾರಿಬಾರಿಗೂ ಇಟ್ಟು ಹಿಂಸಿಸುತ್ತಾರೆ. ಅರವಟ್ಟಿಗೆ, ದೇವಸ್ಥಾನ, ಉದ್ಯಾನ, ಬ್ರಾಹ್ಮಣನಮನೆ, ಸಭೆ, ಮಠಗಳು, ಕೊಳಗಳು, ಭಾವಿಗಳು, ಕೆರೆಗಳು, ಇವುಗಳನ್ನು ಒಡೆದು, ಯಾರು ನಾಶಮಾಡುತ್ತಾರೋ, ಅಂತಹ ಪಾಪಿಗಳು, ಪ್ರಲಾಪ ಮಾಡುತ್ತಿದ್ದರೂ ಬಿಡದೆ ಅವರ ದೇಹದ ಚರ್ಮವನ್ನು ಕತ್ತರಿಯಿಂದ ಕತ್ತರಿಸಿ ಸುಲಿದು ಹಾಕುತ್ತಾರೆ.

**ಗೋಬ್ರಾಹ್ಮಣಾರ್ಕಮಗ್ನಿಂ ಚ ಯೇ ಹಿ ಮೇಹಂತಿ ಮಾನವಾಃ ।**
**ತೇಷಾಂ ಗುದೇಭ್ಯಶ್ಚಾಂತ್ರಾಣಿ ವಿನಿಷ್ಕೃಂತಂತಿ ವಾಯಸಾಃ ॥ ೨೫ ॥**

**ಸ್ವಪೋಷಣಪರೋ ಯಸ್ತು ಪರಿತ್ಯಜತಿ ಮಾನವಃ ।**
**ಪುತ್ರ ಭೃತ್ಯ ಕಲತ್ರಾದಿ ಬಂಧುವರ್ಗಮಕಿಂಚನಂ ।**
**ದುರ್ಭಿಕ್ಷೇ ಸಂಭ್ರಮೇ ಚಾಪಿ ಸಶ್ವಯೋನೌ ನಿಪಾತ್ಯತೆ ॥ ೨೬ ॥**

**ಶರಣಾಗತಂ ಯೇ ತ್ಯಜಂತಿ ಯೇ ಚ ಬಂಧನಪಾಲಕಾಃ ।**
**ಪತಂತಿ ಯಂತ್ರಪೀಠೇ ತೇ ತಾಡ್ಯಮಾನಾಸ್ತು ಕಿಂಕರೈಃ ॥ ೨೭ ॥**

**ಕ್ಲೇಶಯಂತಿ ಹಿ ವಿಪ್ರಾದೀನ್ಯಾಜ್ಯಕರ್ಮಸು ಪಾಪಿನಃ ।**
**ತೇಪೇಷ್ಯಂತೇ ಶಿಲಾಯಾಂ ವೈ ಶೋಷ್ಯಂತೇಽಪಿ ಚ ಶೋಷಕೈಃ ॥ ೨೮ ॥**

---

೨೫-೨೬. ಗೋವು, ಬ್ರಾಹ್ಮಣ, ಸೂರ್ಯ, ಅಗ್ನಿ ಇವುಗಳಿಗೆ ಅಭಿಮುಖರಾಗಿ ಯಾರು ಮಲಮೂತ್ರವಿಸರ್ಜನೆಯನ್ನು ಮಾಡುತ್ತಾರೋ ಅವರ ಗುದಭಾಗದಿಂದ ಕಾಗೆಗಳು ಕರುಳನ್ನು ಹೊರಕ್ಕೆ ಎಳೆಯುತ್ತವೆ. ಯಾವ ಮನುಷ್ಯನು ತನ್ನ ಉದರ ಭರಣದಲ್ಲಿ ಆಸಕ್ತನಾಗಿ ಪುತ್ರ, ಸೇವಕ, ಹೆಂಡತಿ ಮತ್ತು ನಿರ್ಗತಿಯಾಗಿರುವ ಬಂಧು ವರ್ಗ ಇವರುಗಳನ್ನು ದುರ್ಭಿಕ್ಷಕಾಲದಲ್ಲಾಗಲಿ ಶತ್ರುಗಳಿಂದ ಉಂಟಾದ ಉಪಪ್ಲವ ಕಾಲದಲ್ಲಾಗಲಿ ಪರಿತ್ಯಾಗಮಾಡುತ್ತಾನೆಯೋ ಅಂತಹ ಪಾಪಿಯು ನಾಯಿಯ ಜನ್ಮದಲ್ಲಿ ಹಾಕಲ್ಪಡುತ್ತಾನೆ.

೨೭-೨೯. ಯಾರು ಶರಣಾಗತರನ್ನು ಪರಿತ್ಯಾಗ ಮಾಡುತ್ತಾರೆಯೋ ಯಾರು ಕಾರಾಗೃಹ ಮೊದಲಾದ ಬಂಧನ ಸ್ಥಾನಗಳಲ್ಲಿ ರಕ್ಷಕರಾಗಿರುತ್ತಾರೆಯೋ ಅವರನ್ನು ಯಮಕಿಂಕರರು ಯಂತ್ರಪೀಠದಲ್ಲಿ ಕೂರಿಸಿ ಪ್ರಹರಿಸುತ್ತಾರೆ. ಯಾರು ಯಜ್ಞ ಕರ್ಮದಲ್ಲಿ ಕೆಲಸ ಮಾಡುವ ಬ್ರಾಹ್ಮಣರೇ ಮೊದಲಾದವರನ್ನು ವ್ಯರ್ಥವಾಗಿ ಕ್ಲೇಶ ಪಡಿಸುತ್ತಾರೆಯೋ ಅಂತಹ ಪಾಪಿಗಳನ್ನು ಯಮಕಿಂಕರರು ಅಗ್ನಿಯಿಂದ ಶೋಷಣ ಮಾಡಿ ಕಲ್ಲಿನಮೇಲೆ ಅರೆಯುತ್ತಾರೆ. ಯಾರು ನ್ಯಾಸರೂಪವಾಗಿ (ಒತ್ತೆ ಇಡುವದು) ಇಡಲ್ಪಟ್ಟ ಪದಾರ್ಥವನ್ನು ಹಿಂತಿರುಗಿಸಿ ಕೊಡದೆ ಅಪಹರಿಸುತ್ತಾರೆಯೋ ಅಂತಹವ

ನ್ಯಾಸಾಪಹಾರಿಣಃ ಪಾಪಾಃ ಬಧ್ಯಂತೇ ನಿಗಡೈರಪಿ।
ಕ್ಷುತ್ಕ್ಷಾಮಾಃ ಶುಷ್ಕತಾಲ್ವೋಷ್ಠಾಃ ಪಾತ್ಯಂತೇ ವೃಶ್ಚಿಕಾಶನೇ ॥ ೨೯ ॥

ಪೂರ್ವಾನ್ಯೈಥುನಿನಃ ಪಾಪಾಃ ಪರದಾರರತಾಶ್ಚ ಯೇ।
ತೇ ವಹ್ನಿತಪ್ತಾಂ ಕೂಟಾಗ್ರಾಮಾಲಿಂಗಂತೇ ಚ ಶಾಲ್ಮಲೀಂ ॥ ೩೦ ॥

ಉಪಾಧ್ಯಾಯಮಧಃ ಕೃತ್ಯ ಯೈರಧೀತಂ ದ್ವಿಜಾಧಮೈಃ।
ತೇಷಾಮಧ್ಯಾಪಕೋ ಯಶ್ಚ ಸ ಶಿಲಾಂ ಶಿರಸಾ ವಹೇತ್ ॥ ೩೧ ॥

ಮೂತ್ರಶ್ಲೇಷ್ಮಪುರೀಷಾಣಿ ಯೈರುತ್ಸೃಷ್ಟಾನಿ ವಾರಿಣಿ।
ತೇ ಪಾತ್ಯಂತೇ ಚ ವಿಣ್ಮೂತ್ರೇ ದುರ್ಗಂಧೇ ಪೂಯಪೂರಿತೇ ॥ ೩೨ ॥

ಶ್ರಾದ್ಧೇ*ತಿಥೇಯಮನ್ಯೋನ್ಯಂ ಯೈರ್ಭುಕ್ತಂ ಭುವಿ ಮಾನವೈಃ।
ಪರಸ್ಪರಂ ಭಕ್ಷಯಂತಿ ತೇ ಸ್ವಮಾಂಸಾನಿ ಬಾಲಿಶಾಃ ॥ ೩೩ ॥

---

ರನ್ನು ಕಾಲಿಗೆ ಸಂಕೋಲೆಯನ್ನು ಹಾಕಿ ತೊಂದರೆ ಪಡಿಸುತ್ತಾರೆ ಮತ್ತು ಹಸಿವಿನಿಂದ ಬಳಲಿಸಿ ತುಟಿ, ಕಾಲು ಇವುಗಳನ್ನು ಒಣಗಿಸಿ ವೃಶ್ಚಿಕ (ಚೇಳು) ಭೋಜನವಾದ ನರಕದಲ್ಲಿ ಹಾಕುತ್ತಾರೆ.

೩೦-೩೨. ಯಾರು ಪುಷ್ಪವಯಾಗುವ ಮೊದಲೇ ಸ್ತ್ರೀಗಮನವನ್ನು ಮಾಡುತ್ತಾರೆಯೋ, ಯಾರು ಪರಸ್ತ್ರೀಯಲ್ಲಿ ಆಸಕ್ತರಾಗಿರುವರೋ ಅಂತಹವರು ಬೆಂಕಿಯಿಂದ ಸುಟ್ಟು ತಪ್ತವಾಗಿರುವ ಉದ್ದವಾದ ಅಗ್ರಭಾಗವುಳ್ಳ ಬೂರಗದಮರವನ್ನು ಆಲಂಗಿಸುತ್ತಾರೆ. ಉಪಾಧ್ಯಾಯನನ್ನು ಧಿಕ್ಕರಿಸಿ ಸೋಲಿಸಿ ಯಾರು ಅಧ್ಯಯನವನ್ನು ಮಾಡುತ್ತಾರೆಯೋ ಅವರು ಅಧ್ಯಾಪಕನೊಡನೆ ಕಲ್ಲನ್ನು ತಲೆಯ ಮೇಲೆ ಹೊರುತ್ತಾರೆ. ಯಾರು ಸ್ನಾನಕಾಲದಲ್ಲಿಯಾಗಲಿ, ಬೇರೆಕಾಲದಲ್ಲಿಯಾಗಲಿ ಜಲದಲ್ಲಿ ಮೂತ್ರ, ಶ್ಲೇಷ್ಮ, ಮಲ ಇವುಗಳನ್ನು ವಿಸರ್ಜಿಸುತ್ತಾರೆಯೋ ಅವರು ಕೀವಿನಿಂದ ತುಂಬಲ್ಪಟ್ಟ ದುರ್ಗಂಧವಾದ ಮಲಮೂತ್ರ ಗರ್ತದಲ್ಲಿ ಹಾಕಲ್ಪಡುತ್ತಾರೆ.

೩೩-೩೫. ಪರಸ್ಪರ ಸತ್ಕಾರ ಬುದ್ಧಿಯಿಂದ ಅಥವಾ ಪರಸ್ಪರ ಬದಲಾಬದಲಿಯಿಂದ ಯಾರು ಶ್ರಾದ್ಧ ಭೋಜನ ಮಾಡುತ್ತಾರೆಯೋ ಅಂತಹ ದುರ್ಬುದ್ಧಿಗಳು ತಮ್ಮ ಮಾಂಸವನ್ನು ಪರಸ್ಪರ ಭುಂಜಿಸುತ್ತಾರೆ. ಮತ್ತು ಸ್ವಶಾಖೆಯಾದ ವೇದವನ್ನೂ,

---

* ಇಲ್ಲಿ ಅಕಾರವು ಆರ್ಷವಾಗಿಲುಪ್ತವಾಗಿದೆ. "ಅತಿಥೇಯವೆಂದು ಪದ"

ವೇದಂ ವಹ್ನಿ ಗುರು ತ್ಯಾಗೀ ಮಾತಾ ಪಿತ್ರೋಸ್ತಥೈವ ಚ ।
ಗಿರಿ ಶೃಂಗಾದಧಃಪಾತಂ ಪಾತ್ಯಂತೇ ಯಮಕಿಂಕರೈಃ ॥ ೩೪ ॥

ಪುನರ್ಭೂಪತಯೋ ಯೇ ಚ ಕನ್ಯಾ ವಿಧ್ವಂಸಕಾಶ್ಚ ಯೇ ।
ತದ್ಗರ್ಭಸ್ರಾವಕೃದ್ಯಶ್ಚ ಕೃಮಿರ್ಭಕ್ಷೇತ್ಪಿಪೀಲಿಕಾಃ ॥ ೩೫ ॥

ಚಂಡಾಲಾದಂತ್ಯಜಾದ್ವಾಪಿ ಪ್ರತಿಗೃಹ್ಣಾತಿ ದಕ್ಷಿಣಾಂ ।
ಯಾಜಕೋ ಯಜಮಾನಶ್ಚ ಸ ಸ್ಯಾದಶ್ಮನಿ ಕೀಟಕಃ ॥ ೩೬ ॥

ಪೃಷ್ಠಮಾಂಸಾಶಿನೋ ಮೂಢಾಸ್ತಥೈವೋಕ್ತ್ರೋಪಜೀವಿನಃ ।
ಕ್ಷಿಪ್ಯಂತೆ ವೃಕ ಭಕ್ಷೇ ತೇ ನರಕೇ ರಜನೀಚರ ॥ ೩೭ ॥

---

ಸಂಸ್ಕಾರ ಪೂರ್ವಕವಾಗಿ ತನಗೆ ಅನುಬಂಧಿಸಿರುವ ಅಗ್ನಿಯನ್ನೂ, ಗುರುವನ್ನೂ, ಮಾತಾಪಿತೃಗಳನ್ನೂ ಯಾರು ತ್ಯಾಗ ಮಾಡುತ್ತಾರೆಯೋ ಅವರು ಯಮಕಿಂಕರರಿಂದ ಪರ್ವತದ ಶಿಖರದ ಮೇಲಿನಿಂದ ಕೆಳಗೆ ಬೀಳುವಂತೆ ತಳ್ಳಲ್ಪಡುತ್ತಾರೆ. ಪುನರ್ಭೂಪತಿಗಳು ಯಾರೋ (ಪುನರ್ಭೂ ಎಂದರೆ ಎರಡಾವರ್ತಿ ಮದುವೆಯಾದ ಹೆಂಗಸು ಒಂದಾವರ್ತಿ ಮದುವೆಯಾದ ಹೆಂಗಸನ್ನು ಮದುವೆ ಮಾಡಿಕೊಂಡಿರುವವನೆಂದರ್ಥ.) ಯಾರು ಕನ್ಯೆಕೆಗೆ ಕಳಂಕವನ್ನುಂಟುಮಾಡಿ ಅವಳ ಬಾಳಿಗೆ ತೊಂದರೆ ತರುತ್ತಾರೆಯೋ, ಯಾರು ಗರ್ಭಿಣಿಯ ಗರ್ಭಸ್ರಾವಕ್ಕೆ ಕಾರಣರಾಗುತ್ತಾರೆಯೋ ಅವರು ಕ್ರಿಮಿ ಮತ್ತು ಇರುವೆ ಇವುಗಳ ಭಕ್ಷಕರಾಗುವರು.

೩೬-೩೮. ಚಂಡಾಲನೆಂದರೆ ಬ್ರಾಹ್ಮಣಸ್ತ್ರೀಯಲ್ಲಿ ಶೂದ್ರನಿಂದ ಜನಿಸಿದವನು. ಅಥವಾ ಚಂಡಾಲೋಚಿತ ಕರ್ಮದಿಂದ ಜೀವಿಸುವ ಬೇರೆ ವರ್ಣದವನು. ಮತ್ತು ಚಂಡಾಲ ಜಾತಿಯಲ್ಲೇ ಹುಟ್ಟಿದ ಅಂತ್ಯಜನು. ಇವರುಗಳಿಂದ ದಕ್ಷಿಣೆಯನ್ನು ತೆಗೆದುಕೊಂಡ ಯಾಜಕ ಮತ್ತು ಯಜಮಾನ ಇವರು ಕಲ್ಲಿನ ಒಳಗಿರುವ ಹುಳುಗಳಾಗಿ ಹುಟ್ಟುತ್ತಾರೆ. ಮಾಂಸಾಹಾರಿಗಳಾದವರು ನಿಷಿದ್ಧವಾದ ಪೃಷ್ಠ ಮಾಂಸವನ್ನು ಯಾರು ಭುಂಜಿಸುತ್ತಾರೋ, ಯಾರು ಸ್ವಬುದ್ಧಿಯನ್ನುಪಯೋಗಿಸದೆ ಮತ್ತೊಬ್ಬರ ಮಾತನ್ನೇ ಅವಲಂಬಿಸಿ ಜೀವಿಸುತ್ತಾರೆಯೋ (ಅಂದರೆ ಅತ್ಯಂತ ದಾಸ್ಯದಲ್ಲಿರುವವರೆಂದು ತಾತ್ಪರ್ಯ.) ಅಂತಹವರು ತೋಳನಿಂದ ಭಕ್ಷಿಸಲ್ಪಡುವ ನರಕದಲ್ಲಿ ಹಾಕಲ್ಪಡುತ್ತಾರೆ. ಮತ್ತು ಯಾರು ಸುವರ್ಣವನ್ನು ಚೌರ್ಯದಿಂದ ಅಪಹರಿಸಿದವರೋ, ಯಾರು ಬ್ರಹ್ಮಹತ್ಯೆಯನ್ನು ಮಾಡಿರುವರೋ, ಯಾರು ಮದ್ಯ

ಸ್ವರ್ಣಸ್ತೇಯಿಶ್ಚ ಬ್ರಹ್ಮಘ್ನಃ ಸುರಾಪೋ ಗುರುತಲ್ಪಗಃ ।
ತಥಾ ಗೋ ಭೂಮಿಹರ್ತಾರೋ ಗೋ ಸ್ತ್ರೀ ಬಾಲಹತಾಶ್ಚ ಯೇ ॥ ೩೮ ॥

ಏತೆ ನರಾ ದ್ವಿಜಾ ಯೇ ಚ ಗೋಷು ವಿಕ್ರಯಿಣಸ್ತಥಾ ।
ಸೋಮವಿಕ್ರಯಿಣೋ ಯೇ ಚ ವೇದವಿಕ್ರಯಿಣಸ್ತಥಾ ॥ ೩೯ ॥

ಕೂಟಸತ್ಯಾಸ್ತ್ವಶೌಚಾಶ್ಚ ನಿತ್ಯನೈಮಿತ್ತನಾಶಕಾಃ ।
ಕೂಟಸಾಕ್ಷಿಪ್ರದಾ ಯೇ ಚ ತೇ ಮಹಾರೌರವೇ ಸ್ಥಿತಾಃ ॥ ೪೦ ॥

ದಶವರ್ಷಸಹಸ್ರಾಣಿ ತಾವತ್ತಾಮಿಸ್ರಕೇ ಸ್ಥಿತಾಃ ।
ತಾವಚ್ಚೈವಾಂಧತಾಮಿಸ್ರೇ ಅಸಿಪತ್ರವನೇ ತತಃ ॥ ೪೧ ॥

ತಾವಚ್ಚೈವ ಘಟೀಯಂತ್ರೇ ತಪ್ತಕುಂಭೇ ತತಃ ಪರಂ ।
ಪ್ರಪಾತೋ ಹಿ ಭವೇತ್ತೇಷಾಂ ಯೈರಿದಂ ದುಷ್ಕೃತಂ ಕೃತಂ ॥ ೪೨ ॥

---

ಪಾನದಿಂದ ದೂಷಿತರೋ, ಯಾರು ಗುರುಪತ್ನಿಯಲ್ಲಿ ಪ್ರವೇಶಿಸಿರುವರೋ, ಯಾರು ಗೋವನ್ನೂ, ಭೂಮಿಯನ್ನೂ ಅಪಹರಿಸುತ್ತಾರೆಯೋ ಮತ್ತು ಯಾರು ಗೋವು ಮತ್ತು ಸ್ತ್ರೀಯರು, ಬಾಲಕರು ಇವರ ಹನನಕ್ಕೆ ಕಾರಣರಾಗಿರುವರೋ ಮತ್ತು,

೩೯-೪೦. ಗೋವುಗಳನ್ನು ವಿಕ್ರಯಮಾಡಿ ಜೀವಿಸುವ ಬ್ರಾಹ್ಮಣರು ಮತ್ತು ಯಜ್ಞದಲ್ಲಿ ಸೋಮವನ್ನು ವಿಕ್ರಯಮಾಡುವವನು, ದ್ರವ್ಯದ ಪ್ರತಿಫಲಕ್ಕಾಗಿ ವೇದವನ್ನು ಹೇಳಿ ವೇದ ವಿಕ್ರಯಮಾಡಿದವರು, ಮತ್ತು ಅಸತ್ಯಶೀಲರಾಗಿ ಸತ್ಯಶೀಲ ರಂತೆ ನಟಿಸುವವರು, ಅಶುಚಿಸ್ವಭಾವವುಳ್ಳವರು, ನಿತ್ಯನೈಮಿತ್ತಿಕ ಕರ್ಮವನ್ನು ಬಿಟ್ಟು ವ್ರಾತ್ಯವೃತ್ತಿಯಿಂದ ಇರುವವರು ಮತ್ತು ಸುಳ್ಳುಸಾಕ್ಷ್ಯವನ್ನು ಕೊಡತಕ್ಕವರು ಇವರೆಲ್ಲರೂ ಮಹಾರೌರವವೆಂಬ ನರಕದಲ್ಲಿರತಕ್ಕವರು.

೪೧-೪೨. ಇಂತಹ ಮಹಾಪಾತಕಿಗಳು ಮಹಾರೌರವನರಕದಲ್ಲಿ ಹತ್ತು ಸಹಸ್ರ ವರ್ಷಗಳ ಪರ್ಯಂತವಿದ್ದು, ಅನಂತರ ತಾಮಿಸ್ರಕವೆಂಬ ನರಕಕ್ಕೆ ಬರುತ್ತಾರೆ. ಅಲ್ಲಿಯೂ ಅಷ್ಟು ಕಾಲವಿದ್ದು ಅಂಧತಾಮಿಸ್ರಕ್ಕೆ ಬರುತ್ತಾರೆ. ಇದೇ ರೀತಿ ಕ್ರಮವಾಗಿ ಅಸಿಪತ್ರವನದಲ್ಲಿಯೂ, ಘಟೀಯಂತ್ರದಲ್ಲಿಯೂ, ತಪ್ತಕುಂಭದಲ್ಲಿಯೂ ಇದ್ದು

**ಯೇ ತ್ವೇತೇ ನರಕಾ ರೌದ್ರಾ ರೌರವಾದ್ಯಾಸ್ತ್ವವೋದಿತಾಃ ।**
**ತೇ ಸರ್ವೇ ಕ್ರಮಶಃ ಪ್ರೋಕ್ತಾಃ ಕೃತಘ್ನೇ ಲೋಕನಿಂದಿತೇ** ॥ ೪೩ ॥

**ಯಥಾ ಸುರಾಣಾಂ ಪ್ರವರೋ ಜನಾರ್ದನೋ**
**ಯಥಾ ಗಿರೀಣಾಮಪಿ ಶೈಶಿರಾದ್ರಿಃ ।**
**ಯಥಾ ಯುಧಾನಾಂ ಪ್ರವರಂ ಸುದರ್ಶನಂ**
**ಯಥಾ ಖಗಾನಾಂ ವಿನತಾತನೂಜಃ ।**
**ಮಹೋರಗಾಣಾಂ ಪ್ರವರೋಽಪ್ಯನಂತೋ**
**ಯಥಾ ಚ ಭೂತೇಷು ಮಹೀ ಪ್ರಧಾನಾ** ॥ ೪೪ ॥

**ನದೀಷು ಗಂಗಾ ಜಲಜೇಷು ಪದ್ಮಂ**
**ಸುರಾರಿಮುಖ್ಯೇಷು ಹರಾಂಘ್ರಿ ಭಕ್ತಃ ।**
**ಕ್ಷೇತ್ರೇಷು ಯದ್ವತ್ಕುರು ಜಾಂಗಲಂ ವರಂ**
**ತೀರ್ಥೇಷು ಯದ್ವತ್ಪ್ರವರಂ ಪೃಥೂದಕಂ** ॥ ೪೫ ॥

---

ಆಯಾಯ ದುಃಖವನ್ನು ಅನುಭವಿಸಿದ ನಂತರ ಕರ್ಮಾನುಗುಣವಾದ ಉತ್ಪತ್ತಿ ಹೊಂದಲು (ದೇಹಪರಿಗ್ರಹವೇ ಇಲ್ಲಿ ಉತ್ಪತ್ತಿ ಎಂದರೆ ಅರ್ಥ) ಕೆಳಕ್ಕೆ ತಳ್ಳಲ್ಪಡುತ್ತಾರೆ.

ಈ ಪ್ರಕಾರ ಹೇಳಲ್ಪಟ್ಟ ರೌರವಾದಿ ನರಕಗಳೆಲ್ಲಾ ಕ್ರಮಕ್ರಮವಾಗಿ ಲೋಕದ ನಿಂದೆಗೆ ಪಾತ್ರನಾದ ಕೃತಘ್ನನಲ್ಲಿ ಅನ್ವಯಿಸುತ್ತವೆ, ಅಂದರೆ ಮೇಲೆ ಹೇಳಲ್ಪಟ್ಟ ಪಾತಕಿಗಳಿಗೆ ಕ್ರಮ ಪ್ರಾಪ್ತವಾಗಿ ಬಂದ ತಪ್ತಕುಂಭವೆಂಬ ನರಕಾನುಭವವಾದನಂತರ ಜನ್ಮ ಪ್ರಾಪ್ತಿಗಾಗಿ ಪತನವುಂಟಾಗುತ್ತದೆ. ಕೃತಘ್ನನಿಗೆ ಮಾತ್ರ ಚಕ್ರಾಕಾರವಾದ ಗತಿಯಿಂದ ಮುಂದಿನ ನರಕವೇ ಹೊರತು ಬಿಡುಗಡೆ ಇಲ್ಲವೆಂದು ತಾತ್ಪರ್ಯ. ಇದಕ್ಕಾಗಿ ಕೃತಘ್ನನು ಪಾಪಿಗಳಲ್ಲೆಲ್ಲಾ ಮೇಲ್ಪಟ್ಟವನು ಎಂಬ ಅಂಶವನ್ನು ನಿದರ್ಶಿಸಿ ತೋರಿಸುತ್ತಾರೆ.

೪೪-೪೭. ದೇವತೆಗಳಲ್ಲಿ ನಾರಾಯಣನು ಹೇಗೆ ಉತ್ಕೃಷ್ಟನೋ, ಪರ್ವತಗಳಲ್ಲಿ ಹಿಮವತ್ಪರ್ವತವು ಹೇಗೆ ಉತ್ಕೃಷ್ಟವೋ, ಆಯುಧಗಳಲ್ಲಿ ಸುದರ್ಶನವು (ವಿಷ್ಣುಚಕ್ರ) ಹೇಗೆ ಉತ್ತಮವೋ, ಪಕ್ಷಿಗಳಲ್ಲಿ ಗರುಡನು ಹೇಗೆ ಮೇಲ್ಪಟ್ಟವನೋ, ಸರ್ಪಗಳಲ್ಲಿ ಅನಂತನು ಹೇಗೆ ಉತ್ಕೃಷ್ಟನೋ, ಪಂಚಭೂತಗಳಲ್ಲಿ ಭೂಮಿಯು ಹೇಗೆ ಉತ್ಕೃಷ್ಟವೋ ನದಿಗಳಲ್ಲಿ ಗಂಗೆಯು ಹೇಗೆ ಮೇಲಾದದ್ದೋ, ಜಲದಲ್ಲಿ ಹುಟ್ಟುವ ಹೂವುಗಳಲ್ಲಿ

ಸರಸ್ಸು ಚೈವೋತ್ತರ ಮಾನಸಂ ಯಥಾ
ವನೇಷು ಪುಣ್ಯೇಷು ಹಿ ನಂದನಂ ಯಥಾ ।
ಲೋಕೇಷು ಯದ್ವತ್ಸದನಂ ವಿರಂಚೇಃ
ಸತ್ಯಂ ಯಥಾ ಧರ್ಮ ವಿಧಿಕ್ರಿಯಾಸು ॥ ೪೬ ॥

ಯಥಾಶ್ವಮೇಧಃ ಪ್ರವರಃ ಕ್ರತೂನಾಂ
ಪುತ್ರೋ ಯಥಾ ಸ್ಪರ್ಶವತಾಂ ವರಿಷ್ಠಃ ।
ತಪೋಧನಾನಾಮಪಿ ಕುಂಭಯೋನಿಃ
ಶ್ರುತಿರ್ವರಾ ಯದ್ವದಿಹಾಗಮೇಷು ॥ ೪೭ ॥

ಮುಖ್ಯಂ ಪುರಾಣೇಷು ಯಥೈವ ಮಾತ್ಸ್ಯಃ
ಸ್ವಾಯಂಭುವೋಕ್ತಿಸ್ತ್ವಪಿ ಸಂಹಿತಾಸು ।
ಮನುಃ ಸ್ಮೃತೀನಾಂ ಪ್ರವರೋ ಯಥೈವ
ತಿಥೀಷು ದರ್ಶೋ ವಿಬುಧೇಷು ವಾಸವಃ ॥ ೪೮ ॥

---

ಪದ್ಮವು ಹೇಗೆ ಮೇಲ್ಪಟ್ಟದ್ದೋ, ರಾಕ್ಷಸ ಶ್ರೇಷ್ಠರುಗಳಲ್ಲಿ ಶಂಕರ ಪಾದಭಕ್ತಿಯುಳ್ಳವನು ಹೇಗೆ ಉತ್ಕೃಷ್ಟನೋ, ಕ್ಷೇತ್ರಗಳಲ್ಲಿ ಕುರುಜಾಂಗಲವು ಹೇಗೆ ಉತ್ತಮವೋ, ತೀರ್ಥಗಳಲ್ಲಿ ಪೃಥೂದಕವು ಹೇಗೆ ಉತ್ಕೃಷ್ಟವೋ, ಸರೋವರಗಳಲ್ಲಿ ಉತ್ತರ ಮಾನಸ ಸರೋವರವು ಹೇಗೆ ಮೇಲಾದದ್ದೋ, ಪುಣ್ಯಕರವಾದ ವನಗಳಲ್ಲಿ ಹೇಗೆ ನಂದನ ವನವು ಉತ್ಕೃಷ್ಟವಾದದ್ದೋ, ಲೋಕಗಳಲ್ಲಿ ಬ್ರಹ್ಮನ ಸತ್ಯಲೋಕವು ಹೇಗೆ ಉತ್ಕೃಷ್ಟವಾಗಿದೆಯೋ, ವಿಧಿವಿಹಿತವಾದ ಧಾರ್ಮಿಕ ವ್ಯಾಪಾರಗಳಲ್ಲಿ ಸತ್ಯವು ಹೇಗೆ ಮೇಲಾಗಿದೆಯೋ, ಯಜ್ಞಗಳಲ್ಲಿ ಅಶ್ವಮೇಧವು ಹೇಗೆ ಉತ್ತಮವಾದದ್ದೋ, ಸ್ಪರ್ಶದಿಂದ ಸುಖವನ್ನು ಕೊಡತಕ್ಕ ಪದಾರ್ಥಗಳಲ್ಲಿ ಪುತ್ರನು ಹೇಗೆ ಮೇಲಾಗಿರುವನೋ, ಮತ್ತು.

೪೮-೫೦. ತಪಸ್ವಿಗಳಲ್ಲಿ ಅಗಸ್ತ್ಯರು ಹೇಗೋ, ಶಾಸ್ತ್ರಗಳಲ್ಲಿ ವೇದವು ಹೇಗೋ, ಪುರಾಣಗಳಲ್ಲಿ ಮತ್ಸ್ಯ ಪುರಾಣವು ಹೇಗೋ, ಸಂಹಿತೆಗಳಲ್ಲಿ ಸ್ವಾಯಂಭುವಮನುವಿನ ಉಕ್ತಿಯು ಹೇಗೋ, ಸ್ಮೃತಿಗಳಲ್ಲಿ ಮನುಸ್ಮೃತಿಯಂತೆಯೂ, ತಿಥಿಗಳಲ್ಲಿ ಅಮಾವಾ

ತೇಜಸ್ವಿನಾಂ ಚ ಪ್ರವರೋಽರ್ಕ ಉಕ್ತ
ಋಕ್ಷೇಷು ಚಂದ್ರೋ ಜಲಧಿ ಹ್ರದೇಷು ।
ಭವಾನ್ಯಥಾ ರಾಕ್ಷಸಸತ್ತಮೇಷು
ಪಾಶೇಷು ನಾಗಸ್ತ್ವಮಿತೇಷು ಬಂಧಃ ॥ ೪೯ ॥

ಧಾನ್ಯೇಷು ಶಾಲಿರ್ದ್ವಿಪದೇಷು ವಿಪ್ರ
ಶ್ಚತುಷ್ಪದೇ ಗೌಶ್ಚ ಯಥಾ ಮೃಗೇಂದ್ರಃ ।
ಪುಷ್ಪೇಷು ಜಾತೀ ನಗರೇಷು ಕಾಂಚೀ
ನಾರೀಷು ರಂಭಾಶ್ರಮಿಣಾಂ ಗೃಹಸ್ಥಃ ॥ ೫೦ ॥

ಕುಲಸ್ಥಲೀ ಶ್ರೇಷ್ಠತಮಾ ಪುರೇಷು
ದೇಶೇಷು ಸರ್ವೇಷು ಚ ಮಧ್ಯದೇಶಃ ।
ಫಲೇಷು ಚೂತೋ ಮುಕುಲೇಷ್ವಶೋಕಃ
ಸರ್ವೌಷಧೀನಾಂ ಪ್ರವರಾ ಚ ಪಥ್ಯಾ ॥ ೫೧ ॥

ಮೂಲೇಷು ಕಂದಃ ಪ್ರವರೋ ಯಥೋಕ್ತೋ
ವ್ಯಾಧಿಷ್ವಜೀರ್ಣಂ ಕ್ಷಣದಾಚರೇಂದ್ರಃ ।
ಶ್ವೇತೇಷು ದುಗ್ಧಂ ಪ್ರವರಂ ಯಥೈವ
ಕಾರ್ಪಾಸಿಕಂ ಪ್ರಾವರಣೇ ಹಿ ಯದ್ವತ್ ॥ ೫೨ ॥

---

ಸ್ಯೆಯು ಹೇಗೋ, ದೇವತೆಗಳಲ್ಲಿ ಇಂದ್ರನು ಹೇಗೋ, ತೇಜಸ್ವಿಗಳಲ್ಲಿ ಸೂರ್ಯನು ಹೇಗೋ, ನಕ್ಷತ್ರಗಳಲ್ಲಿ ಚಂದ್ರನು ಹೇಗೋ, ಜಲಾಶಯಗಳಲ್ಲಿ ಸಮುದ್ರವು ಹೇಗೋ, ರಾಕ್ಷಸ ಶ್ರೇಷ್ಠರಲ್ಲಿ ನೀನು ಹೇಗೋ, ಪಾಶಗಳಲ್ಲಿ ನಾಗಪಾಶವು ಹೇಗೋ, ನಿಶ್ಚಲತ್ವ ವನ್ನುಂಟುಮಾಡುವ ಸಾಧನಗಳಲ್ಲಿ ಬಂಧನವು ಹೇಗೋ, ಧಾನ್ಯಗಳಲ್ಲಿ ಭತ್ತವು ಹೇಗೋ, ಮನುಷ್ಯರಲ್ಲಿ ಬ್ರಾಹ್ಮಣನು ಹೇಗೋ, ನಾಲ್ಕು ಪಾದಗಳುಳ್ಳ ಪ್ರಾಣಿಗಳಲ್ಲಿ ಹಸು, ಮತ್ತು ಸಿಂಹವು ಹೇಗೆ ಉತ್ಕೃಷ್ಟವೋ,

೫೧-೫೨. ಪುಷ್ಪಗಳಲ್ಲಿ ಜಾತೀಕುಸುಮವು ಹೇಗೋ, ನಗರಗಳಲ್ಲಿ ಕಾಂಚೀ ನಗರವು ಹೇಗೋ, ರೂಪವತಿಯರಾದ ಸ್ತ್ರೀಯರಲ್ಲಿ ರಂಭೆಯು ಹೇಗೋ, ಬ್ರಹ್ಮ ಚರ್ಯಾದ್ಯಾಶ್ರಮಶಾಲಿಗಳಲ್ಲಿ ಗೃಹಸ್ಥನು ಹೇಗೋ, ಪುರಗಳಲ್ಲಿ ಕುಶಸ್ಥಲಿಯು ಹೇಗೋ, ಎಲ್ಲಾ ದೇಶಗಳಲ್ಲೂ ಮಧ್ಯದೇಶವು ಹೇಗೋ, ಹಣ್ಣುಗಳಲ್ಲಿ ಮಾವಿನಹಣ್ಣು ಹೇಗೋ, ಮೊಗ್ಗುಗಳಲ್ಲಿ ಅಶೋಕದ ಮೊಗ್ಗು ಹೇಗೋ, ಎಲ್ಲಾ ಔಷಧಿಗಳಲ್ಲೂ ಅರಳೇ

ಕಲಾಸು ಮುಖ್ಯಾ ಗಣಿತಜ್ಞತಾ ಚ
ವಿಜ್ಞಾನಮುಖ್ಯಂ ತು ಯಥೇಂದ್ರಜಾಲಂ ।
ಶಾಕೇಷು ಮುಖ್ಯಾ ತ್ವಪಿ ಕಾಚಮಾಚೀ
ರಸೇಷು ಮುಖ್ಯಾ ಲವಣಂ ಯಥೈವ ॥ ೫೩ ॥

ಫಲೇಷು ತಾಲೋ ನಲಿನೀಷು ಪಂಪಾ
ವನೌಕಸೇಷ್ವೇವ ಚ ಯಕ್ಷರಾಜಃ ।
ಮಹೀರುಹೇಷ್ವೇವ ಯಥಾ ವಟಶ್ಚ
ಯಥಾ ಹರೋ ಜ್ಞಾನವತಾಂ ವರಿಷ್ಠಃ ॥ ೫೪ ॥

ಯಥಾ ಸತೀನಾಂ ಹಿಮವತ್ಸುತಾ ಹಿ
ಯಥಾರ್ಜುನೀನಾಂ ಕಪಿಲಾ ವರಿಷ್ಠಾ ।
ಯಥಾ ವೃಷಾಣಾಮಪಿ ನೀಲವರ್ಣ
ಸ್ತಥೈವ ಸರ್ವೇಷ್ವಪಿ ದುಃಸಹೇಷು ॥ ೫೫ ॥

ದುರ್ಗೇಷು ರೌದ್ರೇಷು ನಿಶಾಚರೇಶ
ಯಥಾ ನದೀ ವೈತರಣೀ ಪ್ರಧಾನಾ ।
ಪಾಪೀಯಸಾಂ ಯದ್ವದಿಹ ಕೃತಘ್ನಃ
ಸರ್ವೇಷು ಪಾಪೇಷು ನಿಶಾಚರೇಂದ್ರ ॥ ೫೬ ॥

---

ಕಾಯಿ ಹೇಗೋ, ಬೇರುಗಳಲ್ಲಿ ಗೆಣಸುಗಳು ಹೇಗೋ, ವ್ಯಾಧಿಗಳಲ್ಲಿ ಅಜೀರ್ಣವು ಹೇಗೋ, ಬಿಳುಪಾಗಿರುವ ವಸ್ತುಗಳಲ್ಲಿ ಹಾಲು ಹೇಗೋ, ಹೊದಿಕೆಗಳಲ್ಲಿ ನೂಲಿನ ಬಟ್ಟೆ ಹೇಗೋ, ಕಲೆಗಳಲ್ಲಿ ಗಣಿತಶಾಸ್ತ್ರಜ್ಞತೆಯು ಹೇಗೋ ವಿಜ್ಞಾನಗಳಲ್ಲಿ ಇಂದ್ರ ಜಾಲವು ಹೇಗೋ, ಶಾಕಗಳಲ್ಲಿ ಗರಗದಸೊಪ್ಪು ಹೇಗೋ, ರಸಗಳಲ್ಲಿ ಲವಣ ರಸವು ಹೇಗೋ, ಮತ್ತು.

೫೪-೫೬. ನೋಟಕ್ಕೆ ಅಂದವಾಗಿರುವ ಫಲಗಳಲ್ಲಿ ತಾಳೆಯಹಣ್ಣು ಹೇಗೋ, ಕಮಲ ಸರೋವರಗಳಲ್ಲಿ ಪಂಪಾಸರೋವರವು ಹೇಗೋ, ಕಾಡುಮೃಗಗಳಲ್ಲಿ ಸುಖಿ ಯಾದ ಕರಡಿಯು ಹೇಗೋ, ಮರಗಳಲ್ಲಿ ಆಲದಮರವು ಹೇಗೋ, ಜ್ಞಾನಿಗಳಲ್ಲಿ ಹರನು ಹೇಗೋ, ಪತಿವ್ರತೆಯರಾದ ಸ್ತ್ರೀಯರುಗಳಲ್ಲಿ ಪಾರ್ವತಿಯು ಹೇಗೋ, ಕರೆ ಯುವ ಹಸುಗಳಲ್ಲಿ ಕಪಿಲವಾದ ಹಸುವು ಹೇಗೋ, ಎತ್ತುಗಳಲ್ಲಿ ಕರಿಯ ಎತ್ತು ಹೇಗೋ, ಹಾಗೆಯೇ ರೌದ್ರವಾದ ಎಲ್ಲಾ ದುರ್ಗಗಳಲ್ಲಿಯೂ ವೈತರಣಿಯು ಪ್ರಧಾನ

ಬ್ರಹ್ಮಘ್ನೇ ಗೋಘ್ನಾದಿಷು ನಿಷ್ಕೃತಿರ್ಹಿ
ವಿದ್ಯೇತ ನೈವಾಸ್ಯ ತು ದುಷ್ಟಚಾರಿಣಃ ।
ನ ನಿಷ್ಕೃತಿಶ್ಚಾಪಿ ಕೃತಘ್ನವೃತ್ತೇಃ
ಸುಹೃತ್ಕೃತಂ ನಾಶಯತೋಽಬ್ದಕೋಟಿಭಿಃ ॥ ೫೭ ॥

ಇತಿ ಶ್ರೀ ವಾಮನ ಪುರಾಣೇ ಕರ್ಮವಿಪಾಕೋ ನಾಮ
ದ್ವಾದಶೋಽಧ್ಯಾಯಃ

---

ವಾದದ್ದು. ಮತ್ತು ಎಲ್ಲಾ ಪಾಪಿಗಳಲ್ಲೂ ಕೃತಘ್ನನು ಮೇಲ್ಪಟ್ಟವನು, ಬ್ರಹ್ಮಹತ್ಯೆ ಗೋಹತ್ಯೆ, ಮಾಡಿದವನಿಗೂ ಒಂದಾನೊಂದು ಪ್ರಾಯಶ್ಚಿತ್ತವಿರಬಹುದು ಅನೇಕ ವರ್ಷಗಳಿಂದಲೂ ಸ್ನೇಹಿತರೇ ಮೊದಲಾದವರಿಂದ ಮಾಡಲ್ಪಟ್ಟ ಎಲ್ಲಾ ಉಪಕಾರ ಗಳನ್ನೂ ಒಂದು ಕ್ಷಣದಲ್ಲಿ ನಾಶಪಡಿಸಿಕೊಳ್ಳುವ ಈ ದುಷ್ಟಚಾರಿಯಾದ ಕೃತಘ್ನನಿಗೆ ಪಾಪಕ್ಕೆ ತಕ್ಕ ಯಾವ ಪ್ರಾಯಶ್ಚಿತ್ತವೂ ಇರುವುದಿಲ್ಲ.

ಇಲ್ಲಿಗೆ ಶ್ರೀ ವಾಮನ ಪುರಾಣದಲ್ಲಿ ಕರ್ಮವಿಪಾಕವೆಂಬ ಹನ್ನೆರಡನೆಯ
ಅಧ್ಯಾಯುವು ಮುಗಿದಿದೆ.

## ಅಧ್ಯಾಯಾರ್ಥ ಸಂಗ್ರಹ

ಈ ಅಧ್ಯಾಯದಲ್ಲಿ ಯಾವ ಯಾವ ಕರ್ಮಗಳಿಂದ ಈ ನರಕಗಳನ್ನು ವಾಸ ವನು ಹೊಂದುತ್ತಾನೆ, ಎಂಬ ಸುಕೇಶಿಯ ಉಪಪ್ರಶ್ನೆಗೆ ಸಮಾಧಾನವಾಗಿ ನರಕ ಪಾತಕ್ಕೆ ಕಾರಣಗಳಾದ ದುಷ್ಕರ್ಮಗಳನ್ನು ಹೇಳಿ ವೈತರಣೀನದಿಯು ದುಸ್ತರ ವೆಂದೂ ಎಲ್ಲಾ ಪಾಪಗಳಿಗಿಂತಲೂ ಕೃತಘ್ನತೆಯು ಬಹಳ ದೊಡ್ಡ ಪಾತಕವೆಂದೂ ಉಪಮಾನ ಪರಂಪರೆಗಳಿಂದ ಪ್ರತಿಪಾದಿಸಲಾಯಿತು-ಇಲ್ಲಿ ಉಪಮಾನವಾಗಿ ಹೇಳ ಲ್ಪಟ್ಟ ಉತ್ಕೃಷ್ಟ ಪದಾರ್ಥಗಳ ಗಣನೆಯು ಭಗವದ್ಗೀತೆಗಿಂತ ಬೇರೆಯಾಗಿದೆ. ಹೇಳು ವವರ ರುಚಿಭೇದ ತಾತ್ಪರ್ಯಭೇದಗಳು ಇದಕ್ಕೆ ಕಾರಣವೆಂದು ತೋರುತ್ತದೆ.

॥ ಶ್ರೀಃ ॥

# ಶ್ರೀವಾಮನಪುರಾಣಂ

## ತ್ರಯೋದಶೋಽಧ್ಯಾಯಃ

### ಸುಕೇಶಿರುವಾಚ

ಭವದ್ಭಿರುದಿತಾ ಘೋರಾ ಪುಷ್ಕರದ್ವೀಪಸಂಸ್ಥಿತಿಃ ।
ಜಂಬೂದ್ವೀಪಸ್ಯ ಸಂಸ್ಥಾನಂ ಕಥಯಂತು ಮಹರ್ಷಯಃ ॥ ೧ ॥

### ಋಷಯ ಊಚುಃ

ಜಂಬೂದ್ವೀಪಸ್ಯ ಸಂಸ್ಥಾನಂ ಕಥ್ಯಮಾನಂ ನಿಶಾಮಯ ।
ನವ ಭೇದಂ ಸುವಿಸ್ತೀರ್ಣಂ ಸ್ವರ್ಗಮೋಕ್ಷಫಲಪ್ರದಂ ॥ ೨ ॥

ಮಧ್ಯೇ ತ್ವಿಲಾವೃತೋ ವರ್ಷೋ ಭದ್ರಾಸ್ಯಃ ಪೂರ್ವತೋಽದ್ಭುತಃ ।
ಪೂರ್ವ ದಕ್ಷಿಣತೋ ವರ್ಷೋ ಹಿರಣ್ಮಾನ್ರಾಕ್ಷಸೇಶ್ವರ ॥ ೩ ॥

---

## ಹದಿಮೂರನೆಯ ಅಧ್ಯಾಯವು

೧. ಸುಕೇಶಿಯು ಪುನಃ ಪ್ರಶ್ನೆ ಮಾಡುತ್ತಾನೆ, ಎಲೈ, ಮಹರ್ಷಿಗಳೇ, ಇದು ವರಿಗೆ ತಾಪು ಪುಷ್ಕರದ್ವೀಪದ ಘೋರವಾದ ಪರಿಸ್ಥಿತಿಯೆಲ್ಲವನ್ನೂ ಹೇಳಿ ಆಯಿತು. ಇನ್ನು ಮುಂದೆ ಜಂಬೂದ್ವೀಪದ ವೃತ್ತಾಂತವನ್ನು ದಯವಿಟ್ಟು ಹೇಳಬೇಕು-

೨-೪. ಋಷಿಗಳು ಹೇಳುತ್ತಾರೆ, ಜಂಬೂದ್ವೀಪದ ಸ್ಥಿತಿಗತಿಗಳನ್ನು ಹೇಳುತ್ತೇವೆ, ಕೇಳಬೇಕು, ವಿಸ್ತಾರವಾಗಿರುವ ಸ್ವರ್ಗಮೋಕ್ಷರೂಪವಾದ ಸಕಲ ಪುರುಷಾರ್ಥಕ್ಕೂ ಆಶ್ರಯವಾದ ಈ ಜಂಬೂದ್ವೀಪವು ಒಂಭತ್ತು ಭಾಗವಾಗಿ ವಿಭಾಗಿಸಲ್ಪಟ್ಟಿದೆ. ಮಧ್ಯಭಾಗದ ಪ್ರದೇಶವು ಇಲಾವೃತವರ್ಷವೆಂದು ಕರೆಯಲ್ಪಡುತ್ತಿದೆ. ಇದಕ್ಕೆ ಪೂರ್ವಭಾಗದಲ್ಲಿ ಆಶ್ಚರ್ಯಕರವಾದ ಭದ್ರಾಸ್ಯವೆಂಬ ವರ್ಷವಿದೆ. ಇದರ ಅಗ್ನಿದಿಕ್ಕಿಗೆ

**ಭಾರತೋ ದಕ್ಷಿಣೇ ಪ್ರೋಕ್ತೋ ಹರಿರ್ದಕ್ಷಿಣಪಶ್ಚಿಮೇ ।**
**ಪಶ್ಚಿಮೇ ಕೇತುಮಾಲಶ್ಚ ಚಂಪಕಃ ಪಶ್ಚಿಮೋತ್ತರೇ ॥ ೪ ॥**

**ಉತ್ತರೇಣ ಕುರೋ ರ್ವರ್ಷಃ ಕಲ್ಪವೃಕ್ಷಸಮಾವೃತಃ ।**
**ಪೂರ್ವಮುತ್ತರತೋ ರಮ್ಯೋ ವರ್ಷಃ ಕಿಂ ಪುರುಷಃ ಸ್ಮೃತಃ ॥ ೫ ॥**

**ಪುಣ್ಯಾ ರಮ್ಯಾ ನವ್ಯೈ ವೈತೇ ವರ್ಷಾಃ ಸಾಲಕಟಂಕಟ ।**
**ಇಲಾವೃತಾದ್ಯಾಶ್ಚೈವಾಷ್ಟೌ ವರ್ಷಂ ಮುಕ್ತ್ವೈವ ಭಾರತಂ ॥ ೬ ॥**

**ನ ತೇಷ್ವಸ್ತಿ ಯುಗಾವಸ್ಥಾ ಜರಾ ಮೃತ್ಯು ಭಯಂ ನ ಚ ।**
**ತೇಷಾಂ ಸ್ವಾಭಾವಿಕೀ ಸಿದ್ಧಿಃ ಸುಖಪ್ರಾಯಾಹ್ಯಯತ್ನತಃ ॥ ೭ ॥**

**ವಿಪರ್ಯಯೋ ನ ತೇಷ್ವಸ್ತಿ ನೋತ್ತಮಾಧಮಮಧ್ಯಮಾಃ ।**
**ಯದೇತದ್ಭಾರತಂ ವರ್ಷಂ ನವದ್ವೀಪಂ ನಿಶಾಚರ ॥ ೮ ॥**

---

ಹಿರಣ್ಮಯನೆಂಬ ವರ್ಷವಿದೆ. ದಕ್ಷಿಣದಿಕ್ಕಿನಲ್ಲಿ ಭಾರತವರ್ಷವಿದೆ. ನೈಋತ್ಯದಿಕ್ಕಿನಲ್ಲಿ ಹರಿವರ್ಷವಿದೆ. ಪಶ್ಚಿಮದಿಕ್ಕಿನಲ್ಲಿ ಕೇತುಮಾಲವೆಂಬ ವರ್ಷವಿದೆ. ವಾಯುವ್ಯದಿಕ್ಕಿನಲ್ಲಿ ಚಂಪಕ ವರ್ಷವಿದೆ.

೫-೮. ಮತ್ತು ಉತ್ತರದಿಕ್ಕಿನಲ್ಲಿ ಕುರುವರ್ಷವಿದೆ. ಅದು ಕಲ್ಪವೃಕ್ಷಗಳಿಂದ ರಮಣೀಯವಾಗಿದೆ. ಈಶಾನ್ಯಭಾಗದಲ್ಲಿ ರಮಣೀಯವಾದ ಕಿಂಪುರುಷ ವರ್ಷವಿದೆ. ಪುಣ್ಯಕರವಾದ ಈ ಒಂಭತ್ತು ವರ್ಷಗಳು ಜಂಬೂದ್ವೀಪಕ್ಕೆ ಸೇರಿವೆ. ಇವುಗಳಲ್ಲಿ ಭಾರತವರ್ಷವನ್ನು ಬಿಟ್ಟು ಉಳಿದ ಇಲಾವೃತವೇ ಮೊದಲಾದ ಎಂಟು ವರ್ಷಗಳಲ್ಲಿ ವಾಸಿಸುವವರಿಗೆ ಯುಗ ವೈಷಮ್ಯದಿಂದುಂಟಾಗುವ ಅವಸ್ಥಾ ಪರಿವೃತ್ತಿ ಯಾವದೂ ಇರುವದಿಲ್ಲ. ವಾರ್ಧಿಕ್ಯ ಮರಣ ಇಂತಹ ಭಯವಾವುದೂ ಇಲ್ಲ. ಅವರಿಗೆ ಸ್ವಪ್ರಯತ್ನವಿಲ್ಲದೆ ಸುಖ ಪ್ರಚುರವಾದ ಎಲ್ಲಾ ಸಿದ್ಧಿಗಳೂ ಸ್ವಾಭಾವಿಕವಾಗಿಯೇ ಉಂಟಾಗುತ್ತವೆ. ದುಃಖಾನುಭವದ ಲೇಶವೂ ಇರುವದಿಲ್ಲ. ಅಲ್ಲಿ ಉತ್ತಮಾಧಮ ಮಧ್ಯಮಗಳೆಂಬ ವೈಷಮ್ಯವೇ ಜನಗಳಲ್ಲಿರುವದಿಲ್ಲ. ಎಲ್ಲರೂ ಸ್ವಾಭಾವಿಕ ಸಿದ್ಧಶಾಲಿಗಳು. ಎಲ್ಲರೂ ಸುಖಿಗಳೆಂದು ತಾತ್ಪರ್ಯ- ದುಃಖಪ್ರದವಾದ ಕರ್ಮಗಳು ಯಾರಲ್ಲೂ ಇಲ್ಲದಿರುವದ್ದರಿಂದಲೂ- ಸುಖಪ್ರಾಪ್ತಿಯು ಪ್ರಯತ್ನ ನಿರಪೇಕ್ಷವಾಗಿ ಸಹಜವಾಗಿರುವದ್ದರಿಂದಲೂ ವೈಷಮ್ಯಕ್ಕೆ ಕಾರಣವಿಲ್ಲವೆಂದು ಭಾವ-

ಸಾಗರಾಂತರಿತಾಃ ಸರ್ವೇ ಅಗಮ್ಯಾಶ್ಚ ಪರಸ್ಪರಂ ।
ಇಂದ್ರದ್ವೀಪಃ ಕಶೇರೂಣಾಸ್ತಾಮ್ರಪರ್ಣೋ ಗಭಸ್ತಿಮಾನ್ ॥ ೯ ॥

ನಾಗದ್ವೀಪಃ ಕಟಾಹಶ್ಚ ಸಿಂಹಲೋ ವಾರುಣಸ್ತಥಾ ।
ಅಯಂ ತು ನವಮಸ್ತೇಷಾಂ ದ್ವೀಪಃ ಸಾಗರಸಂವೃತಃ ॥ ೧೦ ॥

ಕುಮಾರಾಖ್ಯಃ ಪರಿಖ್ಯಾತೋ ದ್ವೀಪೋಽಯಂ ದಕ್ಷಿಣೋತ್ತರಃ ।
ಪೂರ್ವೇ ಕಿರಾತಾ ಯಸ್ಯಾಂತೇ ಪಶ್ಚಿಮೇ ಯವನಾಃ ಸ್ಮೃತಾಃ ॥ ೧೧ ॥

ಆಂದ್ರಾ ದಕ್ಷಿಣತೋ ವೀರ ತುರುಷ್ಕಾಸ್ತ್ವಪಿ ಚೋತ್ತರೇ ।
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಸ್ತ್ವಂತರವಾಸಿನಃ ॥ ೧೨ ॥

ಇಜ್ಯಾಯುದ್ಧವಣಿಜ್ಯಾದ್ಯೈಃ ಕರ್ಮಭಿಃ ಕೃತಪಾವನಾಃ ।
ತೇಷಾಂ ಸಂವ್ಯವಹಾರಶ್ಚ ಏಭಿಃ ಕರ್ಮಭಿರಿಷ್ಯತೇ ॥ ೧೩ ॥

---

೯-೧೧. ಎಲೈ, ರಾಕ್ಷಸರಾಜನೇ ಭಾರತವರ್ಷವೆಂಬುದು ಯಾವುದುಂಟೋ ಇದು ಒಂಭತ್ತು ದ್ವೀಪಗಳಿಂದ ಕೂಡಿದೆ. ಎಲ್ಲಾ ದ್ವೀಪಗಳೂ ಸಮುದ್ರದಿಂದ ಸುತ್ತುವರಿಯಲ್ಪಟ್ಟು ಒಂದರಿಂದೊಂದಕ್ಕೆ ಸಂಚರಿಸಲಶಕ್ಯವಾಗಿವೆ, ಈ ಒಂಭತ್ತು ದ್ವೀಪಗಳಲ್ಲಿ ಇಂದ್ರದ್ವೀಪ, ಕಶೇರೂಣ, ತಾಮ್ರವರ್ಣ, ಗಭಸ್ತಿಮಾ, ನಾಗದ್ವೀಪ, ಕಟಾಹದ್ವೀಪ, ಸಿಂಹಳದ್ವೀಪ, ವಾರುಣದ್ವೀಪಗಳೂ ಬೇರೆ ಇವೆ. ನಾವು ವಾಸ ಮಾಡುತ್ತಿರುವ ಈ ದ್ವೀಪವು ಕುಮಾರದ್ವೀಪವೆಂದು ಪ್ರಖ್ಯಾತವಾಗಿದೆ. ಇದು ಸಮುದ್ರದಿಂದ ಸುತ್ತುವರಿಯಲ್ಪಟ್ಟು ದೀರ್ಘತೆಯಿಂದ ದಕ್ಷಿಣೋತ್ತರ ದಿಕ್ಕನ್ನು ವ್ಯಾಪಿಸಿರುವ ಒಂಭತ್ತನೇ ದ್ವೀಪ-

೧೨-೧೩. ಈ ದ್ವೀಪದ ಪೂರ್ವಭಾಗದ ಕೊನೆಯಲ್ಲಿ ಕಿರಾತರೂ ಪಶ್ಚಿಮದ ಪ್ರಾಂತಪ್ರದೇಶದಲ್ಲಿ ಯವನರೂ, ದಕ್ಷಿಣದಲ್ಲಿ ಆಂಧ್ರರೂ, ಉತ್ತರದಲ್ಲಿ ತುರುಷ್ಕರೂ, ವಾಸಿಸುತ್ತಾರೆ. ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರು ಮಧ್ಯಪ್ರದೇಶದಲ್ಲಿ ವಾಸಿಸುತ್ತಾರೆ. ಇವರು ಕ್ರಮವಾಗಿ ಯಜ್ಞಯಾಗಾದಿಗಳು, ಯುದ್ಧವ್ಯಾಪಾರ, ವ್ಯಾಪಾರವೇ ಮೊದಲಾದ ವರ್ಣಾಶ್ರಮಕರ್ಮಗಳಿಂದ ಪರಿಶುದ್ಧರಾಗಿರುವರು. ಇವರುಗಳ ಲೋಕ

ಸ್ವರ್ಗಾಪವರ್ಗಪ್ರಾಪ್ತಿಶ್ಚ ಪುಣ್ಯಂ ಪಾಪಂ ತಥೈವ ಚ ।
ಮಹೇಂದ್ರೋ ಮಲಯಃ ಸಹ್ಯಃ ಶಕ್ತಿಮಾನೃಕ್ಷಪರ್ವತಃ ॥ ೧೪ ॥

ವಿಂಧ್ಯಶ್ಚ ಪಾರಿಯಾತ್ರಶ್ಚ ಸಪ್ತಾತ್ರ ಕುಲಪರ್ವತಾಃ ।
ತಥಾನ್ಯೇ ಶತಸಾಹಸ್ರಾ ಭೂಧರಾ ಮಧ್ಯವಾಸಿನಃ ॥ ೧೫ ॥

ವಿಸ್ತಾರೋಚ್ಛ್ರಾಯಿಣೋ ರಮ್ಯಾ ವಿಪುಲಾಃ ಶುಭಸಾನವಃ ।
ಕೋಲಾಹಲಶ್ಚ ವೈಭ್ರಾಜೋ ಮಂದರೋ ದುರ್ಧರಾಚಲಃ ॥ ೧೬ ॥

ವಾತಧೂಮೋ ವೈದ್ಯುತಶ್ಚ ಮೈನಾಕಃ ಸರಸಸ್ತಥಾ ।
ತುಂಗಪ್ರಸ್ಥೋ ನಾಗಗಿರಿಸ್ತಥಾ ಗೋವರ್ಧನಾಚಲಃ ॥ ೧೭ ॥

ಉಜ್ಜಯಂತಃ ಪುಷ್ಪಗಿರಿರರ್ಬುದೋ ರೈವತಸ್ತಥಾ ।
ಋಷ್ಯಮೂಕಃ ಸಗೋಮಂತಶ್ಚಿತ್ರಕೂಟಃ ಕೃತಸ್ಮರಃ ॥ ೧೮ ॥

ಶ್ರೀಪರ್ವತಃ ಕೋಕಣಕಃ ಶತಶೋಽನ್ಯೇಪಿ ಪರ್ವತಾಃ ।
ತೈರ್ವಿಮಿಶ್ರಾ ಜನಪದಾ ಮ್ಲೇಚ್ಛಾಶ್ಚಾರ್ಯಾಶ್ಚ ಭಾಗಶಃ ॥ ೧೯ ॥

---

ವ್ಯವಹಾರ, (ಅಂದರೆ ಜೀವನ ಸಾಧನ) ಸ್ವರ್ಗಮೋಕ್ಷ ಪ್ರಾಪ್ತಿಗಳು, ಪುಣ್ಯಾಪುಣ್ಯಗಳು, ಎಲ್ಲವೂ ತಮಗೆ ವಿಹಿತವಾದ ಈ ಕರ್ಮಗಳಿಂದಲೇ, ಉಂಟಾಗುತ್ತವೆ.

೧೪-೧೯. ಈ ದ್ವೀಪದ ಮಧ್ಯಭಾಗದಲ್ಲಿ ಮಹೇಂದ್ರ, ಮಲಯ, ಸಹ್ಯ, ಶಕ್ತಿಮಾ, ಋಕ್ಷಪರ್ವತ, ವಿಂಧ್ಯ, ಪಾರಿಯಾತ್ರ, ಎಂಬ ಏಳು ಕುಲಪರ್ವತಗಳೂ, ಹಾಗೆಯೇ ನೂರಾರು ಸಾವಿರಾರು ಪರ್ವತಗಳೂ ಇವೆ, ಮತ್ತು ವಿಸ್ತಾರದಿಂವಲೂ ಎತ್ತರದಿಂದಲೂ ಕೂಡಿರುವ ಒಳ್ಳೊಳ್ಳೆಯ ತಪ್ಪಲು ಪ್ರದೇಶಗಳುಳ್ಳ, ರಮ್ಯವಾದ ಕೋಲಾಹಲ, ವೈಭ್ರಾಜ, ಮಂದರ, ದುರ್ಧರ, ವಾತಧೂಮ, ವೈದ್ಯುತ, ಮೈನಾಕ, ಸರಸ, ತುಂಗಪ್ರಸ್ಥ, ನಾಗಗಿರಿ, ಗೋವರ್ಧನ, ಉಜ್ಜಯಂತ, ಪುಷ್ಪಗಿರಿ, ಅರ್ಬುದ, ರೈವತ, ಋಶ್ಯಮೂಕ, ಗೋಮಂತ, ಚಿತ್ರಕೂಟ, ಶ್ರೀಪರ್ವತ, ಕೋಕಣಕ, ಇವೇ ಮೊದಲಾದ ಸಾವಿರಾರು ಪರ್ವತಗಳಿವೆ. ಇವುಗಳಿಂದ ಕೂಡಿದ ದೇಶಗಳೂ ಸಹ ಮ್ಲೇಚ್ಛ ದೇಶವೆಂತಲೂ ಆರ್ಯದೇಶವೆಂತಲೂ ವಿಭಕ್ತವಾಗಿದೆ.

ತ್ಯೈಃ ಪೀಯಂತೇ ಸರಿಚ್ಛ್ರೇಷ್ಠಾ ಯಾ ಸಮ್ಯಕ್ತಾ ನಿಶಾಮಯ ।
ಸರಸ್ವತೀ ಪಂಚರೂಪಾ ಕಾಲಿಂದೀ ಚ ಹಿರಣ್ವತೀ ॥ ೨೦ ॥

ಶತದ್ರುಶ್ಚಂದ್ರಿಕಾ ನೀಲಾ ವಿತಸ್ತೇರಾವತೀ ಕುಹೂಃ ।
ಮಧುರಾ ಹಾರರಾವೀ ಚ ಊಶೀರಾ ಧಾತಕೀರಸಾ ॥ ೨೧॥

ಗೋಮತೀ ಧೂತಪಾಪಾ ಚ ಬಾಹುದಾ ಸಾದೃಷದ್ವತೀ ।
ನಿಃಸ್ವರಾ ಗಂಡಕೀ ಚಿತ್ರಾ ಕೌಶಿಕೀ ಚ ವಧೂಸರಾ ॥ ೨೨ ॥

ಸರಯೂಶ್ಚ ಸಲೌಹಿತ್ಯಾ ಹಿಮವತ್ಪಾದನಿಃಸೃತಾಃ ।
ವೇದಸ್ಮೃತಿರ್ವೇದಸಿನೀ ವೃತ್ರಘ್ನೀ ಸಿಂಧುರೇವ ಚ ॥ ೨೩ ॥

ಪರ್ಣಾಸಾ ನಂದಿನೀ ಚೈವ ಪಾವನೀ ಚ ಮಹೀ ತಥಾ ।
ಶರಾ ಚರ್ಮಣ್ವತೀ ಲೂಷೀ ವಿದಿಶಾ ವೇಣುಮತ್ಯಪಿ ॥ ೨೪ ॥

ಚಿತ್ರಾ ಹ್ಯೋಘವತೀ ರಮ್ಯಾ ಪಾರಿಯಾತ್ರೋದ್ಭವಾಃ ಸ್ಮೃತಾಃ ।
ಶೋಣೋ ಮಹಾನದೀ ಚೈವ ನರ್ಮದಾ ಸುರಸಾ ಕ್ರಿಯಾ ॥ ೨೫ ॥

ಮಂದಾಕಿನೀ ದಶಾರ್ಣಾ ಚ ಚಿತ್ರಕೂಟಾ ಹಿ ದೇವಿಕಾ ।
ಚಿತ್ರೋತ್ಪಲಾ ವೈ ತಮಸಾ ಕರತೋಯಾ ಪಿಶಾಚಿಕಾ ॥ ೨೬ ॥

---

೨೦-೨೩. ಈ ದೇಶದ ಜನಗಳ ಪಾನಕ್ಕಾಗಿ ಇರುವ ನದೀ ವಿಶೇಷಗಳನ್ನು ಹೇಳುತ್ತೇನೆ— ಹಿಮವತ್ಪರ್ವತದಿಂದ ಹೊರಟಿರುವ ನದಿಗಳು ಸರಸ್ವತೀ, ಕಾಲಿಂದೀ, ಹಿರಣ್ವತೀ, ಶತದ್ರು, ಚಂದ್ರಿಕಾ, ನೀಲಾ, ವಿತಸ್ತಾ, ಇರಾವತೀ, ಕುಹೂ, ಮಧುರಾ, ಹಾರರಾವೀ, ಉಶೀರಾ, ಧಾತಕೀ, ರಸಾ, ಗೋಮತೀ, ಧೂತಪಾಪಾ, ಬಾಹುದಾ, ದೃಷದ್ವತೀ, ನಿಸ್ಸ್ವರಾ, ಗಂಡಕೀ, ಚಿತ್ರಾ, ಕೌಶಿಕೀ, ವಧೂಸರಾ, ಸರಯೂ, ಲೌಹಿತ್ಯಾ, ಇವುಗಳು ಮತ್ತು,

೨೪-೨೭. ಪಾರಿಯಾತ್ರಪರ್ವತದಿಂದ ವೇದಸ್ಮೃತಿ, ವೇದಸಿನೀ, ವೃತಘ್ನೀ, ಸಿಂಧು, ಪರ್ಣಾಸಾ, ನಂದಿನೀ, ಪಾವನೀ, ಮಹೀ, ಶರಾವತೀ, ಚರ್ಮಣ್ವತೀ, ಲೂಷಾ, ವಿದಿಶಾ, ವೇಣುಮತೀ, ಚಿತ್ರಾ, ಓಘವತೀ, ರಮ್ಯಾ ಇವುಗಳು ಉದ್ಭವಿಸಿ ಹರಿಯುತ್ತವೆ. ಮತ್ತು ಶೋಣಾ, ನರ್ಮದಾ, ಕ್ರಿಯಾ, ಮಂದಾಕಿನೀ, ದಶಾರ್ಣಾ, ಚಿತ್ರಕೂಟಾ, ದೇವಿಕಾ, ಚಿತ್ರೋತ್ಪಲಾ, ತಮಸಾ, ಕರತೋಯಾ, ಪಿಶಾಚಿಕಾ,

**ತಥಾನ್ಯಾ ಪಿಪ್ಪಲಶ್ರೋಣೀ ವಿಪಾಶಾ ವಂಜುಲಾವತೀ ।**
**ಸತ್ಸಂತಜಾ ಶುಕ್ತಿಮತೀ ಚಕ್ರಿಣೀ ತ್ರಿದಿವಾ ವಸುಃ ॥ ೨೭ ॥**

**ಋಕ್ಷಪಾದಪ್ರಸೂತಾ ಚ ತಥಾನ್ಯಾ ವಲ್ಗುವಾಹಿನೀ ।**
**ಶಿವಾ ಪಯೋಷ್ಣೀ ನಿರ್ವಿಂಧ್ಯಾ ತಾಪೀ ಸನಿಷಧಾವತೀ ॥ ೨೮ ॥**

**ವೇಣಾ ವೈತರಣೀ ಚೈವ ಸಿನೀಬಾಹುಃ ಕುಮುದ್ವತೀ ।**
**ತೋಯಾ ರೇವಾ ಮಹಾಗೌರೀ ದುರ್ಗಂಧಾ ವಾಶಿಲಾ ತಥಾ ॥ ೨೯ ॥**

**ವಿಂಧ್ಯಪಾದಪ್ರಸೂತಾಶ್ಚ ನದ್ಯಃ ಪುಣ್ಯಜಲಾಃ ಶುಭಾಃ ।**
**ಗೋದಾವರೀ ಭೀಮರಥೀ ಕೃಷ್ಣಾ ವೇಣ್ಯಾ ಸರಿದ್ವತೀ ॥ ೩೦ ॥**

**ವಿಷಮುದ್ರೀ ಸುಪ್ರಯೋಗಾ ವಾಹ್ಯಾ ಕಾವೇರಿರೇವ ಚ ।**
**ದುಗ್ಧೋದಾ ನಲಿನೀ ಚೈವ ವಾರಿಸೇನಾ ಕಲಸ್ವನಾ ॥ ೩೧ ॥**

**ಏತಾಶ್ಚಾಪಿ ಮಹಾನದ್ಯಃ ಸಹ್ಯಪಾದ ವಿನಿರ್ಗತಾಃ ।**
**ಕೃತಮಾಲಾ ತಾಮ್ರಪರ್ಣೀ ವಂಜುಲಾ ಚೋತ್ಪಲಾವತೀ ॥ ೩೨ ॥**

---

ಪಿಪ್ಪಲಶ್ರೋಣೀ, ವಿಪಾಶಾ, ವಂಜುಲಾವತೀ, ತತ್ಸಂತಜಾ, ಶುಕ್ತಿಮತೀ, ಚಕ್ರಿಣೀ, ತ್ರಿದಿವಾ, ವಸು,- ಮತ್ತು.

೨೮-೨೯. ವಿಂಧ್ಯಪರ್ವತದ ಸಮೀಪದ ಬೆಟ್ಟಗಳಿಂದ ಋಕ್ಷಪಾದಪ್ರಸೂತಾ, ವಲ್ಗುವಾಹಿನೀ, ಶಿವಾ, ಪಯೋಷ್ಣೀ, ನಿರ್ವಿಂಧ್ಯಾ, ತಾಪೀ, ನಿಷಧಾವತೀ, ವೇಣಾ, ವೈತರಣೀ, ಸಿನೀಬಾಹುಃ, ಕುಮುದ್ವತೀ, ತೋಯಾ, ರೇವಾ, ಮಹಾಗೌರೀ, ದುರ್ಗಂಧಾ, ವಾಶಿಲಾ, ಈ ಪುಣ್ಯಕರವಾದ ನದಿಗಳು ಪ್ರವಹಿಸುತ್ತವೆ. ಮತ್ತು

೩೦-೩೨. ಗೋದಾವರೀ, ಭಿಮರಥೀ, ಕೃಷ್ಣಾ, ವೇಣ್ಯಾ, ಸರಿದ್ವತೀ, ವಿಷಮುದ್ರೀ, ಸುಪ್ರಯೋಗಾ, ವಾಹ್ಯಾ, ಕಾವೇರೀ, ದುಗ್ಧೋದಾ, ನಲಿನೀ, ವಾರಿಸೇನಾ, ಕಲಸ್ವನಾ, ಈ ಮಹಾನದಿಗಳು ಸಹ್ಯಪರ್ವತದ ಪ್ರಾಂತಭಾಗದಿಂದ ಉದ್ಭವಿಸುತ್ತವೆ. ಮತ್ತು ಕೃತಮಾಲಾ, ತಾಮ್ರಪರ್ಣೀ, ವಂಜುಲಾ, ಉತ್ಪಲಾವತೀ, ಪುಸೀ, ಸುದಾಮಾ, ಈ ನದಿಗಳು ಶಕ್ತಿಮತ್ಪರ್ವತದಿಂದ ಉದ್ಭವಿಸಿ ಹರಿಯುತ್ತವೆ.

ಶುನೀ ಚೈವ ಸುದಾಮಾ ಚ ಶಕ್ತಿಮತ್ಪ್ರಭವಾಸ್ತ್ವಿಮಾಃ ।
ಸರ್ವಾಃ ಪುಣ್ಯಾಃ ಸರಸ್ವತ್ಯಃ ಪಾಪಪ್ರಶಮನಾಸ್ತಥಾ ॥ ೩೩ ॥

ಜಗತೋ ಮಾತರಃ ಸರ್ವಾಃ ಸರ್ವಾಃ ಸಾಗರಯೋಷಿತಃ ।
ಅನ್ಯಾಃ ಸಹಸ್ರಶಶ್ಚಾತ್ರ ಕ್ಷುದ್ರನದ್ಯೋ ಹಿ ರಾಕ್ಷಸ ॥ ೩೪ ॥

ಸದಾ ಕಾಲವಹಾಶ್ಚಾನ್ಯಾ ಪ್ರಾವೃಟ್ಕಾಲವಹಾಸ್ತಥಾ ।
ಮಧ್ಯದೇಶೋದ್ಭವಾ ಏತಾಃ ಪಿಬಂತಿ ಸ್ವೇಚ್ಛಯಾ ಶುಭಾಃ ॥ ೩೫ ॥

ಯತ್ಸ್ಥಾಃ ಕುಶೂದ್ರಾಃ ಕಿಲ ಕುಂಡಲಾಶ್ಚ
ಪಂಚಾಲಕಾಶ್ಚೈವ ಸಹಕೌಶಿಕೈಶ್ಚ ।
ವೃಕಾಃ ಶಕಾ ಬರ್ಬರಕೌರವಾಶ್ಚ
ಕಲಿಂಗವಂಗಾಂಗಜನಾಸ್ತಥೈತೇ ॥ ೩೬ ॥

ಮರ್ಮಕಾ ಮಧ್ಯದೇಶೀಯಾ ಆಭೀರಾಃ ಶಾತ್ಯಧಾನಕಾಃ ।
ಬಾಹ್ಲೀಕಾ ವಾಟಧಾನಾಶ್ಚ ಅಭಿರಾಃ ಕಾಲತೋಯದಾಃ ॥ ೩೭ ॥

ಅಪರಾಂತಾಸ್ತಥಾ ಶೂದ್ರಾಃ ಪಲ್ಲವಾಶ್ಚ ಸಖೇಟಕಾಃ ।
ಗಾಂಧಾರಾ ಯವನಾಶ್ಚೈವ ಸಿಂಧು ಸೌವೀರಭದ್ರಕಾಃ ॥ ೩೮ ॥

---

೩೩-೩೫. ಈ ನದಿಗಳೆಲ್ಲವೂ ಪುಣ್ಯಕರಗಳಾಗಿಯೂ ಅನೇಕ ಸರೋವರಗಳಿಗೆ ಆಶ್ರಯವಾಗಿಯೂ ಜಗತ್ತಿಗೆ ತಾಯಿಯಂತೆ ರಕ್ಷಕವಾಗಿವೆ. ಇವೆಲ್ಲವೂ ಸಮುದ್ರವೆಂಬ ಮಹಾಪುರುಷನ ಪತ್ನಿಗಳು, ಇವುಗಳಲ್ಲದೆ ಬೇರೆ ಸಾವಿರಾರು ಕ್ಷುದ್ರನದಿಗಳೂ ಇವೆ. ಇವುಗಳಲ್ಲಿ ಕೆಲವು ಸರ್ವಕಾಲದಲ್ಲೂ ಪ್ರವಹಿಸುವುವು. .ಕೆಲವು ವರ್ಷಾಕಾಲದಲ್ಲಿ ಮಾತ್ರ ಪ್ರವಹಿಸುವುವು. ಈ ಶುಭನದಿಗಳ ಜಲವನ್ನು ಮಧ್ಯದೇಶದ ಜನಗಳು ಸ್ವೇಚ್ಛೆಯಿಂದ ಪಾನಮಾಡುತ್ತಾರೆ.

೩೬-೪೦. ಅಂತಹ ಈ ಕುಮಾರದ್ವೀಪದಲ್ಲಿ ಮಧ್ಯಭಾಗದಲ್ಲಿರುವ ದೇಶಗಳು ಮತ್ತು ಅಲ್ಲಿಯ ಜನರ ಜಾತಿಭೇದಗಳು ಈ ರೀತಿ ಇರುತ್ತವೆ. ಕುಶೂದ್ರ, ಕುಂಡಲ, ಪಾಂಚಾಲಕ, ಕೌಶಿಕರು, ವೃಕ, ಶಕ, ಬರ್ಬರ, ಕೌರವ, ಕಲಿಂಗ, ವಙ್ಗ, ಅಂಗಜನ, ಮರ್ಮಕ, ಇವರು ಮಧ್ಯದೇಶೀಯರು, (ಈ ಹೆಸರುಗಳು ದೇಶಕ್ಕೂ ಅಲ್ಲಿರುವ ಜನರಿಗೂ ಬೋಧಕವಾಗುತ್ತವೆ.) ಆಭೀರ, ಶಾತ್ಯಧಾನಕ, ಬಾಹ್ಲೀಕ, ವಾಟಧಾನ,

ಶಾತದ್ರವಾ ಲಲಿತ್ಥಾಶ್ಚ ಪಾರಾವತ ಸಮೂಷಕಾಃ ।
ಮಾಠರೋದಕಧಾರಾಶ್ಚ ಕೈಕೇಯಾ ದಂಶನಾಸ್ತಥಾ ॥ ೩೯ ॥

ಕ್ಷತ್ರಿಯಾಃ ಪ್ರತಿವೈಶ್ಯಾಶ್ಚ ತಥಾ ಶೂದ್ರಕುಲಾನಿ ಚ ।
ಕಾಂಬೋಜಾ ದರದಾಶ್ಚೈವ ಬರ್ಬರಾಶ್ಚಾಂಗಲೋಕಿಕಾಃ ॥ ೪೦ ॥

ವೇಣಾಶ್ಚೈವ ತುಷಾರಾಶ್ಚ ಬಹುಧಾ ಬಾಹ್ಯತೋದರಾಃ ।
ಆತ್ರೇಯಾಃ ಸಭರದ್ವಾಜಾಃ ಪ್ರಸ್ಥಲಾಶ್ಚ ದಶೇರಕಾಃ ॥ ೪೧ ॥

ಲಂಪಕಾಸ್ತಾವಕಾ ರಾಮಾಶ್ಚೂಡಿಕಾ ಸ್ತಂಗಣೈಸ್ಸಹ ।
ಅಲಸಾಶ್ಚಾಲಿಭದ್ರಾಶ್ಚ ಕಿರಾತಾನಾಂ ಚ ಜಾತಯಃ ॥ ೪೨ ॥

ತಾಮಸಾಃ ಕರ್ಮಮಾರ್ಗಾಶ್ಚ ಸುಪಾರ್ಶ್ವಾಗಣಕಾಸ್ತಥಾ ।
ಕುಲೂತಾಃ ಕುಲಿಕಾಶ್ಚೂರ್ಣಾಸ್ತೂರ್ಣಪಾದಾಃ ಸಕುಕ್ಕುಟಾಃ ॥ ೪೩ ॥

ಮಾಂಡವ್ಯಾಃ ಪಾಣವೀಯಾಶ್ಚ ಉತ್ತರಾಪಥವಾಸಿನಃ ।
ಅಂಗಾ ವಂಗಾ ಮುದ್ಗುರವಾಃ ಸ್ವಂತರ್ಗಿರಿರ್ಬಹಿರ್ಗಿರಾಃ ॥ ೪೪ ॥

---

ಅಭಿರ, ಕಾಲತೋಯದ, ಅಪರಾಂತ, ಶೂದ್ರ, ಪಲ್ಲವ, ಖೇಟಕ, ಗಾಂಧಾರ, ಯವನ, ಸಿಂಧು, ಸೌವೀರ, ಭದ್ರಕ, ಶಾತದ್ರವ, ಲಲಿತ್ಥ, ಪಾರಾವತ, ಮೂಷಕ, ಮಾಠರ, ಉದಕಧಾರ, ಕೈಕೇಯ, ದಂಶನ, ಕ್ಷತ್ರಿಯ, ಪ್ರತಿವೈಶ್ಯ, ಅನೇಕ ಶೂದ್ರ ಜಾತಿಗಳು ಮತ್ತು

೪೦-೪೪. ಕಂಭೋಜ, ದರವ, ಬರ್ಬರ, ಅಂಗಲೋಕಿಕ, ವೇಣ, ತುಷಾರ. ಬಾಹ್ಯತೊದರ, ಆತ್ರೇಯ, ಭರದ್ವಾಜ, ಪ್ರಸ್ಥಲ, ದಶೇರಕ, ಲಂಪಕ, ಸ್ತಾವಕ, ಆರಾಮ, ಚೂಡಿಕ, ತಂಗಣ, ಅಲಸ, ಅಲಿಭದ್ರ, ಕೆಲವು ಕಿರಾತಜಾತಿಗಳು, ತಾಮಸ, ಕರ್ಮಮಾರ್ಗ, ಸುಪಾರ್ಶ್ವ, ಗಣಕ, ಕುಲೂತ, ಕುಹಿಕ, ಚೂರ್ಣ, ತೂರ್ಣಪಾದ, ಕುಕ್ಕುಟ, ಮುಂಡವ್ಯ, ಪಾಣವೀಯ, ಇವರು ಉತ್ತರದಿಕ್ಕಿನ ನಿವಾಸಿಗಳು. ಇವುಗಳಲ್ಲಿ ನಿರ್ದಿಷ್ಟವಾದ ನಾಮಗಳು, ದೇಶಕ್ಕೂ ದೇಶದಲ್ಲಿ ವಾಸಿಸುವ ಜನಸಾಮಾನ್ಯಕ್ಕೂ ಅನ್ವಯಿಸುತ್ತವೆ.

ತಥಾ ಪ್ರವಂಗಾ ವಾಂಗೇಯಾ ಮಾಂಸಾದಾ ಬಲದಂತಿಕಾಃ ।
ಬ್ರಹ್ಮೋತ್ತರಾಃ ಪ್ರಾವಿಜಯಾ ಭಾರ್ಗವಾಂಗೇಯಮರ್ಷಕಾಃ ॥ ೪೫ ॥

ಪ್ರಾಗ್ಜ್ಯೋತಿಷಾಃ ಪೃಷಧ್ರಾಶ್ಚ ವಿದೇಹಾಸ್ತಾಮ್ರಲಿಪ್ತಕಾಃ ।
ಮಾಲಾ ಮಗಧಮಾನಂದಾಃ ಪ್ರಾಚ್ಯಾ ಜನಪದಾಸ್ತ್ವಿಮೇ ॥ ೪೬ ॥

ಪುಂಡ್ರಾಶ್ಚ ಕೇರಲಾಶ್ಚೈವ ಚೌಡಾಃ ಕುಲ್ಯಾಶ್ಚ ರಾಕ್ಷಸ ।
ಜಾನುಕಾ ಮೂಷಿಕಾದಾಶ್ಚ ಕುಮಾರಾದಾ ಮಹಾಶಕಾಃ ॥ ೪೭ ॥

ಮಹಾರಾಷ್ಟ್ರಾ ಮಾಹಿಷಿಕಾಃ ಕಲಿಂಗಾಶ್ಚೈವ ಸರ್ವಶಃ ।
ಆಭೀರಾಃ ಸಹ ವೈಸಕ್ಯಾ ಆರಣ್ಯಾಃ ಶಬರಾಶ್ಚ ಯೇ ॥ ೪೮ ॥

ಪುಲಿಂದಾವಿಂಧ್ಯಶೈಲೇಯಾ ವೈದರ್ಭಾ ದಂಡಕೈಃ ಸಹ ।
ಪೌರಿಕಾಃ ಸಾರಿಕಾಶ್ಚೈವ ಅಶ್ಮಕಾ ಭೋಗವರ್ಧನಾಃ ॥ ೪೯ ॥

ನೈಮಿಕಾಃ ಕುಂದಲಾ ಆಂಧ್ರಾಃ *ಉಳಿದಾ ನಲಕಾರಕಾಃ ।
ದಾಕ್ಷಿಣಾತ್ಯಾ ಜನಪದಾಸ್ತ್ವಿಮೇ ಶಾಲಕಟಂಕಟ ॥ ೫೦ ॥

---

೪೫-೪೬. ಅಂಗ, ವಂಗ, ಮದ್ಗುರವ, ಸ್ವಂತರ್ಗಿರಿ, ಬಹಿರ್ಗಿರ, ವಾಂಗೇಯ, ಮಾಂಸಾದ, ಬಲದಂತಿಕಾ, ಬ್ರಹ್ಮೋತ್ತರ, ಪ್ರಾವಿಜಯ, ಭಾರ್ಗವ, ಅಂಗೇಯ, ಮರ್ಷಕ, ಪ್ರಾಗ್ಜ್ಯೋತಿಷ, ಪೃಷಧ್ರ, ವಿದೇಹ, ತಾಮ್ರಲಿಪ್ತಕ, ಮಾಲಾ, ಮಗಧ, ಮಾನಂದ, ಇವುಗಳು ಪೂರ್ವದಿಕ್ಕಿನಲ್ಲಿರುವ ರಾಷ್ಟ್ರಗಳು.

೪೭-೪೯. ಪುಂಡ್ರ, ಕೇರಲ, ಚೌಡ, ಕುಲ್ಯ, ಜಾನುಕ, ಮೂಷಿಕಾದ, ಕುಮಾರಾದ, ಮಹಾಶಕ, ಮಹಾರಾಷ್ಟ್ರ, ಮಾಹಿಷಿಕ, ಕಲಿಂಗ, ಆಭೀರ, ವೈಸಕೀ, ಅರಣ್ಯವಾಸಿಗಳಾದ ಶಬರರು, ಪುಲಿಂದರು ಇವರು ವಿಂಧ್ಯಪರ್ವತದ ದೇಶಕ್ಕೆ ಸೇರಿದ ಜನಗಳು.

೫೦. ವೈದರ್ಭ, ದಂಡಕ, ಪೌರಿಕ, ಸಾರಿಕ, ಅಶ್ಮಕ, ಭೋಗವರ್ಧನ, ನೈಮಿಕ, ಕುಂದಲ, ಆಂಧ್ರ, ಉದ್ಭಿದ, ನಲಕಾರಕ, ಇವು ದಕ್ಷಿಣದಿಕ್ಕಿಗೆ ಸೇರಿದ ರಾಷ್ಟ್ರಗಳು.

---

* ಇಲ್ಲಿ ಉದ್ಭಿದಾ, ಉಚ್ಛಿದಾ ಎಂಬ ಪಾಠಗಳು ಬೇರೆ ಪುಸ್ತಕದಲ್ಲಿವೆ.

**ಶೂರ್ಪಾರಕಾ ವಾರಿಧಾನಾ ದುರ್ಗಾಶ್ಚಾಲೀಕಟೈಃ ಸಹ ।**
**ಪುಲೀಯಾಶ್ಚಾಸಿನೀಲಾಶ್ಚ ತಾಪಸಾಸ್ತಾಮಸಾಸ್ತಥಾ** ॥ ೫೦ ॥

**ಕಾರಸ್ಕರಾಸ್ತುಭಮಿನೋ ನಾಸಿಕಾಂತಾಃ ಸುನರ್ಮದಾಃ ।**
**ದಾರುಕಚ್ಛಾಃ ಸುಮಾಹೇಯಾಃ ಸಹ ಸಾರಸ್ವತೈರಪಿ** ॥ ೫೨ ॥

**ವಾತ್ಸೀಯಾಶ್ಚ ಸುರಾಷ್ಟ್ರಾಶ್ಚ ಆವಂತ್ಯಾಶ್ಚಾರ್ಬುದೈಃ ಸಹ ।**
**ಇತ್ಯೇತೇ ಪಶ್ಚಿಮಾಮಾಶಾಂ ಸ್ಥಿತಾ ಜಾನಪದಾ ಜನಾಃ** ॥ ೫೩ ॥

**ಕಾರೂಷಾಶ್ಚೈಕಲವ್ಯಾಶ್ಚ ಮೇಕಲಾಶ್ಚೋತ್ಕಲೈಃ ಸಹ ।**
**ಉತ್ತಮರ್ಣಾ ದಶಾರ್ಣಾಶ್ಚ ಗೋಪ್ತಾಃ ಕಿಂಕರವೈಃ ಸಹ** ॥ ೫೪ ॥

**ತೋಶಲಾಃ ಕೋಶಲಾಶ್ಚೈವ ತ್ರೈಪುರಾಃ ಖೇಲ್ಲಿಶಾಸ್ತಥಾ ।**
**ತುರಗಾಸ್ತುಂಬರಾಶ್ಚೈವ ವಹೇಲಾ ನೈಷಧೈಃ ಸಹ** ॥ ೫೫ ॥

**ಅನೂಪಾಸ್ತುಂಡಿಕೇರಾಶ್ಚ ವೀತಿಹೋತ್ರಾಸ್ತ್ವವಂತಯಃ ।**
**ಸುಕೇಶೇ ವಿಂಧ್ಯಮೂಲಸ್ಥಾಸ್ತ್ವಿನೋ ಜನಪದಾಃ ಸ್ಮೃತಾಃ** ॥ ೫೬ ॥

---

೫೦-೫೩. ಶೂರ್ಪಾರಕ, ವಾರಿಧಾನ, ದುರ್ಗ, ಚಾಲೀಕಟ, ಪುಲೀಯ. ಅಸಿನೀಲ, ತಾಪಸ, ತಾಮಸ, ಕಾರಸ್ಕರ, ಭಮಿನ, ನರ್ಮದೆಯೊಡನೆ ಕೂಡಿರುವ ನಾಸಿಕಾಂತಪ್ರದೇಶ ದಾರುಕಚ್ಛ, ಸುಮಾಹೇಯ, ಸಾರಸ್ವತ, ವಾತ್ಸೀಯ, ಸುರಾಷ್ಟ್ರ, ಅವಂತೀ ಅರ್ಬುದ, ಈ ರಾಷ್ಟ್ರಗಳೂ ಇಲ್ಲಿರುವ ಸಮಾನನಾಮಧೇಯವುಳ್ಳ ಜನಗಳೂ ಸಹ ಪಶ್ಚಿಮದಿಗ್ಭಾಗಕ್ಕೆ ಸೇರಿದವರು.

೫೪-೫೬. ಕಾರೂಷ, ಏಕಲವ್ಯ, ಮೇಕಲ, ಉತ್ಕಲ, ಉತ್ತಮರ್ಣ, ದಶಾರ್ಣ, ಗೋಪ್ತಾ, ಕಿಂಕರವ, ತೋಶಲ, ಕೋಶಲ, ತ್ರೈಪುರ, ಖೇಲ್ಲಿಶ, ತುರಗ, ತುಂಬರ, ವಹೇಲ, ನೈಷಧ, ಅನೂಪ, ತುಂಡಿಕೇರ, ವೀತಿಹೋತ್ರ, ಅವಂತಿ, ಈ ರಾಷ್ಟ್ರಗಳು ವಿಂಧ್ಯಪರ್ವತದ ಮೂಲಪ್ರದೇಶದಲ್ಲಿವೆ.

ಆದ್ಯಾನ್ದೇಶಾನ್ಪ್ರವಕ್ಷ್ಯಾಮಃ ಪರ್ವತಾಶ್ರಯಿಣಸ್ತು ತೇ ।
ನಿರಾಹಾರಾ ಹಂಸಮಾರ್ಗಾ ಕುಪಥಾ ಸ್ತಂಗಣಾಃ ಖಶಾಃ ॥ ೫೭ ॥

ಕುಥಪ್ರಾವರಣಾಶ್ಚೈವ ಊರ್ಣಾಪ್ಲುಷ್ಟಾಃ ಸುಹೂಹುಕಾಃ ।
ತ್ರಿಗರ್ತಾಶ್ಚ ಕಿರಾತಾಶ್ಚ ತೋಮರಾಃ ಶಶಿಖಾದ್ರಿಕಾಃ ॥ ೫೮ ॥

ಇಮೇ ತವೋಕ್ತಾ ವಿಷಯಾಃ ಸುವಿಸ್ತರಾ
ದ್ವೀಪೇ ಕುಮಾರೇ ರಜನೀಚರೇಶ ।
ಏತೇಷು ದೇಶೇಷು ಚ ದೇಶಧರ್ಮಾ
ನ್ಸಂಕೀರ್ತ್ಯಮಾನಾಞ್ಛೃಣು ತತ್ವತೋ ಹಿ ॥ ೫೯ ॥

ಇತಿ ಶ್ರೀ ವಾಮನಪುರಾಣೇ ಭುವನಕೋಶವರ್ಣನೇ
ತ್ರಯೋದಶೋಽಧ್ಯಾಯಃ

---

೫೭-೫೯. ಯಾವ ದೇಶಗಳು ಪರ್ವತಾಶ್ರಯದಿಂದ ಉತ್ಕೃಷ್ಟವಾಗಿವೆಯೋ ಅಂತಹ ದೇಶಗಳನ್ನೂ ಹೇಳುತ್ತೇವೆ ಕೇಳು. ನಿರಾಹಾರ, ಹಂಸಮಾರ್ಗ, ಕುಪಥ, ತಂಗಣ, ಖಶ, ಕುಥಪ್ರಾವರಣ, ಊರ್ಣಾಪ್ಲುಷ್ಟಾ, ಸುಹೂಹುಕ, ತ್ರಿಗರ್ತ, ಕಿರಾತ, ತೋಮರ, ಶಶಿಖಾದ್ರಿಕ ಇವುಗಳು. ಈ ಪ್ರಕಾರ ಈ ಕುಮಾರದ್ವೀಪಕ್ಕೆ ಅನುಬಂಧಿಸಿರುವ ವಿಸ್ತಾರವಾದ ವಿಷಯಗಳನ್ನೆಲ್ಲಾ ನಿನಗೆ ಹೇಳಿದ್ದಾಯಿತು. ಎಲೈ, ರಾಕ್ಷಸ ರಾಜನೇ, ಈ ದೇಶದಲ್ಲಿ ಭಿನ್ನಭಿನ್ನವಾದ ದೇಶಧರ್ಮಗಳನ್ನು ಇನ್ನು ಮುಂದೆ ಹೇಳುತ್ತೇವೆ. ಕೇಳು.

ಇಲ್ಲಿಗೆ ಶ್ರೀ ವಾಮನಪುರಾಣದಲ್ಲಿ ಭುವನಕೋಶವರ್ಣನವೆಂಬ
ಹದಿಮೂರನೆಯ ಅಧ್ಯಾಯವು ಮುಗಿದಿದೆ.

## ಅಧ್ಯಾಯಾರ್ಥ ಸಂಗ್ರಹ

ಈ ಅಧ್ಯಾಯದಲ್ಲಿ ಜಂಬೂದ್ವೀಪದ ಪರಿಸ್ಥಿತಿಯನ್ನು ಹೇಳಬೇಕೆಂಬ ಸುಕೇಶಿಯ ಉಪಪ್ರಶ್ನೆಗೆ ಉತ್ತರವಾಗಿ ಜಂಬೂದ್ವೀಪವು ಇಲಾವೃತವೇ ಮೊದಲಾದ ಒಂಭತ್ತು ವರ್ಷಗಳಿಂದ ಕೂಡಿದೆ ಎಂದುಪಕ್ರಮಿಸಿ ಆ ವರ್ಷಗಳೆಲ್ಲವನ್ನೂ ದಿಙ್ನಿರ್ಣಯ ಪೂರ್ವಕವಾಗಿ ಪ್ರತಿಪಾದಿಸಲಾಯಿತು. ಈ ವರ್ಷಗಳಲ್ಲಿ ದಕ್ಷಿಣಭಾಗದ ಭಾರತ ವರ್ಷವನ್ನು ನವದ್ವೀಪಗಳನ್ನಾಗಿ ವಿಭಾಗಿಸಿ ಆ ದ್ವೀಪಗಳ ನಾಮಗಳನ್ನೆಲ್ಲಾ ನಿರ್ದೇಶ ಮಾಡಿ ನಾವು ವಾಸಮಾಡುತ್ತಿರುವ ದ್ವೀಪವು ಒಂಭತ್ತನೆಯದಾದ ಕುಮಾರ ದ್ವೀಪವೆಂದು ಪ್ರತಿಪಾದಿಸಲಾಯಿತು. ಮತ್ತು ಈ ದ್ವೀಪದಲ್ಲಿ ನಾಲ್ಕು ದಿಕ್ಕುಗಳಲ್ಲಿಯೂ ಮಧ್ಯಭಾಗದಲ್ಲಿಯೂ ಸಹ ವಾಸಿಸುವ ಜನಗಳನ್ನು ಸಾಮಾನ್ಯವಾಗಿ ಪರಿಶೀಲಿಸಲಾಯಿತು. ಮತ್ತು ಈ ದ್ವೀಪದಲ್ಲಿರುವ ಕುಲಪರ್ವತಗಳು, ಸಾಮಾನ್ಯವಾದ ಪರ್ವತಗಳು, ಮಹಾನದಿಗಳು, ಎಲ್ಲವನ್ನೂ ವಿಸ್ತಾರವಾಗಿ ಹೇಳಿ, ಆಯಾಯ ದಿಕ್ಕಿನಲ್ಲಿರುವ ರಾಷ್ಟ್ರಗಳನ್ನೂ ಜನಗಳನ್ನೂ ವಿಸ್ತಾರವಾಗಿ ನಿರೂಪಿಸಲಾಯಿತು.



॥ ಶ್ರೀಃ ॥

# ಶ್ರೀವಾಮನಪುರಾಣಂ

## ಚತುರ್ದಶೋಽಧ್ಯಾಯಃ

**ಋಷಯ ಊಚುಃ**

**ಅಹಿಂಸಾ ಸತ್ಯಮಸ್ತೇಯಂ ದಾನಂ ಕ್ಷಾಂತಿರ್ದಮಃ ಶಮಃ ।**
**ಅಕಾರ್ಪಣ್ಯಂ ಚ ಶೌಚಂ ಚ ತಪಶ್ಚ ರಜನೀಚರ ॥ ೧ ॥**

**ದಶಾಂಗೋ ರಾಕ್ಷಸಶ್ರೇಷ್ಠ ಧರ್ಮೋಽಸೌ ಸಾರ್ವವರ್ಣಿಕಃ ।**
**ಬ್ರಾಹ್ಮಣಸ್ಯಾಪಿ ವಿಹಿತಾ ಚಾತುರಾಶ್ರಮ್ಯಕಲ್ಪನಾ ॥ ೨ ॥**

---

## ಹದಿನಾಲ್ಕನೆಯ ಅಧ್ಯಾಯವು

೧-೨. ಋಷಿಗಳು ಹೇಳುತ್ತಾರೆ: ಎಲೈ ರಾಕ್ಷಸಶ್ರೇಷ್ಠನೇ, ಧರ್ಮಗಳಲ್ಲಿ ಸಾಮಾನ್ಯಧರ್ಮವೆಂದೂ, ವಿಶೇಷಧರ್ಮವೆಂದೂ ಎರಡು ಪ್ರಕಾರ ಉಂಟು. ಎಲ್ಲಾ ವರ್ಣಾಶ್ರಮದವರಿಗೂ ಅನ್ವಯಿಸುವ ಧರ್ಮಗಳು ಸಾಮಾನ್ಯಧರ್ಮವೆಂದೂ ವರ್ಣ ವಿಶೇಷವನ್ನೂ ಆಶ್ರಮ ವಿಶೇಷವನ್ನೂ ದೇಶವಿಶೇಷವನ್ನೂ ನಿಮಿತ್ತೀಕರಿಸಿ ಅನ್ವ ಯಿಸುವ ಧರ್ಮಗಳು ವಿಶೇಷ ಧರ್ಮವೆಂದೂ ತಿಳಿಯಬೇಕು. ಈ ವಿಧವಾದ ಧರ್ಮ ದಲ್ಲಿ ಅಹಿಂಸಾ, ಸತ್ಯಭಾಷಣ, ಚೌರ್ಯವಿಲ್ಲದಿರುವಿಕೆ, ಯಥಾಶಕ್ತಿ ಇತರರಿಗೆ ಉಪಕರಿಸು ವುದು, ಕ್ಷಮೆ, (ಸಹನಶಕ್ತಿ) ಅಂತರಿಂದ್ರಿಯನಿಗ್ರಹ, ಬಹಿರಿಂದ್ರಿಯನಿಗ್ರಹ, ಸಂತುಷ್ಟ ಸ್ವಭಾವತೆ, ಶುಚಿಸ್ವಭಾವ, ಶಾಸ್ತ್ರೀಯವಾದ ಉಪವಾಸಾದಿಗಳಿಂದ ಕಾಯಶೋಷಣ, ಈ ಹತ್ತು ಅಂಗಗಳುಳ್ಳ ಸಾಮಾನ್ಯಧರ್ಮವು ಎಲ್ಲಾ ವರ್ಣದವರಿಗೂ ಸಮಾನ ವಾದದ್ದು. ಬ್ರಾಹ್ಮಣನಿಗೆ ಈ ಸಾಮಾನ್ಯಧರ್ಮವಲ್ಲದೆ ನಾಲ್ಕು ಆಶ್ರಮಗಳಿಗೆ ಬೇರೆ ಬೇರೆಯಾಗಿ ವಿಹಿತಗಳಾದ ವಿಶೇಷಧರ್ಮಗಳೂ ಸೇರಿವೆ.

**ಸುಕೇಶಿರುವಾಚ**

**ವಿಪ್ರಾಣಾಂ ಚಾತುರಾಶ್ರಮ್ಯಂ ವಿಸ್ತರಾನ್ಮೇ ತಪೋಧನಾಃ ।**
**ಆಚಕ್ಷಧ್ವಂ ನ ಮೇ ತೃಪ್ತಿಃ ಶೃಣ್ವತಃ ಪ್ರತಿಪದ್ಯತೇ ॥ ೩ ॥**

**ಋಷಯ ಊಚುಃ**

**ಕೃತೋಪನಯನಃ ಸಮ್ಯಗ್ಬ್ರಹ್ಮಚಾರೀ ಗುರೌ ವಸೇತ್ ।**
**ತತ್ರ ಧರ್ಮೋಽಸ್ಯ ಯಸ್ತಂ ತ್ವಂ ಕಥ್ಯಮಾನಂ ನಿಶಾಮಯ ॥ ೪ ॥**

**ಸ್ವಾಧ್ಯಾಯೋಽಥಾಗ್ನಿಶುಶ್ರೂಷಾ ಸ್ನಾನಂ ಭಿಕ್ಷಾಟನಂ ತಥಾ ।**
**ಗುರೋರ್ನಿವೇದ್ಯ ತಚ್ಚಾದ್ಯಮನುಜ್ಞಾತೇನ ಸರ್ವಥಾ ॥ ೫ ॥**

**ಗುರೋಃ ಕರ್ಮಾಣಿ ಸೋದ್ಯೋಗಃ ಸಮ್ಯಕ್ಪ್ರೀತ್ಯುಪಪಾದನಂ ।**
**ತೇನಾಹೂತಃ ಪಠೇಚ್ಚೈವ ತತ್ಪರೋ ನಾನ್ಯಮಾನಸಃ ॥ ೬ ॥**

---

೩-೪. ಎಲೈ ತಪೋಧನರೇ, ಈ ವಿಷಯಗಳನ್ನೆಲ್ಲಾ ಕೇಳುತ್ತಿರುವ ನನಗೆ ತೃಪ್ತಿಯೇ ಉಂಟಾಗದೆ ಮುಂದೆಮುಂದೆ ಕೇಳಬೇಕೆಂಬ ಕುತೂಹಲವುಂಟಾಗುತ್ತಿದೆ. ಬ್ರಾಹ್ಮಣರ ಚಾತುರಾಶ್ರಮ್ಯವೆಂದರೇನು, ಅವುಗಳ ಸ್ವರೂಪವೇನು ಎಂಬುದನ್ನು ವಿಸ್ತಾರವಾಗಿ ಹೇಳಬೇಕು ಎಂದು ಸುಕೇಶಿಯು ಪ್ರಶ್ನೆಮಾಡಲಾಗಿ ಋಷಿಗಳು ಹೇಳುತ್ತಾರೆ: ಉಪನಯನವನ್ನು ಹೊಂದಿದ ಬ್ರಾಹ್ಮಣನು ಬ್ರಹ್ಮಚಾರಿಯಾಗುತ್ತಾನೆ. (ಉಪನಯನವೆಂಬುದು ವೇದಾಧ್ಯಯನಕ್ಕೆ ಅರ್ಹತೆಯನ್ನುಂಟುಮಾಡುವ ಒಂದು ಸಂಸ್ಕಾರ. ಇದನ್ನು ಹೊಂದಿದವನಿಗೆ ಬ್ರಹ್ಮಚಾರಿ ಎಂದು ಹೆಸರು. ಬ್ರಹ್ಮವೆಂದರೆ ವೇದ. ಅದರ ಅಧ್ಯಯನಕ್ಕಾಗಿ ನಿರ್ದಿಷ್ಟವಾಗಿರುವ ವ್ರತಗಳನ್ನೂ ಬ್ರಹ್ಮವೆಂದು ಭಾವಿಸಬೇಕು. ಅದನ್ನು ಆಚರಿಸತಕ್ಕವನು ಎಂದು ಶಬ್ದಾರ್ಥವಾಗುತ್ತದೆ.) ಇಂತಹ ಬ್ರಹ್ಮಚಾರಿಯು ಗುರುಕುಲದಲ್ಲಿ ವಾಸಮಾಡಬೇಕು. ಇವನ ಧರ್ಮಗಳನ್ನೂ ಹೇಳುತ್ತೇವೆ. ಇವುಗಳೇ ಬ್ರಹ್ಮಚರ್ಯಾಶ್ರಮದ ಧರ್ಮಗಳೆಂದು ತಿಳಿಯಬೇಕು.

೫-೬. ವೇದಾಧ್ಯಯನ, ಅಗ್ನಿಶುಶ್ರೂಷೆ, ಸ್ನಾನ, ಭಿಕ್ಷಾಟನ ಇವು ಈ ಬ್ರಹ್ಮಚಾರಿಯ ಮುಖ್ಯ ಕಾರ್ಯಗಳು. ಭಿಕ್ಷಾಟನದಿಂದ ಲಬ್ಧವಾದ ಅನ್ನವನ್ನು ಗುರುವಿಗೆ ಅರ್ಪಿಸಿ ಅವನ ಅಪ್ಪಣೆಯಿಂದ ಅದನ್ನು ಊಟಮಾಡಬೇಕು. ಮತ್ತು ಗುರುವು ಹೇಳಿದ ಕೆಲಸದಲ್ಲಿ ಉತ್ಸಾಹಶಾಲಿಯಾಗಿ ಚನ್ನಾಗಿ ಅವನಿಗೆ ಮನಮೆಚ್ಚು

**ಏಕಂ ದ್ವೌ ಸಕಲಾನ್ವಾಪಿ ವೇದಾನ್ಪ್ರಾಪ್ಯ ಗುರೋರ್ಮುಖಾತ್ ।**
**ಅನುಜ್ಞಾತೋ ವರಂ ದತ್ವಾ ಗುರುವೇ ದಕ್ಷಿಣಾಂ ತತಃ ॥ ೭ ॥**

**ಗೃಹಸ್ಥಾಶ್ರಮಕಾಮುಸ್ತು ಗಾರ್ಹಸ್ಥ್ಯಾಶ್ರಮಮಾವಸೇತ್ ।**
**ವಾನಪ್ರಸ್ಥಾಶ್ರಮಂ ವಾಪಿ ಚತುರ್ಥಂ ಸ್ವೇಚ್ಛಯಾತ್ಮನಃ ॥ ೮ ॥**

**ತತ್ರೈವ ವಾ ಗುರೋರ್ಗೇಹೇ ದ್ವಿಜೋ ನಿಷ್ಠಾಮವಾಪ್ನುಯಾತ್ ।**
**ಗುರೋರಭಾವೇ ತತ್ಪುತ್ರೇ ತಚ್ಛಿಷ್ಯೇ ತತ್ಸುತಾಂ ವಿನಾ ॥ ೯ ॥**

**ಶುಶ್ರೂಷನ್ನಿರಭಿಮಾನೋ ಬ್ರಹ್ಮಚರ್ಯಾಶ್ರಮಂ ವಸೇತ್ ।**
**ಏವಂ ಜಯತಿ ಮೃತ್ಯುಂ ಸ ದ್ವಿಜಃ ಸಾಲಕಟಂಕಟ ॥ ೧೦ ॥**

---

ವಂತೆ ವರ್ತಿಸಬೇಕು. ಪಾಠಕ್ಕಾಗಿ ಅವನು ಕರೆದಲ್ಲಿ ಆಗ ಏಕಮನಸ್ಕತೆಯಿಂದ ಅಧ್ಯಯನಮಾಡಬೇಕು. ಗುರುವಿಗೆ ಇಷ್ಟವಿಲ್ಲದ ಕಾಲದಲ್ಲಿ ನಿರ್ಬಂಧಿಸಬಾರದೆಂದರ್ಥ. ಹೀಗೆ ಗುರುಮುಖದಿಂದ ಸ್ವಶಾಖೆಯಾದ ಒಂದು ವೇದವನ್ನೂ ಸಾಮರ್ಥ್ಯವಿದ್ದಲ್ಲಿ ಎರಡು ಅಥವಾ ಎಲ್ಲಾ ವೇದವನ್ನೂ ಅಧ್ಯಯನಮಾಡಿ ಗುರುವಿನ ಅಪ್ಪಣೆಯನ್ನು ಹೊಂದಿ ಅವನ ಸಂತೋಷಕ್ಕಾಗಿ ವರ ಮತ್ತು ಗುರುದಕ್ಷಿಣೆಗಳನ್ನರ್ಪಿಸಿ ಗೃಹಸ್ಥಾಶ್ರಮದಲ್ಲಿ ಇಷ್ಟವಿದ್ದಲ್ಲಿ ಅದನ್ನು ವಹಿಸಬಹುದು.

೯-೧೦. ಅಥವಾ ತನ್ನ ಇಷ್ಟದಂತೆ ವಾನಪ್ರಸ್ಥಾಶ್ರಮವನ್ನಾಗಲಿ, ಸನ್ಯಾಸಾಶ್ರಮವನ್ನಾಗಲಿ ವಹಿಸಬಹುದು. ಗೃಹಸ್ಥಾಶ್ರಮವನ್ನು ಹೊಂದಲೇ ಬೇಕೆಂಬ ನಿರ್ಬಂಧವಿಲ್ಲವೆಂದು ತಾತ್ಪರ್ಯ. ಯಾವ ಆಶ್ರಮದಲ್ಲಿಯೂ ಇಚ್ಛೆ ಇಲ್ಲದಿದ್ದರೆ ಆಜೀವ ಬ್ರಹ್ಮಚಾರಿಯಾಗಿಯೇ ಇರಬಹುದು. (ಇವನೇ ಶಾಸ್ತ್ರದಲ್ಲಿ ನೈಷ್ಠಿಕಬ್ರಹ್ಮಚಾರಿ ಎಂದು ವ್ಯವಹರಿಸಲ್ಪಡುತ್ತಾನೆ) ಈ ರೀತಿಯಾಗಿರುವ ಬ್ರಹ್ಮಚಾರಿಗೆ ಗುರುವಿನ ಮನೆಯಲ್ಲಿಯೇ ಸ್ವಧರ್ಮಕ್ಕೆ ತಕ್ಕಂತೆ ವಾಸ, ಗುರುವು ಗತಿಸಿದಲ್ಲಿ ಅವನ ಪುತ್ರ, ಶಿಷ್ಯ ಇತ್ಯಾದಿ ಗುರುಸಂಬಂಧಿಗಳಲ್ಲಿ ಭಕ್ತಿಯಿಂದಿರುವುದು, ಗುರು ಪುತ್ರಿಯನ್ನು ಮಾತ್ರ ಈ ಸಂದರ್ಭದಲ್ಲಿ ಭಾವಿಸಬಾರದು. ಹೀಗೆ ನಿಷ್ಠೆಯಿಂದ ಶುಶ್ರೂಷೆಮಾಡುತ್ತಾ ಅಹಂಕಾರಮಮಕಾರಗಳನ್ನು ಬಿಟ್ಟು ಆಜನ್ಮ ಬ್ರಹ್ಮಚರ್ಯಾಶ್ರಮವನ್ನು ನಿರ್ವಹಿಸಿದ ಬ್ರಾಹ್ಮಣನು ಸರ್ವಮೃತ್ಯುವನ್ನೂ ಜಯಿಸಿ ಶಾಶ್ವತ ಸುಖಕ್ಕೆ ಭಾಗಿಯಾಗುತ್ತಾನೆ.

**ಉಪಾವೃತ್ತ್ಯಸ್ತು ತೈಸ್ತಸ್ಮಾದ್ಗೃಹಸ್ಥಾಶ್ರಮಕಾಮ್ಯಯಾ ।**
**ಅಸಮಾನಾರ್ಷಕುಲಜಾ ಕನ್ಯೋದ್ವಾಹ್ಯಾ ನಿಶಾಚರ ॥ ೧೧ ॥**

**ಸ್ವಕರ್ಮಣಾ ಧನಂ ಲಬ್ಧ್ವಾ ಪಿತೃದೇವಾತಿಥೀನಪಿ ।**
**ಸಮ್ಯಕ್ಸಂಪ್ರೀಣಯೇದ್ಭಕ್ತ್ಯಾ ಸದಾಚಾರರತೋ ದ್ವಿಜಃ ॥ ೧೨ ॥**

---

೧೧-೧೨. ಆ ರೀತಿ ನೈಷ್ಠಿಕ ಬ್ರಹ್ಮಚಾರಿಯಾಗಿರದೆ ಅಧ್ಯಯನ ಪರ್ಯಂತ ಗುರುಕುಲವಾಸದಲ್ಲಿದ್ದು ಅಧ್ಯಯನ ಮುಗಿದನಂತರ ಗೃಹಸ್ಥಾಶ್ರಮವನ್ನು ವಹಿಸುವ ಇಚ್ಛೆಯಿಂದ ಗುರುವಿನ ಅಪ್ಪಣೆಪಡೆದು ವಿವಾಹಹೊಂದಿ ಗೃಹಸ್ಥಾಶ್ರಮವನ್ನು ಹೊಂದ ಬಹುದು. (ಇಂತಹ ಬ್ರಹ್ಮಚಾರಿಗೆ ಉಪಕುರ್ವಾಣಬ್ರಹ್ಮಚಾರಿ ಎಂದು ಧರ್ಮಶಾಸ್ತ್ರ ಕಾರರ ವ್ಯವಹಾರವಿದೆ) ಆ ರೀತಿ ಗೃಹಸ್ಥನಾಗತಕ್ಕವನು, ತನಗೆ ಅನುರೂಪಳಾದ ಋಷಿಗೋತ್ರಗಳ ಸಾಮ್ಯವಿಲ್ಲದಿರುವ ಕನ್ಯೆಯನ್ನು ವಿವಾಹಮಾಡಿಕೊಳ್ಳಬೇಕು. (ಅಂದರೆ ಕನ್ಯಕೆಯ ಜನನ ಗೋತ್ರವೂ ವರನ ಗೋತ್ರವೂ ಒಂದೇ ಆಗಿರಕೂಡದು- ಮತ್ತು ಜನಕ ಗೋತ್ರದ ಪ್ರವರದಲ್ಲಿರುವ ಋಷಿಗಳೂ ವರನ ಪ್ರವರದಲ್ಲಿರುವ ಋಷಿ ಗಳೂ ಒಂದಾಗಿರಕೂಡದೆಂದು ಅರ್ಥ. ಇದರಲ್ಲಿ ಮೊದಲನೆಯದನ್ನು ಶಾಸ್ತ್ರದಲ್ಲಿ ಸಗೋತ್ರವೆಂದೂ ಎರಡನೆಯದನ್ನು ಪ್ರವರೈಕ್ಯವೆಂದೂ ವ್ಯವಹರಿಸುತ್ತಾರೆ) ಹೀಗೆ ವಿವಾಹಿತನಾದವನು ತನ್ನ ವರ್ಣಾಶ್ರಮ ವಿಹಿತ ಕರ್ಮದಿಂದ ಧನವನ್ನು ಸಂಪಾದಿಸಿ ದೇವ, ಪಿತೃ, ಅತಿಥಿ, ಇವರನ್ನು ವಿಧಿಗೆ ತಕ್ಕಂತೆ ಸತ್ಕರಿಸಬೇಕು. ಸದಾಚಾರಶೀಲ ನಾಗಿ ಭಕ್ತಿಯಿಂದ ಇವರನ್ನು ಸಂತೋಷಪಡಿಸಬೇಕು-(ಇಲ್ಲಿ ಸ್ವಕರ್ಮಣಾ ಎಂದು ಹೇಳಿರುವದ್ದರಿಂದ ತನ್ನ ಜೀವನ ಮತ್ತು ಆಶ್ರಮೋಚಿತ ವ್ಯಾಪಾರಗಳಿಗೆ ಸದ್ವೃತ್ತಿ ಲಭ್ಯವಾದ ದ್ರವ್ಯವೇ ಇರಬೇಕೆಂದು ತಾತ್ಪರ್ಯ. ಇದರಿಂದ ಕನ್ಯಾಧನ ಮತ್ತು ಕನ್ಯಾಶುಲ್ಕ ಮತ್ತು ಇತರ ದುರ್ವೃತ್ತಿಯಿಂದ ಲಬ್ಧವಾದ ದ್ರವ್ಯ ಇವು ನಿಷೇಧಿಸಲ್ಪ ಟ್ಟಿವೆ. ಯಜನ, ಯಾಜನ, ದಾನ, ಪ್ರತಿಗ್ರಹ, ಅಧ್ಯಯನ, ಅಧ್ಯಾಪನಗಳೆಂಬ ಷಟ್ಕರ್ಮಗಳಲ್ಲಿ ಯಾಜನ, ಪ್ರತಿಗ್ರಹ, ಅಧ್ಯಾಪನ, ಈ ಮೂರು ಕರ್ಮಗಳಿಂದ ಶಾಸ್ತ್ರೀಯವಾದ ಜೀವನಕ್ಕೆ ತಕ್ಕಂತೆ ಅರ್ಥಾರ್ಜನ ಮಾಡಬಹುದೆಂದು ಶಾಸ್ತ್ರದಲ್ಲಿ ಅವಕಾಶವಿದೆ. ಇವೇ ಇಲ್ಲಿ ಸ್ವಕರ್ಮಣಾ ಎಂಬ ಪದದಿಂದ ನಿರ್ದೇಶಿಸಲ್ಪಟ್ಟಿವೆ.)

## ಸುಕೇಶಿರುವಾಚ

ಸದಾಚಾರೇತಿ ಗದಿತಂ ಯುಷ್ಮಾಭಿರ್ಮಮ ಸುವ್ರತಾಃ ।
ಲಕ್ಷಣಂ ಶ್ರೋತುಮಿಚ್ಛಾಮಿ ಕಥಯಧ್ವಂ ತದದ್ಯ ಮೇ ॥ ೧೩ ॥

## ಋಷಯ ಊಚುಃ

ಸದಾಚಾರೋ ನಿಗದಿತಸ್ತವ ಯೋಽಸ್ಮಾಭಿರಾದರಾತ್ ।
ಲಕ್ಷಣಂ ತಸ್ಯ ವಕ್ಷ್ಯಾಮಸ್ತಚ್ಛೃಣುಷ್ವ ನಿಶಾಚರ ॥ ೧೪ ॥

ಗೃಹಸ್ಥೇನ ಸದಾ ಕಾರ್ಯಮಾಚಾರಪರಿಪಾಲನಂ ।
ನ ಹ್ಯಾಚಾರವಿಹೀನಸ್ಯ ಭದ್ರಮತ್ರ ಪರತ್ರ ಚ ॥ ೧೫ ॥

ಯಜ್ಞದಾನತಪಾಂಸೀಹ ಪುರುಷಸ್ಯ ನ ಭೂತಯೇ ।
ಭವಂತಿ ಯಃ ಸಮುಲ್ಲಂಘ್ಯ ಸದಾಚಾರಂ ಪ್ರವರ್ತತೇ ॥ ೧೬ ॥

ದುರಾಚಾರೋ ಹಿ ಪುರುಷೋ ನೇಹ ನಾಮುತ್ರ ನಂದತೇ ।
ಕಾರ್ಯೋ ಯತ್ನಃ ಸದಾಚಾರ ಆಚಾರೋ ಹಂತ್ಯಲಕ್ಷಣಂ ॥ ೧೭ ॥

---

೧೩. ಎಲೈ, ಋಷಿವರ್ಯರೇ, ಸದಾಚಾರರತೋದ್ವಿಜಃ ಎಂದು ಸದಾಚಾರವನ್ನು ಒತ್ತಿ ಹೇಳುತ್ತಿದ್ದೀರಿ, ಆ ಸದಾಚಾರವೆಂದರೇನು ಅದರ ಲಕ್ಷಣವೇನು ದಯವಿಟ್ಟು ಹೇಳಬೇಕು ಎಂದು ಸುಕೇಶಿಯು ಪುನಃ ಪ್ರಶ್ನೆಮಾಡಲಾಗಿ

೧೪-೧೭. ಋಷಿಗಳು ಹೇಳುತ್ತಾರೆ, ಎಲೈ, ರಾಕ್ಷಸೋತ್ತಮನೇ, ನಾವು ಸದಾಚಾರವನ್ನಾಗಿ ಆದರದಿಂದ ಯಾವುದನ್ನು ಹೇಳಿರುವೆವೋ, ಅದರ ಸ್ವರೂಪವನ್ನು ಹೇಳುತ್ತೇವೆ-ಕೇಳಬೇಕು ಯಾವಾಗಲೂ ಆಚಾರವನ್ನು ಪಾಲಿಸುವುದು ಗೃಹಸ್ಥನಿಗೆ ಮುಖ್ಯವಾದದ್ದು. ಆಚಾರರಹಿತನಾದ ಗೃಹಸ್ಥನಿಗೆ ಕೇವಲ ತನ್ನ ಕರ್ಮದಿಂದ ಈ ಲೋಕದಲ್ಲೂ ಪರಲೋಕದಲ್ಲೂ ಸಹ ಸುಖವಿಲ್ಲ. (ಇಲ್ಲಿ ಆಚಾರಹೀನಂನಪುನಂತಿ ವೇದಾಃ ಎಂಬ ಸ್ಮೃತಿ ವಚನವು ಸೂಚಿತವಾಗಿದೆ.) ಆದ್ದರಿಂದ ಯಜ್ಞ, ದಾನ, ತಪಸ್ಸು, ಮೊದಲಾದ ತನ್ನ ಕೆಲಸಗಳನ್ನು, ಆಚಾರವನ್ನತಿಕ್ರಮಿಸಿ, ನಡೆಸಿದಲ್ಲಿ ಅವು ಗೃಹಸ್ಥನ ಯಾವ ಶ್ರೇಯಸ್ಸಿಗೂ ಕಾರಣವಾಗುವುದಿಲ್ಲ. ದುರಾಚಾರಿಯಾದವನಿಗೆ ಯಾವ ಲೋಕದಲ್ಲೂ ಸುಖವುಂಟಾಗುವುದಿಲ್ಲವಾದ್ದರಿಂದ ಸರ್ವಾರಿಷ್ಟವನ್ನೂ ನಾಶಪಡಿಸಿ ಶ್ರೇಯಸ್ಸಿಗೆ ಸಹಕಾರಿಯಾದ ಆಚಾರವನ್ನು ರಕ್ಷಿಸಲು ಯಾವಾಗಲೂ ಪ್ರಯತ್ನಿಸಬೇಕು.

**ತಸ್ಯ ಸ್ವರೂಪಂ ವಕ್ಷ್ಯಾಮಃ ಸದಾಚಾರಸ್ಯ ರಾಕ್ಷಸ ।**
**ಶೃಣು ಷ್ವೈಕಮನಾಸ್ತ್ವಂ ಚ ಯದಿ ಶ್ರೇಯೋಽಭಿವಾಂಛಸಿ** ॥ ೧೮ ॥

**ಧರ್ಮೋಽಸ್ಯ ಮೂಲಂ ಧನಮಸ್ಯ ಶಾಖಾಃ**
**ಪುಷ್ಪಂ ಚ ಕಾಮಃ ಫಲಮಸ್ಯ ಮೋಕ್ಷಃ ।**
**ಅಸೌ ಸದಾಚಾರತರುಃ ಸುಕೇಶಿ**
**ನ್ಸಂಸೇವಿತೋ ಯೇನ ಸಪುಣ್ಯ ಭೋಕ್ತಾ** ॥ ೧೯ ॥

**ಬ್ರಾಹ್ಮೇ ಮುಹೂರ್ತೇ ಪ್ರಥಮಂ ವಿಬುಧ್ಯೇ**
**ದನುಸ್ಮರೇದ್ದೇವವರಾನ್ಮಹರ್ಷೀನ್ ।**
**ಪ್ರಾಭಾತಿಕಂ ಮಂಗಲಮೇವ ವಾಚ್ಯಂ**
**ಯದುಕ್ತವಾನ್ದೇವಪತಿಸ್ತ್ರಿನೇತ್ರಃ** ॥ ೨೦ ॥

**ಸುಕೇಶಿರುವಾಚ**

**ಕಿಂ ತದುಕ್ತಂ ಸುಪ್ರಭಾತಂ ಶಂಕರೇಣ ಮಹಾತ್ಮನಾ ।**
**ಪ್ರಭಾತೇ ಯತ್ಪಠನ್ಮರ್ತ್ಯೋ ಮುಚ್ಯತೇ ಪಾಪಬಂಧನಾತ್** ॥ ೨೧ ॥

---

೧೮-೧೯. ಎಲೈ, ರಾಕ್ಷಸಶ್ರೇಷ್ಠನೇ, ಯಾವ ಸದಾಚಾರವನ್ನು ನಾವು ಮುಖ್ಯವೆಂದು ಹೇಳಿರುವೆವೋ, ಅದರ ಸ್ವರೂಪವನ್ನು ಹೇಳುತ್ತೇವೆ, ಏಕಾಗ್ರತೆಯಿಂದ ಲಾಲಿಸು, ನಿನಗೂ ಇದರ ಅನುಷ್ಠಾನದಿಂದ ಶ್ರೇಯಸ್ಸುಂಟು- ಈ ಸದಾಚಾರಕ್ಕೆ ಧರ್ಮವೇ ಬೇರು, ಧನವೇ ಇದರ ಕೊಂಬೆಗಳು, ಇದರ ಪುಷ್ಪಗಳೇ ಕಾಮವೆಂಬ ಪುರುಷಾರ್ಥ, ಫಲವೇ ಮೋಕ್ಷ, ಇಂತಹ ಸದಾಚಾರವೃಕ್ಷವನ್ನು ಯಾರು ಸೇವಿಸುತ್ತಾರೆಯೋ ಅವರೇ ಪುಣ್ಯಶಾಲಿಗಳು. (ಇಲ್ಲಿ ಹೇಳಬೇಕಾದ ವಿಶೇಷಾಂಶವನ್ನು ಅಧ್ಯಾಯದ ಕೊನೆಯಲ್ಲಿ ವಿವರಿಸಲಾಗುತ್ತದೆ.)

೨೦-೨೧. ಬ್ರಾಹ್ಮ ಮುಹೂರ್ತದಲ್ಲಿ (ಅಂದರೆ ಉಷಃಕಾಲದಲ್ಲಿ) ನಿದ್ರೆಯಿಂದ ಎಚ್ಚರ ಹೊಂದುವುದು ಮೊದಲನೇಯದು. ಎದ್ದು ದೇವರನ್ನೂ ದೇವತೆಗಳನ್ನೂ ಮಹರ್ಷಿಗಳನ್ನೂ ಸ್ಮರಿಸಬೇಕು. ನಂತರ ಶಂಕರನು ಹೇಳಿರುವ ಮಂಗಲಕರವಾದ ಸುಪ್ರಭಾತವನ್ನು ಪಠಿಸಲೇಬೇಕು, ಇದನ್ನು ಕೇಳಿ ಸುಕೇಶಿಯು ಯಾವ ಸುಪ್ರಭಾತ ಪಠನದಿಂದ ಮನುಷ್ಯನು ಎಲ್ಲಾ ಪಾಪಗಳಿಂದಲೂ ಬಿಡುಗಡೆ ಹೊಂದಬಹುದೋ, ಅಂತಹ ಸುಪ್ರಭಾತವು ಯಾವುದು ಶಂಕರನಿಂದ ಹೇಳಲ್ಪಟ್ಟಿದೆ ಎಂದು ಪ್ರಶ್ನೆ ಮಾಡಲಾಗಿ ಋಷಿಗಳು ಹೇಳುತ್ತಾರೆ.

ಋಷಯ ಊಚುಃ

ಶ್ರೂಯತಾಂ ರಾಕ್ಷಸಶ್ರೇಷ್ಠ ಸುಪ್ರಭಾತಂ ಹರೋದಿತಂ ।
ಶ್ರುತ್ವಾ ಸ್ಮೃತ್ವಾ ಪಠಿತ್ವಾ ಚ ಸರ್ವಪಾಪೈಃ ಪ್ರಮುಚ್ಯತೇ ॥ ೨೨ ॥

ಬ್ರಹ್ಮಾ ಮುರಾರಿಸ್ತ್ರಿಪುರಾಂತಕಾರೀ
ಭಾನುಃ ಶಶೀ ಭೂಮಿಸುತೋ ಬುಧಶ್ಚ ।
ಗುರುಶ್ಚ ಶುಕ್ರಃ ಸಹ ಭಾನುಜೇನ
ಕುರ್ವಂತು ಸರ್ವೇ ಮಮ ಸುಪ್ರಭಾತಂ ॥ ೨೩ ॥

ಭೃಗುರ್ವಸಿಷ್ಠಃ ಕ್ರತುರಂಗಿರಾಶ್ಚ
ಮುನಿಃ ಪುಲಸ್ತ್ಯಃ ಪುಲಹಃ ಸಗೌತಮಃ ।
ರೈಭ್ಯೋ ಮರೀಚಿಶ್ಚ್ಯವನೋ ರಿಭುಶ್ಚ
ಕುರ್ವಂತು ಸರ್ವೇ ಮಮ ಸುಪ್ರಭಾತಂ ॥ ೨೪ ॥

ಸನತ್ಕುಮಾರಃ ಸನಕಃ ಸನಂದನಃ
ಸನಾತನೋಽಪ್ಯಾಸುರಿಪಿಂಗಲೌ ಚ ।
ಸಪ್ತಸ್ವರಾಃ ಸಪ್ತರಸಾತಲಾಶ್ಚ
ಕುರ್ವಂತು ಸರ್ವೇ ಮಮ ಸುಪ್ರಭಾತಂ ॥ ೨೫ ॥

---

೨೨-೨೪. ಎಲೈ ರಾಕ್ಷಸಶ್ರೇಷ್ಠನೇ, ಶಂಕರನಿಂದ ಹೇಳಲ್ಪಟ್ಟ ಸುಪ್ರಭಾತವನ್ನು ಹೇಳುವೆವು, ಕೇಳಬೇಕು, ಇದನ್ನು ಕೇಳಿದವನೂ, ಸ್ಮರಿಸಿದವನೂ, ಉಚ್ಚರಿಸಿದವನೂ ಸಹ ಎಲ್ಲಾ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ-

ಬ್ರಹ್ಮ, ವಿಷ್ಣು, ಶಂಕರ, ಸೂರ್ಯ, ಚಂದ್ರ, ಅಂಗಾರಕ, ಬುಧ, ಗುರು, ಶುಕ್ರ ಶನಿಗಳು, ನನಗೆ ಸುಪ್ರಭಾತವನ್ನುಂಟುಮಾಡಲಿ, ಈ ಪ್ರಾತಃಕಾಲವನ್ನು ಶುಭಕರವನ್ನಾಗಿ ಮಾಡಲಿ ಎಂದರ್ಥ, ಮತ್ತು ಭೃಗು, ವಸಿಷ್ಠ, ಕ್ರತು, ಆಂಗೀರಸ, ಪುಲಸ್ತ್ಯ, ಪುಲಹ, ಗೌತಮ, ರೈಭ್ಯ, ಮರೀಚ, ಚ್ಯವನ, ರಿಭು, ಈ ಮಹರ್ಷಿಗಳು ನನಗೆ ಸುಪ್ರಭಾತವನ್ನುಂಟುಮಾಡಲಿ, ಮತ್ತು-

೨೫-೨೮. ಸನತ್ಕುಮಾರ, ಸನಕ, ಸನಂದನ, ಸನಾತನ, ಆಸುರಿ, ಪಿಂಗಲ, ಸಪ್ತಸ್ವರಗಳು, ಭೂರಾದಿ ಸಪ್ತಾಧೋಲೋಕಗಳು, ಇವುಗಳು ನನಗೆ ಸುಪ್ರಭಾತವನ್ನುಂಟುಮಾಡಲಿ, ಮತ್ತು ಗಂಧಯುಕ್ತವಾದ ಭೂಮಿ, ರಸಾಶ್ರಯವಾದ ನೀರು,

ಪೃಥ್ವೀ ಸಗಂಧಾ ಸರಸಾಸ್ತಥಾಪಃ
ಸಸ್ಪರ್ಶ ವಾಯುರ್ಜ್ವಲನಃ ಸುತೇಜಾಃ ।
ನಭಃ ಸಶಬ್ದಂ ಮಹತಾ ಸಹೈವ
ಯಚ್ಛಂತು ಸರ್ವೇ ಮಮ ಸುಪ್ರಭಾತಾಂ ॥ ೨೬ ॥

ಸಪ್ತಾರ್ಣವಾಃ ಸಪ್ತಕುಲಾಚಲಾಶ್ಚ
ಸಪ್ತರ್ಷಯೋ ದ್ವೀಪವರಾಶ್ಚ ಸಪ್ತ ।
ಭೂರಾದಯಃ ಸಪ್ತ ತಥೈವ ಲೋಕಾ
ಯಚ್ಛಂತು ಸರ್ವೇ ಮಮ ಸುಪ್ರಭಾತಂ ॥ ೨೭ ॥

ಇತ್ಥಂ ಪ್ರಭಾತೇ ಪರಮಂ ಪವಿತ್ರಂ
ಪಠೇತ್ಸ್ಮರೇದ್ವಾ ಶೃಣುಯಾಚ್ಚ ಭಕ್ತ್ಯಾ ।
ದುಃಸ್ವಪ್ನನಾಶೋಽನಘ ಸುಪ್ರಭಾತಂ
ಭವೇಚ್ಚ ಸತ್ಯಂ ಭಗವತ್ಪ್ರಸಾದಾತ್ ॥ ೨೮ ॥

ತತಃ ಸಮುತ್ಥಾಯ ವಿಚಿಂತಯೇತ
ಧರ್ಮಂ ತಥಾರ್ಥಂ ಚ ವಿಹಾಯ ಶಯ್ಯಾಂ ।

---

ಸ್ಪರ್ಶಶಾಲಿಯಾದ ವಾಯು, ತೇಜಸ್ವಿಯಾದ ಅಗ್ನಿ, ಶಬ್ದಕ್ಕೆ ಆಶ್ರಯವಾದ ಆಕಾಶ, ಈ ಪಂಚ ಮಹಾಭೂತಗಳೂ ಮಹತ್ತತ್ವವೂ ಸಹ ನನಗೆ ಸುಪ್ರಭಾತವನ್ನುಂಟು ಮಾಡಲಿ, ಮತ್ತು ಏಳು ಸಮುದ್ರಗಳು, ಏಳು ಕುಲಪರ್ವತಗಳು, ಸಪ್ತಋಷಿಗಳು, ಸಪ್ತದ್ವೀಪಗಳು, ಭೂರಾದಿ ಸಪ್ತಲೋಕಗಳು, ಇವೆಲ್ಲವೂ ನನಗೆ ಸುಪ್ರಭಾತವನ್ನುಂಟುಮಾಡಲಿ, ಈ ಪ್ರಕಾರವಾದ ಪರಮಪವಿತ್ರವಾದ ಪ್ರಾಭಾತಿಕ ಮಂಗಲವನ್ನು ಯಾರು ಪಠನಮಾಡುತ್ತಾರೆಯೋ, ಯಾರು ಭಕ್ತಿಯಿಂದ ಸ್ಮರಿಸುತ್ತಾರೆಯೋ, ಅಥವಾ ಕೇಳುತ್ತಾರೆಯೋ, ಅವರಿಗೆ ಭಗವದನುಗ್ರಹದಿಂದ ದುಸ್ಸ್ವಪ್ನಾದಿಗಳು ನಷ್ಟವಾಗಿ ಸುಪ್ರಭಾತವು ಆಗಿಯೇ ಆಗುವದು.

೨೯-೩೦. ಅನಂತರ ಎದ್ದು ಹಾಸಿಗೆಯನ್ನು ಬಿಟ್ಟು ತಾನು ನೆರವೇರಿಸಬೇಕಾದ ಧರ್ಮಾರ್ಥಗಳನ್ನು ಆಲೋಚಿಸಿ ಹರಿಃ ಹರಿಃ ಎಂದು ಹರಿಶಬ್ದೋಚ್ಚಾರಣಪೂರ್ವಕವಾಗಿ ಮೇಲಕ್ಕೆದ್ದು ಜಲಮಲವಿಸರ್ಜನೆಗಾಗಿ ಹೊರಗೆ ಹೊರಡಬೇಕು. ಹೀಗೆ ಹೊರಟವನು ದೇವಸ್ಥಾನ, ಬ್ರಾಹ್ಮಣರಗಮನ, ಗೋವುಗಳ ಸಂಚಾರ ಮತ್ತು

ಉತ್ಥಾಯ ಪಶ್ಚಾದ್ಧರಿರಿತ್ಯುದೀರ್ಯ
ಗಚ್ಛೇತ್ತದೋತ್ಸರ್ಗವಿಧಿಂ ಹಿ ಕರ್ತುಮ್ ॥ ೨೯ ॥

ನ ದೇವಗೋ ಬ್ರಾಹ್ಮಣವಹ್ನಿಮಾರ್ಗೇ
ನ ರಾಜಮಾರ್ಗೇ ನ ಚತುಷ್ಪಥೇ ಚ ।
ಕುರ್ಯಾದಥೋತ್ಸರ್ಗಮಪೀಹ ಗೋಷ್ಠೇ
ಪೂರ್ವಾಂ ಪರಾಂ ನೈವ ಸಮಾಶ್ರಿತೋ ಗಾಮ್ ॥ ೩೦ ॥

ತತಸ್ತು ಶೌಚಾರ್ಥಮುಪಾಹರೇನ್ಮೃದಂ
ಗುದೇ ತ್ರಯಂ ಪಾಣಿತಲೇ ದಶೈವ ।
ತಥೋಭಯೋಃ ಸಪ್ತ ತಥೈವ ಪಾದಯೋಃ
ರ್ಲಿಂಗೇ ತಥೈಕಾಂ ಮೃದಮಾಹರೇತ ॥ ೩೧ ॥

---

ಅಗ್ನಿಯ ಆನಯನ ಈ ಮಾರ್ಗಗಳಲ್ಲಿಯೂ, ರಾಜಮಾರ್ಗದಲ್ಲಿಯೂ, ನಾಲ್ಕಾರು ದಾರಿಗಳು ಸೇರುವ ಚೌಕದಲ್ಲೂ ಮತ್ತು ಹಸುಗಳ ಕೊಟ್ಟಿಗೆಯಲ್ಲೂ ಮತ್ತು ಪೂರ್ವ ಪಶ್ಚಿಮ ದಿಕ್ಕಿಗೆ ಅಭಿಮುಖನಾಗಿಯೂ ಮಲಮೂತ್ರವನ್ನು ಬಿಡಬಾರದು. (ಇಲ್ಲಿ ಎಚ್ಚರಗೊಳ್ಳುವುದು ಹಾಸಿಗೆಯನ್ನು ಬಿಟ್ಟು ಏಳುವುದು ಉತ್ಸರ್ಗಕ್ಕಾಗಿ ಹೊರಗೆ ಹೋಗುವದು ಇಂತಹ ಪ್ರಾಣಿಮಾತ್ರಕ್ಕಿರುವ ಕ್ರಿಯಾಕಲಾಪಗಳು ಆಚಾರವೆಂದು ಹೇಳಲು ಸಾಧ್ಯವಿಲ್ಲ. ಆದರೆ ಇಲ್ಲಿ ಹೇಳಿರುವ ನಿಯಮಾನುಸಾರಿಗಳಾದ ಕ್ರಿಯೆಗಳು ಆಚಾರವಾಗುತ್ತವೆ ಎಂದು ತಾತ್ಪರ್ಯ. ಎಚ್ಚರವೂ ವಿಹಿತಕಾಲದಲ್ಲಿ ಅದೂ ಸುಪ್ರಭಾತ ಪಠನ ಅಥವಾ ಅನುಸ್ಮರಣದಿಂದ ಕೂಡಿರಬೇಕು. ನಂತರ ಹರಿಶಬ್ದೋಚ್ಚಾರಣ ಪೂರ್ವಕವಾಗಿ ಹಾಸಿಗೆಯಿಂದೇಳಬೇಕು. ಎದ್ದು ಕೂಡ ಅನಿಷಿದ್ಧಸ್ಥಲದಲ್ಲೇ ಉತ್ಸರ್ಗವಿಧಿಯನ್ನು ನಡೆಸಬೇಕು. ಎಂಬ ಕ್ರಮದಿಂದ ನಿಯಮಯುಕ್ತಗಳಾದ ಈ ಕ್ರಿಯಾಕಲಾಪಗಳು ಆಚಾರವಾಗುತ್ತವೆ. ಇದು ಮನುಷ್ಯಾಧಿಕಾರಿಕವಾದ್ದರಿಂದ ಪಶುಪಕ್ಷ್ಯಾದಿಗಳಿಗೆ ಅನ್ವಯಿಸುವುದಿಲ್ಲ. ಇದಕ್ಕೆ ನಿಯಮವಿಧಿ ಎಂದು ಶಾಸ್ತ್ರದ ವ್ಯವಹಾರ.)

೩೧ ೩೨. ಅನಂತರ ಶೌಚಕ್ಕಾಗಿ ಮೃತ್ತಿಕೆಯನ್ನು ಉಪಯೋಗಿಸಬೇಕು. ಗುದಪ್ರದೇಶದಲ್ಲಿ ಮೂರಾವರ್ತಿಯೂ, ಕೈಯ್ಯಿಗೆ ಹತ್ತುಬಾರಿಯೂ, ಎರಡು ಕಾಲುಗಳಲ್ಲಿಯೂ ಪ್ರತ್ಯೇಕ ಏಳೇಳು ಸಲವೂ ಲಿಂಗಕ್ಕೆ ಒಂದಾವರ್ತಿಯೂ ಮೃತ್ತಿಕೆಯಿಂದ ಶೌಚಮಾಡಿಕ್ಕೊಳ್ಳಬೇಕು. ಈ ರೀತಿ ಶೌಚಕ್ಕಾಗಿ ಉಪಯೋಗಿಸುವ ಮೃತ್ತಿಕೆಯನ್ನು

ನಾಂತರ್ಜಲಾದ್ರಾಕ್ಷಸ ಮೂಷಕಸ್ಯ
ಬಿಲಾಚ್ಚ ಶೌಚಾ ಚರಣಾಗತಾನ್ಯೈಃ ।
ವಾಲ್ಮೀಕಮೃಚ್ಚೈವ ಹಿ ಶುದ್ಧಯೇ
ಸದಾಗ್ರಾಹ್ಯಾ ಸದಾಚಾರವಿದಾ ನರೇಣ ॥ ೩೨ ॥

ಉದಙ್ಮುಖಃ ಪ್ರಾಗ್ವದನೋಽಪಿ ವಿದ್ವಾ
ನ್ಪ್ರಕ್ಷಾಲ್ಯ ಪಾದೌ ಭುವಿ ಸಂನಿವಿಷ್ಟಃ ।
ಸಮಾಚಮೇದದ್ಭಿರಫೇನಿಲಾಭಿ
ರ್ಮುಖಂ ತ್ರಿರಾದೌ ಪರಿಮೃಜ್ಯ ಚದ್ವಿಃ ॥ ೩೩ ॥

ತತಃ ಸ್ಪೃಶೇತ್ಖಾನಿ ಶಿರಃ ಕರೇಣ
ಸಂಧ್ಯಾಮುಪಾಸೀತ ತತಃ ಕ್ರಮೇಣ ।
ಕೇಶಾಂಶ್ಚ ಸಂಶೋಧ್ಯ ಚ ದಂತಧಾವನಂ
ಕೃತ್ವಾ ತಥಾ ದರ್ಪಣದರ್ಶನಂ ಚ ॥ ೩೪ ॥

---

ಜಲದ ಮಧ್ಯದಿಂದಲೂ, ಇಲಿ, ಏಡಿ, ಮುಂತಾದ ಬಿಲಗಳಿಂದಲೂ, ಹುತ್ತದಿಂದಲೂ ತರಬಾರದು. ಮತ್ತು ಇತರರು ಶೌಚಕ್ಕಾಗಿ ತಂದಿಟ್ಟು, ಅವರು ಉಪಯೋಗಿಸಿ ಉಳಿದ ಮಣ್ಣನ್ನು ತೆಗೆದುಕೊಳ್ಳಬಾರದು. ಈ ನಿಯಮವನ್ನು ಅನುಸರಿಸಿ ಆಚಾರ ವನ್ನು ತಿಳಿದವನು ಮೃತ್ತಿಕಾ ಸಂಗ್ರಹಣವನ್ನು ಮಾಡಬೇಕು.

೩೩-೩೫. ಅನಂತರ ಉತ್ತರದಿಕ್ಕಿಗೆ ಅಥವಾ ಪೂರ್ವದಿಕ್ಕಿಗೆ ಅಭಿಮುಖನಾಗಿ ಕಾಲನ್ನು ತೊಳೆದುಕೊಂಡು ಭೂಮಿಯಲ್ಲಿ ಕುಳಿತು ಆಚಮನ ಮಾಡಬೇಕು. ನೊರೆಯಿಲ್ಲದ ಶುದ್ಧವಾದ ನೀರಿನಿಂದ ಬಾಯನ್ನು ಎರಡಾವರ್ತಿ ಮಾರ್ಜನಮಾಡಿ ಮೂರಾವರ್ತಿ ಮಂತ್ರಪೂರ್ವಕವಾಗಿ ಆಚಮನವಮಾಡಿ ನಂತರ ಚಕ್ಷುರಾದಿ ಇಂದ್ರಿಯ ಗಳನ್ನೂ ಶಿರಸ್ಸನ್ನು ಬಲಗೈಯ್ಯಿನಿಂದ ಸ್ಪರ್ಶಮಾಡಬೇಕು. (ಇದು ಆಚಮನವಿಧಿಗೇ ಸೇರಿದುದು) ಅನಂತರ ಮುಂದೆ ಹೇಳುವ ಕೆಲಸಗಳನ್ನು ಮಾಡಿ ಪ್ರಾತಸ್ಸಂಧ್ಯಾ ವಂದನವನ್ನು ಮಾಡಬೇಕು. ಕೇಶಗಳ ಸಂಶೋಧನ, ದಂತಧಾವನ, ಇವುಗಳನ್ನು ಮಾಡಿ ಕನ್ನಡಿಯನ್ನು ನೋಡಬೇಕು. ಅನಂತರ ಶಿರಸ್ನಾನವನ್ನೋ ಅಂಗಗಳ ಸ್ನಾನವನ್ನೊ ಮಾಡಿ (ಇಲ್ಲಿ ಹೇಳಿರುವ ಆಂಗಿಕಸ್ನಾನವು ಅಶಕ್ತ ಅಥವಾ ವ್ಯಾಧಿಗ್ರಸ್ತ ಇವರಿಗೆ ಅನ್ವಯಿಸತಕ್ಕದ್ದು) ಶುದ್ಧವಾದ ಜಲದಿಂದ ಸ್ನಾನಾಂಗವಾದ ದೇವಪಿತೃ ತರ್ಪಣವನ್ನು ಮಾಡಬೇಕು. ನಂತರ ಉದಿತಹೋಮವೇ ಮೊದಲಾದ ಅಗ್ನಿಕಾರ್ಯ

ಕೃತ್ವಾ ಶಿರಃ ಸ್ನಾನಮಥಾಂಗಿಕಂ ವಾ
ಸಂಪೂಜ್ಯ ತೋಯೇನ ಪಿತೄನ್ಸ ದೇವಾನ್ ।
ಹೋಮಂ ಚ ಕೃತ್ವಾಲಭನಂ ಶುಭಾನಾಂ
ಕೃತ್ವಾ ಬಹಿರ್ನಿರ್ಗಮನಂ ಪ್ರಶಸ್ತಂ ॥ ೩೫ ॥

ದೂರ್ವಾ ದಧಿಂ ಸರ್ಪಿರಥೋದಕುಂಭಂ
ಧೇನುಂ ಸವತ್ಸಾಂ ವೃಷಭಂ ಸುವರ್ಣಂ ।
ಮೃದ್ಗೋಮಯಂ ಸ್ವಸ್ತಿಕಮಕ್ಷತಾನಿ
ಲಾಜಾ ಮಧು ಬ್ರಾಹ್ಮಣಕನ್ಯಕಾಶ್ಚ ॥ ೩೬ ॥

ಶ್ವೇತಾನಿ ಪುಷ್ಪಾಣಿ ಚ ಶೋಭನಾನಿ
ಹುತಾಶನಂ ಚಂದನಮರ್ಕಬಿಂಬಂ ।
ಅಶ್ವತ್ಥವೃಕ್ಷಂ ಚ ಸಮಾಲಭೇತ
ತತಸ್ತು ಕಾರ್ಯೋ ನಿಜಜಾತಿಧರ್ಮಃ ॥ ೩೭ ॥

---

ವನ್ನು ನಡೆಸಿ ಶುಭಕರವಾದ ಪದಾರ್ಥಗಳನ್ನು ನೋಡಿ ಹೊರಗೆ ಹೊರಡುವದು ಪ್ರಶಸ್ತ. (ಇಲ್ಲಿ ಅರ್ಥಕ್ರಮದ ಪ್ರಾಧಾನ್ಯವನ್ನನುಸರಿಸಿ ದೇವಪಿತೃತರ್ಪಣವಾದ ನಂತರ ಪುಂಡ್ರಧಾರಣಪೂರ್ವಕವಾದ ಕುಲಧರ್ಮವನ್ನು ಅನುಸರಿಸಿ ಅನಂತರ ಸಂಧ್ಯಾ ವಂದನವನ್ನು ಮಾಡಬೇಕೆಂದು ಅರ್ಥವನ್ನು ಗ್ರಹಿಸಬೇಕು. ಸಂಧ್ಯಾವಂದನವಾದ ನಂತರ ಉದಿತಹೋಮಾದಿಗಳಿಗೆ ಅವಕಾಶ " ಸಂಧ್ಯಾಹೀನೋಽಶುಚಿರ್ನಿತ್ಯಮನರ್ಹ ಸ್ಸರ್ವಕರ್ಮಸು " ಎಂಬ ವಚನವು ಧರ್ಮಶಾಸ್ತ್ರದಲ್ಲಿ ಪ್ರಸಿದ್ಧವಾಗಿದೆ. ಪಾಠಕ್ರಮವನ್ನೇ ಆಶ್ರಯಿಸುವುದಾದರೆ ಕೇಶಸಂಶೋಧನ, ದಂತಧಾವನಕ್ಕಿಂತಲೂ ಮೊದಲೇ ಸಂಧ್ಯಾ ವಂದನೆಯು ಪ್ರಾಪ್ತವಾಗುತ್ತದೆ. ಅದು ಎಲ್ಲಿಯೂ ಆಚಾರದಲ್ಲಿಲ್ಲ.

೩೬-೩೭. ದರ್ಶನಾರ್ಹವಾದ ಶುಭವಸ್ತುಗಳನ್ನು ಹೇಳುತ್ತಾರೆ. ಗರಿಕೆ, ಮೊಸರು, ತುಪ್ಪ, ಉದಕುಂಭ, ಕರುವಿನೊಡನೆ ಇರುವ ಹಸು, ಎತ್ತು, ಸುವರ್ಣ, ಮೃತ್ತು ಗೋಮಯ, ಮಂಗಲದ್ರವ್ಯ, ಅಕ್ಷತೆ, ಅರಳು, ಜೇನುತುಪ್ಪ, ಬ್ರಾಹ್ಮಣ ಕನ್ಯೆಯರು, ರಮಣೀಯವಾದ ಬಿಳಿಯ ಹೂವುಗಳು, ಅಗ್ನಿ, ಚಂದನ, ಸೂರ್ಯಬಿಂಬ, ಅಶ್ವತ್ಥವೃಕ್ಷ ಇವುಗಳು. ಇದಾದನಂತರ ಜಾತಿಸಮಯಸಿದ್ಧವಾದ ದೇವಪೂಜಾದಿ ಗಳನ್ನು ನಡೆಸಬಹುದು.

ದೇಶಾನುಶಿಷ್ಟಂ ಕುಲಧರ್ಮಮಗ್ರ್ಯಂ
ಸ್ವಗೋತ್ರಧರ್ಮಂ ನ ಹಿ ಸಂತ್ಯಜೇತ।
ತೇನಾರ್ಥಸಿದ್ಧಿಂ ಸಮುಪಾಚರೇತ
ನಾಸತ್ಪ್ರಲಾಪಂ ನ ಚ ಸತ್ಯಹೀನಂ ॥ ೩೮ ॥

ನ ನಿಷ್ಠುರಂ ನಾಗಮಶಾಸ್ತ್ರಹೀನಂ
ವಾಕ್ಯಂ ವದೇತ್ಸಾಧು ಜನೇನ ಯೇನ।
ನಿಂದ್ಯೋ ಭವೇನ್ನೈವ ಚ ಧರ್ಮಭೇದೀ
ಸಂಗಂ ನ ಚಾಸತ್ಸು ನರೇಷು ಕುರ್ಯಾತ್ ॥ ೩೯ ॥

ಸಂಧ್ಯಾಸು ವರ್ಜ್ಯಂ ಸುರತಂ ದಿವಾ ಚ
ಸರ್ವಾಸು ಯೋನೀಷು ಪರಾಬಲಾಸು।
ಸವಾನ್ಯಯೋನಿಷ್ವ ಪರಾಬಲಾಸು
ರಜಸ್ವಲಾಸ್ವೇವ ಜಲೇಷು ವೀರ ॥ ೪೦ ॥

ವೃಥಾಟನಂ ವೃಥಾ ದಾನಂ ವೃಥಾ ಚ ಪಶುಮಾರಣಂ।
ನ ಕರ್ತವ್ಯಂ ಗೃಹಸ್ಥೇನ ವೃಥಾ ದಾರಪರಿಗ್ರಹಃ ॥ ೪೧ ॥

---

೩೮-೩೯. ಜಾತಿಸಿದ್ಧವಾದ ಆಚಾರವನ್ನು ಪ್ರಶಂಸಿಸುತ್ತಾರೆ. ದೇಶದಲ್ಲಿ ದೊಡ್ಡವರಿಂದ ಆಚರಿಸಲ್ಪಟ್ಟ ಮತ್ತು ತನ್ನ ಕುಲದಲ್ಲಿ ನಡೆದುಬಂದಿರುವ ಜಾತಿಧರ್ಮಗಳನ್ನು ಯಾವಾಗಲೂ ಬಿಡುಕೂಡದು. ಅದರಿಂದ ಉಂಟಾಗಬಹುದಾದ ಅರ್ಥಸಿದ್ಧಿಯನ್ನೂ ಹೊಂದಲೇಬೇಕು. ಆ ರೀತಿಯಾದ ಜಾತಿಧರ್ಮಗಳನ್ನು ನೆರವೇರಿಸುವಾಗ ಅಸದ್ವಸ್ತುವಿನ ವ್ಯರ್ಥವಾದ ಪ್ರಸ್ತಾವ, ಅಸತ್ಯಭಾಷಣ, ನಿಷ್ಠುರವಾದ ವಚನ ವೇದಶಾಸ್ತ್ರವಿರುದ್ಧವಾದ ಮಾತು ಇವುಗಳನ್ನು ಬಿಡಬೇಕು. ಹಾಗಿದ್ದ ಪಕ್ಷದಲ್ಲಿ ಸತ್ಪುರುಷರ ನಿಂದೆಗೆ ಇವನು ಪಾತ್ರನಾಗುವುದಿಲ್ಲ. ಮತ್ತು ಧರ್ಮದ ವಿಷಯದಲ್ಲಿ ಭೇದಬುದ್ಧಿಯನ್ನೂ ಅಸತ್ಪುರುಷರ ಸಹವಾಸವನ್ನೂ ಬಿಡಬೇಕು.

೪೦-೪೧. ಉಭಯ ಸಂಧ್ಯಾಕಾಲವಲ್ಲಿಯೂ ಹಗಲಿನಲ್ಲಿಯೂ ಇತರ ಯೋನಿಗಳಲ್ಲಿಯೂ ಪರಸ್ತ್ರೀಯಲ್ಲಿಯೂ ರಜಸ್ವಲೆಯಲ್ಲಿಯೂ ಜಲದಲ್ಲಿಯೂ ಸುರತವನ್ನು ಮಾಡಬಾರದು. ವ್ಯರ್ಥವಾಗಿ ಸುತ್ತುವಿಕೆ, ವ್ಯರ್ಥವಾದ ದಾನ, (ದೇಶ ಕಾಲ ಪಾತ್ರ ಮೊದಲಾದ ನಿಯಮ ಬಾಹಿರವಾದದ್ದು) ವ್ಯರ್ಥವಾದ ಪಶುಮಾರಣ ಮತ್ತು ವೃಥಾ

ವೃಥಾಟನಾನ್ನಿತ್ಯಹಾನಿರ್ವೃಥಾ ದಾನಾದ್ಧನಕ್ಷಯಃ ।
ವೃಥಾ ಪಶುಘ್ನಃ ಪ್ರಾಪ್ನೋತಿ ಪಾತಕಂ ನರಕಾರ್ಥಿಯತ್ ॥ ೪೨ ॥

ಸಂತತ್ಯಾ ಹಾನಿರಶ್ಲಾಘ್ಯಾ ವರ್ಣಸಂಕರತೋ ಭಯಂ ।
ಭೇತವ್ಯಂ ಚ ಭವೇಲ್ಲೋಕೇ ವೃಥಾ ದಾರಪ್ರರಿಗ್ರಹಾತ್ ॥ ೪೩ ॥

ಪರಸ್ವೇ ಪರದಾರೇಷು ನ ಕಾರ್ಯಾ ಬುದ್ಧಿರುತ್ತಮೈಃ ।
ಪರಸ್ವಂ ನರಕಾಯೈವ ಪರದಾರಾಶ್ಚಮೃತ್ಯವೇ ॥ ೪೪ ॥

ನೇಕ್ಷೇತ್ಪರಸ್ತ್ರಿಯಂ ನಗ್ನಾಂ ನ ಸಂಭಾಷೇತ ತಸ್ಕರಾನ್ ।
ಉದಕ್ಯಾ ದರ್ಶನಂ ಸ್ಪರ್ಶಂ ಸಂಭಾಷಾಂ ಚ ವಿವರ್ಜಯೇತ್ ॥ ೪೫ ॥

ನೈಕಾಸನೇ ತಥಾ ಸ್ಥೇಯಂ ಸೋದರ್ಯಾ ಪರಜಾಯಯಾ ।
ತಥಾ ಸಾಪತ್ನಮಾತುಶ್ಚ ತಥಾ ಸ್ವದುಹಿತೃಷ್ವಪಿ ॥ ೪೬ ॥

---

ಪತ್ನೀಪರಿಗ್ರಹ ಇವುಗಳನ್ನು ಗೃಹಸ್ಥನು ಮಾಡಬಾರದು. ವೃಥಾ ಸುತ್ತುವುದರಿಂದ ನಿತ್ಯಕರ್ಮಕ್ಕೆ ಹಾನಿಯುಂಟಾಗುತ್ತದೆ. ವೃಥಾ ದಾನದಿಂದ ಧನನಾಶ. ವ್ಯರ್ಥವಾದ ಪಶುಮಾರಣದಿಂದ ನರಕಪ್ರಾಪ್ತಿಗೆ ಕಾರಣವಾದ ಪಾಪವುಂಟಾಗುತ್ತದೆ.

೪೩-೪೫. ವೃಥಾ ಅನೇಕ ಪತ್ನೀಸ್ವೀಕಾರದಿಂದ ಅಶ್ಲಾಘ್ಯವಾದ ಸಂತತಿಹಾನಿಯನ್ನು ಹೊಂದಬೇಕಾಗುತ್ತದೆ. ಅನೇಕ ವರ್ಣಸಂಕರದ ಭಯವೂ ತಪ್ಪಿದ್ದಲ್ಲ. ಲೋಕದಲ್ಲಿ ಇತರರಿಂದ ಬಹಳವಾಗಿ ಭಯಪಡಬೇಕಾದೀತು. ಆದುದರಿಂದ ಅದನ್ನು ಸರ್ವಥಾ ಬಿಡಬೇಕು. ಪರದ್ರವ್ಯದ ಉಪಭೋಗವು ನರಕಪತನಕ್ಕೆ ಕಾರಣವಾದ್ದರಿಂದಲೂ ಪರದಾರರತಿಯು ಮೃತ್ಯುಪ್ರದವಾದ್ದರಿಂದಲೂ ಪ್ರಾಜ್ಞರು ಇವೆರಡರಲ್ಲಿಯೂ ಬುದ್ಧಿಯನ್ನಿಡಬಾರದು. ಮತ್ತು ನಗ್ನಳಾದಪರಸ್ತ್ರೀಯನ್ನು ನೋಡಬಾರದು. ಕಳ್ಳರೊಡನೆ ಯಾವ ವಿಧವಾದ ಸಂಭಾಷಣೆಯನ್ನೂ ಮಾಡಬಾರದು. ಋತುಮತಿಯಾಗಿರುವ ಸ್ತ್ರೀಯೊಡನೆ ಸಂಭಾಷಣ ಮತ್ತು ಅವಳ ದರ್ಶನ ಸ್ಪರ್ಶನ ಯಾವುದನ್ನೂ ಮಾಡಬಾರದು.

೪೬-೪೭. ಮತ್ತೊಬ್ಬನ ಪತ್ನಿಯಾಗಿರುವ ತನ್ನ ಸಹೋದರಿಯೊಡನೆಯೂ ಏಕಾಸನದಲ್ಲಿ ಕೂಡಬಾರದು. ಹಾಗೆಯೇ, ಸಪತ್ನೀಮಾತೃವಿನೊಡನೆಯೂ (ತಂದೆಯ ಕಿರಿಹೆಂಡತಿ) ತನ್ನ ಹೆಣ್ಣುಮಕ್ಕಳೊಡನೆಯೂ ಏಕಾಸನ ಸ್ಥಿತಿಯನ್ನು ಬಿಡಬೇಕು.

ನ ಚ ಸ್ನಾಯೀತ ನೈನಗ್ನೋ ನ ಶಯೀತ ಕದಾಚನ।
ದಿಗ್ವಾಸಸೋಽಪಿ ನ ತಥಾ ಪರಿಭ್ರಮಣಮಿಷ್ಯತೇ ॥ ೪೭ ॥

ಭಿನ್ನಾಂಶ್ಚ ಶಯ್ಯಾಸನಭಾಜನಾದೀನ್
ಶುದ್ಧ್ಯೈರತಃ ಸಂಪರಿವರ್ಜಯೇತ್ತಾನ್।
ನಂದಾಸು ನಾಭ್ಯಂಗಮುಪಾಚರೇತ
ಕ್ಷೌರಂ ಚ ರಿಕ್ತಾಸು ಜಯಾಸು ಮಾಂಸಂ ॥ ೪೮ ॥

ಪೂರ್ಣಾಸು ಯೋಷಿತ್ಪರಿವರ್ಜನೀಯಾ
ಭದ್ರಾಸು ಸರ್ವಾಣಿ ಸಮಾಚರೇಚ್ಚ।
ನಾಭ್ಯಂಗಮರ್ಕೇ ನ ಚ ಭೂಮಿಪುತ್ರೇ
ಕ್ಷೌರಂ ಚ ಶುಕ್ರೇ ರವಿಜೇ ಚ ಮಾಂಸಂ ॥ ೪೯ ॥

ಬುಧೇಷು ಯೋಷಿನ್ನ ಸಮಾಚರೇತ
ಶೇಷೇಷು ಸರ್ವಾಣಿ ಸದೈವ ಕುರ್ಯಾತ್।
ಚಿತ್ರಾಸು ಹಸ್ತೇ ಶ್ರವಣೇ ನ ತೈಲಂ
ಕ್ಷೌರಂ ವಿಶಾಖಾಸ್ವಭಿಜಿತ್ಸು ವರ್ಜ್ಯಂ ॥ ೫೦ ॥

---

ನಗ್ನನಾಗಿ (ವಸ್ತ್ರವಿಲ್ಲದೆ) ಸ್ನಾನಮಾಡಕೂಡದು. ಮಲಗಲೂ ಕೂಡದು, ಹೊರಗೆ ಸುತ್ತಲೂ ಕೂಡದು. ಶುದ್ಧಿಯಲ್ಲಿ ಆಸಕ್ತನಾಗಿರುವವನು ಹರಿದುಹೋದ ಮತ್ತು ಮುರಿದು ಹೋದ ಹಾಸಿಗೆ, ಆಸನಗಳು, ಮತ್ತು ಪಾತ್ರೆಗಳು ಇವುಗಳನ್ನು ಪರಿತ್ಯಾಗ ಮಾಡಬೇಕು. ನಂದಾತಿಥಿಗಳಲ್ಲಿ ಅಭ್ಯಂಗವನ್ನೂ ರಿಕ್ತತಿಥಿಗಳಲ್ಲಿ ಕ್ಷೌರವನ್ನೂ, ಜಯತಿಥಿಗಳಲ್ಲಿ ಮಾಂಸವನ್ನೂ ಬಿಡಬೇಕು.

೪೮-೫೦. ಪೂರ್ಣಾತಿಥಿಗಳಲ್ಲಿ ಸ್ತ್ರೀಯನ್ನು ಬಿಡಬೇಕು. ಭದ್ರಾತಿಥಿಗಳಲ್ಲಿ ಮಾತ್ರ ಎಲ್ಲವನ್ನೂ (ಅಂದರೆ ಅಭ್ಯಂಗ, ಕ್ಷೌರ, ಮಾಂಸ, ಸ್ತ್ರೀಗಮನ) ನಡೆಸಬಹುದು. ಭಾನುವಾರ, ಮಂಗಲವಾರಗಳಲ್ಲಿ ಅಭ್ಯಂಗವನ್ನೂ, ಶುಕ್ರವಾರದಲ್ಲಿ ಕ್ಷೌರವನ್ನೂ ಶನಿವಾರದಲ್ಲಿ ಮಾಂಸವನ್ನೂ ಬಿಡಬೇಕು. ಚಿತ್ತಾ, ಹಸ್ತ, ಶ್ರವಣ ನಕ್ಷತ್ರಗಳಲ್ಲಿ ಅಭ್ಯಂಗವನ್ನೂ ವಿಶಾಖಾ, ಅಭಿಜಿತ್ತು ಈ ನಕ್ಷತ್ರಗಳಲ್ಲಿ ಕ್ಷೌರವನ್ನೂ ಬಿಡಬೇಕು.

ಮೂಲೇ ಮೃಗೇ ಭಾದ್ರಪದಾಸು ಮಾಂಸಂ
ಯೋಷಿನ್ಮಘಾಕೃತ್ತಿಕಭೋತ್ತರಾಸು ।
ಸದೈವ ವರ್ಜ್ಯಂ ಶಯನೇ ಉದಕ್ಷಿರಃ
ತಥಾ ಪ್ರತೀಚ್ಯಾಂ ರಜನೀಚರೇಶ ॥ ೫೧ ॥

ಭುಂಜೀತ ನೈವೇಹ ಚ ದಕ್ಷಿಣಾಮುಖೋ
ನ ಚ ಪ್ರತೀಚೀಮಭಿಭೋಜನೀಯಂ ।
ದೇವಾಲಯಂ ಚೈತ್ಯತರುಂ ಚತುಷ್ಪಥಂ
ವಿದ್ಯಾಧಿಕಂ ಚಾಪಿ ಗುರುಂ ಪ್ರದಕ್ಷಿಣಂ ॥ ೫೨ ॥

ಮಾಲ್ಯಾನ್ನಪಾನಂ ವಸನಾನಿ ಯತ್ನತೋ
ಧೃತಾನಿ ಚಾನ್ಯೈರ್ನಹಿ ಧಾರಯೇದ್ಬುಧಃ ।
ಸ್ನಾಯಾಚ್ಛಿರಃ ಸ್ನಾನತಯಾ ಚ ನಿತ್ಯಂ
ನಿಷ್ಕಾರಣಂ ಚೈವ ಮಹಾನಿಶಾಸು । ॥ ೫೩ ॥

---

೫೧-೫೨. ಮೂಲ, ಮೃಗಶಿರಾ, ಪೂ. ಭಾದ್ರಾ. ಉ. ಭಾದ್ರೆಗಳಲ್ಲಿ ಮಾಂಸವನ್ನು ಬಿಡಬೇಕು. ಮಘಾ, ಕೃತ್ತಿಕೆ, ಉತ್ತರೆಗಳಲ್ಲಿ ಸ್ತ್ರೀಯನ್ನು ಬಿಡಬೇಕು. ಯಾವಾಗಲೂ ಶಯನಕಾಲದಲ್ಲಿ ಉತ್ತರದಿಕ್ಕಿನಲ್ಲಿ ತಲೆ ಇಟ್ಟು ಮಲಗಬಾರದು. ಹಾಗೇ ಪಶ್ಚಿಮದಿಕ್ಕಿಗೂ ತಲೆಯಿಟ್ಟು ಮಲಗಬಾರದು. ಮತ್ತು ದಕ್ಷಿಣದಿಕ್ಕಿಗೂ ಪಶ್ಚಿಮದಿಕ್ಕಿಗೂ ಅಭಿಮುಖನಾಗಿ ಊಟಮಾಡಬಾರದು. ದೇವಾಲಯ, ಅರಳಿಕಟ್ಟೆ ನಾಲ್ಕುದಾರಿ ಸೇರುವ ಸ್ಥಳ (ಸರ್ಕಲ್) ವಿದ್ಯಾಧಿಕನಾದ ಗುರು ಇವರನ್ನು ಕಂಡರೆ ಪ್ರದಕ್ಷಿಣವಾಗಿ ಹೋಗಬೇಕು.

೫೩-೫೪. ಮಾಲ್ಯ, ಅನ್ನ, ಪಾನೀಯ, ವಸ್ತ್ರ ಇವುಗಳು ಇತರರಿಂದ ಉಪಭುಕ್ತಗಳಾಗಿದ್ದಲ್ಲಿ ವಿವೇಕಿಯಾದವನು ಆ ಭುಕ್ತಶೇಷವನ್ನು ತಾನು ಉಪಯೋಗಿಸಬಾರದು. ನಿತ್ಯವೂ ಶಿರಸ್ನಾನವನ್ನು ಮಾಡಬೇಕು. ಅದರಲ್ಲಿಯೂ ಮಹಾನಿಶಿಯಲ್ಲಿ ಸ್ನಾನ ಮಾಡಬೇಕಾದಲ್ಲಿ ಗ್ರಹಣ, ಸ್ವಜನಗಳ ಮರಣ, ಜನ್ಮನಕ್ಷತ್ರಗತನಾದ ಚಂದ್ರ

ಗ್ರಹೋಪರಾಗೇ ಸ್ವಜನಾಪಘಾತೇ
ಮುಕ್ತ್ವಾ ಚ ಜನ್ಮರ್ಕ್ಷಗತೇ ಶಶಾಂಕೇ ।
ನಾಭ್ಯಂಗಿತಂ ಕಾಯಮುಪಸ್ಪೃಶೇಚ್ಚ
ಸ್ನಾತೋ ನ ಕೇಶಾನ್ವಿಧುನೀತ ಚಾಪಿ ॥ ೫೪ ॥

ಗಾತ್ರಾಣಿ ನೈವಾಂಬರಪಾಣಿನಾ ಚ
ಸ್ನಾತೋ ವಿಮೃಜ್ಯಾದ್ರಜನೀಚರೇಶ ।
ವಸೇತ್ಸುದೇಶೇಷು ಸುರಾಜಕೇಷು
ಸುಸಂಹಿತೇಷ್ವೇವ ಜನೇಷು ನಿತ್ಯಂ ॥ ೫೫ ॥

ಅಕ್ರೋಧನಾ ನ್ಯಾಯಪರಾ ವಿಮತ್ಸರಾಃ
ಕೃಷೀವಲಾ ಹ್ಯೌಷಧಿಜಾತಯಶ್ಚ ।
ಸ್ವಾಪಸ್ತು ವೈದ್ಯೋ ಧನಿಕಶ್ಚ ಯತ್ರ
ಸಚ್ಛ್ರೋತ್ರಿಯಸ್ತತ್ರ ವಸೇತ ನಿತ್ಯಂ ॥ ೫೬ ॥

---

ಈ ಸಂದರ್ಭಗಳಲ್ಲೇ ಮಾಡಬೇಕೇ ಹೊರತು ಉಳಿದ ಕಾಲವಲ್ಲಿ ಮಹಾನಿಶಿಯಲ್ಲಿ ಸ್ನಾನಮಾಡಕೂಡದು. ಎಣ್ಣೆಹಚ್ಚಿಕೊಂಡಿರುವವನನ್ನು ಮುಟ್ಟಬಾರದು. ಸ್ನಾನ ಮಾಡಿದ ಮೇಲೆ ಕೇಶಗಳನ್ನು ಒದರಬಾರದು.

೫೫-೫೬. ಎಲೈ ರಾಕ್ಷಸರಾಜನೇ, ಸ್ನಾನಮಾಡಿದ ನಂತರ ವಸ್ತ್ರಪಾಣಿಯಾಗಿ ಅವಯವಗಳನ್ನು ಮರ್ದನಮಾಡಬಾರದು. ಮತ್ತು ಒಳ್ಳೆಯ ರಾಜನಿಂದ ರಕ್ಷಿಸಲ್ಪಟ್ಟಿ ರುವ ಸುಸಂಸ್ಕೃತರಾದ ಜನಗಳಿರುವ ಪ್ರಶಸ್ತದೇಶಗಳಲ್ಲೇ ವಾಸಮಾಡಬೇಕು. ಯಾವ ದೇಶದಲ್ಲಿ ಕೋಪಿಷ್ಠರೂ ಮತ್ಸರಿಗಳೂ ಇರುವುದಿಲ್ಲವೋ ಜನರು ನ್ಯಾಯಪರ ರಾಗಿರುತ್ತಾರೆಯೋ ಮತ್ತು ವ್ಯವಸಾಯಗಾರರೂ ಔಷಧಿವಿಶೇಷಗಳೂ ಇರುವ ದೇಶ ವನ್ನು ನೋಡಿ ಅಲ್ಲಿ ವಾಸಮಾಡಬೇಕು. ಮತ್ತು ಆ ದೇಶದಲ್ಲಿ ಸುಲಭವಾಗಿ ಲಭಿಸತಕ್ಕ ವೈದ್ಯರೂ ಧನಿಕರೂ ಒಳ್ಳೆಯ ಶ್ರೋತ್ರಿಯರೂ ಇರಬೇಕು. ಯಾವ

ನ ತೇಷು ದೇಶೇಷು ವಸೇತ ಬುದ್ಧಿಮಾನ್
ಸದಾ ನೃಪೋದಂಡರುಚಿಸ್ತ್ವಶಕ್ತಃ ।
ಜನೋಪಿ ನಿತ್ಯೋತ್ಸವ ಬದ್ಧವೈರಃ
ಸದಾ ಜಿಗೀಷುಶ್ಚ ನಿಶಾಚರೇಂದ್ರ ॥ ೫೭ ॥

ಯಚ್ಚ ವರ್ಜ್ಯಂ ಮಹಾಬಾಹೋ ಸದಾ ಧರ್ಮಸ್ಥಿತೈರ್ನರೈಃ ।
ಯದ್ಭೋಜ್ಯಂ ಚ ಸಮುದ್ದಿಷ್ಟಂ ಕಥಯಿಷ್ಯಾಮಹೇ ವಯಂ ॥ ೫೮ ॥

ಭೋಜ್ಯಮನ್ನಂ ಪರ್ಯುಷಿತಂ ಸ್ನೇಹಾಕ್ತಂ ಚಿರಸಂಭೃತಂ ।
ಅಸ್ನೇಹಾಃ ವ್ರೀಹಯಃ ಶ್ಲಕ್ಷ್ಣಾ ವಿಕಾರಾಃ ಪಯಸಸ್ತಥಾ ॥ ೫೯ ॥

ಶಶಕಃ ಶಲ್ಯಕೋ ಗೋಧಾ ಸಮೇಧಾ ಮತ್ಸ್ಯಕಚ್ಛಪೌ ।
ತದ್ವದ್ದ್ವಿದಲಕಾದೀನಿ ಭೋಜ್ಯಾನಿ ಮನುರಬ್ರವೀತ್ ॥ ೬೦ ॥

ಮಣಿವಸ್ತ್ರಪ್ರವಾಲಾನಾಂ ತದ್ವನ್ಮುಕ್ತಾಫಲಸ್ಯ ಚ ।
ಶೈಲದಾರುಮಯಾನಾಂ ಚ ತೃಣಮೂಲೌಷಧಾನ್ಯಪಿ ॥ ೬೧ ॥

---

ದೇಶದಲ್ಲಿ ರಾಜನು ಅಶಕ್ತನಾಗಿ ಯಾವಾಗಲೂ ಪ್ರಜೆಗಳನ್ನು ದಂಡಿಸುತ್ತಲೇ ಇರುತ್ತಾನೆಯೋ ಜನಗಳು ಉತ್ಸವಪ್ರಿಯರಾಗಿರದೆ ಯಾವಾಗಲೂ ಯುದ್ಧವ್ಯಾಪಾರದಲ್ಲೇ ನಿರತರಾಗಿರುವರೋ ಆ ದೇಶದಲ್ಲಿ ಬುದ್ಧಿಶಾಲಿಯಾದವನು ವಾಸಮಾಡಬಾರದು.

೫೮-೬೦. ಎಲೈ ವೀರನೇ, ಯಾವಾಗಲೂ ಧರ್ಮನಿರತರಾದ ಜನಗಳಿಂದ ಯಾವದು ಬಿಡಲ್ಪಡತಕ್ಕದ್ದೋ ಯಾವುದು ಭೋಜ್ಯವೆಂದು ವಿಹಿತವಾಗಿದೆಯೋ ಅದನ್ನು ಹೇಳುತ್ತೇವೆ ಕೇಳು. ತುಪ್ಪ, ಎಣ್ಣೆ ಮೊದಲಾದ ಸ್ನೇಹಪದಾರ್ಥದಿಂದ ಕೂಡಿದ ಅನ್ನವು ಪರ್ಯುಷಿತವಾದರೂ (ತಂಗಳು) ಅದು ಭೋಜ್ಯವಾದದ್ದು. ಮತ್ತು ಹಳೆದಾದ ಸಣ್ಣ ಭತ್ತ ಮತ್ತು ಹಾಲಿನಿಂದ ಉಂಟಾದ ಬೆಣ್ಣೆ, ತುಪ್ಪ ಮುಂತಾದವು ಭೋಜ್ಯಗಳು ಮತ್ತು ಮಾಂಸಾಹಾರಿಗಳಾದವರಿಗೆ ಮೊಲ, ಮುಳ್ಳುಹಂದಿ, ಉಡು, ಕಾಡುಹಂದಿ, ಮೀನು ಮತ್ತು ಆಮೆ ಇವು ಭೋಜ್ಯವೆಂದೂ ದ್ವಿದಲಧಾನ್ಯಗಳು ಎಲ್ಲರಿಗೂ ಭೋಜ್ಯವೆಂದೂ ಮನುವು ಹೇಳಿರುತ್ತಾನೆ.

೬೧-೬೩. ರತ್ನಗಳು ಅಥವಾ ಮಣಿಮಯವಾದ ವಸ್ತ್ರ, ಪ್ರವಾಲ (ಹವಳ) ಮುತ್ತಿನಮಣಿ ಮತ್ತು ಶಿಲೆಯಿಂದಲೂ ಮರದಿಂದಲೂ ಮಾಡಿದ ಪಾತ್ರೆಗಳು, ಹುಲ್ಲು,

ಶೂರ್ಪಧಾನ್ಯತೃಣಾನಾಂ ಚ ಸಂಹತಾನಾಂ ಚ ವಾಸಸಾಂ ।
ವಲ್ಕಲಾನಾಮಶೇಷಾಣಾಮಂಬುನಾ ಶುದ್ಧಿರಿಷ್ಯತೇ ॥ ೬೨ ॥

ಸಸ್ನೇಹಾನಾಮಥೋಷ್ಣೇನ ತಿಲಕಲ್ಕೇನ ಚಾವಿಕಂ ।
ಕಾರ್ಪಾಸಿಕಾನಾಂ ವಸ್ತ್ರಾಣಾಂ ಶುದ್ಧಿಃ ಸ್ಯಾದ್ಬಹಿರಂಬುನಾ ॥ ೬೩ ॥

ನಾಗದಂತಾಸ್ಥಿಶೃಂಗಾಣಾಂ ತಕ್ಷ್ಣಾಚ್ಛುದ್ಧಿರಿಷ್ಯತೇ ।
ಪುನಃ ಪಾಕೇನ ಭಾಂಡಾನಾಂ ಮೃನ್ಮಯಾನಾಂ ಚ ಮೇಧ್ಯತಾ ॥ ೬೪ ॥

ಶುಚಿ ಭೈಕ್ಷಂ ಕಾರುಹಸ್ತಃ ಪಣ್ಯಯೋಷಿನ್ಮುಖಂ ತಥಾ ।
ರಥ್ಯಾಗತ ಮವಿಜ್ಞಾತಂ ದಾಸವರ್ಗೇಣ ಯತ್ಕೃತಂ ॥ ೬೫ ॥

ವಾಕ್ಯಪೂತಂ ಚಿರಾನೀತಮನೇಕಾಂತರಿತಂ ಲಘು ।
ಚೇಷ್ಟಿತಂ ಬಾಲವೃದ್ಧಾನಾಂ ಬಾಲಸ್ಯ ತು ಮುಖಂ ಶುಚಿ ॥ ೬೬ ॥

---

ಬೇರು, ಔಷಧಿಗಳು, ಮೊರದಿಂದ ಕೇರುವ ಧಾನ್ಯಗಳು, ಲಾಮಂಚ ಮೊದಲಾದ ಹುಲ್ಲುಗಳು, ಒಗೆದ ಬಟ್ಟೆಗಳು, ನಾರುಮಡಿಗಳು ಇವು ಕೇವಲ ಜಲದಿಂದ ಶುದ್ಧವಾಗುತ್ತವೆ. ಸ್ನೇಹದಿಂದ (ಜಿಡ್ಡು) ಕೂಡಿರುವ ಪದಾರ್ಥಗಳಿಗೆ ಔಷ್ಣ್ಯದಿಂದಲೂ, ಕುರಿಯ ನೂಲಿನಿಂದ ಉಂಟಾದ ವಸ್ತ್ರಗಳಿಗೆ ಎಳ್ಳಿನ ಹಿಂಡಿಯಿಂದಲೂ, ಹತ್ತಿಯ ಬಟ್ಟೆಗಳಿಗೆ ಹೊರಗಿನ ನೀರಿನಿಂದಲೂ (ಕೆರೆ, ಹೊಳೆ ಮೊದಲಾದದ್ದು) ಶುದ್ಧಿ.

೬೪-೬೬. ಆನೆಯ ದಂತ ಮತ್ತು ಮೂಳೆ, ಕೊಂಬುಗಳು ಇವು ಸವ್ಯೆ ಶುದ್ಧಿಯುಳ್ಳವು. ಮಣ್ಣಿನ ಮಡಕೆಗಳಿಗೆ ಪುನಃ ಪಾಕದಿಂದ ಶುದ್ಧಿಯುಂಟಾಗುತ್ತದೆ. ಭಿಕ್ಷೆಯಿಂದ ಹೊಂದಿದ ಪದಾರ್ಥವು ಸ್ವತಃ ಶುದ್ಧವಾದದ್ದು. ಅಗಸನ ಹಸ್ತ ವೇಶ್ಯೆಯ ಮುಖ ಇವು ಸ್ವತಃ ಶುದ್ಧವಾದುವು. ಹಾಗೆಯೇ ಇಂತಹವನಿಗೆ ಸೇರಿದ್ದು ಎಂದು ತಿಳಿಯದಿರುವ ದಾರಿಯಲ್ಲಿ ಸಿಕ್ಕಿದ ವಸ್ತುವೂ ಶುದ್ಧವಾದದ್ದು. ದಾಸಜನಗಳಿಂದ ಪ್ರೀತಿಯಿಂದ ಮಾಡಲ್ಪಟ್ಟದ್ದು ಶುದ್ಧವಾದದ್ದು. ಮತ್ತು ಅನೇಕ ದೇಶಕಾಲಗಳಿಂದ ಅಂತರಿತವಾಗಿದ್ದರೂ ಅದು ಆಪ್ತವಾಕ್ಯದಿಂದ ಶುದ್ಧಿಹೊಂದುತ್ತದೆ. ಬಾಲವೃದ್ಧರ ಚೇಷ್ಟೆಗಳು ಲಘುವಾಗಿದ್ದರೂ ಅದು ಶುದ್ಧವಾದದ್ದು. ಮಗುವಿನ ಮುಖವು ಯಾವಾಗಲೂ ಶುದ್ಧಿಯುಳ್ಳದ್ದು.

ಕರ್ಮಾಂತಾಂಗಾರಶಾಲಾಸ್ತು ಸ್ತನಂಧಯಸುತಾಃ ಸ್ತ್ರಿಯಃ ।
ವಾಗ್ವಿಪ್ರುಷೋ ದ್ವಿಜೇಂದ್ರಾಣಾಂ ಸಂತಪ್ತಾಶ್ಚಾಂಬುಬಿಂದವಃ ॥ ೬೭ ॥

ಭೂಮಿರ್ವಿಶುಧ್ಯತೇ ಖಾತದಾಹಮಾರ್ಜನಗೋಕ್ರಮೈಃ ।
ಲೇಪಾದುಲ್ಲೇಖನಾತ್ಸೇಕಾದ್ವೇಶ್ಮ ಸಂಮಾರ್ಜನಾರ್ಚನಾತ್ ॥ ೬೮ ॥

ಕೇಶಕೀಟಾವಪನ್ನೇಽನ್ನೇ ಗೋಘ್ರಾತೇ ಮಕ್ಷಿಕಾನ್ವಿತೇ ।
ಮೃದಂಬು ಭಸ್ಮಕ್ಷಾರಾಣಿ ಪ್ರಕ್ಷೇಪ್ತವ್ಯಾನಿ ಶುದ್ಧಯೇ ॥ ೬೯ ॥

ಔದುಂಬರಾಣಾಂ ಚಾಮ್ಲೇನ ಕ್ಷಾರೇಣ ತ್ರಪುಸೀಸಯೋಃ ।
ಭಸ್ಮಾದ್ಭಿಶ್ಚೈವ ಕಾಂಸ್ಯಾನಾಂ ಶುದ್ಧಿಃ ಪ್ಲಾವೋದ್ರವಸ್ಯ ಚ ॥ ೭೦ ॥

ಅಮೇಧ್ಯಾಕ್ತಸ್ಯ ಮೃತ್ತೋಯೈರ್ಗಂಧಾಪಹರಣೇನ ಚ ।
ಅನ್ಯೇಷಾಮಪಿ ತದ್ದ್ರವ್ಯೈಃ ಶುದ್ಧಿರ್ಗಂಧಾಪಹಾರತಃ ॥ ೭೧ ॥

---

೬೭-೬೯. ಹಾಗೆಯೇ ಕಾರ್ಯಾರ್ಹವಾದ ಅಂಗಾರಶಾಲಾ, (ಕುಲುಮೆಯ ಮನೆ) ಸ್ತನ್ಯಪಾನ ಮಾಡುವ ಮಕ್ಕಳು, ಹೆಣ್ಣುಮಕ್ಕಳು, ಸ್ತ್ರೀಯರು, ಮತ್ತು ಬ್ರಾಹ್ಮಣಶ್ರೇಷ್ಠರು ಮಾತನಾಡುವಾಗ ಬಿದ್ದ ಬಿಂದುಗಳು, ಕಾದಿರುವ ನೀರಿನ ಬಿಂದುಗಳು, ಇವು ಸ್ವತಃ ಶುದ್ಧವಾದುವು. ಭೂಮಿಯು ಅಗೆಯುವದ್ದರಿಂದಲೂ ಸುಡುವುದರಿಂದಲೂ, ತೊಳೆಯುವುದರಿಂದಲೂ, ಗೋವುಗಳ ಪಾದವಿನ್ಯಾಸದಿಂದಲೂ, ಶುದ್ಧವಾಗುತ್ತದೆ. ಗೋಮಯಾದಿ ಲೇಪನದಿಂದಲೂ, ಕೆಟ್ಟಭಾಗವನ್ನು ಕೆರೆದು ಹಾಕುವುದರಿಂದಲೂ, ನೀರಿನ ಸೇಚನದಿಂದಲೂ, ಸಾರಿಸುವುದರಿಂದಲೂ, ವಾಸ್ತು ಪುರುಷನ ಅರ್ಚನೆಯಿಂದಲೂ, ಮನೆಯು ಶುದ್ಧಿಹೊಂದುತ್ತದೆ. ಕೂದಲು, ಮತ್ತು ಕೀಟಗಳು, ಇವುಗಳಿಂದ ಅನ್ನವು ದೂಷಿತವಾಗಿದ್ದಲ್ಲಿ ಗೋವಿನಿಂದ ಮೂಸಲ್ಪಟ್ಟೊ ನೊಣಗಳಿಂದ ಆವರಿಸಲ್ಪಟ್ಟೊ ಇದ್ದಲ್ಲಿ ಆ ಅನ್ನದ ಶುದ್ಧಿಗಾಗಿ ಮೃತ್ತು, ಭಸ್ಮ, ಉಪ್ಪು, ಇವನ್ನು ಅದರ ಮೇಲೆ ಉದುರಿಸಬೇಕು.

೭೦-೭೧. ತಾಮ್ರದ ಪಾತ್ರೆಗಳಿಗೆ ಹುಣಸೇಹಣ್ಣಿನಿಂದಲೂ, ತವರ ಸೀಸ ಗಳಿಗೆ ಲವಣ ವಿಶೇಷದಿಂದಲೂ ಶುದ್ಧಿ. ಕಂಚಿಗೆ ಭಸ್ಮೋದಕದಿಂದ ಶುದ್ಧಿ. ಅಮೇಧ್ಯ ಸಂಸ್ಪರ್ಶವಾದಲ್ಲಿ ಮೃತ್ತಿಕಾಜಲದಿಂದಲೂ, ದುರ್ಗಂಧವನ್ನು ಹೋಗ ಲಾಡಿಸುವುದರಿಂದಲೂ ಶುದ್ಧಿ. ಉಳಿದ ಪದಾರ್ಥಗಳಿಗೂ ಹೀಗೆಯೇ. ಕರುವಿಗೆ

***ಮಾತುಃ ಪ್ರಸ್ರವಣೇ ವತ್ಸಃ ಶಕುನಿಃ ಫಲಪಾತನೇ।**
**ಗರ್ದಭೋ ಭಾರವಾಹಿತ್ವೇ ಶ್ವಾ ಮೃಗಗ್ರಹಣೇ ಶುಚಿಃ ॥೭೨॥**

**ರಥ್ಯಾ ಕರ್ದಮತೋಯಾನಿ ಗಾವಃ ಪಥಿ ತೃಣಾನಿ ಚ।**
**ಮಾರುತೇ ನೈವ ಶುದ್ಧ್ಯಂತಿ ಪಕ್ವೇಷ್ಟಕಚಿತಾನಿ ಚ ॥೭೩॥**

**ಪಕ್ವಂ ದ್ರೋಣಾಧಿಕಂ ಚಾನ್ನ ಮಮೇಧ್ಯಾಭಿಪ್ಲುತಂ ಭವೇತ್।**
**ಅಗ್ರಮುದ್ಧೃತ್ಯ ಸಂತ್ಯಾಜ್ಯಂ ಶೇಷಸ್ಯ ಪ್ರೋಕ್ಷಣಂ ಸ್ಮೃತಂ ॥೭೪॥**

**ಉಪವಾಸಸ್ತ್ರಿರಾತ್ರಂ ವಾ ದೂಷಿತಾನ್ನಸ್ಯ ಭೋಜನೇ।**
**ಅಜ್ಞಾತೇ ಜ್ಞಾತಪೂರ್ವೇ ವಾ ನೈವ ಶುದ್ಧಿರ್ವಿಧೀಯತೇ ॥೭೫॥**

---

ತಾಯಿಯ ಪ್ರಸವದಿಂದಲೇ ಶುದ್ಧಿಯು. ಪಕ್ಷಿಗಳಿಂದ ಬೀಳಿಸಲ್ಪಟ್ಟ ಹಣ್ಣು, ಕತ್ತೆಯಿಂದ ಹೊರಲ್ಪಟ್ಟ ಭಾರವು, ನಾಯಿಯಿಂದ ಕಚ್ಚಲ್ಪಟ್ಟ ಮೃಗವೂ ಸ್ವತಃ ಶುದ್ಧವಾದುವು.

೭೩-೭೫. ಬೀದಿಯಲ್ಲಿರುವ ಕೆಸರು, ನೀರು, ಹಸುಗಳು, ಹುಲ್ಲುಗಳು, ಸುಟ್ಟ ಇಟ್ಟಿಗೆಗಳ ಕಟ್ಟಡಗಳು, ಗಾಳಿಯಿಂದಲೇ ಶುದ್ಧವಾಗುತ್ತವೆ. ಒಂದು ಕೊಳಗಕ್ಕಿಂತಲೂ ಹೆಚ್ಚಾಗಿರುವ ಪಕ್ವಾನ್ನಕ್ಕೆ ಅಶುಚಿಪದಾರ್ಥದ ಸಂಸರ್ಗವುಂಟಾದರೆ, ಅದರ ಸ್ಪರ್ಶವುಳ್ಳ ಅಗ್ರಭಾಗವನ್ನು ತ್ಯಜಿಸಿದಲ್ಲಿ ಉಳಿದ ಭಾಗಕ್ಕೆ ಪ್ರೋಕ್ಷಣದಿಂದ ಶುದ್ಧಿಯುಂಟು. ದುಷ್ಟವಾದ ಅನ್ನವನ್ನು ಭೋಜನಮಾಡಿದಲ್ಲಿ ಮೂರು ರಾತ್ರಿ ಉಪವಾಸಮಾಡಿದಲ್ಲಿ ಅವನು ಆ ದೋಷದಿಂದ ಶುದ್ಧನಾಗುತ್ತಾನೆ. ಆದರೆ ಅದು ದುಷ್ಟವಾದ ಅನ್ನವೆಂದು ತಿಳಿಯದಿದ್ದಲ್ಲಿ ಅಥವಾ ಭೋಜನ ಮಾಡಿದಮೇಲೆ ತಿಳಿದಲ್ಲಿಯೂ ಅದು ದೋಷವಲ್ಲವಾದುದರಿಂದ ಅದಕ್ಕೆ ಶುದ್ಧಿಯನ್ನು ಶಾಸ್ತ್ರದಲ್ಲಿ ಹೇಳಿಲ್ಲ. ಅನಿವಾರ್ಯಪ್ರಸಂಗವಲ್ಲಿ ಬುದ್ಧಿ ಪೂರ್ವಕವಾಗಿ ಮಾಡಿದ ಭೋಜನವೇ ದುಷ್ಟವೆಂದು ತಾತ್ಪರ್ಯ.

---

* ಈ ವಾಕ್ಯಕ್ಕೆ ಈ ರೀತಿಯಲ್ಲೂ ಅರ್ಥ ಹೇಳಬಹುದು, ಕರುವು ಕುಡಿದ ಮಾತ್ರಕ್ಕೆ ಹಾಲಿಗೆ ಉಚ್ಛಿಷ್ಟ ದೋಷವಿಲ್ಲ.

ಉದಕ್ಯಾ ಸ್ನಾತ ನಗ್ನಾಶ್ಚ ಸೂತಿಕಾಂತ್ಯಾವಸಾಯಿನಃ ।
ಸ್ಪೃಷ್ಟ್ವಾ ಸ್ನಾಯೀತ ಶೌಚಾರ್ಥಂ ತಥೈವ ಮೃತಹಾರಿಣಃ ॥ ೭೬ ॥

ಸಸ್ನೇಹಮುಸ್ಥಿಸಂಸ್ಪೃಶ್ಯ ಸವಾಸಾ ಜಲಮಾವಿಶೇತ್ ।
ಆಚಮ್ಯೈವ ತು ನಿಃಸ್ನೇಹಂ ಗಾಮಾಲಭ್ಯಾರ್ಕಮೀಕ್ಷ್ಯ ಚ ॥ ೭೭ ॥

ನ ಲಂಘಯೇನ್ನರಂ ನಾಸೃಕ್ಕೇರೀರೋದ್ವರ್ತನಾನಿ ಚ ।
ಗೃಹಾದುಚ್ಛಿಷ್ಟವಿಣ್ಮೂತ್ರ ಪಾದಾಂಭಾಂಸಿ ಕ್ಷಿಪೇದ್ಬಹಿಃ ॥ ೭೮ ॥

*ಪಂಚ ಪಿಂಡಾ ನನುದ್ಧೃತ್ಯ ನ ಸ್ನಾಯಾತ್ಪರವಾರಿಣಿ ।
ಸ್ನಾಯೀತ ದೇವ ಖಾತೇಷು ಸರಃಸ್ಸುಚ ಸರಿತ್ಸು ಚ ॥ ೭೯ ॥

ನೋದ್ಯಾನಾದೌ ವಿಕಾಲೇಷು ಪ್ರಾಜ್ಞಸ್ತಿಷ್ಠೇತ್ಕದಾಚನ ।
ನಾಲಪೇಜ್ಜನವಿದ್ವಿಷ್ಟಂ ವೀರಹೀನಾಂ ತಥಾ ಸ್ತ್ರಿಯಂ ॥ ೮೦ ॥

---

೭೬-೭೮. ಋತುಸ್ನಾನ ಮಾಡಿರುವ ಮತ್ತು ನಗ್ನಳಾಗಿರುವ ಸ್ತ್ರೀಯನ್ನೂ ರಜಸ್ವಲೆಯನ್ನೂ ಮತ್ತೂ ಜಾತಾಶೌಚದ ಅಂತ್ಯಭಾಗವನ್ನು ಹೊಂದಿರುವವರನ್ನೂ ಮತ್ತು ಶವವಾಹಿಗಳನ್ನೂ ಸ್ಪರ್ಶಮಾಡಿದ್ದೇ ಆದರೆ ಶುದ್ಧಿಗಾಗಿ ಸ್ನಾನಮಾಡಬೇಕು. ಜಿಡ್ಡಿನಿಂದ ಕೂಡಿರುವ (ಆರ್ದ್ರವಾಗಿರುವ) ಮೂಳೆಯನ್ನು ಸ್ಪರ್ಶಮಾಡಿದಲ್ಲಿ ಸಚೇಲ ಸ್ನಾನಮಾಡಬೇಕು. ಸ್ನೇಹಭಾಗವು ಹೋಗುವಂತೆ ಕೈತೊಳೆದುಕೊಂಡು ಆಚಮನ ಮಾಡಿ ಗೋವನ್ನು ಮುಟ್ಟಿ ಸೂರ್ಯನನ್ನು ನೋಡಬೇಕು. ಮತ್ತು ಮನುಷ್ಯನನ್ನು ದಾಟಬಾರದು. ಮತ್ತು ರಕ್ತವನ್ನೂ ಶರೀರಾವಯುವವನ್ನೂ ಮತ್ತು ಸ್ನಾನಕ್ಕಾಗಿ ಉಪಯೋಗಿಸುವ ಶೀಗೆಪುಡಿ, ಹೆಸರು, ಮತ್ತೆ ಕಡಲೆಹಿಟ್ಟು ಮೊದಲಾದುವನ್ನೂ ದಾಟಬಾರದು. ಮತ್ತು ಉಗುಳು, ಶ್ಲೇಷ್ಮ, ಮಲಮೂತ್ರಗಳು ಕಾಲುತೊಳೆದ ನೀರು ಇವುಗಳನ್ನು ಮನೆಯಲ್ಲಿಡದೆ ಹೊರಗೆ ಸುರಿಯಬೇಕು.

೭೯-೮೧. ಐದು ಉಂಡೆ ಮೃತ್ತಿಕೆಯನ್ನು ತೆಗೆದುಹಾಕದೆ ಬೇರೆ ನೀರಿನಲ್ಲಿ ಸ್ನಾನಮಾಡಕೂಡದು. ದೇವತಾನಿರ್ಮಿತವಾದ ದಿವ್ಯತೀರ್ಥದಲ್ಲೂ ಸರೋವರ, ನದಿ ಮುಂತಾದುವುಗಳಲ್ಲೂ ಸ್ನಾನಮಾಡಬೇಕು. ಉದ್ಯಾನವೇ ಮೊದಲಾದ ಸಾರ್ವ ಜನಿಕ ಪ್ರದೇಶದಲ್ಲಿ ಯಾವಾಗಲೂ ಅಕಾಲದಲ್ಲಿ ಕೂಡಬಾರದು. ಶೂರನಾದ ಭರ್ತೃವಿ

---

* ಹೊರಗೆ ಅವಗಾಹನ ಸ್ನಾನಮಾಡುವ ಕಾಲದಲ್ಲಿ ಐದು ಉಂಡೆ ಮಣ್ಣನ್ನು ನೀರಿನಿಂದ ತೆಗೆದು ಹಾಕಿ ಸ್ನಾನಮಾಡಬೇಕೆಂದು ಶಾಸ್ತ್ರ.

ದೇವತಾ ಪಿತೃ ಸಚ್ಛಾಸ್ತ್ರ ಯಜ್ಞ ಸತ್ರಾದಿ ನಿಂದಕೈಃ।
ಕೃತ್ವಾ ತು ಸ್ಪರ್ಶಮಾಲಾಪಂ ಶುದ್ಧ್ಯತೇಽರ್ಕವಿಲೋಕನಾತ್ ॥ ೮೧ ॥

ಅಭೋಜ್ಯಾಃ ಸೂತಿಕಾಃ ಷಂಡೋ ಮಾರ್ಜಾರಾಖೂಚ ಕುಕ್ಕುಟಾಃ।
ಪತಿತಾಪವಿದ್ಧನಗ್ನಾಃ ಚಂಡಾಲಾದ್ಯಾಧಮಾಶ್ಚ ಯೇ ॥ ೮೨ ॥

ಸುಕೇಶಿರುವಾಚ

ಭವದ್ಭಿಃ ಕೀರ್ತಿತಾಭೋಜ್ಯಾ ಯ ಏತೇ ಸೂತಿಕಾದಯಃ।
ಅಮೀಷಾಂ ಶ್ರೋತುಮಿಚ್ಛಾಮಿ ತತ್ವತೋ ಲಕ್ಷಣಾನಿ ಹಿ ॥ ೮೩ ॥

ಋಷಯ ಊಚುಃ

ಬ್ರಾಹ್ಮಣೀ ಬ್ರಾಹ್ಮಣ ಶ್ಚೈವ ಯಾವಚ್ಛೇಷತ್ವಮಾಗತೌ।
ತಾವುಭೌ ಸೂತಿಕೇತ್ಯುಕ್ತೌ ತಯೋರನ್ನಂ ವಿಗರ್ಹಿತಂ ॥ ೮೪ ॥

---

ನಿಂದ ವಿಶ್ಲೇಷಹೊಂದಿರುವ ಸ್ತ್ರೀಯೊಡನೆಯೂ ಮತ್ತು ದೇವತೆಗಳು, ಪಿತೃಗಳು, ಸಚ್ಛಾಸ್ತ್ರ, ಯಜ್ಞ, ಸತ್ರ, ಇವುಗಳನ್ನು ನಿಂದಿಸುವವರೊಡನೆಯೂ ಲೋಕದ್ವೇಷಕರವಾದ ಯಾವ ಮಾತನ್ನೂ ಆಡಬಾರದು. ಅವರ ಸ್ಪರ್ಶವನ್ನೋ ಅವರೊಡನೆ ಸಲ್ಲಾಪವನ್ನೋ ಮಾಡಿದ್ದೇ ಆದರೆ ಸೂರ್ಯನನ್ನು ನೋಡಿ ಶುದ್ಧಿಹೊಂದಬೇಕು.

೮೨-೮೩. *ಸೂತಿಕಾ, ಷಂಡ, ಮಾರ್ಜಾರ, ಆಖು, ಕುಕ್ಕುಟ, ಪತಿತ, ಅಪವಿದ್ಧ, ನಗ್ನ, ಚಂಡಾಲ ಇವರುಗಳ ಅನ್ನವನ್ನು ಊಟಮಾಡಬಾರದು. ಇದನ್ನು ಕೇಳಿದ ಸುಕೇಶಿಯು ಮಹರ್ಷಿಗಳೇ ತಾವು ಅಭೋಜ್ಯರೆಂದು ಹೇಳಿದ ಸೂತಿಕಾದಿಗಳು ಯಾರು ಅವರ ಲಕ್ಷಣವೇನು ಎಂದು ಪ್ರಶ್ನೆಮಾಡಲಾಗಿ ಋಷಿಗಳು ಹೇಳುತ್ತಾರೆ.

೮೪-೮೬. ಬ್ರಾಹ್ಮಣರಾದ ಪತಿಪತ್ನಿಗಳು ಒಬ್ಬರನ್ನೊಬ್ಬರು ಅಗಲಿ ಯಾರು ಇರುತ್ತಾರೆಯೋ ಅವರಿಬ್ಬರಿಗೂ ಸೂತಿಕಾ ಎಂದು ಹೆಸರು. ಅವರ ಅನ್ನವನ್ನು ಭುಂಜಿಸಬಾರದು. ಯಾವನು ವಿಹಿತಕಾಲದಲ್ಲಿ ಸ್ನಾನ, ದಾನ, ಹೋಮ ಇವುಗಳನ್ನು

---

* ಇವರುಗಳ ಸ್ವರೂಪವನ್ನು ಮುಂದೆ ಹೇಳುತ್ತಾರೆ.

ನ ಜುಹೋತ್ಯುಚಿತೇ ಕಾಲೇ ನ ಸ್ನಾತಿ ನ ದದಾತಿ ಚ ।
ಪಿತೃದೇವಾರ್ಚನಾದ್ಧೀನಃ ಸಷಂಡಃ ಪರಿಗೀಯತೇ ॥ ೮೫ ॥

ದಂಭಾರ್ಥಂ ಜಪತೇ ಯಶ್ಚ ತಪ್ಯತೇ ಪಠತೇ ತಥಾ ।
ನ ಪರತ್ರಾರ್ಥಮುದ್ಯುಕ್ತೋ ಮಾರ್ಜಾರಃ ಪರಿಕೀರ್ತಿತಃ ॥ ೮೬ ॥

ವಿಭವೇ ಸತಿ ನೈವಾತ್ತಿ ನ ದದಾತಿ ಜುಹೋತಿ ನ ।
ತಮಾಹುರಾಖುಂ ತಸ್ಯಾನ್ನಂ ಭುಕ್ತ್ವಾ ಕೃಚ್ಛ್ರೇಣ ಶುದ್ಧ್ಯತಿ ॥ ೮೭ ॥

ಸಭಾಗತಾನಾಂ ಯಃ ಸಭ್ಯಃ ಪಕ್ಷಪಾತಂ ಸಮಾಶ್ರಯೇತ್ ।
ತಮಾಹುಃ ಕುಕ್ಕುಟಂ ದೇವಾಸ್ತಸ್ಯಾಪ್ಯನ್ನಂ ವಿಗರ್ಹಿತಂ ॥ ೮೮ ॥

ಸ್ವಧರ್ಮಂ ಯಃ ಸಮುತ್ಸೃಜ್ಯ ಪರಧರ್ಮಂ ಸಮಾಚರೇತ್ ।
ಅನಾಪದಿ ಸ ವಿದ್ವದ್ಭಿಃ ಪತಿತಃ ಪರಿಕೀರ್ತ್ಯತೇ ॥ ೮೯ ॥

---

ಮಾಡುವುದಿಲ್ಲವೋ, ದೇವಾರ್ಚನೆ, ಪಿತೃತರ್ಪಣ ಇವೆಲ್ಲವನ್ನೂ ಬಿಟ್ಟಿರುವನೋ, ಇವನು ಷಂಡನೆಂದು ಕರೆಯಲ್ಪಡುತ್ತಾನೆ. ಇವನ ಅನ್ನವೂ ಅಭೋಜ್ಯ. ಯಾವನು ದಂಭಕ್ಕಾಗಿ ಜಪತಪಗಳನ್ನೂ ಪಾರಾಯಣಾದಿಗಳನ್ನೂ ಮಾಡುತ್ತಾನೆಯೋ, ಪರಮಾರ್ಥವಾಗಿ ನಡೆಸುವುದಿಲ್ಲವೋ ಅವನಿಗೆ ಮಾರ್ಜಾರನೆಂದು ವ್ಯವಹಾರ. ಇವನೂ ಅಭೋಜ್ಯಾನ್ನನು.

೮೭-೯೦. ಐಶ್ವರ್ಯವಿದ್ದರೂ ಯಾವನು ಉಪಭೋಗ, ದಾನ, ಹೋಮ, ಇತ್ಯಾದಿಗಳನ್ನು ಮಾಡುವುದಿಲ್ಲವೋ, ಅವನನ್ನು ಆಖುವೆಂದು ಹೇಳುತ್ತಾರೆ. ಇಂತಹವನ ಅನ್ನವನ್ನು ಭುಂಜಿಸಿದರೆ ಕೃಚ್ಛ್ರವನ್ನಾಚರಿಸಿ ಶುದ್ಧಿ ಹೊಂದಬೇಕು, ಸಭೆಗೆ ಬಂದ ಸಭ್ಯನು ಇತರ ಸಭ್ಯರ ವಿಷಯದಲ್ಲಿ ಪಕ್ಷಪಾತವನ್ನು ಯಾವನು ತೋರಿಸುತ್ತಾನೆಯೋ, ಅವನನ್ನು ದೇವತೆಗಳು ಕುಕ್ಕುಟನೆಂದು ವ್ಯವಹರಿಸುತ್ತಾರೆ. ಇಂತಹವನ ಅನ್ನವೂ ನಿಂದಿತವಾದ್ದು- ಯಾವನು ಆಪತ್ಕಾಲವಿಲ್ಲದಿದ್ದರೂ ಸ್ವಧರ್ಮವನ್ನು ಬಿಟ್ಟು ಪರಧರ್ಮವನ್ನು ಆಶ್ರಯಿಸುತ್ತಾನೆಯೋ, ಅಂತಹವನನ್ನು ಪತಿತನೆನ್ನುತ್ತಾರೆ.

**ದೇವತ್ಯಾಗೀ ಪಿತೃತ್ಯಾಗೀ ಗುರುತ್ಯಾಗೀ ತಥೈವಚ।**
**ಗೋಬ್ರಾಹ್ಮಣ ಸ್ತ್ರೀವಧಕೃದಪವಿದ್ಧಃ ಪ್ರಕೀರ್ತ್ಯತೇ ॥೯೦॥**

**ಯೇಷಾಂ ಕುಲೇ ನ ವೇದೋಽಸ್ತಿ ನ ಶಾಸ್ತ್ರಂ ನೈವ ಚ ವ್ರತಂ।**
**ತೇ ನಗ್ನಾಃ ಕೀರ್ತಿತಾಃ ಸದ್ಭಿಸ್ತೇಷಾಮನ್ನಂ ವಿಗರ್ಹಿತಂ ॥೯೧॥**

**ಆಶಾರ್ತಾನಾಮದಾತಾ ಚ ದಾತುಶ್ಚ ಪ್ರತಿಷೇಧಕಃ।**
**ಶರಣಾಗತಂ ಯಸ್ತ್ಯಜತಿ ಸ ಚಂಡಾಲೋಽಧಮೋ ಜನಃ ॥೯೨॥**

**ಯೋ ಬಾಂಧವೈಃ ಪರಿತ್ಯಕ್ತಃ ಸಾಧುಭಿರ್ಬ್ರಾಹ್ಮಣೈರಪಿ।**
**ಕುಂಡಾಶೀ ಯಶ್ಚ ತಸ್ಯಾನ್ನಂ ಭುಕ್ತ್ವಾ ಚಾಂದ್ರಾಯಣಂ ಚರೇತ್ ॥೯೩॥**

**ಯೋ ನಿತ್ಯಕರ್ಮಣೋ ಹಾನಿಂ ಕುರ್ಯಾನ್ನೈಮಿತ್ತಿಕಸ್ಯ ಚ।**
**ಭುಕ್ತ್ವಾನ್ನಂ ತಸ್ಯ ಶುದ್ಧ್ಯೇತ ತ್ರಿರಾತ್ರೋಪೋಷಿತೋ ನರಃ ॥೯೪॥**

---

(ಆಪತ್ಕಾಲದಲ್ಲಿ ಮಾತ್ರ ಪರಧರ್ಮಾಶ್ರಯಣವು ದೋಷವಲ್ಲವೆಂದು ತಾತ್ಪರ್ಯ.) ಇವನ ಅನ್ನವೂ ಅಭೋಜ್ಯ. ಯಾವನು ದೇವ, ಪಿತೃ, ಗುರು, ಇವರನ್ನು ಭಾವಿಸದೆ ತ್ಯಾಗಮಾಡುತ್ತಾನೆಯೋ, ಗೋವು, ಬ್ರಾಹ್ಮಣ, ಸ್ತ್ರೀ, ಇವರ ವಧವನ್ನು ಮಾಡಿರು ವನೋ, ಅವನನ್ನು ಅಪವಿದ್ಧನೆನ್ನುತ್ತಾರೆ. ಇವನೂ ಅಭೋಜ್ಯಾನ್ನನು.

೯೧-೯೨. ಯಾವನ ವಂಶದಲ್ಲಿ ವೇದಾಧ್ಯಯನವಿರುವುದಿಲ್ಲವೋ, ಶಾಸ್ತ್ರೋ ಚಿತವಾದ ಆಚಾರವೂ, ವ್ರತಗಳೂ, ಇರುವುದಿಲ್ಲವೋ ಅವನು ನಗ್ನನಾಗುತ್ತಾನೆ. ಅವನ ಅನ್ನವೂ ಸತ್ಪುರುಷರಿಗೆ ನಿಂದ್ಯವಾದದ್ದು. ಯಾವನು ಆಶೆಯಿಂದ ಬಂದವನಿಗೆ ತಾನು ದಾನಮಾಡುವುದಿಲ್ಲವೋ, ದಾನ ಮಾಡುವವರನ್ನೂ ತಡೆಯುತ್ತಾನೆಯೋ, ಶರಣಾಗತರನ್ನೂ ಪರಿತ್ಯಾಗ ಮಾಡುತ್ತಾನೆಯೋ, ಅಂತಹ ಅಧಮನು ಚಂಡಾಲನೆನಿ ಸುತ್ತಾನೆ.

೯೩ ೯೪. ಯಾವನನ್ನು ಬಂಧುಜನಗಳು ತ್ಯಾಗಮಾಡಿದ್ದಾರೆಯೋ, ಯಾವ ನನ್ನು ಸಾಧುಗಳಾದ ಬ್ರಾಹ್ಮಣರೂ ತ್ಯಾಗಮಾಡಿದ್ದಾರೆಯೋ, ಮತ್ತು ಯಾವನು ಮಣ್ಣಿನಪಾತ್ರೆಯಲ್ಲಿ ಊಟಮಾಡುತ್ತಾನೆಯೋ, ಅಂತಹವರ ಅನ್ನವು ನಿಂದ್ಯ ವಾದದ್ದು. ಅದನ್ನು ಊಟಮಾಡಿದಲ್ಲಿ ಚಾಂದ್ರಾಯಣವನ್ನಾಚರಿಸಬೇಕು. ಯಾವನು ನಿತ್ಯನೈಮಿತ್ತಿಕಕರ್ಮಗಳನ್ನಾಚರಿಸದೆ ತ್ಯಾಗಮಾಡಿರುವನೋ ಅಂತಹವನ ಅನ್ನ

ನಿತ್ಯಸ್ಯ ಕರ್ಮಣೋ ಹಾನಿಃ ಕೇವಲಂ ಮೃತಜನ್ಮಸು ।
ನ ತು ನೈಮಿತ್ತಿಕೋಚ್ಛೇದಃ ಕರ್ತವ್ಯೋ ಹಿ ಕಥಂಚನ ॥ ೯೫ ॥

ಜಾತೇ ಪುತ್ರೇ ಪಿತುಃ ಸ್ನಾನಂ ಸಚೈಲಂ ತು ವಿಧೀಯತೇ ।
ಮೃತೇ ಚ ಸರ್ವಬಂಧೂನಾಮಿತ್ಯಾಹ ಭಗವಾನ್ಭೃಗುಃ ॥ ೯೬ ॥

ಪ್ರೇತಾಯ ಸಲಿಲಂ ದೇಯಂ ಬಹಿರ್ದಗ್ಧ್ವಾ ತು ಗೋತ್ರಜೈಃ ।
*ಪ್ರಥಮೇಹ್ನಿ ಚತುರ್ಥೇ ವಾ ಸಪ್ತಮೇ ವಾಸ್ಥಿಸಂಚಯಂ ॥ ೯೭ ॥

ಊರ್ಧ್ವಂ ಸಂಚಯನಾತ್ತೇಷಾಂ ಅಂಗಸ್ಪರ್ಶೋ ವಿಧೀಯತೇ ।
ಸೋದಕೈಸ್ತು ಕ್ರಿಯಾ ಕಾರ್ಯಾ ಅಶುದ್ಧೈಸ್ತು ಸ ಪಿಂಡಿಕೈಃ ॥ ೯೮ ॥

---

ವನ್ನು ಊಟಮಾಡಿದಲ್ಲಿ ಮೂರು ರಾತ್ರಿ ಉಪವಾಸಮಾಡಿ ಶುದ್ಧಿ ಹೊಂದಬೇಕು. ನಿತ್ಯಕರ್ಮಗಳಿಗೆ ಆಶೌಚಾದಿಕಾಲದಲ್ಲಿ ಸಂಕೋಚದಿಂದ ಹಾನಿಯುಂಟು. ನೈಮಿತ್ತಿಕವಾದ ಗ್ರಹಣಶ್ರಾದ್ಧಾದಿಗಳನ್ನು ಯಾವಾಗಲೂ ಬಿಡಕೂಡದು.

೯೬-೯೮. ಪುತ್ರನು ಹುಟ್ಟಿದ ಕೂಡಲೇ ತಂದೆಯು ಸಚೇಲಸ್ನಾನಮಾಡಬೇಕು. ಮೃತನಾದ ಪಕ್ಷದಲ್ಲಿ ಎಲ್ಲಾ ಬಂಧುಗಳೂ ಸ್ನಾನಮಾಡಬೇಕೆಂದು ಪೂಜ್ಯನಾದ ಭೃಗುವು ಹೇಳಿದ್ದಾನೆ. ಸಗೋತ್ರನು ಮೃತನಾದದ್ದೇ ಆದರೆ ಜ್ಞಾತಿಗಳು ಅವನನ್ನು ಹೊರಗೆ ತೆಗೆದುಕೊಂಡು ಹೋಗಿ ದಹನಮಾಡಿ ಉದಕ ದಾನವನ್ನು ಮಾಡಬೇಕು. ಮೊದಲನೇ ದಿವಸ, ಅಥವಾ ನಾಲ್ಕನೇ ದಿವಸ ಅಥವಾ ಏಳನೇ ದಿವಸ ಅಸ್ಥಿ ಸಂಚಯನವನ್ನು ಮಾಡಬೇಕು. ಸಂಚಯನವಾದನಂತರ ಆ ಜ್ಞಾತಿಗಳು ಸ್ಪರ್ಶಕ್ಕೆ ಅರ್ಹರಾಗುತ್ತಾರೆ. ಸಪಿಂಡರು ಅಂದರೆ ದಶರಾತ್ರಜ್ಞಾತಿಗಳು ಆಶೌಚದಲ್ಲಿರುವಾಗಲೇ ಉದಕದಾನವೇ ಮೊದಲಾದ ತಮ್ಮ ಕಾರ್ಯವನ್ನು ನಡೆಸಬೇಕು.

---

* ಈ ಆಚಾರವು ದೇಶಭೇದದಿಂದಲೂ, ಕಾಲಭೇದದಿಂದಲೂ, ಸಮಂಜಸಪಡಿಸತಕ್ಕದ್ದಾಗಿದೆ.

ವಿಷೋದ್ಬಂಧನಶಸ್ತ್ರಾಂಬುವಹ್ನಿಪಾತ ಮೃತೇಷು ಚ।
ಬಾಲೇ ಪ್ರವ್ರಾಜ ಸನ್ಯಾಸೇ ದೇಶಾಂತರಮೃತೇ ತಥಾ ॥೯೯॥

ಸದ್ಯಃ ಶೌಚಂ ಭವೇದ್ವೀರ ತಚ್ಚಾಪ್ಯುಕ್ತಂ ಚತುರ್ವಿಧಂ।
ಗರ್ಭಸ್ರಾವೇತದೈವೋಕ್ತಂ ಪೂರ್ವಕಾಲೇ ನ ವೈ ಚರೇತ್ ॥೧೦೦॥

ಬ್ರಾಹ್ಮಣಾನಾಮಹೋರಾತ್ರಂ ಕ್ಷತ್ರಿಯಾಣಾಂ ದಿನತ್ರಯಂ।
ಷಡ್ರಾತ್ರಂ ಚೈವ ವೈಶ್ಯಾನಾಂ ಶೂದ್ರಾಣಾಂ ದ್ವಾದಶಾಹ್ನಿಕಂ ॥೧೦೧॥

ದಶದ್ವಾದಶಮಾಸಾರ್ಧ ಮಾಸ ಸಂಖ್ಯೈರ್ದಿನೈರ್ಗತೈಃ।
ಸ್ವಾಃ ಸ್ವಾಃ ಕಾಲೇ ಕ್ರಿಯಾಃ ಕುರ್ಯುಃ ಸರ್ವೇ ವರ್ಣಾ ಯಥಾಕ್ರಮಂ

---

೯೯-೧೦೧. ವಿಷಪಾನದಿಂದ, ಮತ್ತು ನೇಣುಹಾಕಿಕೊಳ್ಳುವುದರಿಂದ, ಮತ್ತು ಶಸ್ತ್ರಗಳ ಆಘಾತಗಳಿಂದ, ನೀರಿನಲ್ಲಿ ಮತ್ತು ಬೆಂಕಿಯಲ್ಲಿ ಬೀಳೋಣದರಿಂದ, ಯಾರು ಮೃತಿ ಹೊಂದುತ್ತಾರೋ, ಮತ್ತು ಬಾಲ, ಮತ್ತು ಸನ್ಯಾಸಿಯಾದವನು ಇವರು ದೇಶಾಂತರದಲ್ಲಿ (ಪರೋಕ್ಷದಲ್ಲಿ) ಮೃತರಾದರೂ ಸಹ ಸದ್ಯಃ ಶೌಚ, ಅಂದರೆ ಆಶೌಚ ವಿಲ್ಲ. ಸ್ನಾನಮಾತ್ರದಿಂದ ಶುದ್ಧಿ ಎಂದು ತಾತ್ಪರ್ಯ. ಗರ್ಭಸ್ರಾವದಲ್ಲಿ ಮಾತ್ರ ಈ ನಿಯಮವಿಲ್ಲ. ಅದು ವರ್ಣಭೇದದಿಂದ ನಾಲ್ಕು ವಿಧವಾಗಿರುತ್ತೆ. ಬ್ರಾಹ್ಮಣನಿಗೆ ಅಹೋರಾತ್ರ, ಕ್ಷತ್ರಿಯನಿಗೆ ಮೂರುದಿನ, ವೈಶ್ಯನಿಗೆ ಆರುದಿನ, ಶೂದ್ರನಿಗೆ ಹನ್ನೆರಡು ದಿನ ಹೀಗೆ ನಾಲ್ಕು ವಿಧವಾಗಿರುತ್ತೆ. (ಗರ್ಭಸ್ರಾವವೆಂದರೆ ಮೂರು ತಿಂಗಳಿಗೆ ಮೊದಲು ಉಂಟಾದ ಗರ್ಭನಾಶವೆಂದೂ ಅನಂತರ ಉಂಟಾದಲ್ಲಿ ಅದಕ್ಕೆ ಗರ್ಭಪಾತ ವೆಂದೂ ಇತರ ಧರ್ಮಶಾಸ್ತ್ರಕಾರರು ವಿಭಾಗಮಾಡಿ ಸ್ರಾವದಲ್ಲಿ ಆಶೌಚವಿಲ್ಲವೆಂದೂ ಪಾತವಾದರೆ ಎಷ್ಟನೇ ತಿಂಗಳಲ್ಲಿ ಪಾತವಾಗುತ್ತದೆಯೋ ಅಷ್ಟು ದಿವಸ ಆಶೌಚವೆಂದೂ (ಅಂದರೆ ಮಾಸಸಂಖ್ಯೆಗೆ ಸಮವಾದ ದಿನಸಂಖ್ಯೆ) ನಿರ್ಣಯಿಸಿರುತ್ತಾರೆ. ಇಲ್ಲಿ ಋಷಿ ಗಳು ಹೇಳಿರುವ ಆಶೌಚಕ್ರಮವು ದೇಶಭೇದದಿಂದ ವ್ಯವಸ್ಥೆ ಮಾಡತಕ್ಕದ್ದಾಗಿವೆ.) ಕ್ರಮವಾದ ಆಶೌಚವನ್ನು ವರ್ಣಭೇದದಿಂದ ಮುಂದೆ ಹೇಳುತ್ತಾರೆ.

೧೦೨-೧೦೪. ಹತ್ತು ದಿನಗಳು, ಹನ್ನೆರಡು ದಿನಗಳು, ಅರ್ಧತಿಂಗಳು ಒಂದು ತಿಂಗಳು, ಈ ರೀತಿ ದಿವಸಗಳು ಕಳೆದ ತರುವಾಯ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರು ಯಥಾಕ್ರಮವಾಗಿ ತಮ್ಮ ತಮ್ಮ ಕಾಲಗಳಲ್ಲಿ ಕ್ರಿಯೆಯನ್ನು ಮಾಡಬೇಕು.

ಪ್ರೇತಮುದ್ದಿಶ್ಯ ಕರ್ತವ್ಯಮೇಕೋದ್ದಿಷ್ಟಂ ವಿಧಾನತಃ ।
ಸಪಿಂಡೀಕರಣಂ ಕಾರ್ಯಂ ಪ್ರೇತ ಆವತ್ಸರಾನ್ನರೈಃ ॥ ೧೦೩ ॥

ತತಃ ಪಿತೃತ್ವಮಾಪನ್ನೇ ದರ್ಶಪೂರ್ಣಾದಿಭಿರ್ದಿನೈಃ ।
ಪ್ರೀಣನಂ ತಸ್ಯ ಕರ್ತವ್ಯಂ ಯಥಾ ಶ್ರುತಿನಿದರ್ಶನಾತ್ ॥ ೧೦೪ ॥

ಪಿತುರರ್ಥಂ ಸಮುದ್ದಿಶ್ಯ ಭೂಮಿದಾನಾದಿಕಂ ಸ್ವಯಂ ।
ಕುರ್ಯಾದ್ಯೇನಾಸ್ಯ ಸುಪ್ರೀತಾಃ ಪಿತರೋ ಯಾಂತಿ ರಾಕ್ಷಸ ॥ ೧೦೫ ॥

ಯದ್ಯದಿಷ್ಟತಮಂ ಕಿಂಚಿತ್‌ಯಚ್ಚಾಸ್ಯ ದಯಿತಂ ಗೃಹೇ ।
ತತ್ತದ್ಗುಣವತೇ ದೇಯಂ ತದೇವಾಕ್ಷಯ ಮಿಚ್ಛತಾ ॥ ೧೦೬ ॥

ಅಧ್ಯೇತವ್ಯಾ ಸ್ತ್ರಯೋ ನಿತ್ಯಂ ವೇದಾಶ್ಚ ವಿದುಷಾ ಸದಾ ।
ಧರ್ಮತೋ ಧನಮಾಹಾರ್ಯಂ ಯಷ್ಟವ್ಯಂ ಚಾಪಿ ಶಕ್ತಿತಃ ॥ ೧೦೭ ॥

---

ಸತ್ತವನನ್ನುದ್ದೇಶಿಸಿ ಹನ್ನೊಂದನೇ ದಿವಸ ಏಕೋದ್ದಿಷ್ಟವನ್ನು ವಿಧಿಪೂರ್ವಕವಾಗಿ ನಡೆಸಬೇಕು, ಮತ್ತು ವರ್ಷ ತುಂಬುವದರೊಳಗೆ ಸಪಿಂಡೀಕರಣ ಶ್ರಾದ್ಧವನ್ನೂ ಮಾಡಬೇಕು. ಸಪಿಂಡೀಕರಣವಾದನಂತರ ಪಿತೃತ್ವವುಂಟಾದಮೇಲೆ ಅಮಾವಾಸ್ಯಾ ಮತ್ತು ಪೂರ್ಣಿಮಾದಿಗಳಲ್ಲಿ ಅವನಿಗೆ ತೃಪ್ತಿಕರವಾದ ಶಾಸ್ತ್ರೀಯ ಕರ್ಮಗಳನ್ನು ನಡೆಸಬೇಕು.

೧೦೫-೧೦೭. ಪಿತೃಗಳ ತೃಪ್ತಿಗಾಗಿ ಭೂಮಿಯೇ ಮೊದಲಾದ ದಾನಗಳನ್ನು ತಾನೇ ಮಾಡಬೇಕು. ಇದರಿಂದ ಪಿತೃಗಳು ತೃಪ್ತರಾಗುತ್ತಾರೆ. ಅಂತಹ ಮೃತರಾದ ಪಿತ್ರಾದಿಗಳಿಗೆ ಯಾವುದು ಇಷ್ಟವಾದ ವಸ್ತುವೋ, ಮನೆಯಲ್ಲಿರುವ ಪದಾರ್ಥಗಳಲ್ಲೂ ಯಾವುದು ಪ್ರೀತಿಕರವೋ ಅಂತಹ ಪದಾರ್ಥಗಳನ್ನು ಗುಣಶಾಲಿಯಾದ ಪಾತ್ರದಲ್ಲಿ ದಾನಮಾಡಬೇಕು. ಅದು ಪಿತೃಗಳಿಗೆ ಅಕ್ಷಯವಾದ ತೃಪ್ತಿಯನ್ನುಂಟುಮಾಡುತ್ತದೆ. ಪಂಡಿತನಾದ ಬ್ರಾಹ್ಮಣನು ಯಾವಾಗಲೂ ಮೂರು ವೇದಗಳನ್ನೂ ಅಧ್ಯಯನ ಮಾಡುತ್ತಿರಬೇಕು. ಧರ್ಮಮಾರ್ಗಧಿಂದ ಧನಾರ್ಜನೆ ಮಾಡಿ ಯಥಾಶಕ್ತಿ ಯಾಗಾದಿಗಳನ್ನು ಮಾಡಬೇಕು.

ಯಚ್ಚಾಪಿ ಕುರ್ವತೋ ನಾತ್ಮಾ ಜುಗುಪ್ಸಾಮೇತಿ ರಾಕ್ಷಸ ।
ತತ್ಕರ್ತವ್ಯಮಶಂಕೇನ ಯನ್ನ ಗೋಪ್ಯಂ ಮಹಾಜನೇ ॥ ೧೦೮ ॥

ಏವಮಾಚರತೋ ಲೋಕೇ ಪುರುಷಸ್ಯ ಗೃಹೇಸತಃ ।
ಧರ್ಮಾರ್ಥಕಾಮಸಂಪ್ರಾಪ್ತಿಃ ಪರತ್ರೇಹ ಚ ಶೋಭನಾ ॥ ೧೦೯ ॥

ಏಷತೂದ್ದೇಶತಃ ಪ್ರೋಕ್ತೋ ಗೃಹಸ್ಥಾಶ್ರಮ ಉತ್ತಮಃ ।
ವಾನಪ್ರಸ್ಥಾಶ್ರಮಂ ಧರ್ಮಂ ಪ್ರವಕ್ಷ್ಯಾಮೋಽವಧಾರ್ಯತಾಂ ॥ ೧೧೦ ॥

ಅಪತ್ಯಸಂತತಿಂ ದೃಷ್ಟ್ವಾ ಪ್ರಾಜ್ಞೋ ದೇಹಸ್ಯ ಚಾನತಿಂ ।
ವಾನಪ್ರಸ್ಥಾಶ್ರಮಂ ಗಚ್ಛೇದಾತ್ಮನಃ ಶುದ್ಧಿಕಾರಣಂ ॥ ೧೧೧ ॥

ತತ್ರಾರಣ್ಯೋಪಭೋಗೈಶ್ಚ ತಪೋಭಿಶ್ಚಾತ್ಮದರ್ಶನಂ ।
ಭೂಮೌ ಶಯ್ಯಾ ಬ್ರಹ್ಮಚರ್ಯಂ ಪಿತೃ ದೇವಾತಿಥಿಕ್ರಿಯಾಃ ॥ ೧೧೨ ॥

ಹೋಮಃ ತ್ರಿಷವಣಸ್ನಾನಂ ಜಟಾವಲ್ಕಲಧಾರಣಂ ।
ವನ್ಯಸ್ನೇಹನಿಷೇವಿತ್ವಂ ವಾನಪ್ರಸ್ಥ ವಿಧಿಸ್ತ್ವಯಂ ॥ ೧೧೩ ॥

---

೧೦೮-೧೧೦. ತನಗೆ ಜುಗುಪ್ಸೆಯುಂಟಾಗದಿರುವ ಯಾವ ಆಚಾರವು ಧಾರ್ಮಿಕವೆಂದು ತೋರಿಬರುತ್ತದೆಯೋ ಅಂತಹ ಆಚಾರವನ್ನು ಮಹಾಜನಗಳೆದುರಿಗೆ ಮಾಡಲು ಅರ್ಹನಾಗಿದ್ದಲ್ಲಿ ನಿರ್ಭಯನಾಗಿ ಮಾಡಬಹುದು. ಈ ರೀತಿಯಾದ ಆಚಾರದಿಂದ ಗೃಹಸ್ಥಾಶ್ರಮದಲ್ಲಿರುವ ಪುರುಷನು ಇಹಲೋಕದ ಸೌಖ್ಯಸಂಪತ್ತುಗಳಿಗೂ ಧರ್ಮಾದಿ ಪುರುಷಾರ್ಥಗಳಿಗೂ ಪರಲೋಕದ ಸೌಖ್ಯಕ್ಕೂ ಭಾಗಿಯಾಗುತ್ತಾನೆ. ಆಶ್ರಮಗಳಲ್ಲಿ ಉತ್ತಮವಾದ ಗೃಹಸ್ಥಾಶ್ರಮವನ್ನು ಈ ರೀತಿ ಹೇಳಿದ್ದಾಯಿತು. ಇನ್ನು ವಾನಪ್ರಸ್ಥಾಶ್ರಮವನ್ನು ಅದರ ಧರ್ಮಗಳೊಡನೆ ಹೇಳುತ್ತೇವೆ ಅವಧಾನದಿಂದ ಕೇಳಬೇಕು.

೧೧೧-೧೧೩. ಪುತ್ರೋತ್ಪತ್ತಿಯಿಂದ ವಂಶಾಭಿವೃದ್ಧಿಯನ್ನು ನೋಡಿ ದೇಹದ ಬಲವು ಕಡಿಮೆಯಾದ ಮೇಲೆ ವಾನಪ್ರಸ್ಥಾಶ್ರಮದಿಂದ ದೇಹಶುದ್ಧಿಯನ್ನು ಹೊಂದಬೇಕು. ಈ ವಾನಪ್ರಸ್ಥಾಶ್ರಮದಲ್ಲಿ ಅರಣ್ಯದಲ್ಲಿ ಲಭಿಸುವ ವಸ್ತುಗಳಿಂದ ಜೀವಿಸುತ್ತಾ ತಪಸ್ವಿಯಾಗಿ ಆತ್ಮಾವಲೋಕನವನ್ನು ಹೊಂದಬೇಕು. ಭೂಮಿಯಲ್ಲೇ ಶಯನ, ಬ್ರಹ್ಮಚರ್ಯದಿಂದಿರಬೇಕು. ಮತ್ತು ದೇವ, ಪಿತೃ, ಅತಿಥಿ ಪೂಜೆಯನ್ನೂ ಮಾಡಬೇಕು. ಹೋಮ, ತ್ರಿಕಾಲಸ್ನಾನ, ಜಟಾ, ಮತ್ತು ನಾರುಮಡಿಯ ಧಾರಣ, ಅರಣ್ಯದಲ್ಲಿರುವ ಸ್ನೇಹದ್ರವ್ಯದ ಸೇವನ ಇವು ವಾನಪ್ರಸ್ಥನ ಧರ್ಮಗಳು.

ಸರ್ವಸಂಗಪರಿತ್ಯಾಗೋ ಬ್ರಹ್ಮಚರ್ಯಮಮಾನಿತಾ ।
ಜಿತೇಂದ್ರಿಯತ್ವಮಾವಾಸೇ ನೈಕಸ್ಮಿನ್ವಸತೇ ಚಿರಂ ॥ ೧೧೪ ॥

ಅನಾರಂಭಸ್ತಥಾಹಾರೋ ಭಿಕ್ಷಾನ್ನಂ ನಾತಿ ಕೋಪಿತಾ ।
ಆತ್ಮಜ್ಞಾನಾವಬೋಧೇಚ್ಛಾ ತಥಾ ಚಾತ್ಮಾವಬೋಧನಂ ॥ ೧೧೫ ॥

ಚತುರ್ಥೇ ಚಾಶ್ರಮೇ ಧರ್ಮಾಸ್ತೇಽಸ್ಮಾಭಿಃ ಪರಿಕೀರ್ತಿತಾಃ ।
ವರ್ಣಧರ್ಮಾಂಸ್ತಥಾ ಚಾನ್ಯಾನ್ನಿಶಾಮಯ ನಿಶಾಚರ ॥ ೧೧೬ ॥

ಗಾರ್ಹಸ್ಥ್ಯಂ ಬ್ರಹ್ಮಚರ್ಯಂ ಚ ವಾನಪ್ರಸ್ಥಂ ತ್ರಯೋಽಶ್ರಮಾಃ ।
ಕ್ಷತ್ರಿಯಸ್ಯಾಪಿ ಗದಿತೋ ಯ ಆಚಾರೋ ದ್ವಿಜಸ್ಯಹಿ ॥ ೧೧೭ ॥

ವೈಖಾನಸತ್ವಂ ಗಾರ್ಹಸ್ಥ್ಯಂ ಆಶ್ರಮದ್ವಿತಯಂವಿಶಃ।
ಗಾರ್ಹಸ್ಥ್ಯಮಾಶ್ರಮಂ ತ್ವೇಕಂ ಶೂದ್ರಸ್ಯ ಕ್ಷಣದಾಚರ ॥ ೧೧೮ ॥

---

೧೧೪-೧೧೫. ಸರ್ವಸಂಗವನ್ನೂ ಬಿಟ್ಟು ಬ್ರಹ್ಮಚರ್ಯವನ್ನೂ, ನಿರಹಂಕಾರಿತ್ವವನ್ನೂ, ಜಿತೇಂದ್ರಿಯತ್ವವನ್ನೂ ಹೊಂದಿದವನು ಸನ್ಯಾಸವೆಂಬ ಚತುರ್ಥಾಶ್ರಮಿಯಾಗುತ್ತಾನೆ. ಈ ಆಶ್ರಮದಲ್ಲಿರುವವನು ಒಂದೇ ಕಡೆಯಲ್ಲಿ ಬಹಳಕಾಲ ವಾಸಿಸಬಾರದು. ಯಾವ ಕೆಲಸವನ್ನೂ ತಾನು ಮಾಡಬಾರದು. ಭಿಕ್ಷಾನ್ನವೇ ಇವನ ಆಹಾರ, ಕೋಪಿಯಾಗದೆ ಶಾಂತನಾಗಿರಬೇಕು. ಆತ್ಮಜ್ಞಾನಲಾಭದಲ್ಲಿ ಇಚ್ಛೆಯುಳ್ಳವನಾಗಿರಬೇಕು. ಹಾಗೂ ಆತ್ಮಜ್ಞಾನವನ್ನು ಹೊಂದಬೇಕು. ಇವು ಚತುರ್ಥಾಶ್ರಮಿಯ ಧರ್ಮಗಳು.

೧೧೬-೧೧೮. ಈ ಆಶ್ರಮಗಳಲ್ಲಿ ಯಾವ ಯಾವ ವರ್ಣಕ್ಕೆ ಯಾವ ಆಶ್ರಮವು ಧರ್ಮವೆಂಬುದನ್ನು ಹೇಳುತ್ತೇವೆ. ಬ್ರಹ್ಮಚರ್ಯ, ಗಾರ್ಹಸ್ಥ್ಯ, ಮತ್ತು ವಾನಪ್ರಸ್ಥಾಶ್ರಮ ಈ ಮೂರು ಆಶ್ರಮಗಳೂ ಅವುಗಳ ಧರ್ಮಗಳೂ, ಆಚಾರಗಳೂ, ಬ್ರಾಹ್ಮಣ, ಕ್ಷತ್ರಿಯರಿಬ್ಬರಿಗೂ ಸಮವಾದದ್ದು, ಗಾರ್ಹಸ್ಥ್ಯ, ಮತ್ತು ವಾನಪ್ರಸ್ಥ ಈ ಎರಡು ಆಶ್ರಮಗಳು ಅವುಗಳ ಆಚಾರಸಹಿತ ವೈಶ್ಯನಿಗೆ ಸೇರಿದ್ದು, ಶೂದ್ರನಿಗೆ ಗೃಹಸ್ಥಾಶ್ರಮ ಮಾತ್ರ, ಬ್ರಾಹ್ಮಣನಿಗೆ ನಾಲ್ಕು ಆಶ್ರಮದಲ್ಲೂ ಅಧಿಕಾರವಿದೆ ಎಂಬುದು ಅರ್ಥಸಿದ್ಧ.

ಸ್ವಾನ್ಸ್ವಾನ್ವರ್ಣಾಶ್ರಮಪ್ರೋಕ್ತಾನ್ಸ್ವಧರ್ಮಾನ್ನೈವಹಾಪಯೇತ್ ।
ಸ್ವಧರ್ಮಕ್ಷಪಣಾದನ್ಯ ವಿಧಾನಾದ್ಯೋ ದ್ವಿಜಸ್ತ್ರಯೀಂ । ॥ ೧೧೯ ॥

ಸಂತಾಪಯತಿ ತಸ್ಯಾಸೌ ಪರಿಕುಪ್ಯತಿ ಭಾಸ್ಕರಃ
ಕುಪಿತಃ ಕುಲನಾಶಾಯ ದೇಹರೋಗವಿವೃದ್ಧಯೇ ।
ಭಾನುರ್ವೈ ಯತತೇ ತಸ್ಯ ನರಸ್ಯ ಕ್ಷಣದಾಚರ ॥ ೧೨೦ ॥

ತಸ್ಮಾತ್ಸ್ವಧರ್ಮಂ ನ ಹಿ ಸಂತ್ಯಜೇಚ್ಚ
ನಹಾಪಯೇಚ್ಚಾಪಿ ಹಿ ಚಾತ್ಮವಂಶಂ ।
ಯಃಸಂತ್ಯಜೇಚ್ಚಾಪಿ ನಿಜಂ ಹಿ ಧರ್ಮಂ
ತಸ್ಮೈ ಪ್ರಕುಪ್ಯೇತ ದಿವಾಕರಸ್ತು ॥ ೧೨೧ ॥

ಪುಲಸ್ತ್ಯ ಉವಾಚ

ಇತ್ಯೇವಮುಕ್ತೋ ಮುನಿನಾ ಸುಕೇಶೀ
ಪ್ರಣಮ್ಯ ತಾನ್ಬ್ರಹ್ಮನಿಧೀನ್ಮಹರ್ಷೀನ್ ।
ಜಗಾಮ ಚೋತ್ಪತ್ಯ ಪುರಂ ಸ್ವಕೀಯಂ
ಮುಹುರ್ಮುಹುರ್ಧರ್ಮಮವೇಕ್ಷಮಾಣಃ ॥ ೧೨೨ ॥

ಇತಿ ಶ್ರೀ ವಾಮನಪುರಾಣೇ ಸುಕೇಶ್ಯನುಶಾಸನಂ ನಾಮ
ಚತುರ್ದಶೋಽಧ್ಯಾಯಃ

---

೧೧೯-೧೨೨. ತಮ್ಮ ತಮ್ಮ ವರ್ಣಾಶ್ರಮಕ್ಕೆ ಸೇರಿದ ಧರ್ಮಗಳನ್ನು ಬಿಡಬಾರದು. ಸ್ವಧರ್ಮವನ್ನು ಬಿಟ್ಟು ಅನ್ಯಧರ್ಮವನ್ನು ಸೇವಿಸಿ ವೇದವನ್ನು ಪರಿತ್ಯಾಗ ಮಾಡಿದಲ್ಲಿ ವೇದವನ್ನು ಸಂತಾಪಗೊಳಿಸಿದಂತಾಗುತ್ತದೆ. ಅಂತಹವನ ವಿಷಯದಲ್ಲಿ ಸೂರ್ಯನು ಕುಪಿತನಾಗುತ್ತಾನೆ. ಕುಪಿತನಾಗಿ ಕುಲನಾಶಕ್ಕೂ ನಾನಾವಿಧವಾದ ವ್ಯಾಧಿಗೂ ಕಾರಕನಾಗುತ್ತಾನೆ. ಆದುದರಿಂದ ಸ್ವಧರ್ಮಹಾನಿಯನ್ನು ಹೊಂದಿ ಕುಲನಾಶಕ್ಕೆ ಕಾರಣನಾಗಬಾರದು. ಈ ರೀತಿ ಋಷಿಗಳಿಂದ ಹೇಳಲ್ಪಟ್ಟ ಆ ಸುಕೇಶಿಯು ಆ ಬ್ರಹ್ಮಜ್ಞರಿಗೆ ನಮಸ್ಕರಿಸಿ ಉಪದಿಷ್ಟವಾದ ಈ ಧರ್ಮಗಳನ್ನೇ ಅನುಸಂಧಾನಮಾಡುತ್ತಾ ಹಾರಿ ಆಕಾಶಮಾರ್ಗದಿಂದ ತನ್ನ ನಗರವನ್ನು ಸೇರಿದನೆಂದು ಪುಲಸ್ತ್ಯರು ನಾರದರಿಗೆ ಈ ಉಪಾಖ್ಯಾನವನ್ನು ಹೇಳಿ ಮುಗಿಸಿದರು.

ಇಲ್ಲಿಗೆ ಶ್ರೀ ವಾಮನಪುರಾಣದಲ್ಲಿ ಸುಕೇಶಿಯ ಉಪದೇಶವೆಂಬ
ಹದಿನಾಲ್ಕನೆಯ ಅಧ್ಯಾಯವು ಮುಗಿದಿದೆ.

# ಅಧ್ಯಾಯಾರ್ಥ ಸಂಗ್ರಹ



ಈ ಅಧ್ಯಾಯದಲ್ಲಿ ಹಿಂದಿನ ಅಧ್ಯಾಯದಲ್ಲಿ ಹೇಳಿದ ಕುಮಾರದ್ವೀಪದ ದೇಶ ಭೇದ ವರ್ಣನವನ್ನು ಉಪೋದ್ಘಾತವನ್ನಾಗಿ ಏರ್ಪಡಿಸಿಕೊಂಡು ಸರ್ವವರ್ಣ ಸಾಧಾ ರಣವಾದ ಅಹಿಂಸಾದಿ ಧರ್ಮಗಳನ್ನೂ ಬ್ರಾಹ್ಮಣಾದಿ ವರ್ಣವಿಶೇಷ ವ್ಯವಸ್ಥೆಯನ್ನೂ ಅವರಿಗೆ ನಿಯಮಿತವಾಗಿರುವ ಆಶ್ರಮಧರ್ಮಗಳನ್ನೂ ವಿಶೇಷವಾಗಿ ಹೇಳಲಾಯಿತು. ಮತ್ತು ಬ್ರಹ್ಮಚರ್ಯಾಶ್ರಮವನ್ನು ಉಪಕ್ರಮಿಸಿ ಉಪಕುರ್ವಾಣಬ್ರಹ್ಮಚಾರಿ ಮತ್ತು ನೈಷ್ಠಿಕಬ್ರಹ್ಮಚಾರಿ ಇವರ ಸ್ವರೂಪವನ್ನೂ ಧರ್ಮಗಳನ್ನೂ ವಿವರಿಸಿ ಉಪಕುರ್ವಾಣ ಬ್ರಹ್ಮಚಾರಿಗೆ ಮಾತ್ರ ಅಧ್ಯಯನ ಮುಗಿದನಂತರ ಗುರುಗಳ ಅಪ್ಪಣೆಯನ್ನು ಹೊಂದಿ ವಿವಾಹಮಾಡಿಕೊಂಡು ಗೃಹಸ್ಥಾಶ್ರಮವನ್ನು ಹೊಂದಲು ಅಧಿಕಾರವುಂಟೆಂದೂ ನಿರೂಪಿಸಲಾಯಿತು. ಈ ರೀತಿ ಆಶ್ರಮಧರ್ಮಗಳನ್ನು ನೆರವೇರಿಸುವವನು ಸದಾಚಾರ ಶಾಲಿಯಾಗಿರಬೇಕೆಂದು ಪ್ರತಿಪಾದಿಸಲಾಯಿತು. ಈ ಸಂದರ್ಭದಲ್ಲಿ ಸದಾಚಾರ ವಿಷಯದಲ್ಲಿ ಬಂದ ಸುಕೇಶಿಯ ಉಪಪ್ರಶ್ನೆಗೆ ಸಮಾಧಾನವಾಗಿ ಆಚಾರಗಳನ್ನು ವಿವರಿಸಲಾರಂಭಿಸಿ ಧರ್ಮಾನುಷ್ಠಾನಕ್ಕೆ ಮೂಲಭೂತಗಳಾದ ಮಹನೀಯರ ಸದಾ ಚಾರಗಳನ್ನು ಬ್ರಾಹ್ಮಮುಹೂರ್ತದಲ್ಲಿ ಏಳುವ ಮೊದಲುಗೊಂಡು ಎಲ್ಲವನ್ನೂ ವಿಸ್ತಾರವಾಗಿ ಹೇಳಲಾಯಿತು. ಮತ್ತು ಮೃತ್ತಿಕಾಶೌಚ, ಸ್ನಾನ, ಕ್ಷೌರ, ಅಭ್ಯಂಗಾದಿ ಕಾಲ ಮತ್ತು ನಿಷಿದ್ಧದಿವಸಗಳು, ಭೋಜನನಿಯಮ, ಶುದ್ಧಿಯಕ್ರಮ, ಅಭೋಜ್ಯಾನ್ನ ರಾದವರ ಪರಿಗಣನೆ, ಪಿತೃಕರ್ಮ, ಆಶೌಚ ಇವೆಲ್ಲವನ್ನೂ ನಿರೂಪಿಸಿ ಗೃಹಸ್ಥಾಶ್ರಮ ವನ್ನು ಪ್ರಶಂಸಿಸಿ ವಿರಕ್ತಾಧಿಕಾರಿಗಳಿಗೆ ವಾನಪ್ರಸ್ಥ ಮತ್ತು ಸನ್ಯಾಸ ಎಂಬ ಆಶ್ರಮ ಗಳನ್ನೂ ಅವುಗಳಿಗೆ ವರ್ಣನಿಯಮವನ್ನೂ ಹೇಳಿ ಉಪಸಂಹರಿಸಲಾಯಿತು.

ಇಲ್ಲಿ ಧರ್ಮದ ಸ್ವರೂಪವನ್ನು ಸ್ಪಷ್ಟವಾಗಿ ಹೇಳಲಿಲ್ಲ. ಅಂತಹ ಧರ್ಮಕ್ಕೆ ಸಾಧಕವಾದ ಶಾಸ್ತ್ರವಿಹಿತಕರ್ಮಗಳನ್ನೂ ಕರ್ಮಾಚರಣಕ್ಕೆ ಅಧಿಕಾರಸಂಪಾದಕವಾದ ಸದಾಚಾರಗಳನ್ನೂ ನಿರೂಪಿಸಿರುತ್ತಾರೆ. ಆದುದರಿಂದ ಇಲ್ಲಿ ಧರ್ಮವೆಂದರೆ ಸ್ವರ್ಗ ಮೋಕ್ಷಾದಿಪರಲೋಕದ ಪುರುಷಾರ್ಥಗಳಿಗೂ ಐಹಿಕವಾದ ಅರ್ಥಕಾಮಪುರುಷಾರ್ಥ

ಗಳಿಗೂ ಸಾಧಕವಾದ ಪರಮಾತ್ಮನ ಅನುಗ್ರಹ ಸಂಕಲ್ಪವೇ ಧರ್ಮಶಬ್ದಕ್ಕೆ ಮುಖ್ಯವಾದ ಅರ್ಥ. ಇದಕ್ಕೆ ಪುಣ್ಯವೆಂದೂ ಹೆಸರು. ಅವನ ನಿಗ್ರಹ ಸಂಕಲ್ಪವೇ ಪಾಪವೆಂದೂ ತಿಳಿಯಬೇಕು. ಅಂತಹ ಮುಖ್ಯ ಧರ್ಮಕ್ಕೆ ಸಾಧಕಗಳಾದ ಶಾಸ್ತ್ರವಿಹಿತ ಕರ್ಮಗಳೂ, ಸದಾಚಾರಗಳೂ ಧರ್ಮಗಳೆಂದೇ ವ್ಯವಹಿಸಲ್ಪಟ್ಟಿವೆ. ಶಾಸ್ತ್ರವಿಹಿತ ಕರ್ಮಾನುಷ್ಠಾನದಿಂದಲೂ, ಭಗವದ್ಭಕ್ತರ ಆಚಾರಾನುವರ್ತನದಿಂದಲೂ ಭಗವದಾಜ್ಞಾರೂಪವಾದ ವೇದಾನುವರ್ತನವುಂಟಾಗಿ ಆಜ್ಞಾಕಾರಿಗಳಾದ ಪ್ರಜೆಗಳ ವಿಷಯದಲ್ಲಿ ರಾಜನಿಗೆ ಅನುಗ್ರಹವುಂಟಾಗುವಂತೆ ಸರ್ವೇಶ್ವರನಿಗೂ ಆಜ್ಞಾಪಾಲಕನಾದ ಭಕ್ತನ ವಿಷಯದಲ್ಲಿ ಅನುಗ್ರಹಸಂಕಲ್ಪವುಂಟಾಗುತ್ತದೆಂದು ತಾತ್ಪರ್ಯ. ಇದನ್ನೇ ಸ್ಮೃತಿಕಾರರು " ಅಲೌಕಿಕ ಶ್ರೇಯಸ್ಸಾಧನತಾಕೋ ಧರ್ಮಃ " ಎಂದೂ " ಯಮಾರ್ಯಾಃ ಕ್ರಿಯಮಾಣಂ ಪ್ರಶಂಸಂತಿ ಸಧರ್ಮಃ ಯದ್ಗರ್ಹಂತೆ ಸೋಽಧರ್ಮಃ " ಎಂದೂ ನಾನಾವಿಧವಾಗಿ ನಿರೂಪಿಸಿರುತ್ತಾರೆ.



॥ ಶ್ರೀಃ ॥

# ಶ್ರೀವಾಮನಪುರಾಣಂ

## ಪಂಚದಶೋಽಧ್ಯಾಯಃ

### ಪುಲಸ್ತ್ಯ ಉವಾಚ

ತತಃ ಸುಕೇಶೀ ದೇವರ್ಷೇ ಗತ್ವಾ ಪುರಮನುತ್ತಮಂ ।
ಸಮಾಹೂಯಾಬ್ರವೀತ್ಸರ್ವಾನ್ರಾಕ್ಷಸಾನ್ ಧಾರ್ಮಿಕಂ ವಚಃ ॥ ೧ ॥

ಅಹಿಂಸಾ ಸತ್ಯಮಸ್ತೇಯಂ ಶೌಚಮಿಂದ್ರಿಯಸಂಯಮಃ ।
ದಾನಂ ದಯಾ ಚ ಕ್ಷಾಂತಿಶ್ಚ ಬ್ರಹ್ಮಚರ್ಯಮಮಾನಿತಾ ॥ ೨ ॥

ಶುಭಾ ಸತ್ಯಾ ಚ ಮಧುರಾ ವಾಙ್ನಿತ್ಯಂ ಸತ್ಕ್ರಿಯಾ ರತಿಃ ।
ಸದಾಚಾರನಿಷೇವಿತ್ವಂ ಪರಲೋಕಪ್ರದಾಯಕಾಃ ॥ ೩ ॥

ಇತ್ಯೂಚುರ್ಮುನಯೋ ಮಹ್ಯಂ ಧರ್ಮಮಾದ್ಯಂ ಪುರಾತನಂ ।
ಸೋಽಹಮಾಜ್ಞಾಪಯೇ ಸರ್ವಾನ್ಕ್ರಿಯತಾಮವಿಕಲ್ಪತಃ ॥ ೪ ॥

---

## ಹದಿನೈದನೆಯ ಅಧ್ಯಾಯವು

೧-೪. ಪುಲಸ್ತ್ಯರು ಸುಕೇಶಿಯ ಮುಂದಿನ ವೃತ್ತಾಂತವನ್ನು ನಾರದರಿಗೆ ಹೇಳುತ್ತಾರೆ- ಎಲೈ ದೇವರ್ಷಿಯೇ, ಅನಂತರ ಸುಕೇಶಿಯು ತನ್ನ ನಗರಕ್ಕೆ ಹೋಗಿ ತನ್ನ ಪ್ರಜೆಗಳಾದ ರಾಕ್ಷಸರೆಲ್ಲರನ್ನೂ ಬರಹೇಳಿ ಅವರನ್ನು ಕುರಿತು ಧಾರ್ಮಿಕವಾದ ಈ ಮಾತನ್ನಾಡಿದನು- ಎಲೈ, ಪ್ರಜೆಗಳೇ, ಇನ್ನು ಮುಂದೆ ನೀವುಗಳು ನನ್ನ ಈ ಆಜ್ಞೆಯನ್ನು ತಪ್ಪದೆ ಅನುಸರಿಸಬೇಕು, ಅಹಿಂಸೆ, ಸತ್ಯವಚನ, ಚೌರ್ಯವಿಲ್ಲದಿರುವಿಕೆ, ಶೌಚ, ಇಂದ್ರಿಯನಿಗ್ರಹ, ದಾನ, ದಯಾ, ಸಹಿಷ್ಣುತೆ, ಬ್ರಹ್ಮಚರ್ಯ, ನಿರಹಂಕಾರಿತ್ವ, ಶುಭವಾಗಿಯೂ ಸತ್ಯವಾಗಿಯೂ ಜನಹಿತವಾಗಿಯೂ ಇರುವ ಮಾತು, ಯಾವಾಗಲೂ ಒಳ್ಳೆಯ ಕೆಲಸದಲ್ಲಿ ಅಭಿರುಚಿ, ಸದಾಚಾರಶೀಲತೆ, ಇವುಗಳು ಸದ್ಗತಿದಾಯಕಗಳೆಂದೂ ಸನಾತನವಾದ ಪ್ರಥಮ ಧರ್ಮವೆಂದೂ ಮಹರ್ಷಿಗಳು ಹೇಳಿದ್ದಾರೆ. ಇವುಗಳನ್ನು ನೀವು ಆಚರಿಸಬೇಕೆಂಬುದು ನನ್ನ ಆಜ್ಞೆ.

## ಪುಲಸ್ತ್ಯ ಉವಾಚ

ತತಃ ಸುಕೇಶಿವಚನಾತ್ಸರ್ವ ಏವ ನಿಶಾಚರಾಃ ।
ತ್ರಯೋದಶಾಂ ಶತೋ ಧರ್ಮಂ ಚಕ್ರುರ್ಮುದಿತಮಾನಸಾಃ ॥ ೫ ॥

ತತಃ ಪ್ರವೃದ್ಧಿಂ ಸುತರಾಮುಗಚ್ಛಂಸ್ತೇ ನಿಶಾಚರಾಃ ।
ಪುತ್ರಪೌತ್ರಾರ್ಥಸಂಯುಕ್ತಾಃ ಸದಾಚಾರಸಮನ್ವಿತಾಃ ॥ ೬ ॥

ತತಸ್ತು ತೇಜಸಾ ತೇಷಾಂ ರಾಕ್ಷಸಾನಾಂ ಮಹಾತ್ಮನಾಂ ।
ಗಂತುಂ ನಾಶಕ್ನುವನ್ಸೂರ್ಯೋ ನಕ್ಷತ್ರಾಣಿ ನ ಚಂದ್ರಮಾಃ ॥ ೭ ॥

ತತಸ್ತ್ರಿಭುವನೇ ಬ್ರಹ್ಮನ್ನಿಶಾಚರ ಪುರಂ ವಿಭೋ ।
ದಿವಾ ಸೂರ್ಯಸ್ಯ ಸದೃಶಂ ಕ್ಷಣದಾಯಾಂ ಚ ಚಂದ್ರವತ್ ॥ ೮ ॥

ನ ಜ್ಞಾಯತೇ ಗತಿರ್ವ್ಯೋಮ್ನಿ ಭಾಸ್ಕರಸ್ಯ ತತೋಂಬರೇ ।
ಶಶಾಂಕಮಿವ ತೇಜಸ್ತ್ವಾದಮನ್ಯಂತ ಪುರೋತ್ತಮಂ ॥ ೯ ॥

---

೫ ೭. ಅನಂತರ ಸುಕೇಶಿಯ ಆ ಮಾತನ್ನು ಕೇಳಿದ ರಾಕ್ಷಸರೆಲ್ಲಾ ಸಂತುಷ್ಟರಾಗಿ ರಾಜನು ಹೇಳಿದ ಧರ್ಮಗಳನ್ನೆಲ್ಲಾ ಹದಿಮೂರಾಣೆಯಷ್ಟು (ಮುಕ್ಕಾಲು ಪಾಲಿಗಿಂತ ಹೆಚ್ಚಾಗಿ) ಆಚರಿಸಿದರು. ಮತ್ತು ಸದಾಚಾರಸಂಪನ್ನರಾದ ಆ ರಾಕ್ಷಸರು ಧರ್ಮಾನುಷ್ಠಾನದಿಂದ ಪುತ್ರಪೌತ್ರಸಂಪತ್ತಿಯುಳ್ಳವರಾಗಿ ಬಹಳ ವೃದ್ಧಿಹೊಂದಿದರು. ಆ ರೀತಿ ಧರ್ಮಾನುಷ್ಠಾನದಿಂದ ಉಂಟಾದ ರಾಕ್ಷಸರ ತೇಜಸ್ಸನ್ನು ಸೂರ್ಯ ಚಂದ್ರ ನಕ್ಷತ್ರಗಳೂ ಸಹ ಅತಿಕ್ರಮಿಸಲು ಸಾಧ್ಯವಿಲ್ಲದಂತಾಯಿತು.

೮-೧೦. ಈ ಪ್ರಕಾರ ಉಜ್ವಲವಾದ ಆ ರಾಕ್ಷಸನಗರವು ಮೂರು ಲೋಕಕ್ಕೂ ಪ್ರಕಾಶಕವಾಗಿ ಆಕಾಶದಲ್ಲಿ ಬೆಳಗುತ್ತಾ ಹಗಲಿನಲ್ಲಿ ಸೂರ್ಯನಂತೆಯೂ ರಾತ್ರಿಯಲ್ಲಿ ಚಂದ್ರನಂತೆಯೂ ತೋರುತ್ತಿತ್ತು. ಹಗಲಿನಲ್ಲಿ ಆ ನಗರದ ಪ್ರಕಾಶದಿಂದ ಸೂರ್ಯನ ಗತಿಯೇ ಇತರರಿಗೆ ಕಾಣಿಸುತ್ತಿರಲಿಲ್ಲ. ತೇಜೋವಿಶೇಷದಿಂದ ಚಂದ್ರನೆಂದೂ ತಿಳಿಯು

ಸ್ವಂ ವಿಕಾಸಂ ವಿಮುಂಚಂತಿ ನಿಶಾಮಿತಿ ವ್ಯಚಿಂತಯನ್ ।
ಕಮಲಾಕರೇ ಚ ಕಮಲಾ ಮಿತ್ರಮಿತ್ಯಭಿಗಮ್ಯ ಹಿ ।
ರಾತ್ರೌ ವಿಕಸಿತಾ ಬ್ರಹ್ಮನ್ವಿಭೂತಿಂ ದಾತುಮೀಪ್ಸಿತಾಂ ॥ ೧೦ ॥

ಕೌಶಿಕಾ ರಾತ್ರಿಸಮಯಂ ಬುದ್ಧ್ವಾ ನಿರಗಮನ್ಕಿಲ ।
ತಾನ್ವಾಯಸಾಸ್ತದಾ ಜ್ಞಾತ್ವಾ ದಿವಾ ನಿಘ್ನಂತಿ ಕೌಶಿಕಾನ್ ॥ ೧೧ ॥

ಸ್ನಾತಕಾಸ್ತ್ವಾಪಗಾ ಸ್ವೇವ ಸ್ನಾನಜಪ್ಯಪರಾಯಣಾಃ ।
ಆಕಂಠಮಗ್ನಾಸ್ತಿಷ್ಠಂತಿ ರಾತ್ರಿಂ ಜ್ಞಾತ್ವಾಥ ವಾಸರಂ ॥ ೧೨ ॥

ನ ವ್ಯಯುಜ್ಯಂತ ಚಕ್ರಾಹ್ವಾಸ್ತದಾ ವೈ ಪುರದರ್ಶನೇ ।
ಮನ್ಯಮಾನಾಸ್ತು ದಿವಸಮಿದಮುಚ್ಚೈರ್ಬ್ರುವಂತಿ ಚ ॥ ೧೩ ॥

ನೂನಂ ಕಾಂತಾ ವಿಹೀನೇನ ಕೇನಚಿಚ್ಚಕ್ರ ಪತ್ರಿಣಾ ।
ಉತ್ಸೃಷ್ಟಂ ಜೀವಿತಂ ಶೂನ್ಯೇ ಘೂತ್ಕೃತ್ಯ ಸರಿತಸ್ತಟೇ ॥ ೧೪ ॥

---

ವಂತಿತ್ತು. ಸರೋವರದಲ್ಲಿದ್ದ ಕಮಲಗಳು ರಾತ್ರಿಯೆಂದು ತಿಳಿದು ವಿಕಾಸವಿಲ್ಲದೆ ಇರುತ್ತಿದ್ದವು. ಸೂರ್ಯನೆಂದೂ ಭ್ರಮಿಸಿ ಆಭಿಮುಖ್ಯದಿಂದ ರಾತ್ರಿಯಲ್ಲಿಯೂ ವಿಕಾಸ ಹೊಂದಿ ಕಾಂತಿಯನ್ನು ನೀಡುತ್ತಿದ್ದವು.

೧೧-೧೩. ಹಗಲು ರಾತ್ರಿ ಎಂಬ ತಾರತಮ್ಯವು ತಿಳಿಯದೇ ಇದ್ದುದರಿಂದ ರಾತ್ರಿಯೆಂದು ತಿಳಿದು ಗೂಬೆಗಳೆಲ್ಲವೂ ಹೊರಗೆ ಹೊರಟವು. ಅಂತಹ ಗೂಬೆಗಳನ್ನೆಲ್ಲಾ ಹಗಲಿನಲ್ಲಿ ಕಾಗೆಗಳು ಪ್ರಹರಿಸುತ್ತಿದ್ದವು. ಹಗಲನ್ನೇ ರಾತ್ರಿಯೆಂದು ತಿಳಿದು ಸ್ನಾತಕವ್ರತಶಾಲಿಗಳು ನದಿಯಲ್ಲಿ ಕತ್ತಿನವರೆಗೂ ಮುಳುಗಿ ಜಪ ಪಾರಾಯಣಗಳನ್ನು ಮಾಡುತ್ತಾ ಹಾಗೆಯೇ ನಿಂತರು. ಚಕ್ರವಾಕಪಕ್ಷಿಗಳೆಲ್ಲವೂ ಸೂರ್ಯನಂತೆ ಪ್ರಕಾಶಿಸುವ ಆ ನಗರವನ್ನು ನೋಡಿ ಹಗಲೆಂದು ತಿಳಿದು ಪರಸ್ಪರ ವಿಯೋಗವನ್ನು ಹೊಂದದೆ ಈ ರೀತಿ ಗಟ್ಟಿಯಾಗಿ ಪರಸ್ಪರ ಮಾತನಾಡಲುಪಕ್ರಮಿಸುತ್ತವೆ.

೧೪-೧೭. ರಾತ್ರಿಯಲ್ಲಿ ಪ್ರಿಯನ ವಿರಹದಿಂದ ದುಃಖಪಟ್ಟು ಯಾವುದೋ ಒಂದು ಚಕ್ರವಾಕಪಕ್ಷಿಯು ನದೀ ತೀರದಲ್ಲಿಯೇ ನಿಟ್ಟುಸಿರುಬಿಟ್ಟು ಮೃತಪಟ್ಟಿರಬಹುದು. ಅಂತಹ ಚಕ್ರವಾಕವನ್ನು ನೋಡಿ ಸೂರ್ಯನು ದಯೆಯಿಂದ ನಮಗೆ

**ತತೋನುಕೃಪಯಾವಿಷ್ಣೋ ವಿವಸ್ವಾಂಸ್ತೀವ್ರರಶ್ಮಿಭಿಃ ।**
**ಸಂತಾಪಯಜ್ಜಗತ್ಸರ್ವಂ ನಾಸ್ತಮೇತಿ ಕಥಂಚನ ॥ ೧೫ ॥**

**ಅನ್ಯೇ ವದಂತಿ ಚಕ್ರಾಹ್ವಾ ನೂನಂ ಕಶ್ಚಿನ್ಮೃತೋಽಭವತ್ ।**
**ತತ್ಕಾಂತಯಾ ತಪಸ್ತಪ್ತಂ ಭರ್ತೃಶೋಕಾರ್ತಯಾ ತತಃ ॥ ೧೬ ॥**

**ಆರಾಧಿತಸ್ತು ಭಗವಾಂಸ್ತಪಸಾ ವೈ ದಿವಾಕರಃ ।**
**ತೇನಾಸೌ ಶಶಿನಂ ಜಿತ್ವಾ ನಾಸ್ತಮೇತಿ ರವಿರ್ಧ್ರುವಂ ॥ ೧೭ ॥**

**ಯಜ್ವಾನೋ ಹೋಮಶಾಲಾಸು ಸಹರ್ತ್ವಿಗ್ಭಿರಥಾಧ್ವರೇ ।**
**ಪ್ರಾವರ್ತಯಂತ ಕರ್ಮಾಣಿ ರಾತ್ರಾವಪಿ ಮಹಾಮುನೇ ॥ ೧೮ ॥**

**ಮಹಾಭಾಗವತಾಃ ಪೂಜಾಂ ವಿಷ್ಣೋಃ ಕುರ್ವಂತಿ ಭಕ್ತಿತಃ ।**
**ರವೌ ಶಶಿನಿಚೈವಾನ್ಯೇ ಬ್ರಹ್ಮಣೋನ್ಯೇ ಹರಸ್ಯ ಚ ॥ ೧೯ ॥**

**ಕಾಮಿನಶ್ಚಾಪ್ಯಮನ್ಯಂತ ಸಾಧು ಚಂದ್ರಮಸಾ ಕೃತಂ ।**
**ಯದಿಯಂ ರಜನೀ ರಮ್ಯಾ ಕೃತಾ ಸತತ ಕೌಮುದೀ ॥ ೨೦ ॥**

---

ವಿಯೋಗದುಃಖವು ಯಾವಾಗಲೂ ಬರದಂತೆ ಕಿರಣಗಳಿಂದ ಜಗತ್ತನ್ನು ಸಂತಾಪ ಪಡಿಸುತ್ತಾ ಅಸ್ತವನ್ನು ಹೊಂದದೆ ಹೀಗೆಯೇ ಇರಬಹುದೆಂತಲೂ ಮತ್ತೆ ಕೆಲವು ಯಾವುದೋ ಒಂದು ಗಂಡು ಚಕ್ರವಾಕವು ಸತ್ತಿರಬಹುದು, ಅದರ ಪತ್ನಿಯಾದ ಸ್ತ್ರೀ ಚಕ್ರವಾಕವು ಪತಿಶೋಕದಿಂದ ಸೂರ್ಯನನ್ನು ಕುರಿತು ತಪಸ್ಸು ಮಾಡಿರಬೇಕು, ಆ ತಪಸ್ಸಿನಿಂದ ಸಂತುಷ್ಟನಾದ ಸೂರ್ಯನು ನಮಗೆ ಶತ್ರುವಾಗಿರುವ ಚಂದ್ರನನ್ನು ಜಯಿಸಿ ತಾನೂ ಅಸ್ತಂಗತನಾಗದೆ ನಮ್ಮನ್ನು ಸಂತೋಷಪಡಿಸುತ್ತಾ ಹೀಗೆಯೇ ಇರುತ್ತಾನೆ ಎಂದೂ ನಾನಾಪ್ರಕಾರವಾದ ಸಂಭಾವನೆಗಳಿಂದ ಮಾತನಾಡುತ್ತಿದ್ದುವು.

೧೮-೨೦ ಎಲೈ, ಮಹರ್ಷಿಯೇ, ಯಜ್ಞಶಾಲೆಗಳಲ್ಲಿ ಯಾಜಕರು ಋತ್ವಿಕ್ಕುಗಳೊಡನೆ ರಾತ್ರಿಯಲ್ಲಿಯೂ ಯಜ್ಞಕರ್ಮಗಳನ್ನು ನಡೆಸಲು ಪ್ರಾರಂಭಿಸಿದರು. ಭಾಗವತರೆಲ್ಲರೂ ಭಕ್ತಿಯಿಂದ ವಿಷ್ಣುಪೂಜೆಯನ್ನು ಮಾಡಲಾರಂಭಿಸಿದರು. ಮತ್ತೆ ಕೆಲವರು ಅವರವರ ಅಧಿಕಾರಕ್ಕೂ ಅಭಿರುಚಿಗೂ ತಕ್ಕಂತೆ ಸೂರ್ಯ, ಚಂದ್ರ, ಬ್ರಹ್ಮ, ರುದ್ರ, ಮುಂತಾದವರ ಪೂಜೆಯಲ್ಲಿ ನಿರತರಾದರು. ಕಾಮುಕರು ಸಂತೋಷದಿಂದ ಬೆಳದಿಂಗಳಿನಿಂದ ಯಾವಾಗಲೂ ರಮ್ಯವಾಗಿರುವ ಇಂತಹ ರಾತ್ರಿಗಳನ್ನು ಉಂಟು ಮಾಡಿದ ಚಂದ್ರನು ಬಹಳ ಒಳ್ಳೇ ಕೆಲಸ ಮಾಡಿದಂತಾಯಿತೆಂದು ಶ್ಲಾಘಿಸಿದರು.

ಅನ್ಯೇಽಬ್ರುರ್ವಲೋಕಗುರುರಸ್ಮಾಭಿಃ ಕ್ರಭೃದ್ವಶೀ ।
ನಿರ್ವ್ಯಾಜೇನ ಮಹಾಗಂಧೈರರ್ಚಿತಃ ಕುಸುಮೈಃ ಶುಭೈಃ ॥ ೨೦ ॥

ಸಹಲಕ್ಷ್ಮ್ಯಾ ಮಹಾಯೋಗೀ ನಭಸ್ಯಾದಿಚತುರ್ಷ್ವಪಿ ।
ಅಶೂನ್ಯಶಯನಾನಾಮ ದ್ವಿತೀಯಾ ಸರ್ವಕಾಮದಾ ॥ ೨೨ ॥

ತೇನಾಸೌ ಭಗವಾನ್ ಪ್ರೀತಃ ಪ್ರಾದಾಚ್ಛಯನಮುತ್ತಮಂ ।
ಅಶೂನ್ಯಂಚ ಮಹಾಭೋಗೈ ರನಸ್ತಮಿತಶೇಖರಂ ॥ ೨೩ ॥

ಅನ್ಯೇಽಬ್ರುರ್ವ ಧ್ರುವಂ ದೇವ್ಯಾ ರೋಹಿಣ್ಯಾ ಶಶಿನಃ ಕ್ಷಯಂ ।
ದೃಷ್ಟ್ವಾ ತಪ್ತಂ ತಪೋ ಘೋರಂ ರುದ್ರಾರಾಧನಕಾಮ್ಯಯಾ ॥ ೨೪ ॥

ಪುಣ್ಯಾಯಾ ಮಕ್ಷಯಾಷ್ಟಮ್ಯಾಂ ವೇದೋಕ್ತವಿಧಿನಾ ಸ್ವಯಂ ।
ತುಷ್ಟೇನ ಶಂಭುನಾ ದತ್ತೋ ವರಶ್ಚಾಸ್ಯೈ ಯದೃಚ್ಛಯಾ ॥ ೨೫ ॥

---

೨೧-೨೩. ಮತ್ತೆ ಕೆಲವು ಕಾಮಿಗಳು ಲೋಕಪತಿಯಾದ ನಾರಾಯಣನನ್ನು ಲಕ್ಷ್ಮೀಸಮೇತನಾಗಿ ಚಾತುರ್ಮಾಸದಲ್ಲಿ ಯೋಗನಿದ್ರೆಯಿಂದ ಮಲಗಿರುವಾಗ ನಾವುಗಳು ಭಕ್ತಿಯಿಂದ ಸುಗಂಧಿಗಳಾದ ಕುಸುಮಗಳಿಂದ ಪೂಜಿಸಿದ್ದೆವು. ಆ ನಾರಾಯಣನೊಡನೆ ಅಶೂನ್ಯಶಯನಳಾದ ಸರ್ವಕಾಮಪ್ರದಳಾದ ಮಹಾಲಕ್ಷ್ಮಿಯನ್ನೂ ನಾವು ಪೂಜಿಸಿದ್ದೆವು. ಅಂತಹ ನಮ್ಮ ಸೇವೆಯಿಂದ ಸಂತುಷ್ಟನಾದ ನಾರಾಯಣನು ನಮಗೂ ಸರ್ವಭೋಗಪ್ರದವಾದ ಈ ಅಶೂನ್ಯಶಯನವನ್ನು ಕೊಟ್ಟಿದ್ದಾನೆ. (ಪ್ರಿಯೆಯ ವಿಶ್ಲೇಷವಿಲ್ಲದೆ ಯಾವಾಗಲೂ ಅವಳೊಡನೆ ಭೋಗಪಡುವ ಶಯನವನ್ನು ಕೊಟ್ಟಿರುತ್ತಾನೆಂದು ತಾತ್ಪರ್ಯ) ಎಂದೂ

೨೪-೨೫. ಮತ್ತೂ ಕೆಲವು ಕಾಮುಕರು ಚಂದ್ರನ ಕ್ಷೀಣದೆಶೆಯನ್ನು ನೋಡಿದ ರೋಹಿಣೀದೇವಿಯು ರುದ್ರನನ್ನು ಕುರಿತು ಘೋರವಾದ ತಪಸ್ಸನ್ನು ಮಾಡಿರಬಹುದು. ಕೃಷ್ಣಾಷ್ಟಮಿಯಲ್ಲಿ ವೇದೋಕ್ತವಿಧಿಯಿಂದ ವ್ರತವನ್ನೂ ನಡೆಸಿರಬಹುದು. ಅದರ ಫಲವಾಗಿ ಸಂತುಷ್ಟನಾದ ಶಂಕರನು ಈ ಚಂದ್ರನಿಗೆ ಆಕಸ್ಮಿಕವಾಗಿ ಈ ವಿಧವಾದ ಅಕ್ಷಯಸ್ವರೂಪವನ್ನು ವರವನ್ನಾಗಿ ಅನುಗ್ರಹಿಸಿರಬಹುದೆಂದೂ

ಅನ್ಯೇಬ್ರುವಂ ಶ್ಚಂದ್ರಮಸಾ ಧ್ರುವ ಮಾರಾಧಿತೋ ಹರಿಃ ।
ವ್ರತೇನೇಹ ತ್ವಖಂಡೇನ ತೇನಾಖಂಡ ಶ್ಯಶೀ ದಿವಿ ॥ ೨೬ ॥

ಅನ್ಯೇಬ್ರುರ್ವ ಶಶಾಂಕೇನ ಧ್ರುವರಕ್ಷಾ ಕೃತಾತ್ಮನಃ ।
ಪದದ್ವಯಂ ಸಮಭ್ಯರ್ಚ್ಯ ವಿಷ್ಣೋ ರಮಿತತೇಜಸಃ ॥ ೨೭ ॥

ತೇನಾ ಸೌದೀಪ್ತಿಮಾಂಶ್ಚಂದ್ರಃ ಪರಿಭೂಯ ದಿವಾಕರಂ ।
ಅಸ್ಮಾಕ ಮಾನಂದಕರೋ ದಿವಾ ತಪತಿ ಸೂರ್ಯವತ್ ॥ ೨೮ ॥

ಲಕ್ಷ್ಯತೆ ಕಾರಣೈರನ್ಯೈಃ ಬಹುಭಿ ಸ್ಸತ್ಯಮೇವಹಿ ।
ಶಶಾಙ್ಕನಿರ್ಜಿತ ಸ್ಸೂರ್ಯೋ ನವಿಭಾತಿ ಯಥಾ ಪುರಾ ॥ ೨೯ ॥

ಯಥಾ ಪದ್ಮಾಕರಾಃ ಶ್ಲಕ್ಷ್ಣಾ ರಣದ್ಭೃಂಗಗಣಾಕುಲಾಃ ।
ವಿಕಚಾಃ ಪ್ರತಿಭಾಸಂತೆ ಜಾತಃ ಸೂರ್ಯೋದಯೋ ಧ್ರುವಂ ॥ ೩೦ ॥

---

೨೬-೨೮. ಇನ್ನೂ ಕೆಲವು ಕಾಮುಕರು ಚಂದ್ರನು ಅಖಂಡವೆಂಬ ವ್ರತದಿಂದ ಹರಿಯನ್ನು ಆರಾಧಿಸಿರಬಹುದು. ಅದರ ಫಲವಾಗಿ ಈಗಲೂ ಅಖಂಡನಾಗಿಯೇ ಬೆಳಗುತ್ತಿದ್ದಾನೆ ಎಂದೂ ಮತ್ತೆ ಕೆಲವರು ಧ್ರುವನಿಗೆ ಧ್ರುವಪದವಿಯನ್ನು ನೀಡಿದ ತೇಜಸ್ವಿಯಾದ ಮಹಾವಿಷ್ಣುವಿನ ಪಾದದ್ವಯವನ್ನೂ ಈ ಚಂದ್ರನು ಭಕ್ತಿಯಿಂದ ಪೂಜಿಸಿರಬಹುದು. ಅದರ ಫಲವಾಗಿ ತಾನೂ ತೇಜಸ್ವಿಯಾಗಿ ಸೂರ್ಯನನ್ನೂ ಜಯಿಸಿ ನಮಗೆ ಆನಂದಕರನಾಗಿ ಹಗಲಿನಲ್ಲಿಯೂ ಬೆಳಗುತಿದ್ದಾನೆ ಎಂದೂ

೨೯-೩೧. ಇತರ ಅನೇಕ ಕಾರಣಗಳಿಂದ ನಮಗೆ ಇದು ತಿಳಿದುಬರುತ್ತಿದೆ. ಸೂರ್ಯನು ಮೊದಲು ಇದ್ದಂತೆ ಪ್ರಕಾಶಿಸದಿರುವುದಕ್ಕೆ ಚಂದ್ರನಿಂದ ಇವನಿಗೆ ಉಂಟಾಗಿರುವ ಅಪಜಯವೇ ಕಾರಣ. ಆದರೆ ಸೂರ್ಯನು ಉದಯಿಸಿಲ್ಲವೆಂದು ಹೇಳಲಾಗುವುದಿಲ್ಲ. ಏತಕ್ಕೆಂದರೆ ಕಮಲಗಳೆಲ್ಲವೂ ವಿಕಾಸಹೊಂದಿ ಭ್ರಮರಗಳ ಝುಂಕಾರದಿಂದ ರಮ್ಯವಾಗಿ ಪ್ರಕಾಶಿಸುತ್ತಿವೆ. ಆದುದರಿಂದ ಸೂರ್ಯೋದಯವಾಗಿಯೇ ಇರಬೇಕು. ಚಂದ್ರನೂ ಕೂಡ ಉದಯಿಸಿ ಪ್ರತಾಪವನ್ನು ತೋರಿಸುತ್ತಿದ್ದಾನೆಂಬುದೂ ಕುಮುದ

ಯಥಾ ಚಾನ್ಯೈ ವಿಭಾವ್ಯಂತೆ ವಿಕಚಾಃ ಕುಮುದಾಕರಾಃ ।
ಅತೋ ವಿಜ್ಞಾಯತೇ ಚಂದ್ರಉದಿತಶ್ಚ ಪ್ರತಾಪವಾನ್ ॥ ೩೧ ॥

ಏವಂ ಸಂಭಾಷತಾಂ ತತ್ರ ಸೂರ್ಯೋ ವಾಕ್ಯಾನಿ ನಾರದ ।
ಅಮನ್ಯತ ಕಿಮೇತದ್ಧಿ ಲೋಕೋವಕ್ತಿ ಶುಭಾಶುಭಂ ॥ ೩೨ ॥

ಏವಂ ಸಂಚಿಂತ್ಯ ಭಗವಾನ್ ದಧ್ಯೌ ಧ್ಯಾನಂ ದಿವಾಕರಃ ।
ಆಸಮಂತಾಜ್ಜಗದ್ಗ್ರಸ್ತಂ ತ್ರೈಲೋಕ್ಯಂ ರಜನೀಚರೈಃ ॥ ೩೩ ॥

ತತಸ್ತು ಭಗವಾನ್ ಜ್ಞಾತ್ವಾ ತೇಜಸೋಽಪ್ಯಸಹಿಷ್ಣುತಾಂ ।
ನಿಶಾಚರಸ್ಯ ವೃದ್ಧಿಂ ತಾಮಚಿಂತಯತ ಯೋಗವಿತ್ ॥ ೩೪ ॥

ತತೋ ಜ್ಞಾತ್ವಾ ಚ ತಾನ್ಸರ್ವಾನ್ ಸದಾಚಾರರತಾನ್ ಶುಚೀನ್ ।
ದೇವಬ್ರಾಹ್ಮಣ ಪೂಜಾಸು ಸಂಸಕ್ತಾನ್ ಧರ್ಮಸಂಯುತಾನ್ ॥ ೩೫ ॥

---

ಪುಷ್ಪಗಳ ವಿಕಾಸದಿಂದ ತಿಳಿದುಬರುತ್ತಿದೆ. (ಆದುದರಿಂದ ಅವರವರ ಉದಯಗಳು ಕಾರ್ಯದಿಂದ ತಿಳಿಯೆಬರುತ್ತಿದ್ದರೂ ಸೂರ್ಯನ ಪ್ರಕಾಶವು ಮೊದಲಿನಂತೆ ಇಲ್ಲದಿರಲು ಚಂದ್ರನಿಂದ ಉಂಟಾದ ಪರಾಭವವೇ ಕಾರಣವೆಂದು ತಾತ್ಪರ್ಯ.)

೩೨-೩೪. ಈ ಪ್ರಕಾರ ನಾನಾವಿಧವಾದ ಊಹಾಪೋಹಗಳಿಂದ ಮಾತನಾಡುತ್ತಿರುವವರ ಆ ಮಾತನ್ನು ಕೇಳಿ ಸೂರ್ಯನು ಇದೇನು ಈ ಜನಗಳು ನಮ್ಮ ವಿಷಯದಲ್ಲೂ ಶುಭಾಶುಭವನ್ನು ಪ್ರಸ್ತಾಪಿಸುತ್ತಿರುವರು ಎಂದು ಆಲೋಚಿಸಿ ಧ್ಯಾನದೃಷ್ಟಿಯಿಂದ ವಿಷಯವನ್ನು ತಿಳಿಯಲು ಧ್ಯಾನಾಸಕ್ತನಾದನು. ಅನಂತರ ರಾಕ್ಷಸರ ತೇಜಸ್ಸಿನಿಂದ ಮೂರು ಲೋಕವೂ ವ್ಯಾಪ್ತವಾಗಿದೆ. ಈ ತೇಜಸ್ಸು ನನಗೂ ಸಹಿಸಲಸಾಧ್ಯವಾಗಿದೆ. ರಾಕ್ಷಸರು ಬಹಳ ವೃದ್ಧಿಹೊಂದಿದ್ದಾರೆ ಎಂದು ತನ್ನ ಯೋಗದೃಷ್ಟಿಯಿಂದ ತಿಳಿದನು.

೩೫-೩೭. ಅನಂತರ ಆ ರಾಕ್ಷಸರೆಲ್ಲರೂ ಸದಾಚಾರವುಳ್ಳವರಾಗಿಯೂ ದೇವ ಬ್ರಾಹ್ಮಣ ಪೂಜಕರಾಗಿಯೂ ಧರ್ಮಿಷ್ಠರಾಗಿಯೂ ಇರುವದನ್ನು ತಿಳಿದನು. ಅನಂತರ ರಾಕ್ಷಸರನ್ನು ನಾಶಮಾಡುವ ಸಾಮರ್ಥ್ಯವುಳ್ಳ ಕತ್ತಲೆ ಎಂಬ ಆನೆಗೆ ನಾಶಕವಾದ,

ತತಸ್ತು ರಕ್ಷಃಕ್ಷಯಕೃತ್ತಿಮಿರದ್ವಿಪಕೇಸರೀ ।
ಮಹಾಂಶುನಖರಃ ಸೂರ್ಯ ಸ್ತದ್ವಿಘಾತಮಚಿಂತಯತ್ ॥ ೩೬ ॥

ಜ್ಞಾತವಾಂಶ್ಚ ತತಶ್ಛಿದ್ರಂ ರಾಕ್ಷಸಾನಾಂ ದಿವಸ್ಪತಿಃ ।
ಸ್ವಧರ್ಮವಿಚ್ಯುತಿರ್ನಾಮ ಸರ್ವಧರ್ಮವಿಘಾತಕೃತ್ ॥ ೩೭ ॥

ತತಃ ಕ್ರೋಧಾಭಿಭೂತೇನ ಭಾನುನಾ ರಿಪುಭೇದಿನಾ ।
ತದ್ಭೀತಂ ರಾಕ್ಷಸಪುರಂ ತನ್ನಷ್ಟಂಚ ಯಥೇಚ್ಛಯಾ ॥ ೩೮ ॥

ಸ ಭಾನುನಾ ತದಾ ದೃಷ್ಟಃ ಕ್ರೋಧಾಧ್ಮಾತೇನ ಚಕ್ಷುಷಾ ।
ನಿಪಪಾತಾಂಬರಾದ್ಭ್ರಷ್ಟಃ ಕ್ಷೀಣಪುಣ್ಯ ಇವ ಗ್ರಹಃ ॥ ೩೯ ॥

ಏವಮೇತತ್ಸಮಾಲೋಕ್ಯ ಪುರಂ ಶಾಲಕಟಂಕಟಃ ।
ನಮೋ ಹರಾಯ ಶರ್ವಾಯ ಇದ ಮುಚ್ಚೈರುದೀರಯತ್ ॥ ೪೦ ॥

ತದಾಕ್ರಂದಿತ ಮಾಕರ್ಣ್ಯ ಚಾರಣಾ ಗಗನೇಚರಾಃ ।
ಹಾಹೇತಿ ಚುಕ್ರುಶು ಸ್ಸರ್ವೇ ಹರಭಕ್ತಃ ಪತತ್ಯಸೌ ॥ ೪೧ ॥

---

ಕಿರಣಗಳೆಂಬ ಉಗುರುಗಳುಳ್ಳ ಸೂರ್ಯನೆಂಬ ಸಿಂಹವು ರಾಕ್ಷಸರನ್ನು ನಾಶಪಡಿಸಲು ಆಲೋಚಿಸಿತು. ಹೀಗೆ ಆಲೋಚಿಸಿದ ಸೂರ್ಯನು ಧರ್ಮಿಷ್ಠರಾಗಿದ್ದರೂ ಸ್ವಧರ್ಮ ಚ್ಯುತಿಯಿಂದ ಇವರು ದೂಷಿತರಾಗಿರುವರೆಂದೂ ಇದು ಸರ್ವಧರ್ಮಕ್ಕೂ ನಾಶಕ ವೆಂದೂ ನಿರ್ಧರಿಸಿ ಅದನ್ನೇ ಛಿದ್ರವನ್ನಾಗಿ ಅರಿಸಿದನು.

೩೮-೪೦. ಅನಂತರ ಕೋಪಿಷ್ಠನಾಗಿ ಶತ್ರುನಾಶದಲ್ಲಿ ಉದ್ಯುಕ್ತನಾದ ಸೂರ್ಯ ನಿಂದ ಆ ರಾಕ್ಷಸನಗರವು ಬಹಳ ಭಯಪಟ್ಟು ಸೂರ್ಯನ ಇಚ್ಛಾಮಾತ್ರದಿಂದಲೇ ಜರ್ಜರವಾಯಿತು. ಹಾಗೆಯೇ ಕೋಪದಿಂದ ಕ್ರೂರವಾದ ಸೂರ್ಯನ ದೃಷ್ಟಿ ಬಿದ್ದೊಡನೆಯೇ ಪುಣ್ಯಕ್ಷಯವನ್ನು ಹೊಂದಿದ ನಕ್ಷತ್ರದಂತೆ ಆ ನಗರವು ಆಕಾಶದಿಂದ ಕೆಳಕ್ಕೆ ಬಿದ್ದಿತು. ಇದನ್ನೆಲ್ಲವನ್ನೂ ನೋಡಿದ ಸುಕೇಶಿಯು ಹರನ ವರವೂ ಅನ್ಯಥಾ ಆಯಿತೆಂದು ಭಾವಿಸಿ ನಮೊ ಹರಾಯ ಶರ್ವಾಯ ಎಂದು ಘಟ್ಟಿಯಾಗಿ ಕೂಗಿದನು.

೪೧-೪೩. ಸುಕೇಶಿಯ ಆಕ್ರಂದನವನ್ನು ಕೇಳಿ ಆಕಾಶದಲ್ಲಿ ಸಂಚರಿಸುತ್ತಿದ್ದ ಚಾರಣರು ಅಯ್ಯೋ ರುದ್ರಭಕ್ತನು ಕೆಳಗೆ ಬೀಳುತ್ತಿದ್ದಾನೆ ಎಂದು ಅರಚಿಕೊಂಡರು.

ತಚ್ಚ್ರಾರಣವಚಃ ಶರ್ವಃ ಶ್ರುತವಾನ್ಸರ್ವಗೋಽವ್ಯಯಃ ।
ಶ್ರುತ್ವಾ ಸಂಚಿಂತಯಾಮಾಸ ಕೇನಾಸೌ ಪಾತ್ಯತೇ ಭುವಿ ॥ ೪೨ ॥

ಜ್ಞಾತವಾನ್ ದೇವಪತಿನಾ ಸಹಸ್ರಕಿರಣೇನ ತತ್ ।
ಪಾತಿತಂ ರಾಕ್ಷಸಪುರಂ ತತಃ ಕ್ರುದ್ಧಸ್ತ್ರಿಲೋಚನಃ ॥ ೪೩ ॥

ಕ್ರುದ್ಧಸ್ತು ಭಗವಾನ್ ಶಂಭುಃ ಭಾನುಮಂತಮುಪಶ್ಯತ ।
ದೃಷ್ಟಮಾತ್ರಃ ತ್ರಿನೇತ್ರೇಣ ನಿಪಪಾತ ತತೋಽಂಬರಾತ್ ॥ ೪೪ ॥

ಗಗನಾತ್ಸ ಪರಿಭ್ರಷ್ಟಃ ಪಥಿ ವಾಯುನಿಷೇವಿತೇ ।
ಯದೃಚ್ಛಯಾ ನಿಪತಿತೋ ಯನ್ತ್ರಮುಕ್ತೋ ಯಥೋಪಲಃ ॥ ೪೫ ॥

ತತೋ ವಾಯುಪಥಾನ್ಮುಕ್ತಃ ಕಿಂಶುಕೋಜ್ಜ್ವಲವಿಗ್ರಹಃ ।
ನಿಪಪಾತಾ ನ್ತರಿಕ್ಷಾತ್ಸವೃತಃ ಕಿನ್ನರಚಾರಣೈಃ ॥ ೪೬ ॥

ಅಂಶುಭಿ ರ್ವೇಷ್ಟಿತೋ ಭಾನುಃ ಪ್ರವಿಭಾತ್ಯಂಬರಾತ್ಪತನ್ ।
ಅರ್ಧಂಪಕ್ವಂ ಯಥಾ ತಾಲಾತ್ಫಲಂ ಕಪಿಭಿರಾವೃತಂ ॥ ೪೭ ॥

---

ಸರ್ವಗತನಾದ ಶಂಕರನು ಆ ಮಾತನ್ನು ಕೇಳಿದ ಕೂಡಲೇ ಇವನನ್ನು ಕೆಳಕ್ಕೆ ಕೆಡವಿದವರಾರೆಂದು ಆಲೋಚಿಸಿದನು. ದೇವತೆಯಾದ ಸೂರ್ಯನೇ ಈ ನಗರವನ್ನು ಕೆಳಕ್ಕೆ ಕೆಡವಿದನೆಂದು ತಿಳಿದು ಕೋಪದಿಂದ ಜ್ವಲಿಸಿದನು.

೪೪-೪೭. ಕುಪಿತನಾದ ಆ ಶಂಕರನು ಕೆಂಗಣ್ಣಿನಿಂದ ನೋಡಿದೊಡನೆಯೇ ಸೂರ್ಯನು ಕೆಳಗೆ ಬಿದ್ದನು. ಆಕಾಶದಿಂದ ಕೆಳಗೆ ಭ್ರಷ್ಟನಾದ ಆ ಸೂರ್ಯನು ಆಕಸ್ಮಿಕವಾಗಿ ವಾಯುಮಂಡಲದಲ್ಲಿ ಬಿದ್ದು ತೂಗುಯಂತ್ರದಿಂದ ಕೆಳಕ್ಕೆಬಿದ್ದ ಕಲ್ಲಿನಂತೆ ತೋರಿದನು. ಅನಂತರ ವಾಯು ಮಾರ್ಗದಿಂದಲೂ ಕೆಳಕ್ಕೆ ಬೀಳುತ್ತಾ ಮುತ್ತುಗದ ಹೂವಿನಂತೆ ಕೆಂಪಾದ ದೇಹದಿಂದ ಕೆಳಕ್ಕೆ ಕಿನ್ನರ ಚಾರಣರೊಡನೆ ಬಿದ್ದನು. ಕಿರಣಗಳೊಡನೆ ಕೆಳಕ್ಕೆ ಬೀಳುತ್ತಿರುವ ಆ ಸೂರ್ಯನು ಕಪಿಗಳಿಂದ ಆವರಿಸಲ್ಪಟ್ಟ ಅರ್ಧಪಕ್ವವಾದ ತಾಳೇಹಣ್ಣು ತಾಳೆಮರದಿಂದ ಬೀಳುವಂತೆ ತೋರಿದನು.

ನಿಪತಸ್ವ ಹರಿಕ್ಷೇತ್ರೇ ಯದಿ ಶ್ರೇಯೋಭಿವಾಂಛಸಿ ।
ತತೋ ಬ್ರವೀತ್ಪತನ್ನೇವ ವಿವಸ್ವಾಂಸ್ತಾಂ ಸ್ತಪೋಧನಾ್ ॥ ೪೮ ॥

ಕಿಂ ತತ್ ಕ್ಷೇತ್ರಂ ಹರೇಃ ಪುಣ್ಯಂ ವದಧ್ವಂ ಶೀಘ್ರಮೇವಮೇ ।
ತಮೂಚು ರ್ಮುನಯುಸ್ಸೂರ್ಯಂ ಶೃಣುಕ್ಷೇತ್ರಂ ಮಹಾಫಲಂ ॥ ೪೯ ॥

ಸಾಂಪ್ರತಂ ವಾಸುದೇವಸ್ಯ ಭಾವಿತಂ ಶಙ್ಕರಸ್ಯ ಚ ।
ಯೋಗಶಾಯಿನಮಾರಭ್ಯ ಯಾವತ್ಕೇಶವದರ್ಶನಂ ।
ಏತತ್ಕ್ಷೇತ್ರಂ ಹರೇಃ ಪುಣ್ಯಂ ನಾಮ್ನಾ ವಾರಾಣಸೀಪುರೀ ॥ ೫೦ ॥

ತಚ್ಛ್ರುತ್ವಾ ಭಗವಾ್ ಭಾನುಃ ಭವನೇತ್ರಾಭಿತಾಪಿತಃ ।
ವರಣಾಯಾ ಸ್ತಥೈವಾಸ್ಯಾ ಸ್ತ್ವಂತರೆ ನಿಪಪಾತಹ ॥ ೫೧ ॥

ಭಾನೌ ತತಃ ಪ್ರದಹ್ಯತಿ ನಿಮಜ್ಯಾಸ್ಯಾಂ ಲುಲದ್ರವಿಃ ।
ವರಣಾಯಾಂ ಸಮಭ್ಯೇತ್ಯ ನಿಮಜ್ಜತಿ ಯಥೇಚ್ಛಯಾ ॥ ೫೨ ॥

---

೪೮-೫೦. ಆಗ ಅಲ್ಲಿರುವ ಋಷಿಗಳು ನಿನಗೆ ಶ್ರೇಯಸ್ಸಿನಲ್ಲಿ ಆಶೆಯಿದ್ದಲ್ಲಿ ಹರಿಕ್ಷೇತ್ರದಲ್ಲಿ ಬೀಳು ಎಂದು ಹೇಳಲಾಗಿ ಆ ಸೂರ್ಯನು ಬೀಳುತ್ತಿರುವಾಗಲೇ ಹರಿ ಕ್ಷೇತ್ರವಾವುದು, ಜಾಗ್ರತೆ ಹೇಳಿರಿ ಎಂದು ಆ ಋಷಿಗಳನ್ನೇ ಪ್ರಶ್ನೆ ಮಾಡಿದನು. ಅದಕ್ಕೆ ಆ ಋಷಿಗಳು ಅಂತಹ ಮಹಾಕ್ಷೇತ್ರವನ್ನು ಹೇಳುವೆವು ಕೇಳು ಎಂದುಪಕ್ರಮಿಸಿ ಈಗ ವಾಸುದೇವನಿಗೂ ಶಂಕರನಿಗೂ ಸಹ ಅಭಿಮಾನಕ್ಕೆ ಪಾತ್ರವಾದ ಯೋಗಶಾಯಿಯನ್ನು ಮೊದಲುಗೊಂಡು ಕೇಶವನ ದರ್ಶನ ಪರ್ಯಂತರವಿರುವ ವಾರಾಣಸೀ ಎಂದು ಪ್ರಸಿದ್ಧವಾದ ಹರಿಕ್ಷೇತ್ರವೇ ಸರ್ವೋತ್ತಮವಾದುದು. (ಪ್ರಯಾಗದಲ್ಲಿ ಯೋಗಶಾಯಿಯಾದ ನಾರಾಯಣನು ಇರುತ್ತಾನೆಂದೂ ಅವನ ಅಂಶವಾದ ಕೇಶವನು ವಾರಾಣಸಿಯಲ್ಲಿರುತ್ತಾನೆಂತಲೂ, ಯೋಗಶಾಯಿಯ ಪಾದಗಳಿಂದ ಹೊರಟ ವರಣ ಮತ್ತು ಅಸಿ ಎಂಬ ನದೀದ್ವಯದಿಂದ ಆವೃತವಾಗಿರುವ ಆ ಕ್ಷೇತ್ರವೇ 'ವಾರಾಣಸಿ' ಎಂದೂ ಪ್ರಸಿದ್ಧಿಪಡದಿದೆ ಎಂದು ತಾತ್ಪರ್ಯ) ಹೀಗೆ ಋಷಿಗಳು ಹೇಳಿದನಂತರ

೫೧-೫೨. ಋಷಿಗಳ ಈ ಮಾತನ್ನು ಕೇಳಿದ ಸೂರ್ಯನು ಶಂಕರನ ನೇತ್ರಾಗ್ನಿಯಿಂದ ತಪ್ತನಾಗಿ ವರಣ ಮತ್ತು ಅಸಿ ಈ ನದಿಗಳ ಮಧ್ಯದಲ್ಲಿ ಬಿದ್ದನು. ಅಗ್ನಿಜ್ವಾಲೆಯಿಂದ ತಪ್ತನಾದ ಸೂರ್ಯನು ಅಸಿ ನದಿಯಲ್ಲಿ ಮುಳುಗಿ ಒದ್ದಾಡಿ ವರಣಾ ನದಿಯಲ್ಲಿಯೂ ಇಚ್ಛೆ ಬಂದಂತೆ ಮುಳುಗಿ ಮುಳುಗಿ ತೇಲಾಡಿದನು. ತಿರುತಿರುಗಿ

ಭೂಯೋಽಸಿಂ ವರಣಾಂ ಭೂಯೋ ಭೂಯೋಽಪಿ ವರಣಾ ಮಸಿಂ ।
ಲುಲಂಸ್ತ್ರಿನೇತ್ರವಹ್ನ್ಯಾರ್ತೋ ಭ್ರಮತೇಽಲಾತಚಕ್ರವತ್ ॥೫೩॥

ಏತಸ್ಮಿನ್ನಂತರೇ ಬ್ರಹ್ಮನ್ ಋಷಯೋ ಯಕ್ಷರಾಕ್ಷಸಾಃ ।
ನಾಗಾ ವಿದ್ಯಾಧರಾಶ್ಚಾಪಿ ಪಕ್ಷಿಣೋಽಪ್ಸರಸ ಸ್ತಥಾ ॥ ೫೪ ॥

ಯಾವಂತೋ ಭಾಸ್ಕರರಥೇ ಭೂತಪ್ರೇತಾದಯಃ ಸ್ಥಿತಾಃ ।
ತಾವಂತೋ ಬ್ರಹ್ಮಸದನಂ ಗತಾ ವೇದಯಿತುಂ ಮುನೇ ॥ ೫೫ ॥

ತತೋ ಬ್ರಹ್ಮಾ ಸುರಪತಿಃ ಸುರೈಸ್ಸಾರ್ಧಂ ಸಮಭ್ಯಯಾತ್ ।
ರಮ್ಯಂ ಮಹೇಶ್ವರಾವಾಸಂ ಮಂದರಂ ರವಿಕಾರಣಾತ್ ॥ ೫೬ ॥

ಗತ್ವಾ ದೃಷ್ಟ್ವಾ ಚ ದೇವೇಶಂ ಶಂಕರಂ ಶೂಲಪಾಣಿನಂ ।
ಪ್ರಸಾದ್ಯ ಭಾಸ್ಕರಾರ್ಥಾಯ ವಾರಾಣಸ್ಯಾ ಮುಪಾನಯತ್ ॥ ೫೭ ॥

ತತೋ ದಿವಾಕರಂ ಭೂಯಃ ಪಾಣಿನಾದಾಯ ಶಂಕರಃ ।
ಕೃತ್ವಾ ನಾಮಾಸ್ಯ ಲೋಲೇತಿ ರಥಮಾರೋಪಯತ್ಪುನಃ ॥ ೫೮ ॥

---

ವರಣೆಯಲ್ಲಿಯೂ ಆಸಿಯಲ್ಲಿಯೂ ಒದ್ದಾಡುತ್ತಾ ಅಗ್ನಿಜ್ವಾಲೆಯಿಂದ ತಿರುಗುತ್ತಿರುವ ಕೊಳ್ಳಿಯಂತೆ ತೋರಿದನು.

೫೪-೫೬. ಈ ಸಮಯದಲ್ಲಿ ಅನೇಕ ಋಷಿಗಳು ಯಕ್ಷರಾಕ್ಷಸರು, ಸರ್ಪಗಳು, ವಿದ್ಯಾಧರರು, ಅಪ್ಸರೆಗಳು ಸೂರ್ಯನ ರಥದಲ್ಲಿದ್ದ ಭೂತಪ್ರೇತಗಳು ಎಲ್ಲರೂ ಸೇರಿ ಈ ವೃತ್ತಾಂತವನ್ನು ಚತುರ್ಮುಖ ಬ್ರಹ್ಮನಿಗೆ ಹೇಳಲು ಹೊರಟರು. ಇವರಿಂದ ಈ ವೃತ್ತಾಂತವನ್ನು ತಿಳಿದ ಚತುರ್ಮುಖನೂ ಕೂಡ ದೇವತೆಗಳೊಡನೆ ಸೂರ್ಯನ ವಿಚಾರದಲ್ಲಿ ಶಂಕರನನ್ನು ಸಮಾಧಾನಪಡಿಸಲು ಅವನ ಆವಾಸಸ್ಥಾನವಾದ ರಮ್ಯವಾದ ಮಂದರಪರ್ವತಕ್ಕೆ ಹೊರಟನು.

೫೭-೫೮. ಅಲ್ಲಿ ಹೋಗಿ ಶೂಲಪಾಣಿಯಾದ ಶಂಕರನನ್ನು ನೋಡಿ ಸೂರ್ಯನ ವಿಷಯದಲ್ಲಿ ಅವನನ್ನು ಪ್ರಸನ್ನನನ್ನಾಗಿ ಮಾಡಿ ವಾರಾಣಸಿಗೆ ಕರೆದುಕೊಂಡು ಬಂದನು. ಅನಂತರ ಪ್ರಸನ್ನನಾದ ಶಂಕರನು ಸೂರ್ಯನನ್ನು ತಾನೇ ಪುನಃ ಕೈಯ್ಯಿನಿಂದ ತೆಗೆದುಕೊಂಡು ಅವನಿಗೆ ಲೋಲ ಎಂದು ಹೆಸರಿಟ್ಟು ಅವನನ್ನು ರಥಕ್ಕೇರಿಸಿದನು. ಸೂರ್ಯನನ್ನು ರಥಕ್ಕೇರಿಸಿ ಅನುಗ್ರಹಿಸಿದ್ದಕ್ಕಾಗಿ ಚತುರ್ಮುಖನೂ ಸಹ ರುದ್ರಭಕ್ತನಾದ ಸುಕೇಶಿಯ ಸಮೀಪಕ್ಕೆ ಬಂದು ಅವನ ಬಂಧುಗಳೊ

ಆರೋಪಿತೇ ದಿನಕರೇ ಬ್ರಹ್ಮಾಭ್ಯೇತ್ಯ ಸುಕೇಶಿನಂ ।
ಸಬಾಂಧವಂ ಸನಗರಂ ಪುನರಾರೋಪಯದ್ದಿವಿ ॥ ೫೯ ॥

ಸಮಾರೋಪ್ಯ ಸುಕೇಶಿಂ ಚ ಪರಿಷ್ವಜ್ಯ ಚ ಶಂಕರಃ ।
ಪ್ರಣಮ್ಯ ಕೇಶವಂ ದೇವಂ ವೈರಾಜಂ ಸ್ವಗೃಹಂ ಗತಃ ॥ ೬೦ ॥

ಏವಂ ಪುರಾ ನಾರದ ಭಾಸ್ಕರೇಣ
ಪುರಂ ಸುಕೇಶೇರ್ಭುವಿ ಸನ್ನಿಪಾತಿತಂ ।
ದಿವಾಕರೋ ಭೂಮಿತಲೇ ಭವೇನ
ಕ್ಷಿಪ್ತಸ್ತು ದೃಷ್ಟ್ವಾ ನಲಸಂಪ್ರದಗ್ಧಃ ॥ ೬೧ ॥

ಆರೋಪಿತೋ ಭೂಮಿತಲಾದ್ಭವೇನ
ಭೂಯೋಽಪಿ ಭಾನುಃ ಪ್ರತಿ ಭಾಸನಾಯ ।
ಸ್ವಯಂಭುವಾ ಚಾಪಿ ನಿಶಾಚರೇಂದ್ರ
ಸ್ತ್ವಾರೋಪಿತಃ ಖೇಸಪುರಸ್ಸಬಂಧುಃ ॥ ೬೩ ॥

ಇತಿ ಶ್ರೀ ವಾಮನಪುರಾಣೇ ಸುಕೇಶಿಚರಿತೇ ಲೋಲಾರ್ಕಜನನಂ
ನಾಮ ಪಂಚದಶೋಽಧ್ಯಾಯಃ

---

ಡನೆ ಅವನ ನಗರವನ್ನು ಮೊದಲಿದ್ದಂತೆಯೇ ಆಕಾಶಕ್ಕೇರಿಸಿದನು. (ಬ್ರಹ್ಮ ಶಂಕರರಿಬ್ಬರೂ ಪರಸ್ಪರವಾಗಿ ಭಕ್ತರನ್ನುದ್ಧರಿಸಿ ಅವರನ್ನು ಪೂರ್ವಾವಸ್ಥೆಗೆ ತಂದರೆಂದು ತಾತ್ಪರ್ಯ.)

೬೦-೬೩. ಶಂಕರನೂ ಸಹ ಅನುಗ್ರಹಿಸಲ್ಪಟ್ಟ ಸುಕೇಶಿಯನ್ನು ಪ್ರೀತಿಯಿಂದ ಆಲಂಗಿಸಿ ಕಳುಹಿಸಿ ತಾನೂ ಸಹ ವಾರಾಣಸಿಯಲ್ಲಿ ಕೇಶವನನ್ನು ನಮಸ್ಕರಿಸಿ ವೈರಾಜವೆಂಬ ತನ್ನ ಗೃಹಕ್ಕೆ ಹೊರಟುಹೋದನು. ಎಲೈ ನಾರದನೇ ಈ ರೀತಿಯಾಗಿ ಸುಕೇಶಿಯ ನಗರವು ಸೂರ್ಯನಿಂದ ಕೆಳಕ್ಕೆ ತಳ್ಳಲ್ಪಟ್ಟಿತು. ಈ ಕಾರಣದಿಂದಲೇ ಸೂರ್ಯನೂ ಶಂಕರನಿಂದ ನೇತ್ರಾಗ್ನಿದಾಹದಿಂದ ಭೂಮಿಯಲ್ಲಿ ತಳ್ಳಲ್ಪಟ್ಟನು. ಪುನಃ ಪ್ರಸನ್ನನಾದ ಶಂಕರನಿಂದ ಸೂರ್ಯನು ಜಗತ್ಪ್ರಕಾಶಕ್ಕಾಗಿ ಮೇಲಕ್ಕೇರಿಸಲ್ಪಟ್ಟನು. ಅದಕ್ಕೆ ಪ್ರತಿಯಾಗಿ ಚತುರ್ಮುಖನಿಂದ ಸುಕೇಶಿಯೂ ಅವನ ನಗರ ಮತ್ತು ಬಂಧುಗಳೊಡನೆ ಮೇಲಕ್ಕೇರಿಸಲ್ಪಟ್ಟನು

ಇಲ್ಲಿಗೆ ಶ್ರೀ ವಾಮನಪುರಾಣದ ಸುಕೇಶಿಯ ಚರಿತ್ರೆಯಲ್ಲಿ ಲೋಲಾರ್ಕನ
ಉತ್ಪತ್ತಿಯೆಂಬ ಹದಿನೈದನೆಯ ಅಧ್ಯಾಯುವು ಮುಗಿದಿದೆ.

# ಅಧ್ಯಾಯಾರ್ಥ ಸಂಗ್ರಹ



ಈ ಅಧ್ಯಾಯದಲ್ಲಿ ಋಷಿಗಳ ಉಪದೇಶ ಹೊಂದಿ ನಗರಕ್ಕೆ ಬಂದ ಸುಕೇಶಿಯ ಆಜ್ಞೆಯಂತೆ ರಾಕ್ಷಸರೆಲ್ಲರೂ ಸದಾಚಾರ ಪರಾಯಣರಾಗಿ ಧರ್ಮಾನುಷ್ಠಾನದಿಂದ ವೃದ್ಧಿಹೊಂದಿದರು. ಇವರ ತೇಜಸ್ಸಿನಿಂದ ರಾಕ್ಷಸನಗರವು ಆಕಾಶದಲ್ಲಿ ತೇಜಸ್ವಿಯಾಗಿ ಜ್ವಲಿಸಿ ಸೂರ್ಯಚಂದ್ರರನ್ನೂ ಧಿಕ್ಕರಿಸಿತು. ಈ ಅವಮಾನವನ್ನು ಸಹಿಸಲಾರದೆ ಸೂರ್ಯನು ಧರ್ಮಿಷ್ಠರಾಗಿದ್ದರೂ ಸ್ವಧರ್ಮಭ್ರಂಶವೆಂಬ ಛಿದ್ರದಿಂದ ದೂಷಿತರಾಗಿರುವ ರಾಕ್ಷಸರನ್ನು ನಾಶಪಡಿಸಲು ಆಕಾಶದಲ್ಲಿದ್ದ ಅವರ ನಗರವನ್ನು ಕೆಳಕ್ಕೆ ಕೆಡವಿದನು. ರುದ್ರಭಕ್ತನಾದ ಸುಕೇಶಿಯು ತನ್ನ ಸ್ವಾಮಿಯನ್ನು ಚೀತ್ಕರಿಸಿ ಮೊರೆಯಿಟ್ಟನು. ಶಂಕರನೂ ಭಕ್ತನಿಗೆ ಉಂಟಾದ ತೊಂದರೆಯನ್ನು ನಿವಾರಿಸಲು ಸೂರ್ಯನನ್ನು ಕೆಳಕ್ಕೆ ಕೆಡವಿದನು. ಇದನ್ನು ತಿಳಿದ ಬ್ರಹ್ಮನು ಬಂದು ಶಂಕರನನ್ನು ಸಮಾಧಾನಪಡಿಸಿ ಅವನ ಭಕ್ತನಾದ ಸುಕೇಶಿಯನ್ನು ಉದ್ಧರಿಸಿ ತನ್ನ ಆಶ್ರಿತನಾದ ಸೂರ್ಯನನ್ನೂ ಶಂಕರನ ಕೈಯ್ಯಿಂದಲೇ ಪುನಃ ಉಜ್ಜೀವಗೊಳಿಸಿದನೆಂದು ಪ್ರತಿಪಾದಿಸಲಾಯಿತು. ಮೊದಲು ಮೂರನೇ ಅಧ್ಯಾಯದಲ್ಲಿ ಶಂಕರನ ಬ್ರಹ್ಮಹತ್ಯಾ ನಿವೃತ್ತಿಗೆ ಕಾರಣವಾದುದರಿಂದ ವಾರಾಣಸೀಕ್ಷೇತ್ರದ ಉತ್ಕರ್ಷವನ್ನು ವಿವರಿಸಲಾಗಿತ್ತು ಈಗಲೂ ಅಲ್ಲಿಯೇ ಬಿದ್ದ ಸೂರ್ಯನಿಗೆ ಪುನಃ ಸ್ವಸ್ಥಾನಪ್ರಾಪ್ತಿಯಾದುದರಿಂದ ಆ ಕ್ಷೇತ್ರದ ಮಾಹಾತ್ಮ್ಯವನ್ನು ದೃಢಪಡಿಸಿದಂತಾಯಿತು.



॥ ಶ್ರೀಃ ॥

# ಶ್ರೀವಾಮನಪುರಾಣಂ

## ಷೋಡಶೋಽಧ್ಯಾಯಃ

ನಾರದ ಉವಾಚ

ಯಾನೇತಾ ನ್ಭಗವಾನಾಹ ಕಾಮಿಭಿ ಶ್ಶಶಿನಂ ಪ್ರತಿ ।
ಆರಾಧನಾಯ ದೇವಾಭ್ಯಾಂ ಹರೀಶಾಭ್ಯಾಂ ವದಸ್ವತಾ್ ॥ ೧ ॥

ಪುಲಸ್ತ್ಯ ಉವಾಚ

ಶೃಣುಷ್ವ ಕಾಮಿಭಿಃ ಪ್ರೋಕ್ತಾನ್ವ್ರತಾನ್ಪುಣ್ಯಾ್ ಕಲಿಪ್ರಿಯ ।
ಆರಾಧನಾಯ ಶರ್ವಸ್ಯ ಕೇಶವಸ್ಯ ಚ ಧೀಮತಃ ॥ ೨ ॥

ಯದಾಷಾಢೀಂ ರವಿಃ ಪ್ರಾಪ್ಯ ವ್ರಜತೇ ಚೋತ್ತರಾಯಣಾತ್ ।
ತದಾ ಸ್ವಪಿತಿ ದೇವೇಶೋ ಭೋಗಿಭೋಗೇ ಶ್ರಿಯಃಪತಿಃ ॥ ೩ ॥

ಪ್ರತಿಸುಪ್ತೆ ವಿಭೌ ತಸ್ಮಿ್‌ದೇವಾ ಗಂಧರ್ವಗುಹ್ಯಕಾಃ ।
ದೇವಾನಾಂ ಮಾತರಶ್ಚಾಪಿ ಪ್ರಸುಪ್ತಾಶ್ಚಾ ಪ್ಯನುಕ್ರಮಾತ್ ॥ ೪ ॥

---

## ಹದಿನಾರನೆಯ ಅಧ್ಯಾಯವು

೧-೪. ನಾರದರು ಕೇಳುತ್ತಾರೆ, ಎಲೈ, ಮಹರ್ಷಿಯೇ ಹರಿಹರರನ್ನು ಆರಾಧಿಸಲು ಚಂದ್ರನು ವ್ರತವನ್ನು ಮಾಡಿದನೆಂದು ಕಾಮುಕರು ಆಡಿಕೊಂಡ ಊಪಾಪೋಹಗಳನ್ನು ತಾವು ಹೇಳಿದಿರಿ. ಆ ವ್ರತಗಳಾವುವು ಎಂದು ನಾರದರು ಮಾಡಿದ ಪ್ರಶ್ನೆಗೆ ಪುಲಸ್ತ್ಯರು · ಹೇಳುತ್ತಾರೆ. ಎಲೈ ನಾರದನೇ, ಹರಿಹರರ ಆರಾಧನಕ್ಕಾಗಿ ಚಂದ್ರನು ಮಾಡಿದನೆಂದು ಕಾಮಿಗಳು ಹೇಳಿಕೊಂಡ ವ್ರತಗಳನ್ನು ಹೇಳುತ್ತೇನೆ, ಕೇಳು. ಸೂರ್ಯನು ಉತ್ತರಾಯಣವನ್ನು ಅತಿಕ್ರಮಿಸಿ ಆಷಾಢಮಾಸವನ್ನು ಹೊಂದಿ ಯಾವಾಗ ಸಂಚರಿಸುತ್ತಾನೆಯೋ, ಆ ಸಮಯದಲ್ಲಿ ಶ್ರಿಯಃಪತಿಯಾದ ನಾರಾಯಣನು ಶೇಷಶಯನದಲ್ಲಿ ಮಲಗುತ್ತಾನೆ. ಅವನು ಹಾಗೆ ಮಲಗಿದ ಕಾಲದಲ್ಲಿ ದೇವತೆಗಳು ಗಂಧರ್ವಗುಹ್ಯಕರು ದೇವತೆಗಳ ತಾಯಿಯರು ಎಲ್ಲರೂ ಕ್ರಮವಾಗಿ ಮಲಗುತ್ತಾರೆ.

## ನಾರದ ಉವಾಚ

ಕಥಯಸ್ವ ಸುರಾದೀನಾಂ ಶಯನೇ ವಿಧಿಮುತ್ತಮಂ ।
ಸರ್ವಾನನುಕ್ರಮೇಣೈವ ಪುರಸ್ಕೃತ್ಯ ಜನಾರ್ದನಂ ॥ ೫ ॥

## ಪುಲಸ್ತ್ಯ ಉವಾಚ

ಮಿಥುನಾಭಿಮುಖೇ ಸೂರ್ಯೇ ಶುಕ್ಲಪಕ್ಷೇ ತಪೋಧನ ।
ಏಕಾದಶ್ಯಾಂ ಜಗತ್ಸ್ವಾಮೀ ಶಯನಂ ಪರಿಕಲ್ಪತೇ ॥ ೬ ॥

ಶೇಷಾಹಿಭೋಗಪರ್ಯಂಙ್ಕಂ ಕೃತ್ವಾ ಸಂಪೂಜ್ಯ ಕೇಶವಂ ।
ಕೃತ್ವಾ ಪವಿತ್ರಕಂ ಚೈವ ಸಮ್ಯಕ್ ಸಂಪೂಜ್ಯ ವೈ ದ್ವಿಜಾನ್ ॥ ೭ ॥

ಅನುಜ್ಞಾಂ ಬ್ರಾಹ್ಮಣೇಭ್ಯಶ್ಚ ದ್ವಾದಶ್ಯಾಂ ಪ್ರಯತಶ್ಶುಚಿಃ ।
ಲಬ್ಧ್ವಾ ಪೀತಾಂಬರಧರಃ ಸ್ವಸ್ಥೋ ನಿದ್ರಾಂ ಸಮಾನಯೇತ್ ॥ ೮ ॥

ತ್ರಯೋದಶ್ಯಾಂ ತತಃ ಕಾಮಃ ಸ್ವಪತೇ ಶಯನೇ ಶುಭೇ ।
ಕದಂಬಾನಾಂ ಸುಗಂಧಾನಾಂ ಕುಸುಮೈಃ ಪರಿಕಲ್ಪಿತೆ ॥ ೯ ॥

---

೫-೮. ನಾರದರು ಕೇಳುತ್ತಾರೆ, ದೇವತೆಗಳು ನಾರಾಯಣನನ್ನು ಅನುಸರಿಸಿ ಶಯನ ಹೊಂದುವ ವಿಷಯದಲ್ಲಿ ಯಾವ ವಿಧಿ ನಿಯಮವನ್ನು ಅನುಸರಿಸುತ್ತಾರೆ, ಹೇಳಬೇಕು. ಇದಕ್ಕೆ ಪುಲಸ್ತ್ಯರು ಹೇಳುತ್ತಾರೆ, ಎಲೈ ತಪೋನಿಧಿಯೇ, ಸೂರ್ಯನು ಮಿಥುನರಾಶಿಗೆ ಅಭಿಮುಖನಾದಾಗ ಶುಕ್ಲಪಕ್ಷದ ಏಕಾದಶಿಯಲ್ಲಿ ಭಗವಂತನು ಶಯನ ವನ್ನುಪಕ್ರಮಿಸುತ್ತಾನೆ, ಆ ಸಮಯದಲ್ಲಿ ಶೇಷಶಾಯಿಯಾದ ಭಗವಂತನನ್ನು ಪವಿತ್ರ ವನ್ನಿಟ್ಟು ಚನ್ನಾಗಿ ಅರ್ಚಿಸಿ ಬ್ರಾಹ್ಮಣರನ್ನೂ ಪೂಜಿಸಿ ಅವರ ಅನುಜ್ಞೆಯಿಂದ ದ್ವಾದಶೀತಿಥಿಯಲ್ಲಿ ಪೀತಾಂಬರಧಾರಿಯಾಗಿ ಸುಖದಿಂದ ನಿದ್ರಿಸಬೇಕು. (ಇದು ಸಂಗ್ರಹ, ಮುಂದೆ ವಿಸ್ತಾರವಾಗಿ ಹೇಳುತ್ತಾರೆ.)

೯-೧೧. ಅನಂತರ ತ್ರಯೋದಶಿ ತಿಥಿಯಲ್ಲಿ ಸುಗಂಧಿಗಳಾದ ಕದಂಬಕುಸುಮ ಗಳಿಂದ ಮಾಡಲ್ಪಟ್ಟ ಹಾಸಿಗೆಯಲ್ಲಿ ಮನ್ಮಥನು ಶಯನಿಸುತ್ತಾನೆ. ಅನಂತರ ಚತುರ್ದಶಿ ತಿಥಿಯಲ್ಲಿ ಸುಖಕರವಾಗಿಯೂ, ಶೀತಲವಾಗಿಯೂ ಇರುವ ಸುವರ್ಣ

**ಚತುರ್ದಶ್ಯಾಂ ತತೋ ಯಕ್ಷಾಃ ಸ್ವಪಂತಿ ಸುಖಶೀತಲೆ ।**
**ಸೌವರ್ಣಪಂಕಜಕೃತೆ ಸುಖಾಸ್ತೀರ್ಣೋಪಧಾನಕೆ ॥ ೧೦ ॥**

**ಪೂರ್ಣಮಾಸ್ಯಾ ಮುಮಾನಾಥಃ ಸ್ವಪತೆ ಚರ್ಮಸಂಸ್ತರೆ ।**
**ವೈಯಾಘ್ರೇ ಚ ಜಟಾಭಾರಂ ಸಮುದ್ಗ್ರಂಥ್ಯಾನ್ಯಚರ್ಮಣಾ ॥ ೧೧ ॥**

**ತತೋ ದಿವಾಕರೋ ರಾಶಿಂ ಸಂಪ್ರಯಾತಿ ಚ ಕರ್ಕಟಿಂ ।**
**ತತೋಽಮರಾಣಾಂ ರಜನೀ ಭವತೇ ದಕ್ಷಿಣಾಯನಂ ॥ ೧೨ ॥**

**ಬ್ರಹ್ಮಾ ತಥಾ ಪ್ರತಿಪದಿ ನೀಲೋತ್ಪಲಮಯೇಽನಘ ।**
**ತಲ್ಪೆ ಸ್ವಪಿತಿ ಲೋಕಾನಾಂ ದರ್ಶಯನ್ಮಾರ್ಗಮುತ್ತಮಂ ॥ ೧೩ ॥**

**ವಿಶ್ವಕರ್ಮಾ ದ್ವಿತೀಯಾಯಾಂ ತೃತೀಯಾಯಾಂ ಗಿರೇಸ್ಸುತಾ ।**
**ವಿನಾಯಕ ಶ್ಚತುರ್ಥ್ಯಾಂತು ಪಞ್ಚಮ್ಯಾಮಪಿ ಧರ್ಮರಾಟ್ ॥ ೧೪ ॥**

**ಷಷ್ಠ್ಯಾಂ ಸ್ಕಂದಃ ಪ್ರಸ್ವಪಿತಿ ಸಪ್ತಮ್ಯಾಂ ಭಗವಾನ್ ರವಿಃ ।**
**ಕಾತ್ಯಾಯನೀ ತಥಾಷ್ಟಮ್ಯಾಂ ನವಮ್ಯಾಂ ಕಮಲಾಲಯಾ ॥ ೧೫ ॥**

---

ಕಮಲಗಳಿಂದ ಮಾಡಲ್ಪಟ್ಟ ಸುಖಕರವಾದ ತಲೆದಿಂಬುಳ್ಳ ಹಾಸಿಗೆಯಲ್ಲಿ ಯಕ್ಷರು ಮಲಗುತ್ತಾರೆ. ಅದರ ಮುಂದಿನ ಪೂರ್ಣಿಮೆಯಲ್ಲಿ ಉಮಾಪತಿಯಾದ ಶಂಕರನು ಹುಲಿಯ ಚರ್ಮದ ಹಾಸಿಗೆಯಲ್ಲಿ ಮತ್ತೊಂದು ವ್ಯಾಘ್ರಚರ್ಮದಿಂದ ಜಟಾಭಾರ ವನ್ನು ಕಟ್ಟಿಕೊಂಡು ಮಲಗುತ್ತಾನೆ.

೧೨-೧೪. ಅನಂತರ ಸೂರ್ಯನು ಕರ್ಕಾಟಕರಾಶಿಗೆ ಹೊರಡುತ್ತಾನೆ. ಆಗ ದೇವತೆಗಳಿಗೆ ದಕ್ಷಿಣಾಯನವಾಗುತ್ತದೆ. ಹಾಗೆಯೇ ಚತುರ್ಮುಖನು ಪ್ರಪಂಚಕ್ಕೆ ಮಾರ್ಗದರ್ಶಿಯಾಗಿ ನೈದಿಲೆಗಳ ಹಾಸಿಗೆಯಲ್ಲಿ ಮಲಗುತ್ತಾನೆ. ಹಾಗೆಯೇ ವಿಶ್ವಕರ್ಮನು ದ್ವಿತೀಯಾತಿಥಿಯಲ್ಲಿಯೂ, ಪಾರ್ವತಿಯು ತೃತೀಯಾತಿಥಿಯಲ್ಲಿಯೂ ವಿನಾಯಕನು ಚತುರ್ಥೀತಿಥಿಯಲ್ಲಿಯೂ, ಯಮನು ಪಂಚಮಿತಿಥಿಯಲ್ಲಿಯೂ ಮಲಗುತ್ತಾರೆ.

೧೫-೧೭. ಷಷ್ಠೀತಿಥಿಯಲ್ಲಿ ಕುಮಾರಸ್ವಾಮಿಯೂ, ಸಪ್ತಮಿಯಲ್ಲಿ ಸೂರ್ಯನೂ ಅಷ್ಟಮಿಯಲ್ಲಿ ಕಾತ್ಯಾಯನೀದೇವಿಯೂ, ನವಮಿಯಲ್ಲಿ ಲಕ್ಷ್ಮೀದೇವಿಯೂ, ದಶಮಿ

ದಶಮ್ಯಾಂ ಭುಜಗೇಂಧ್ರಾಶ್ಚ ಸ್ವಪನ್ತೆ ವಾಯುಭೋಜನಾಃ।
ಏಕಾದಶ್ಯಾಂತು ಕೃಷ್ಣಾಯಾಂ ಸಾಧ್ಯಾ ಬ್ರಹ್ಮ ಸ್ವಪಂತಿಚ ॥ ೧೬ ॥

ಏಷಕ್ರಮಸ್ತೆ ಗದಿತೊ ನಭಾದೌ ಸ್ವಪತಾಂ ಮುನೆ।
ಸ್ವಪತ್ಸು ತತ್ರದೇವೇಷು ಪ್ರಾವೃಟ್ಕಾಲಸ್ಸಮಾಯಯೌ ॥ ೧೭ ॥

ಬಕಾ ಸ್ಸಮಂ ಬಲಾಕಾಭಿ ರಾರೋಹನ್ತಿ ನಗೊತ್ತಮಾನ್।
ವಾಯಸಾಶ್ಚಾಪಿ ಕುರ್ವನ್ತಿ ನೀಡಾನಿ ಋಷಿಪುಂಗವ ॥ ೧೮ ॥

ವಾಯಸ್ಯಶ್ಚ ಸ್ವಪಂತ್ಯೇವ ಋತೌಗರ್ಭಭರಾಲಸಾಃ।
ಯಸ್ಯಾಂ ತಿಥೌ ಪ್ರಸ್ವಪಿತಿ ವಿಶ್ವಕರ್ಮಾ ಪ್ರಜಾಪತಿಃ ॥ ೧೯ ॥

ದ್ವಿತೀಯಾ ಸಾ ಶುಭಾ ಪುಣ್ಯಾ ಸುಪುಣ್ಯಾ ಶಯನೋದಿತಾ।
ತಸ್ಯಾಂ ತಿಥಾವರ್ಚಯಿತ್ವಾ ಶ್ರೀವತ್ಸಾಙ್ಕಂ ಚತುರ್ಭುಜಂ ॥ ೨೦ ॥

---

ಯಲ್ಲಿ ಸರ್ಪಗಳೂ, ಕೃಷ್ಣೈಕಾದಶಿಯಲ್ಲಿ ಸಾಧ್ಯರೂ ಮಲಗುತ್ತಾರೆ. ಈ ಪ್ರಕಾರ ವರ್ಷರ್ತುವಿನಲ್ಲಿ ಶಯನಮಾಡುವ ದೇವತೆಗಳ ಕ್ರಮವನ್ನು ಹೇಳಿದ್ದಾಯಿತು. ಹೀಗೆ ದೇವತೆಗಳು ಮಲಗುವ ಕಾಲವೇ ಪ್ರಾವೃಟ್ಕಾಲವೆಂದು ಹೇಳುತ್ತಾರೆ.

೧೮-೧೯. ಇಂತಹ ವರ್ಷಾಕಾಲದಲ್ಲಿ ಕೊಕ್ಕರೆಗಳೆಲ್ಲವೂ ಬಲಾಕೆಗಳೊಡನೆ ಬೆಟ್ಟದ ಮೇಲಕ್ಕೆ ಹತ್ತಿ ವಿಹರಿಸುತ್ತವೆ. ಕಾಗೆಗಳೆಲ್ಲವೂ ಗೂಡುಗಳನ್ನು ಕಟ್ಟುತ್ತವೆ. ಹೆಣ್ಣುಕಾಗೆಗಳು ಗರ್ಭಹೊಂದಿ ಆಲಸ್ಯದಿಂದ ಮಲಗುತ್ತವೆ. ಯಾವ ದ್ವಿತೀಯಾ ತಿಥಿಯಲ್ಲಿ ವಿಶ್ವಕರ್ಮಪ್ರಜಾಪತಿಯು ಮಲಗುತ್ತಾನೆಯೋ ಆ ತಿಥಿಯು ಶುಭವಾದ ಪುಣ್ಯಶಯನವೆಂಬ ಅಭಿಧಾನವುಳ್ಳ ತಿಥಿ ಎಂದು ಹೇಳಲ್ಪಟ್ಟಿದೆ.

೨೦-೨೩. ಆ ದ್ವಿತೀಯಾತಿಥಿಯಲ್ಲಿ ಚತುರ್ಭುಜನಾದ ವಿಷ್ಣುವನ್ನು ಲಕ್ಷ್ಮೀ ದೇವಿಯೊಡನೆ ಮಂಚದಲ್ಲಿ ಬಿಜಮಾಡಿಸಿ ಗಂಧಪುಷ್ಪಾದಿಗಳಿಂದ ಪೂಜಿಸಬೇಕು. ಸುಗಂಧಿಗಳಾಗಿಯೂ ಸ್ವಾದುಗಳಾಗಿಯೂ ಇರುವ ಹಣ್ಣುಗಳನ್ನು ಮಂಚದಲ್ಲಿಟ್ಟು

**ಪರ್ಯಙ್ಕಸ್ಥಂ ಸಮಂಲಕ್ಷ್ಮ್ಯಾ ಗಂಧಪುಷ್ಪಾದಿಭಿ ರ್ಮ್ಮನೇ ।**
**ತತೋ ದೇವಾಯ ಶಯ್ಯಾಯಾಂ ಫಲಾನಿ ಪ್ರಕ್ಷಿಪೇತ್ಸುಧೀಃ**
**ಸುರಭೀಣಿ ನಿವೇದ್ಯೇತ್ಥಂ ವಿಜ್ಞಾಪ್ಯೋ ಮಧುಸೂದನಃ । ॥ ೨೧ ॥**

**ಯಥಾಹಿ ಲಕ್ಷ್ಮ್ಯಾ ನವಿಯುಜ್ಯಸೇತ್ವಂ**
**ತ್ರಿವಿಕ್ರಮಾ ನಂತಜಗನ್ನಿವಾಸ ।**
**ತಥಾ ತ್ವಶೂನ್ಯಂ ಶಯನಂ ಸದೈವ**
**ತ್ವಸ್ಮಾಕಮೇವೇಹ ತವ ಪ್ರಸಾದಾತ್ ॥ ೨೨ ॥**

**ಯಥಾತ್ವಶೂನ್ಯಂ ತವ ದೇವ ಲಬ್ಧಂ**
**ಸಮಂಹಿ ಲಕ್ಷ್ಮ್ಯಾ ಶಯನಂ ಸುರೇಶ ।**
**ಸತ್ಯೇನ ತೇನಾಮಿತವೀರ್ಯ ವಿಷ್ಣೋ**
**ಗಾರ್ಹಸ್ಥ್ಯನಾಶೋ ನ ಮಮಾಸ್ತು ದೇವ ॥ ೨೩ ॥**

**ಇತ್ಯುಚ್ಚಾರ್ಯ ಚ ದೇವೇಶಂ ಪ್ರಸಾದ್ಯ ಚ ಪುನಃ ಪುನಃ ।**
**ನಕ್ತಂ ಭುಂಜೀತ ದೇವರ್ಷೇ ತೈಲಕ್ಷಾರವಿವರ್ಜಿತಂ ॥ ೨೪ ॥**

---

ನೈವೇದ್ಯ ಸಮರ್ಪಣೆಮಾಡಿ ಆ ಮಧುಸೂದನನನ್ನು ಹೀಗೆ ಪ್ರಾರ್ಥಿಸಬೇಕು: ಎಲೈ, ಜಗನ್ನಿವಾಸನೇ, ತ್ರಿವಿಕ್ರಮನೇ, ಅನಂತಗುಣಾಕರನೇ, ನೀನು ಹೇಗೆ ಲಕ್ಷ್ಮಿಯಿಂದ ವಿಯೋಗಹೊಂದದೆ ಸಂತುಷ್ಟನಾಗಿರುವೆಯೋ, ಹೇಗೆ ನಿನ್ನ ಶಯನವು ಲಕ್ಷ್ಮಿಯಿಂದ ಅಶೂನ್ಯವಾಗಿದೆಯೋ ಹಾಗೆಯೇ ನನಗೂ ನಿನ್ನ ಅನುಗ್ರಹದಿಂದ ಕಾಂತೆಯೊಡನೆ ವಿಯೋಗವಿಲ್ಲದೆ ಅಶೂನ್ಯಶಯನತೆಯು ಉಂಟಾಗಲಿ. ಎಲೈ ಸುರೇಶನೇ, ನೀನು ಹೇಗೆ ಲಕ್ಷ್ಮಿಯೊಡನೆ ಅಶೂನ್ಯಶಯನನಾಗಿದ್ದರೂ ಸತ್ಯಸಂಧನಾಗಿ ಗಾರ್ಹಸ್ಥ್ಯಲೋಪವನ್ನು ಹೊಂದುವದಿಲ್ಲವೋ ಹಾಗೆಯೇ ನಾನೂ ಅಶೂನ್ಯಶಯನನಾಗಿದ್ದರೂ ಗಾರ್ಹಸ್ಥ್ಯನಾಶವನ್ನು ಹೊಂದದಿರುವಂತೆ ನೀನು ಅನುಗ್ರಹಿಸು. ಎಲೈ, ಅಮಿತವೀರ್ಯನೇ ನಿನಗೆ ಅನಂತ ನಮಸ್ಕಾರಗಳು.

೨೪-೨೬. ಈರೀತಿ ಉಚ್ಚರಿಸಿ ಪುನಃಪುನಃ ಅವನನ್ನು ಪ್ರಾರ್ಥಿಸಿ ಅನುಗ್ರಹ ಹೊಂದಿ ಹಗಲು ಉಪವಾಸವಿದ್ದು ರಾತ್ರಿಯಲ್ಲಿ ತೈಲಕ್ಷಾರ ಇವುಗಳನ್ನು ಬಿಟ್ಟು ಊಟಮಾಡಬೇಕು. ಮಾರನೇದಿವಸ ಬ್ರಾಹ್ಮಣಶ್ರೇಷ್ಠರಿಗೆ ಫಲದಾನ ಮಾಡ

ದ್ವಿತೀಯೇಹ್ನಿ ದ್ವಿಜಾಗ್ರ್ಯಾಯ ಫಲಂ ದದ್ಯಾದ್ವಿಚಕ್ಷಣಃ ।
ಲಕ್ಷ್ಮೀಧರಃ ಪ್ರೀಯತಾಂ ಮೇ ಇತ್ಯುಚ್ಚಾರ್ಯ ನಿವೇದಯೇತ್ ॥ ೨೫ ॥

ಅನೇನ ತು ವಿಧಾನೇನ ಚಾತುರ್ಮಾಸ್ಯವ್ರತಂ ಚರೇತ್ ।
ಯಾವತ್ ವೃಶ್ಚಿಕರಾಶಿಸ್ಥಃ ಪ್ರತಿಭಾತಿ ದಿವಾಕರಃ ॥ ೨೬ ॥

ತತೋ ವಿಬುಧ್ಯಂತಿ ಸುರಾಃ ಕ್ರಮಶಃ ಕ್ರಮಶೋ ಮುನೇ ।
ತುಲಾಸ್ಥೇ ತು ಹರಿಃ ಪೂರ್ವಂ ಕಾಮಃ ಪಶ್ಚಾದ್ವಿಬುಧ್ಯತೇ ॥ ೨೭ ॥

ತತ್ರಪ್ರದಾನಂ ದ್ವಿತೀಯಾಯಾಂ ಮೂರ್ತಿರ್ಲಕ್ಷ್ಮೀಧರಸ್ಯ ಚ ।
ಶಯ್ಯಾ ಚಾಸ್ತರಣೋಪೇತಾ ಯಥಾ ವಿಭವಮಾತ್ಮನಃ ॥ ೨೮ ॥

ಏಷವ್ರತಸ್ತು ಪ್ರಥಮಃ ಪ್ರೋಕ್ತಸ್ತವ ಮಹಾಮುನೇ ।
ಯಸ್ಮಿಂಶ್ಚೀರ್ಣೇ ವಿಯೋಗಸ್ತು ನಭವೇದಿಹ ಕಸ್ಯಚಿತ್ ॥ ೨೯ ॥

ನಭಸ್ಯೇ ಮಾಸಿ ಚ ತಥಾ ಯಾ ಸಾ ಕೃಷ್ಣಾಷ್ಟಮೀ ಶುಭಾ ।
ಯುಕ್ತಾ ಮೃಗಶಿರೇಣೈವ ಸಾತು ಕಾಲಾಷ್ಟಮೀ ಸ್ಮೃತಾ ॥ ೩೦ ॥

---

ಬೇಕು. ಆರೀತಿ ದಾನಮಾಡುವಕಾಲದಲ್ಲೆಲ್ಲಾ ಲಕ್ಷ್ಮೀಧರನು ಇದರಿಂದ ಪ್ರೀತನಾಗಲಿ ಎಂದು ಉಚ್ಚರಿಸಬೇಕು. ಈ ವಿಧಾನವನ್ನು ಅನುಸರಿಸಿ ಚಾತುರ್ಮಾಸ್ಯ ವ್ರತವನ್ನು ನಡೆಯಿಸಬೇಕು. ಸೂರ್ಯನು ವೃಶ್ಚಿಕರಾಶಿಗೆ ಬಂದೊಡನೆಯೇ ದೇವತೆಗಳೆಲ್ಲರೂ ನಿದ್ರೆಯಿಂದ ಕ್ರಮವಾಗಿ ಪ್ರಬೋಧಹೊಂದುತ್ತಾರೆ (ಎಚ್ಚರಗೊಳ್ಳುತ್ತಾರೆ.)

೨೭-೨೯. ಸೂರ್ಯನು ತುಲಾರಾಶಿಯಲ್ಲಿರುವಾಗ ವಿಷ್ಣುವು ಮೊದಲು ಎಚ್ಚರಗೊಳ್ಳುತ್ತಾನೆ. ಅನಂತರ ಕಾಮನು ಎಚ್ಚರಗೊಳ್ಳುತ್ತಾನೆ. ಆ ದ್ವಿತೀಯಾ ತಿಥಿಯಲ್ಲಿ ತನ್ನ ವೈಭವಕ್ಕೆ ತಕ್ಕಂತೆ ವಿಷ್ಣುವಿನ ಮೂರ್ತಿಯನ್ನೂ ಹೊದ್ದಿಕೆ, ದಿಂಬು ಮೊದಲಾದ ಪರಿಕರಗಳಿಂದ ಕೂಡಿದ ಹಾಸಿಗೆಯನ್ನೂ ದಾನಮಾಡಬೇಕು. ಎಲ್ಲಾ ವ್ರತಗಳಲ್ಲೂ ಇದು ಉತ್ತಮವಾದ ವ್ರತವು. ಈ ವ್ರತವನ್ನು ನಡೆಸಿದವನಿಗೆ ಈ ಜನ್ಮದಲ್ಲಿ ವಿಯೋಗವೇ ಉಂಟಾಗುವುದಿಲ್ಲ.

೩೦-೩೨. ಭಾದ್ರಪದಮಾಸದ ಕೃಷ್ಣಾಷ್ಟಮಿಯು ಶುಭಕರವಾದದ್ದು. ಮೃಗಶಿರಾನಕ್ಷತ್ರದಿಂದ ಕೂಡಿದ ಆ ಅಷ್ಟಮಿಯು ಕಾಲಾಷ್ಟಮಿ ಎಂದು ಪ್ರಸಿದ್ಧಿಹೊಂದಿದೆ.

ತಸ್ಯಾಂ ಸರ್ವೇಷು ಲಿಂಗೇಷು ತಿಥೌ ಸ್ವಪಿತಿ ಶಂಕರಃ ।
ವಸತೇ ಸನ್ನಿಧಾನೇತು ತತ್ರ ಪೂಜಾಕ್ಷಯಾ ಸ್ಮೃತಾ ॥ ೩೧ ॥

ತತ್ರ ಸ್ನಾಯಿೂತ ವೈ ವಿದ್ವಾನ್ ಗೋಮೂತ್ರೇಣ ಜಲೇನ ಚ ।
ಸ್ನಾತಃ ಸಂಪೂಜಯೇತ್ಪುಷ್ಪೈರ್ದತ್ತೂರಸ್ಯ ತ್ರಿಲೋಚನಂ ॥ ೩೨ ॥

ಧೂಪಂ ಕೇಸರನಿರ್ಯಾಸಂ ನೈವೇದ್ಯಂ ಮಧುಸರ್ಪಿಷೀ ।
ಪ್ರೀಯತಾಂ ಮೇ ವಿರೂಪಾಕ್ಷಸ್ತ್ವಿತ್ಯುಚ್ಚಾರ್ಯ ಚ ದಕ್ಷಿಣಾಂ ॥ ೩೩ ॥

ವಿಪ್ರಾಯ ದದ್ಯಾನ್ನೈವೇದ್ಯಂ ಸಹಿರಣ್ಯಂ ದ್ವಿಜೋತ್ತಮ ।
ತದ್ವದಾಶ್ವಯುಜೇ ಮಾಸಿ ಉಪವಾಸೀ ಜಿತೇಂದ್ರಿಯಃ ॥ ೩೪ ॥

ನವಮ್ಯಾಂ ಗೋಮಯಸ್ನಾನಂ ಕುರ್ಯಾತ್‌ಪೂಜಾಂ ತು ಪಂಕಜೈಃ ।
ಧೂಪಯೇತ್ಸರ್ಜನಿರ್ಯಾಸೈಃ ನೈವೇದ್ಯಂ ಮಧುಮೋದಕೈಃ ॥ ೩೫ ॥

---

ಆ ಅಷ್ಟಮಿಯಲ್ಲಿ ಎಲ್ಲಾ ಲಿಂಗಗಳಲ್ಲೂ ಶಂಕರನು ಸಾನ್ನಿಧ್ಯವನ್ನು ಹೊಂದುತ್ತಾನೆ. ಅವನು ಸನ್ನಿಹಿತನಾಗಿರುವಾಗ ಪೂಜೆಯು ಅಕ್ಷಯವಾದ ಫಲದಾಯಕವು. ಆ ದಿವಸ ವ್ರತಾಚರಣದಲ್ಲಿ ಆಶೆಯುಳ್ಳ ಪಂಡಿತನು ಗೋಮೂತ್ರದಿಂದಲೂ ಜಲದಿಂದಲೂ ಸ್ನಾನಮಾಡಬೇಕು. ಸ್ನಾನಮಾಡಿ ದತ್ತೂರಿ ಹೂವುಗಳಿಂದ ಶಂಕರನನ್ನು ಪೂಜಿಸ ಬೇಕು.

೩೩-೩೫. ನಾಗಕೇಸರವೃಕ್ಷದ ಮೇಣದಿಂದ ಧೂಪ, ಮತ್ತು ಜೇನುತುಪ್ಪ, ತುಪ್ಪ, ಇವುಗಳ ನೈವೇದ್ಯ. ಇವುಗಳಿಂದ ಪೂಜಿಸಿ ನನ್ನ ವಿಷಯದಲ್ಲಿ ವಿರೂಪಾಕ್ಷನು ಪ್ರೀತನಾಗಲಿ ಎಂದು ಹೇಳಿ ಹಿರಣ್ಯಸಹಿತವಾದ ನೈವೇದ್ಯವನ್ನು ದಕ್ಷಿಣೆಯೊಡನೆ ಬ್ರಾಹ್ಮಣನಿಗೆ ದಾನಮಾಡಬೇಕು. ಹಾಗೆಯೇ ಆಶ್ವಯುಜಮಾಸದಲ್ಲೂ ಉಪವಾಸಿ ಯಾಗಿ ಜಿತೇಂದ್ರಿಯನಾಗಿದ್ದು ನವಮೀ ತಿಥಿಯಲ್ಲಿ ಗೋಮಯದಿಂದ ಸ್ನಾನಮಾಡಿ ಕಮಲಗಳಿಂದಲೂ ಸಲ್ಲಕೀಮಡ್ಡಿಯ ಧೂಪದಿಂದಲೂ ಪೂಜಿಸಿ ಮಧು ಮತ್ತು ಕಡಬು ಇವನ್ನು ನೈವೇದ್ಯವನ್ನಾಗಿ ಸಮರ್ಪಿಸಬೇಕು.

ಕೃತ್ವೋಪವಾಸ ಮಷ್ಟಮ್ಯಾಂ ನವಮ್ಯಾಂ ಸ್ನಾನಮಾಚರೇತ್ ।
ಪ್ರೀಯತಾಂ ಮೇ ಹಿರಣ್ಯಾಕ್ಷೋ ದಕ್ಷಿಣಾ ಸತಿಲಾ ಸ್ಮೃತಾ ॥ ೩೬ ॥

ಕಾರ್ತಿಕೇ ಪಯಸಾ ಸ್ನಾನಂ ಕರವೀರೇಣ ಚಾರ್ಚನಂ ।
ಧೂಪಂ ಶ್ರೀವಾಸನಿರ್ಯಾಸಂ ನೈವೇದ್ಯಂ ಮಧುಪಾಯಸಂ ॥ ೩೭ ॥

ಸನೈವೇದ್ಯಂಚ ರಜತಂ ದಾತವ್ಯಂ ದಾನಮಗ್ರಜೇ ।
ಪ್ರೀಯತಾಂ ಭಗವಾನ್ ಸ್ಥಾಣುಃ ಇತಿವಾಚ್ಯ ಮನಿಷ್ಠುರಂ ॥ ೩೮॥

ಕೃತ್ವೋಪವಾಸ ಮಷ್ಟಮ್ಯಾಂ ನವಮ್ಯಾಂ ಸ್ನಾನಮಾಚರೇತ್ ।
ಮಾಸಿ ಮಾರ್ಗಶಿರೇ ಸ್ನಾನಂ ರುದ್ರಾರ್ಚಾ ದಧಿಜಾ ಸ್ಮೃತಾ ॥ ೩೯ ॥

ಧೂಪಂ ಶ್ರೀವೃಕ್ಷನಿರ್ಯಾಸಂ ನೈವೇದ್ಯಂ ಮಧುನೌದನಂ ।
ಸನ್ನಿವೇದ್ಯಾ ರಕ್ತಶಾಲಿ ರ್ದಕ್ಷಿಣಾ ಪರಿಕೀರ್ತಿತಾ ॥ ೪೦ ॥

ನಮೋಸ್ತು ಪ್ರೀಯತಾಂ ಶರ್ವಃ ಇತಿವಾಚ್ಯಂ ಚಪಂಡಿತೈಃ ।
ಪೌಷೇ ಸ್ನಾನಂಚ ಹವಿಷಾ ಪೂಜಾಸ್ಯಾತ್ತಗರೈ ಶ್ಶುಭೈಃ ॥ ೪೧ ॥

---

೩೬-೩೮. ಅಷ್ಟಮಿಯಲ್ಲಿ ಉಪವಾಸಮಾಡಿ ನವಮಿಯಲ್ಲಿ ಸ್ನಾನಮಾಡಬೇಕು. ತಿಲಮಿಶ್ರವಾದ ದಕ್ಷಿಣೆಯನ್ನು ಪ್ರೀಯತಾಂ ಮೆ ಹಿರಣ್ಯಾಕ್ಷಃ ಎಂದು ಉಚ್ಚರಿಸಿ ದಾನಮಾಡಬೇಕು. ಹಾಗೆಯೇ ಕಾರ್ತೀಕಮಾಸದಲ್ಲಿ ಹಾಲಿನಿಂದ ಸ್ನಾನಮಾಡಬೇಕು. ಕಣಿಗಲೆಹೂವುಗಳಿಂದ ಪೂಜಿಸಬೇಕು. ಸರಳವೃಕ್ಷದ ಹಾಲುಮಡ್ಡಿಯಿಂದ ಧೂಪವನ್ನೂ ಮಾಡಿ ಬೆಳ್ಳಿಯಪಾತ್ರೆಯೊಡನೆ ನೈವೇದ್ಯವನ್ನು ಬ್ರಾಹ್ಮಣನಿಗೆ ದಾನಮಾಡಬೇಕು. ದಾನಮಾಡುವಕಾಲದಲ್ಲಿ ಭಗವಂತನಾದ ಸ್ಥಾಣುವು ಪ್ರೀತನಾಗಲಿ ಎಂದು ನಮ್ರತೆಯಿಂದ ನುಡಿಯಬೇಕು.

೩೯-೪೧. ಅಷ್ಟಮಿಯಲ್ಲಿ ಉಪವಾಸಮಾಡಿ ನವಮಿಯಲ್ಲಿ ಸ್ನಾನಮಾಡಬೇಕು. ಹೀಗೆಯೇ ಮಾರ್ಗಶಿರಮಾಸದಲ್ಲಿಯೂ ಮೊಸರಿನಿಂದ ಸ್ನಾನ, ಬಿಲ್ವ ಮೇಣದ ಧೂಪ, ಜೇನು ಮಿಶ್ರವಾದಅನ್ನದ ನೈವೇದ್ಯ, ನೈವೇದ್ಯದೊಡನೆ ಕೆಂಪುಭತ್ತವನ್ನು ದಕ್ಷಿಣೆಯನ್ನಾಗಿ ಕೊಡಬೇಕು. ದಾನಮಾಡುವಾಗ ಶರ್ವನು ಪ್ರೀತನಾಗಲಿ, ಅವನಿಗೆ ನಮಸ್ಕಾರವೆಂದು ಉಚ್ಚರಿಸಿ ಕೊಡಬೇಕು.

ಧೂಪೋ ಮಧುಕನಿರ್ಯಾಸೋ ನೈವೇದ್ಯಂ ಮಧುಸಕ್ತುಕೈಃ ।
ಸಮುದ್ರಾ ದಕ್ಷಿಣಾ ಪ್ರೋಕ್ತಾ ಪ್ರೀಣನಾಯ ಜಗದ್ಗುರೋಃ ॥ ೪೨ ॥

ವಾಚ್ಯಂ ನಮಸ್ತೇ ದೇವೇಶ ತ್ರ್ಯಂಬಕೇತಿ ಪ್ರಕೀರ್ತಯೇತ್ ।
ಮಾಘೇ ಕುಶೋದಕಸ್ನಾನಂ ಕುಮುದೇನ ಶಿವಾರ್ಚನಂ ॥ ೪೩ ॥

ಧೂಪಃ ಕದಂಬನಿರ್ಯಾಸಃ ನೈವೇದ್ಯಂ ಸಲಿಲೌದನಂ ।
ಪಯೋಭಕ್ತಂ ತುನ್ನೈವೇದ್ಯಂ ಸರುಕ್ಮಂ ಪ್ರತಿಪಾದಯೇತ್ ॥ ೪೪ ॥

ಪ್ರೀಯತಾಂಮೇ ಮಹಾದೇವ ಉಮಾಪತಿ ರಿತೀರಯೇತ್ ।
ಏವಮೇವ ಸಮುದ್ದಿಷ್ಟಂ ಷಡ್ಭಿರ್ಮಾಸೈ ಸ್ತುಪಾರಣಂ ॥
ಪಾರಣಾಂತೇ ತ್ರಿನೇತ್ರಸ್ಯ ಸ್ನಪನಂ ಕಾರಯೇತ್ಕ್ರಮಾತ್ ॥ ೪೫ ॥

---

೪೨-೪೩. ಪುಷ್ಯಮಾಸದಲ್ಲಿ ತುಪ್ಪದಿಂದ ಸ್ನಾನಮಾಡಬೇಕು. ನಂದ್ಯಾವರ್ತ ದಿಂದ ಪೂಜೆ, ಹಿಪ್ಪೆಯಮೇಣದಿಂದ ಧೂಪವನ್ನೂ ಜೇನುಮಿಶ್ರವಾದ ಹುರಿಟ್ಟನ್ನು ನೈವೇದ್ಯವಾಗಿಯೂ ಅರ್ಪಿಸಬೇಕು. ದಕ್ಷಿಣೆಯು ರೂಪಾಯಿ ಮೊದಲಾದ ಮೊಹರಾ ಗಳಿಂದ ಕೂಡಿರಬೇಕು. ಜಗದ್ಗುರುವಾದ ರುದ್ರನ ಪ್ರೀತಿಗಾಗಿ ದೇವೇಶ, ತ್ರ್ಯಂಬಕ ನಿನಗೆ ನಮಸ್ಕಾರಗಳು ಎಂದು ಉಚ್ಚರಿಸಬೇಕು.

೪೪-೪೫. ಮಾಘಮಾಸದಲ್ಲಿ ದರ್ಭಾಗ್ರದಿಂದ ಕೂಡಿದ ಶುದ್ಧಜಲದಿಂದ ಸ್ನಾನ, ಕುಮುದ (ನೈದಿಲೆಹೂವು) ಪುಷ್ಪಗಳಿಂದ ಅರ್ಚನೆ, ಕಡಬೆಮರದ ಹಾಲಿನ ಮಡ್ಡಿಯ ಧೂಪ, ನೈವೇದ್ಯಕ್ಕೆ ಜಲಮಿಶ್ರವಾದ ಅನ್ನ, ಹಾಲು ಅನ್ನದ ನೈವೇದ್ಯವನ್ನು ಹಿರಣ್ಯಸಹಿತ ದಾನಮಾಡಬೇಕು. ದಾನಮಾಡುವಾಗ ಉಮಾಪತಿಯಾದ ಮಹಾ ದೇವನು ಪ್ರೀತನಾಗಲಿ ಎಂದು ಉಚ್ಚರಿಸಬೇಕು. ಆರುತಿಂಗಳುಗಳಲ್ಲೂ ಹೀಗೆಯೇ ಪಾರಣವನ್ನು ಮಾಡಬೇಕು. ಪಾರಣೆಯಾದನಂತರ ತ್ರಿನೇತ್ರನ ಅಭಿಷೇಕವನ್ನು ನಡೆಸಬೇಕು.

ಗೋರೋಚನಾಯುಕ್ತಗುಡೇನ ಚೈವ
ದೇವಂ ಸಮಾಲಭ್ಯ ಚ ಪೂಜಯೇತ್ತು ।
* ಪ್ರೀಯಸ್ವ ದೀನೋಽಸ್ಮಿ ಭವಾಂತ್ಸಮೀಮ
ಚ್ಛೋಕನಾಶಂ ಪ್ರಕುರುಷ್ವ ಯೋಗ್ಯಂ ॥ ೪೬ ॥

ತತಸ್ತು ಫಾಲ್ಗುನೇ ಮಾಸಿ ಕೃಷ್ಣಾಷ್ಟಮ್ಯಾಂ ಯತವ್ರತೈಃ ।
ಉಪವಾಸಂ ಸಮುದಿತಂ ಕರ್ತವ್ಯಂ ದ್ವಿಜಸತ್ತಮ ॥ ೪೭ ॥

ದ್ವಿತೀಯೇಽಹ್ನಿ ತತಃ ಸ್ನಾನಂ ಪಂಚಗವ್ಯೇನ ಕಾರಯೇತ್ ।
ಪೂಜಯೇತ್ಕುಂದಕುಸುಮೈಃಧೂಪಯೇಚ್ಚಂದನೇನ ಚ ॥ ೪೮ ॥

ನೈವೇದ್ಯಂ ಸಘೃತಂ ದದ್ಯಾತ್ತಾಮ್ರಪಾತ್ರೇ ಗುಡೌದನಂ ।
ದಕ್ಷಿಣಾಂ ಚ ದ್ವಿಜಾತಿಭ್ಯೋ ನೈವೇದ್ಯೈಃ ಸಹಿತಾಂ ಮುನೇ ॥ ೪೯ ॥

ವಾಸೋಯುಗಂ ಪ್ರೀಣಯೇಚ್ಚ ರುದ್ರಮುಚ್ಚಾರ್ಯ ನಾಮತಃ ।
ಚೈತ್ರೇ ಚೋದುಂಬರಜಲೈಃ ಸ್ನಾನಂ ಮಂದಾರಕಾರ್ಚನಂ ॥ ೫೦ ॥

ಗುಗ್ಗುಲಂ ಮಹಿಷಾಖ್ಯಂ ಚ ಘೃತಾಕ್ತಂ ಧೂಪಯೇದ್ಬುಧಃ ।
ಸಮೋದಕಂ ತಥಾ ಸರ್ಪಿಃ ಪ್ರೀಣನಂ ವಿನಿವೇದಯೇತ್ ॥ ೫೧ ॥

---

೪೬-೫೦. ಅನಂತರ ಫಾಲ್ಗುನಮಾಸದಲ್ಲಿ ಕೃಷ್ಣಾಷ್ಟಮೀ ದಿವಸ ನಿಯಮದೊಡನೆ ಉಪವಾಸ ಮಾಡಬೇಕು. ಮಾರನೇದಿವಸ ಪಂಚಗವ್ಯದಿಂದ ಸ್ನಾನಮಾಡಬೇಕು ಮಾಘಮಲ್ಲಿಗೆಯಿಂದ ಪೂಜಿಸಿ ಚಂದನದಿಂದ ಧೂಪವನ್ನರ್ಪಿಸಬೇಕು, ತುಪ್ಪದಿಂದ ಮಾಡಿದ ನೈವೇದ್ಯವನ್ನು ಅರ್ಪಿಸಿ, ಬೆಲ್ಲದ ಅನ್ನವನ್ನು ತಾಮ್ರದಪಾತ್ರೆಯಲ್ಲಿ ದಕ್ಷಿಣಾಸಹಿತವಾಗಿ ನೈವೇದ್ಯದೊಡನೆ ಬ್ರಾಹ್ಮಣರಿಗೆ ದಾನಮಾಡಬೇಕು. ವಸ್ತ್ರಯುಗ್ಮವನ್ನೂ ದಾನಮಾಡಿ ರುದ್ರನನ್ನು ನಾಮೋಚ್ಚಾರಣಪೂರ್ವಕವಾಗಿ ಸಂತೋಷಗೊಳಿಸಬೇಕು.

೫೧-೫೨. ಚೈತ್ರಮಾಸದಲ್ಲಿ ಅತ್ತಿಯ ನೀರಿನಿಂದ ಸ್ನಾನ, ಬಿಟ್ಟದಾವರೆಹೂವಿನಿಂದ ಅರ್ಚನ, ಮತ್ತು ಮಹಿಷವೆಂಬ ಗುಗ್ಗುಲವನ್ನು ತುಪ್ಪದಲ್ಲಿ ನೆನೆಸಿ ಧೂಪ,

---

* ಈ ಉತ್ತರಾರ್ಧವು ಅಶುದ್ಧವಾಗಿದೆ. ಬೇರೆ ಸರಿಯಾದ ಪಾಠವಿರಬೇಕು.

ದಕ್ಷಿಣಾ ಚ ಸನ್ನೈವೇದ್ಯಾ ಮೃಗಾಜಿನಮುದಾಹೃತಂ ।
ನಗೇಶ್ವರ ನಮಸ್ತೇಸ್ತು ಇದಮುಚ್ಚಾರ್ಯ ನಾರದ ॥ ೫೨ ॥

ಪ್ರೀಣನಂ ದೇವನಾಥಾಯ ಕುರ್ಯಾಚ್ಛ್ರದ್ಧಾಸಮನ್ವಿತಃ ।
ವೈಶಾಖೇ ಸ್ನಾನಮುದಿತಂ ಸುಗಂಧಂ ಕುಸುಮಾಂಭಸಾ ॥ ೫೩ ॥

ಪೂಜನಂ ಶಂಕರಸ್ಯೋಕ್ತಂ ಚೂತಮಂಜರಿಭಿಃವಿಭೋಃ ।
ಧೂಪ ಸ್ಸರ್ಜಸ್ಯ ನಿರ್ಯಾಸೋ ನೈವೇದ್ಯಂ ಸಫಲಂ ಘೃತಂ ॥ ೫೪ ॥

ನಾಮ ಜಪ್ಯಮಪೀಶಸ್ಯ ಶಾಲಘ್ನೇತಿ ವಿಪಶ್ಚಿತಾ ।
ಜಲಕುಂಭಾನ್ಸನೈವೇದ್ಯಾನ್ಬ್ರಾಹ್ಮಣಾಯ ನಿವೇದಯೇತ್ ॥ ೫೫ ॥

ಸವಸ್ತ್ರಾಂಶ್ಚೈವ ಸಾನ್ನಾದ್ಯಾಂಸ್ತಚ್ಚಿತ್ತೈಸ್ತತ್ಪರಾಯಣೈಃ ।
ಜ್ಯೇಷ್ಠೇ ಸ್ನಾನಂ ಚಾಮಲಕೈಃ ಪೂಜಾರ್ಕಕುಸುಮೈಸ್ತಥಾ ॥ ೫೬ ॥

ಪೂಜಯೇದ್ರುದ್ರನೇತ್ರಂ ಚ ವೃಷಾಂಕಂ ವೃಷ್ಟಿಕಾರಕಂ ।
ಸಕ್ತೂಂಶ್ಚ ಸಘೃತಾನ್ದೇವೇ ದಧ್ನಾಕ್ತಾನ್ವಿನಿವೇದಯೇತ್ ॥ ೫೭ ॥

---

ಘೃತಪಕ್ವ, ಮತ್ತು ಕಡಬು, ಇವುಗಳ ನೈವೇದ್ಯ. ನೈವೇದ್ಯಸಹಿತವಾದ ಕೃಷ್ಣಾಜಿನವೇ ದಕ್ಷಿಣೆ. ನಗೇಶ್ವರನೇ ನಿನಗೆ ನಮಸ್ಕಾರವು ಎಂದು ಹೇಳಿ ಶ್ರದ್ಧೆಯೊಡನೆ ರುದ್ರನನ್ನು ಸಂತೋಷಪಡಿಸಬೇಕು.

೫೪-೫೬. ವೈಶಾಖಮಾಸದಲ್ಲಿ ಸುಗಂಧಿಯಾದ ಕುಸುಮೋದಕದಿಂದ ಸ್ನಾನ ಮಾಡಬೇಕು. ಹೊಸದಾದ ಮಾವಿನ ಹೂವಿನ ಗೊಂಚಲಿನಿಂದ ಶಂಕರನನ್ನು ಪೂಜಿಸಬೇಕು. ಸರ್ಜವೃಕ್ಷದ ಹಾಲಿನಮುದ್ದೆಯಿಂದ ಧೂಪವನ್ನೂ ತುಪ್ಪದೊಡನೆ ಫಲವನ್ನೂ ಅರ್ಪಿಸಬೇಕು. ಶಾಲಘ್ನ ಎಂಬ ಈಶ್ವರನ ನಾಮವನ್ನು ಜಪಿಸಬೇಕು, ಅನ್ನಾದಿ ನೈವೇದ್ಯದೊಡನೆ ಜಲಕುಂಭವನ್ನೂ ವಸ್ತ್ರವನ್ನೂ ಈಶ್ವರತತ್ಪರನಾಗಿ ಬ್ರಾಹ್ಮಣನಿಗೆ ದಾನಮಾಡಬೇಕು.

೫೭-೫೯. ಜ್ಯೇಷ್ಠಮಾಸದಲ್ಲಿ ಆಮಲಕ (ನೆಲ್ಲಿ) ದಿಂದ ಸ್ನಾನಮಾಡಬೇಕು. ಎಕ್ಕದ ಹೂವುಗಳಿಂದ ರುದ್ರದೇವರ ಜಗತ್ಸಂಹಾರಕಾರಿಯಾದ ನೇತ್ರವನ್ನು ಪೂಜಿಸಬೇಕು, ತುಪ್ಪದಿಂದಲೂ ಮೊಸರಿನಿಂದಲೂ ಸಂಸ್ಕೃತವಾದ ಹುರಿಟ್ಟನ್ನು ನಿವೇದನ

ಉಪಾನದ್ಯುಗಲಂ ಛತ್ರಂ ದಾನಂ ದದ್ಯಾಚ್ಚ ಭಕ್ತಿಮಾನ್ ।
ನಮಸ್ತೇ ಭಗನೇತ್ರಘ್ನ ಪೂಷ್ಣೋ ದಶನನಾಶನ ॥೫೮॥

ಇದಮುಚ್ಚಾರಯೇದ್ಭಕ್ತ್ಯಾ ಪ್ರೀಣನಾಯ ಜಗತ್ಪತೇಃ ।
ಆಷಾಢೇ ಸ್ನಾನಮುದಿತಂ ಶ್ರೀಫಲೈರರ್ಚನಂ ತಥಾ ॥ ೫೯ ॥

ಧತ್ತೂರಕುಸುಮೈಃ ಶುಕ್ಲೈಃ ಧೂಪಯೇತ್ಸಲ್ಲಿಕೆತಥಾ ।
ನೈವೇದ್ಯಂ ಸಘೃತಾಪೂಪಾಃ ದಕ್ಷಿಣಾ ಸಘೃತಾ ಯವಾಃ ॥ ೬೦ ॥

ನಮಸ್ತೆ ದಕ್ಷಯಜ್ಞಘ್ನ ಇದಮುಚ್ಚೈರುದೀರಯೇತ್ ।
ಶ್ರಾವಣೆ ಭೃಂಗರಾಜೇನ ಸ್ನಾನಂ ಕೃತ್ವಾರ್ಚಯೇದ್ಧರಂ ॥ ೬೧ ॥

ಶ್ರೀವೃಕ್ಷಪತ್ರೈಃ ಸಫಲೈಃ ಧೂಪಂದದ್ಯಾತ್ತಥಾ ಗುರುಂ ।
ನೈವೇದ್ಯಂ ಸಘೃತಂ ದದ್ಯಾದ್ದಧಿ ಪೂರ್ವಾಂಶ್ಚ ಮೋದಕಾನ್ ॥ ೬೨ ॥

ದಧ್ಯೋದನಂ ಸಕೃಸರಂ ಮಾಷಧಾನಾಃ ಸಶಷ್ಕುಲೀಃ ।
ದಕ್ಷಿಣಾಂ ಶ್ವೇತವೃಷಭಂ ಧೇನುಂ ಚ ಕಪಿಲಾಂ ಶುಭಾಂ ॥ ೬೩ ॥

---

ಮಾಡಬೇಕು, ಪಾದುಕಾಯುಗ್ಮ ಮತ್ತು ಛತ್ರಿ ಇವನ್ನು ನೈವೇದ್ಯದೊಡನೆ ದಾನ ಮಾಡಬೇಕು, ದಾನಮಾಡುವಾಗ ರುದ್ರದೇವರ ಪ್ರೀತಿಗಾಗಿ ಎಲೈ, ಭಗನೇತ್ರನಾಶ ಕನೇ, ಸೂರ್ಯನ ಹಲ್ಲುಗಳನ್ನು ನಾಶಪಡಿಸಿದವನೇ, ನಿನಗೆ ನಮಸ್ಕಾರಗಳು ಎಂದು ಉಚ್ಚರಿಸಬೇಕು.

೬೦-೬೧. ಆಷಾಢಮಾಸದಲ್ಲಿ ಬಿಲ್ವದ ಹಣ್ಣಿನಿಂದ ಸ್ನಾನಮಾಡಬೇಕು, ಬಿಳಿ ದತ್ತೂರಿ ಹೂವಿನಿಂದ ಅರ್ಚಿಸಬೇಕು, ಸಲ್ಲಕಿಯ ಮಡ್ಡಿಯಿಂದ ಧೂಪಿಸಬೇಕು, ತುಪ್ಪದಿಂದ ಮಾಡಿದ ಭಕ್ಷ್ಯಗಳೇ ನೈವೇದ್ಯ ಮತ್ತು ತುಪ್ಪದೊಡನೆ ಗೋಧಿಯನ್ನು ದಾನಮಾಡಬೇಕು, ದಕ್ಷಯಜ್ಞಘ್ನನೆಂಬ ರುದ್ರದೇವರ ಹೆಸರನ್ನು ಘಟ್ಟಿಯಾಗಿ ಉಚ್ಚರಿಸಬೇಕು.

೬೨-೬೪. ಶ್ರಾವಣಮಾಸದಲ್ಲಿ ಭೃಂಗರಾಜ (ಭೃಂಗಾಮಲಕಕ್ಕೆ ಉಪಯೋಗಿಸುವ ಔಷಧಿ) ನಿಂದ ಸ್ನಾನಮಾಡಬೇಕು, ಬಿಲ್ವದಪತ್ರೆ ಮತ್ತು ಫಲಗಳಿಂದ ಪೂಜಿಸಬೇಕು, ಹಾಲುಮಡ್ಡಿಯ ಧೂಪ, ತುಪ್ಪದ ಭಕ್ಷ್ಯಗಳೇ ನೈವೇದ್ಯ. ಮೊಸರಿನೊಡನೆ ಕಡಬುಗಳನ್ನೂ, ಚಿಗಳಿಯೊಡನೆ ಮೊಸರನ್ನವನ್ನೂ, ಉದ್ದಿನ ಭಕ್ಷ್ಯ, ಚಕ್ಕುಲಿ ಇವುಗಳನ್ನೂ ದಾನಮಾಡಬೇಕು. ಬಿಳಿಯ ಎತ್ತು, ಕಪಿಲವರ್ಣದ ಒಳ್ಳೆಯ ಹಸು, ಇವು

ಕನಕಂ ರಕ್ತವಸನಂ ಪ್ರದದ್ಯಾದ್ಬ್ರಾಹ್ಮಣಾಯ ಹಿ ।
ಗಂಗಾಧರೇತಿ ಜಪ್ತವ್ಯಂ ನಾಮ ಶಂಭೋಶ್ಚ ಪಂಡಿತೈಃ ॥ ೬೪ ॥

ಅಮೀಭಿಃ ಷಡ್ಭಿರಪರೈಃ ಮಾಸೈಃ ಪಾರಣಮುತ್ತಮಂ ।
ಏವಂ ಸಂವತ್ಸರಂ ಪೂರ್ಣಂ ಸಂಪೂಜ್ಯ ವೃಷಭಧ್ವಜಂ ।
ಅಕ್ಷಯಾಁಲಭತೇ ಲೋಕಾಁಮಹೇಶ್ವರವಚೋ ಯಥಾ ॥ ೬೫ ॥

ಇದಮುಕ್ತಂ ವ್ರತಂ ಪುಣ್ಯಂ ಸರ್ವಪಾಪಹರಂ ಶುಭಂ ।
ಸ್ವಯಂ ರುದ್ರೇಣ ದೇವರ್ಷೇ ತತ್ತಥಾ ನ ತದನ್ಯಥಾ ॥ ೬೬ ॥

ಇತಿ ಶ್ರೀ ವಾಮನಪುರಾಣೇ ಅಶೂನ್ಯಶಯನ ದ್ವಿತೀಯಾ ಕಾಲಾಷ್ಟಮೀ ವ್ರತವರ್ಣನಂನಾಮ ಷೋಡಶೋಽಧ್ಯಾಯಃ

---

ಗಳನ್ನು ಚಿನ್ನ ಮತ್ತು ಕೆಂಪು ಬಟ್ಟೆಗಳೊಡನೆ ಬ್ರಾಹ್ಮಣನಿಗೆ ದಕ್ಷಿಣೆಯಾಗಿ ಕೊಡಬೇಕು, ಗಂಗಾಧರ ಎಂಬ ಶಂಭುವಿನ ನಾಮವನ್ನು ಜಪಿಸಬೇಕು.

೬೫-೬೬. ಈ ಆರು ತಿಂಗಳುಗಳಲ್ಲಿಯೂ ಬೇರೆ ಆರು ತಿಂಗಳುಗಳಲ್ಲಿಯೂ ಉಪವಾಸದಿಂದ ಪಾರಣೆ ಮಾಡುವದು ಉತ್ತಮ. (ಆಯಾಯ ತಿಂಗಳಲ್ಲಿ ಬರುವ ಅಷ್ಟಮಿಯಲ್ಲಿ ಉಪವಾಸ, ಮಾರನೇ ದಿನ ಪಾರಣೆಯೆಂದರ್ಥ.) ಈ ರೀತಿ ಸಂವತ್ಸರ ಪೂರ್ತಿ ವೃಷಭಧ್ವಜನಾದ ಶಂಕರನನ್ನು ಪೂಜಿಸಿದವನು ಅಕ್ಷಯವಾದ ಲೋಕಗಳನ್ನು ಹೊಂದುತ್ತಾನೆ. ಇದು ಮಹೇಶ್ವರನ ವಚನದಿಂದಲೇ ನಿದರ್ಶಿಸಲ್ಪಟ್ಟಿದೆ. ಎಲೈ, ಮಹರ್ಷಿಯೇ, ಈ ರೀತಿಯಾದ ಪುಣ್ಯಕರವೂ ಸರ್ವಪಾಪನಾಶಕವೂ ಆದ ಈ ವ್ರತವನ್ನು ಮಹೇಶ್ವರನೇ ಹೇಳಿರುವದ್ದರಿಂದ ಇದು ಯಥಾರ್ಥವೇ ಹೊರತು ಬೇರೆ ಯೋಚಿಸತಕ್ಕದ್ದಲ್ಲ.

ಇಲ್ಲಿಗೆ ಶ್ರೀ ವಾಮನ ಪುರಾಣದಲ್ಲಿ ಅಶೂನ್ಯಶಯನ ದ್ವಿತೀಯಾಕಾಲಾಷ್ಟಮೀವ್ರತ ವರ್ಣನವೆಂಬ ಹದಿನಾರನೆಯ ಅಧ್ಯಾಯುವು ಮುಗಿದಿದೆ.

## ಅಧ್ಯಾಯಾರ್ಥ ಸಂಗ್ರಹ



ಈ ಅಧ್ಯಾಯದಲ್ಲಿ ಚಂದ್ರನು ನೆರವೇರಿಸಿರುವನೆಂದು ಕಾಮಿಗಳು ಹಿಂದಿನ ಅಧ್ಯಾಯದಲ್ಲಿ ಊಹಿಸಿದ ವ್ರತಗಳನ್ನು ಕುರಿತು ನಾರದರು ಮಾಡಿದ ಉಪಪ್ರಶ್ನೆಗೆ ಉತ್ತರವಾಗಿ ವಿಷ್ಣುದೇವತಾಕವಾದ ಅಶೂನ್ಯಶಯನದ್ವಿತೀಯಾ ಎಂಬ ವ್ರತವನ್ನೂ ರುದ್ರದೇವತಾಕವಾದ ಕಾಲಾಷ್ಟಮಿಾ ಎಂಬ ವ್ರತವನ್ನೂ ಸಹ ಕಾಲ ಮತ್ತು ಅದಕ್ಕೆ ಉಪಕರಣರೂಪವಾದ ಪದಾರ್ಥ ಇವುಗಳೊಡನೆ ವಿಸ್ತಾರವಾಗಿ ಹೇಳಿದ್ದಾರೆ.



॥ ಶ್ರೀಃ ॥

# ಶ್ರೀವಾಮನಪುರಾಣಂ

## ಸಪ್ತದಶೋಽಧ್ಯಾಯಃ

**ಪುಲಸ್ತ್ಯ ಉವಾಚ**

**ಮಾಸಿ ಚಾಶ್ವಯುಜಿ ಬ್ರಹ್ಮನ್ಯದಾ ಪದ್ಮಂ ಪ್ರಜಾಪತೇಃ ।**
**ನಾಭ್ಯಾ ನಿರ್ಯಾತಿ ಹಿ ತದಾ ದೇವೋದ್ಯಾನಾನ್ಯಥಾ ಭವನ್ ॥ ೧ ॥**

**ಕಂದರ್ಪಸ್ಯ ಕರಾಗ್ರೇ ತು ಕದಂಬಶ್ಚಾರುದರ್ಶನಃ ।**
**ತೇನ ತಸ್ಯ ಪರಾ ಪ್ರೀತಿಃ ಕದಂಬೇನ ವಿವರ್ಧತೇ ॥ ೨ ॥**

**ಯಕ್ಷಾಣಾಮಧಿಪಸ್ಯಾಪಿ ಮಣಿಭದ್ರಸ್ಯ ನಾರದ ।**
**ವಟವೃಕ್ಷಃ ಸಮಭವತ್ತಸ್ಮಿಂಸ್ತಸ್ಯ ರತಿಃ ಸದಾ ॥ ೩ ॥**

---

## ಹದಿನೇಳನೆಯ ಅಧ್ಯಾಯವು

೧-೩. ಪುಲಸ್ತ್ಯರು ಹೇಳುತ್ತಾರೆ.—ಎಲೈ, ಮಹರ್ಷಿಯೇ, ಆಶ್ವಯುಜ ಮಾಸದಲ್ಲಿ ಯಾವಾಗ ಚತುರ್ಮುಖನ ಉತ್ಪತ್ತಿಗೆ ಕಾರಣವಾದ ಪದ್ಮವು ವಿಷ್ಣುವಿನ ನಾಭಿಯಿಂದ ಹೊರಗೆ ಉದ್ಭವಿಸುತ್ತದೆಯೋ ಆ ಸಮಯದಲ್ಲಿ ದೇವತೆಗಳಿಗೆ ಪ್ರೀತಿ ಪಾತ್ರವಾದ ಉದ್ಯಾನವು ಉದ್ಭವಿಸುತ್ತದೆ. ಮನ್ಮಥನ ಕೈಯ್ಯಿನಲ್ಲಿ ಕದಂಬವೃಕ್ಷವು ಉಂಟಾಗುತ್ತದೆ. ರಮಣೀಯವಾದ ಆ ವೃಕ್ಷದಿಂದ ಮನ್ಮಥನು ಸಂತೋಷ ಹೊಂದುತ್ತಾನೆ. ಯಕ್ಷರಾಜನಾದ ಮಣಿಭದ್ರನ ಹಸ್ತದಲ್ಲಿ ಆಲದ ಮರವು ಉಂಟಾಗುತ್ತದೆ. ಅದರಲ್ಲಿ ಅವನಿಗೆ ಬಹಳ ಪ್ರೀತಿ. ಹೀಗೆಯೇ

ಮಹೇಶ್ವರಸ್ಯ ಹೃದಯೇ ಧತ್ತೂರವಿಟಪೋಭವತ್ ।
ಸಂಜಾತಸ್ಸ ಚ ಶರ್ವಸ್ಯ ರತಿಕೃತ್ತಸ್ಯ ನಿತ್ಯಶಃ ॥ ೪ ॥

ಬ್ರಹ್ಮಣೋ ಮಧ್ಯತೋ ದೇಹಾಜ್ಜಾತೋ ಮರಕತಪ್ರಭಃ ।
ಖದಿರಃ ಕಂಟಕೀ ಶ್ರೇಯಾನ ಭವದ್ವಿಶ್ವಕರ್ಮಣಃ ॥ ೫ ॥

ಗಿರಿಜಾಯಾಃ ಕರತಲೇ ಕುಂದಗುಲ್ಮಸ್ತ್ವಜಾಯತ ।
ಗಣಾಧಿಪಸ್ಯ ಕುಂಭಸ್ಥೋ ರಾಜತೇ ಸಿಂಧುವಾರಕಃ ॥ ೬ ॥

ಯಮಸ್ಯ ದಕ್ಷಿಣೇ ಪಾರ್ಶ್ವೇ ಪಾಲಾಶೋ ದಕ್ಷಿಣೋತ್ತರೇ ।
ಕೃಷ್ಣೋದುಂಬರಕೋ ರೌದ್ರೋ ಜಾತಃ ಕ್ಷೋಭಕರೋಽವ್ಯಯಃ ॥ ೭ ॥

ಸ್ಕಂದಸ್ಯ ಬಂಧುಜೀವಶ್ಚ ರವೇರಶ್ವತ್ಥ ಏವ ಚ ।
ಕಾತ್ಯಾಯನ್ಯಾ ಶಮೀ ಜಾತಾ ಬಿಲ್ವೋ ಲಕ್ಷ್ಮ್ಯಾಃ ಕರೇಽಭವತ್ ॥ ೮ ॥

ನಾಗಾನಾಂ ಮುಖತೋ ಬ್ರಹ್ಮನ್ ಶರಸ್ತಂಬೋ ವ್ಯಜಾಯತ ।
ವಾಸುಕೇಃವಿಸ್ತೃತೆ ಪುಚ್ಛೇ ಪೃಷ್ಠೇ ದೂರ್ವಾ ಸಿತಾ ಸಿತಾ ॥ ೯ ॥

---

೪-೬. ಈಶ್ವರನ ಹೃದಯದಲ್ಲಿ ದತ್ತೂರಿಗಿಡವು ಬೆಳೆಯುತ್ತದೆ. ಶುಭಕರವಾದ ಆ ಗಿಡದಿಂದ ಶಂಕರನಿಗೆ ಯಾವಾಗಲೂ ಪ್ರೀತಿಯುಂಟಾಗುತ್ತದೆ. ಬ್ರಹ್ಮನ ದೇಹದ ಮಧ್ಯದಿಂದ ಉದ್ಭವಿಸಿ ಪಚ್ಚೆಕಲ್ಲಿನಂತೆ ಪ್ರಕಾಶಿಸುವ ಖದಿರ (ಕಗ್ಗಲಿ) ವೃಕ್ಷವು ಮುಳ್ಳಿನಿಂದ ಕೂಡಿದ್ದರೂ ಅದು ವಿಶ್ವಕರ್ಮನಿಗೆ ಪ್ರೀತಿಕರವಾಗುತ್ತದೆ. ಹೀಗೆಯೇ ಪಾರ್ವತಿಯ ಕೈಯ್ಯಿನಿಂದ ಮೊಲ್ಲೆಗಿಡವೂ ಗಜಾನನ ಕುಂಭಸ್ಥಲದಲ್ಲಿ ನಿರ್ಗುಂಡೀಗಿಡವೂ ಉಂಟಾಗುತ್ತದೆ.

೭-೧೦. ಯಮನ ದಕ್ಷಿಣಪಾರ್ಶ್ವದಲ್ಲಿ ಮುತ್ತುಗದ ಗಿಡವೂ ಎಡಪಾರ್ಶ್ವದಲ್ಲಿ ರೌದ್ರವಾದ ಕರಿಯ ಅತ್ತಿಯಗಿಡವೂ ಉಂಟಾಗುತ್ತದೆ. ಇದು ಲೋಕಕ್ಕೆ ಬಹು ಕ್ಷೋಭಕರವಾದದ್ದು. ಷಣ್ಮುಖನ ಕೈಯ್ಯಿನಿಂದ ಬಂದೂಕಪುಷ್ಪದ ಗಿಡವೂ (ಕೆಂಪು ದಾಸವಾಳ) ಸೂರ್ಯನಲ್ಲಿ ಅಶ್ವತ್ಥವೃಕ್ಷವೂ ಕಾತ್ಯಾಯನಿಯಲ್ಲಿ ಬನ್ನಿಯ ಮರವೂ ಲಕ್ಷ್ಮಿಯಲ್ಲಿ ಬಿಲ್ವದಗಿಡವೂ ಕೈಯ್ಯಿನಿಂದ ಉಂಟಾಗುತ್ತವೆ. ಸರ್ಪಗಳ ಮುಖಭಾಗದಿಂದ ಶರವೆಂಬ ತೃಣವೂ (ಉದ್ದವಾದ ಜೊಂಡು) ವಾಸುಕಿಯ ವಿಸ್ತಾರವಾದ ಪುಚ್ಛಭಾಗದಲ್ಲಿ ಬಿಳುಪಾಗಿಯೂ ಕಪ್ಪಾಗಿಯೂ ಇರುವ ಗರಿಕೆಯ ಹುಲ್ಲೂ ಸಾಧ್ಯರ ಹೃದಯದಲ್ಲಿ

**ಸಾಧ್ಯಾನಾಂ ಹೃದಯೇ ಜಾತೋ ವೃಕ್ಷೋ ಹರಿತಚಂದನಃ।**
**ಏವಂ ಜಾತೇಷು ವೃಕ್ಷೇಷು ತೇನ ತತ್ರ ರತಿರ್ಭವೇತ್** ॥೧೦॥

**ತತ್ರ ರಮ್ಯೇ ಶುಭೇ ಕಾಲೆ ಯಾ ಶುಕ್ಲೈಕಾದಶೀ ಭವೇತ್।**
**ತಸ್ಯಾಂ ಸಂಪೂಜಯೇದ್ವಿಷ್ಣುಂ ತೇನಾಖಂಡೋಽಯಮೂರ್ಜತೆ** ॥೧೧॥

**ಪತ್ರೈಃ ಪುಷ್ಪೈಃ ಫಲೈರ್ವಾಪಿ ಗಂಧವರ್ಣರಸಾನ್ವಿತೈಃ।**
**ಔಷಧೀಭಿಶ್ಚ ಮುಖ್ಯಾಭಿಃ ಯಾವತ್ಸ್ಯಾಚ್ಛರದಾಗಮಃ** ॥೧೨॥

**ಘೃತಂ ತಿಲಾ ವ್ರೀಹಿ ಯವಾ ಹಿರಣ್ಯಂ ಕನಕಾದಿಯತ್।**
**ಮಣಿಮುಕ್ತಾಪ್ರವಾಲಾನಿ ವಸ್ತ್ರಾಣಿ ವಿವಿಧಾನಿ ಚ** ॥೧೩॥

**ರಸಾನಿ ಸ್ವಾದು ಕಟ್ವಾಮ್ಲಕಷಾಯಲವಣಾನಿ ಚ।**
**ತಿಕ್ತಾನಿ ಚ ನಿವೇದ್ಯಾನಿ ತಾನ್ಯಖಂಡಾನಿ ಯಾನಿ ಚ** ॥೧೪॥

**ತತ್ಪೂಜಾರ್ಥಂ ಪ್ರದಾತವ್ಯಂ ಕೇಶವಾಯ ಮಹಾತ್ಮನೇ।**
**ಯಾವತ್ಸಂವತ್ಸರಂ ಪೂರ್ಣಂ ಅಖಂಡಂ ಭವತಿ ಗೃಹೆ** ॥೧೫॥

---

ಹಸಿರು ಚಂದನವೃಕ್ಷವೂ ಉದ್ಭವಿಸುತ್ತವೆ. ಹೀಗೆ ಉಂಟಾದ ವೃಕ್ಷಗಳಿಂದ ಅವರವರಿಗೆ ಪ್ರೀತಿಯುಂಟಾಗುತ್ತದೆ.

೧೧-೧೪. ಹೀಗೆ ಉಂಟಾದ ಫಲಪುಷ್ಪ ಸಮೃದ್ಧಿಯಿಂದ ರಮಣೀಯವಾದ ಆಶ್ವಯುಜ ಶುದ್ಧ ಏಕಾದಶಿಯಲ್ಲಿ ನಾರಾಯಣನನ್ನು ಪೂಜಿಸಬೇಕು. ಯಾವನು ಪೂಜಿಸುತ್ತಾನೆಯೋ, ಅವನು ಅಖಂಡನಾಗಿಯೂ ಬಲಿಷ್ಠ (ತೇಜಸ್ವಿ) ನಾಗಿಯೂ ಆಗುತ್ತಾನೆ. ಸುಗಂಧಿಯಾಗಿಯೂ ವರ್ಣಗಳಿಂದ ಮನೋಹರವಾಗಿಯೂ ಇರುವ ಪತ್ರ ಪುಷ್ಪ ಇವುಗಳಿಂದಲೂ ರಸವತ್ತರವಾದ ಫಲಗಳಿಂದಲೂ ಮುಖ್ಯವಾದ ಔಷಧಿ ವಿಶೇಷಗಳಿಂದಲೂ, ತುಪ್ಪ, ಎಳ್ಳು, ಭತ್ತ, ಗೋಧಿ, ಸಿಹಿ, ಕಾರ, ಹುಳಿ, ಉಪ್ಪು, ಒಗರು, ಮೊದಲಾದ ರಸಾನ್ವಿತವಾದ ಅಖಂಡವಸ್ತುಗಳ ನಿವೇದನದಿಂದಲೂ ಶರದೃತು ಮುಗಿಯುವವರಿಗೂ ಪೂಜಿಸಬೇಕು.

೧೫-೧೮. ಮಹಾತ್ಮನಾದ ನಾರಾಯಣನ ಅನುಗ್ರಹದಿಂದ ಲಬ್ಧವಾದ ಈ ಪದಾರ್ಥಗಳನ್ನು ಅವನ ಪೂಜೆಗಾಗಿ ವರ್ಷಪರ್ಯಂತವೂ ವಿನಿಯೋಗಿಸಿದಲ್ಲಿ

ಕೃತೋಪವಾಸೋ ದೇವರ್ಷೆ ದ್ವಿತೀಯೆಹನಿ ಸಂಯತಃ ।
ಸ್ನಾನೇನ ಯೇನ ಸ್ನಾಯೀತ ತೇನಾಖಂಡಂ ಹಿ ವತ್ಸರಂ ॥ ೧೬ ॥

ಸಿದ್ಧಾರ್ಥಕೈಸ್ತಿಲೈರ್ವಾಪಿ ತೇನೈವೋದ್ವರ್ತನಂ ಸ್ಮೃತಂ ।
ಹವಿಷಾ ಪದ್ಮನಾಭಸ್ಯ ಸ್ನಾನಮೇವಂ ಸಮಾಚರೇತ್ ॥ ೧೭ ॥

ಹೋಮಸ್ತೇನೈವ ಗದಿತೋ ದಾನೇ ಶಕ್ತಿರ್ನಿಜಾ ದ್ವಿಜ ।
ಪೂಜಯೇದ್ವಾಥ ಕುಸುಮೈಃ ಪಾದಾದಾರಭ್ಯ ಕೇಶವಂ ॥ ೧೮ ॥

ಧೂಪಯೇದ್ವಿವಿಧಂ ಧೂಪಂ ಯೇನ ಸ್ಯಾದ್ವತ್ಸರಂ ಪರಂ ।
ಹಿರಣ್ಯರತ್ನ ವಾಸೋಭಿಃ ಪೂಜಯೇಚ್ಚ ಜಗದ್ಗುರುಂ ॥ ೧೯ ॥

ರಾಗ ಖಾಂಡವಚೋಷ್ಯಾಣಿ ಹವಿಷ್ಯಾಣಿ ನಿವೇದಯೇತ್ ।
ತತಃ ಸಂಪೂಜ್ಯ ದೇವೇಶಂ ಪದ್ಮನಾಭಂ ಜಗದ್ಗುರುಂ ॥ ೨೦ ॥

ವಿಜ್ಞಾಪಯೇನ್ಮುನಿಶ್ರೇಷ್ಠ ಮನ್ತ್ರೇಣಾನೇನ ಸುವ್ರತ ।
ನಮೋಸ್ತು ತೇ ಪದ್ಮನಾಭ ಪದ್ಮಾಧವ ಮಹಾದ್ಯುತೇ ॥ ೨೧ ॥

---

ಅರ್ಪಿತವಾದ ಈ ಪದಾರ್ಥಗಳೆಲ್ಲವೂ ಮನೆಯಲ್ಲಿ ಅಖಂಡವಾಗಿ ವೃದ್ಧಿ ಹೊಂದುವುವು. ಆ ಏಕಾದಶಿಯಲ್ಲಿ ಜಿತೇಂದ್ರಿಯನಾಗಿ ಉಪವಾಸಮಾಡಿ ಮಾರನೇದಿನ ಯಾವ ದ್ರವ್ಯ ದಿಂದ ವ್ರತಸ್ನಾನವನ್ನು ಮಾಡುತ್ತಾನೆಯೋ ಅಂತಹ ಪದಾರ್ಥವು ವರ್ಷಪರ್ಯಂತ ಅಖಂಡವಾಗಿರುತ್ತದೆ. ಸ್ನಾನಮಾಡುವಾಗ ಬಿಳಿಸಾಸವೆ ಮತ್ತು ಎಳ್ಳು ಇವುಗಳಿಂದ ಮಲಾಪಕರ್ಷಣಚೂರ್ಣವನ್ನು ಮಾಡಿ ಮೈಯ್ಯನ್ನು ಒರಸಿಕೊಳ್ಳಬೇಕು. ಪದ್ಮನಾಭ ನಿಗೂ ಹವಿಸ್ಸಿನಿಂದ (ಘೃತ) ಸ್ನಾನಮಾಡಿಸಬೇಕು. ಮೇಲೆ ಹೇಳಿದ ವಸ್ತುಗ ಳಿಂದಲೇ ಹೋಮವನ್ನು ಮಾಡಿ ಶಕ್ತ್ಯಾನುಸಾರ ದಾನಮಾಡಬೇಕು.

೧೯-೨೧. ಪಾದಮೊದಲು ಮಾಡಿ ಸರ್ವಾವಯವಗಳಲ್ಲೂ ಪುಷ್ಪಗಳಿಂದ ಕೇಶವನನ್ನು ಪೂಜಿಸಬೇಕು. ವಿವಿಧ ಸುಗಂಧದ್ರವ್ಯಗಳಿಂದ ಧೂಪಮಾಡಿ ಸುವರ್ಣ, ರತ್ನ, ವಸ್ತ್ರ, ಮೊದಲಾದ ಉತ್ತಮ ದ್ರವ್ಯಗಳಿಂದಲೂ ಆರಾಧಿಸಬೇಕು. ಇದರಿಂದ ಆ ವರ್ಷವೇ ಇವನಿಗೆ ಸುಖಕರವಾದೀತು. ದೇವತಾಯೋಗ್ಯವಾದ ಮೋದಕವನ್ನೂ * ಚೋಷ್ಯವನ್ನೂ ನಿವೇದಿಸಬೇಕು. ಈ ರೀತಿ ಜಗದ್ಗುರುವಾದ ಪದ್ಮನಾಭನನ್ನು ಪೂಜಿಸಿ ಈ ಮಂತ್ರದಿಂದ ಅವನನ್ನು ಪ್ರಾರ್ಥಿಸಬೇಕು.

---

* ಚೋಷ್ಯವೆಂದರೆ ಹೀರಿಕುಡಿಯುವ ದ್ರವ ದ್ರವ್ಯ.

ಧರ್ಮಾರ್ಥಕಾಮಮೋಕ್ಷಾ ಮೇ ಹ್ಯಖಂಡಾಸ್ಸಂತು ಕೇಶವ।
ವಿಕಾಸಿಪದ್ಮಪತ್ರಾಕ್ಷ ಯಥಾऽಖಂಡೋऽಸಿ ಸರ್ವತಃ ॥ ೨೨ ॥

ತೇನ ಸತ್ಯೇನ ಧರ್ಮಾದ್ಯಾಹ್ಯಖಂಡಾಸ್ಸನ್ತು ಕೇಶವ।
ಏವಂ ಸಂವತ್ಸರಂ ಪೂರ್ಣಂ ಸೋಪವಾಸೋ ಜಿತೇಂದ್ರಿಯಃ ॥ ೨೩ ॥

ಅಖಂಡಂ ಪಾರಯೇದ್ವ್ರಹ್ಮ ತಂ ವ್ರತಂ ಸರ್ವವಸ್ತುಷು।
ಅಸ್ಮಿಂಶ್ಚೀರ್ಣೇ ಹಿ ವ್ಯಕ್ತಂ ತು ಪರಿತುಷ್ಯನ್ತಿ ದೇವತಾಃ ॥ ೨೪ ॥

ಧರ್ಮಾರ್ಥಕಾಮಮೋಕ್ಷಾದ್ಯಾಸ್ತ್ವಕ್ಷಯಾ ಸ್ಸಂಭವಂತಿ ಹಿ।
ಏತಾನಿ ತೇ ಮಯೋಕ್ತಾನಿ ವ್ರತಾನ್ಯುಕ್ತಾನಿ ಕಾಮಿಭಿಃ ॥ ೨೫ ॥

ಪ್ರವಕ್ಷ್ಯಾಮ್ಯಧುನಾ ತ್ವೇತದ್ವೈಷ್ಣವಂ ಪಂಜರಂ ಶುಭಂ।
ನಮೋ ನಮಸ್ತೇ ದೇವೇಶ ಚಕ್ರಂ ಗೃಹ್ಯ ಸುದರ್ಶನಂ ॥ ೨೬ ॥

---

೨೨-೨೪. ಎಲೈ, ಪದ್ಮನಾಭನೇ, ಪದ್ಮಾಪ್ರಿಯನೇ, ಮಹಾದ್ಯುತಿಯೇ. ನಿನಗೆ ಅನಂತ ನಮಸ್ಕಾರಗಳು. ಎಲೈ ಕೇಶವನೇ, ನಿನ್ನ ಅನುಗ್ರಹದಿಂದ ನನ್ನ ಧರ್ಮಾರ್ಥ ಕಾಮಮೋಕ್ಷಗಳೆಂಬ ಪುರುಷಾರ್ಥಗಳು ಅಖಂಡವಾಗಿ ಆಗಲಿ. ಅರಳಿದ ಕಮಲದಂತೆ ನೇತ್ರಗಳುಳ್ಳ ಎಲೈ, ಪದ್ಮನಾಭನೇ ನೀನು ಹೇಗೆ ಎಲ್ಲಾ ದೃಷ್ಟಿಯಿಂದಲೂ ಅಖಂಡ ನಾಗಿರುವೆಯೋ, ಅಂತಹ ನಿನ್ನ ಸತ್ಯಸ್ವರೂಪದಿಂದ ನನ್ನ ಧರ್ಮಾದಿಪುರುಷಾರ್ಥ ಗಳೂ ಅಖಂಡವಾಗಲಿ. ಹೀಗೆಯೇ ಸಂವತ್ಸರ ಪರ್ಯಂತವೂ ಉಪವಾಸ ನಿಯಮ ದಿಂದ ಇದ್ದು ಸರ್ವ ವಸ್ತುಗಳಲ್ಲೂ ಅಖಂಡತ್ವವನ್ನು ಹೊಂದಲು ವ್ರತವನ್ನು ಆಚರಿಸ ಬೇಕು. ಈ ವ್ರತವು ಹೀಗೆ ನಡೆಯಿಸಲ್ಪಟ್ಟಲ್ಲಿ ಸರ್ವ ದೇವತೆಗಳೂ ಸಂತುಷ್ಟ ರಾಗುತ್ತಾರೆ.

೨೫-೨೬. ಧರ್ಮಾರ್ಥಕಾಮಮೋಕ್ಷಗಳು ಅಕ್ಷಯವಾಗಿ ಉಂಟಾಗುತ್ತವೆ. ನಾನು ಹೇಳಿದ ಈ ವ್ರತಗಳೇ ಚಂದ್ರನಿಂದ ಆಚರಿಸಲ್ಪಟ್ಟಿರಬಹುದೆಂದು ಕಾಮಿಗಳು ಊಹಿಸಿದ ವ್ರತಗಳು ಇನ್ನು ಮುಂದೆ ಈ ವೈಷ್ಣವವ್ರತಕ್ಕೆ ಅಂಗವಾದ ವೈಷ್ಣವಪಂಜರ ವನ್ನು ಹೇಳುತ್ತೇನೆ, (ಈ ಪಂಜರದ ಧ್ಯಾನವೂ ಉಚ್ಚಾರಣೆಯೂ ಶುಭಕರವಾಗಿಯೂ ರಕ್ಷಕವಾಗಿಯೂ ಇರುತ್ತದೆ ಎಂದು ತಾತ್ಪರ್ಯ.)

ಪ್ರಾಚ್ಯಾಂ ರಕ್ಷಸ್ವ ಮಾಂ ವಿಷ್ಣೋ ತ್ವಾಮಹಂ ಶರಣಂ ಗತಃ ।
ಗದಾಂ ಕೌಮೋದಕೀಂ ಗೃಹ್ಯ ಪದ್ಮನಾಭಾ ಮಿತದ್ಯುತೇ ॥ ೨೭ ॥

ಯಾಮ್ಯಾಂ ರಕ್ಷಸ್ವ ಮಾಂ ವಿಷ್ಣೋ ತ್ವಾಮಹಂ ಶರಣಂ ಗತಃ ।
ಪದ್ಮಮಾದಾಯ ಸಗದಂ ನಮಸ್ತೇ ಪುರುಷೋತ್ತಮ ॥ ೨೮ ॥

ಪ್ರತೀಚ್ಯಾಂ ರಕ್ಷ ಮಾಂ ವಿಷ್ಣೋ ತ್ವಾಮಹಂ ಶರಣಂ ಗತಃ ।
ಮುಸಲಂ ಶಾತನಂ ಗೃಹ್ಯ ಪುಂಡರೀಕಾಕ್ಷ ರಕ್ಷಮಾಂ ॥ ೨೯ ॥

ಉತ್ತರಸ್ಯಾಂ ಜಗನ್ನಾಥ ಭವಂತಂ ಶರಣಂ ಗತಃ ।
ಶಾರ್ಙ್ಗಮಾದಾಯ ಚ ಧನುರಸ್ತ್ರಂ ನಾರಾಯಣಂ ಹರೇ ॥ ೩೦ ॥

ನಮಸ್ತೇ ರಕ್ಷ ರಕ್ಷೋಘ್ನ ಈಶಾನ್ಯಾಂ ಶರಣಂ ಗತಃ ।
ಪಾಂಚಜನ್ಯಂ ಮಹಾಶಂಖಮನುಬೋಧ್ಯ ಚ ಪಂಕಜಂ ॥ ೩೧ ॥

ಪ್ರಗೃಹ್ಯ ರಕ್ಷ ಮಾಂ ವಿಷ್ಣೋ ಆಗ್ನೇಯ್ಯಾಂ ಯಜ್ಞಸೂಕರ ।
ಚರ್ಮ ಸೂರ್ಯಶತಂ ಗೃಹ್ಯ ಖಡ್ಗಂ ಚರ್ಮಸಮಂ ತಥಾ ॥ ೩೨ ॥

---

೨೭-೩೦. ಎಲೈ, ದೇವೇಶನೇ, ನಿನಗೆ ಅನೇಕ ನಮಸ್ಕಾರಗಳು, ಸುದರ್ಶನ ವೆಂಬ ಚಕ್ರವನ್ನು ಧರಿಸಿ ಪೂರ್ವದಿಕ್ಕಿನಲ್ಲಿ ನನ್ನನ್ನು ರಕ್ಷಿಸು. ನಾನು ನಿನ್ನಲ್ಲಿ ಶರಣಾಗತನಾಗಿರುತ್ತೇನೆ. ಎಲೈ ಪದ್ಮನಾಭನೇ, ಕಾಮೋದಕೀ ಎಂಬ ಗದೆಯನ್ನು ಧರಿಸಿ ತೇಜಸ್ವಿಯಾದ ನೀನು ದಕ್ಷಿಣದಿಕ್ಕಿನಲ್ಲಿ ನನ್ನನ್ನು ರಕ್ಷಿಸು. ನಾನು ನಿನ್ನಲ್ಲಿ ಶರಣಾಗತನಾಗಿರುತ್ತೇನೆ. ಎಲೈ ಪುರುಷೋತ್ತಮನೇ, ಪದ್ಮವನ್ನು ಧರಿಸಿ ಪಶ್ಚಿಮ ದಿಕ್ಕಿನಲ್ಲಿ ನನ್ನನ್ನು ರಕ್ಷಿಸು. ನಾನು ನಿನ್ನಲ್ಲಿ ಶರಣಾಗತನಾಗಿರುತ್ತೇನೆ. ಎಲೈ ಪುಂಡರೀಕಾಕ್ಷನೇ, ಶತ್ರು ನಾಶಕವಾದ ಮುಸಲವನ್ನು ಧರಿಸಿ ಉತ್ತರದಿಕ್ಕಿನಲ್ಲಿ ನನ್ನನ್ನು ರಕ್ಷಿಸು. ಜಗನ್ನಾಥನೇ ನಾನು ನಿನ್ನಲ್ಲಿ ಶರಣಾಗತನಾಗಿರುವೆನು.

೩೧-೩೩. ಎಲೈ ರಾಕ್ಷಸನಾಶಕನೇ, ಶಾರ್ಙ್ಗವೆಂಬ ಧನುಸ್ಸನ್ನೂ ನಾರಾಯಣಾ ಸ್ತ್ರವನ್ನೂ ಧರಿಸಿ ಈಶಾನ್ಯದಿಕ್ಕಿನಲ್ಲಿ ಶರಣಾಗತನಾದ ನನ್ನನ್ನು ರಕ್ಷಿಸು, ಹರಿಯೇ, ನಿನಗೆ ನಮಸ್ಕಾರಗಳು. ಎಲೈ ಆದಿವರಾಹರೂಪಿಯೇ, ಪಾಂಚಜನ್ಯವೆಂಬ ಮಹಾ ಶಂಖವನ್ನೂ ವಿಕಸಿತವಾದ ಪದ್ಮವನ್ನೂ ಧರಿಸಿ ಆಗ್ನೇಯದಿಕ್ಕಿನಲ್ಲೂ ನನ್ನನ್ನು ರಕ್ಷಿಸು. ಎಲೈ, ಅಪ್ರಾಕೃತವಾದ ನೃಸಿಂಹಮೂರ್ತಿಯೇ, ಅನೇಕ ಸೂರ್ಯರಂತೆ

ನೈಋತ್ಯಾಂ ಮಾಂ ಚ ರಕ್ಷಸ್ವ ದಿವ್ಯಮೂರ್ತೇ ನೃಕೇಸರಿನ್।
ವೈಜಯಂತೀಂ ಪ್ರಗೃಹ್ಯ ತ್ವಂ ಶ್ರೀವತ್ಸಂ ಕಂಠಭೂಷಣಂ ॥ ೩೩ ॥

ವಾಯವ್ಯಾಂ ರಕ್ಷ ಮಾಂ ದೇವ ಅಶ್ವಶೀರ್ಷ ನಮೋಸ್ತುತೆ।
ವೈನತೇಯಂ ಸಮಾರುಹ್ಯ ಅಂತರಿಕ್ಷೆ ಜನಾರ್ದನ ॥ ೩೪ ॥

ಮಾಂ ತ್ವಂ ರಕ್ಷಾಜಿತ ಸದಾ ನಮಸ್ತೇ ಸ್ತ್ವಪರಾಜಿತ।
ವಿಶಾಲಾಕ್ಷಂ ಸಮಾರುಹ್ಯ ರಕ್ಷ ಮಾಂ ತ್ವಂ ರಸಾತಲೆ ॥ ೩೫ ॥

ಅಕೂಪಾರ ನಮಸ್ತುಭ್ಯಂ ಮಹಾಮೀನ ನಮೋಸ್ತುತೇ।
ಕರಶೀರ್ಷಾಂಘ್ರಿಸರ್ವೇಷು ತಥಾಷ್ಟ ಬಾಹುಪಂಜರಂ ॥ ೩೬ ॥

ಕೃತ್ವಾ ರಕ್ಷಸ್ವ ಮಾಂ ದೇವ ನಮಸ್ತೇ ಪುರುಷೋತ್ತಮ।
ಏತದುಕ್ತಂ ಭಗವತಾ ವೈಷ್ಣವಂ ಪಂಜರಂ ಮಹತ್ ॥ ೩೭ ॥

---

ಪ್ರಕಾಶಮಾನವಾದ ಕವಚವನ್ನೂ ಖಡ್ಗ, ಗುರಾಣಿಗಳನ್ನೂ ಧರಿಸಿ ನೈಋತ್ಯದಿಕ್ಕಿನಲ್ಲೂ ನನ್ನನ್ನು ರಕ್ಷಿಸು

೩೪-೩೬. ಎಲೈ, ಹಯಗ್ರೀವನೇ, ವೈಜಯಂತೀ ಎಂಬ ಮಾಲಿಕೆಯನ್ನೂ, ಶ್ರೀವತ್ಸನೆಂಬ ರತ್ನವನ್ನೂ, ಧರಿಸಿ ವಾಯುವ್ಯದಿಕ್ಕಿನಲ್ಲೂ ನನ್ನನ್ನು ರಕ್ಷಿಸು. ನಿನಗೆ ಅನಂತ ನಮಸ್ಕಾರಗಳು. ಎಲೈ, ಶತ್ರುಗಳಿಂದ ಜಯಿಸಲ್ಪಡದ ಲೋಕೋತ್ತರಮಂಗಲ ಮೂರ್ತಿಯೇ, ಜನಾರ್ದನನೇ, ಗರುಡವಾಹನನಾದ ನೀನು ಯಾವಾಗಲೂ ಅಂತರಿಕ್ಷದಲ್ಲಿ ನನ್ನನ್ನು ರಕ್ಷಿಸು. ಎಲೈ, ಅಜಿತಮೂರ್ತಿಯೇ, ಅಪರಾಜಿತನೇ, ನನ್ನನ್ನು ರಕ್ಷಿಸು, ನಿನಗೆ ನಮಸ್ಕಾರಗಳು, ಸಮುದ್ರರೂಪನಾದ ಮತ್ಸ್ಯಮೂರ್ತಿಯೇ ವಿಶಾಲಾಕ್ಷವೆಂಬ ವಾಹನವನ್ನೇರಿ ಪಾತಾಲದಲ್ಲೂ ನನ್ನನ್ನು ರಕ್ಷಿಸು, ನಿನಗೆ ನಮಸ್ಕಾರಗಳು.

೩೭-೩೮. ಎಲೈ, ಪುರುಷೋತ್ತಮನೇ, ಕೈಗಳು, ತಲೆ, ಪಾದ, ಸರ್ವಾವಯವ ಇವುಗಳಿಂದ ರಕ್ಷಕವಾದ ಬಾಹುಪಂಜರವನ್ನೇರ್ಪಡಿಸಿ ನನ್ನನ್ನು ಸರ್ವದಿಕ್ಕುಗಳಲ್ಲೂ ರಕ್ಷಿಸು. ನಿನಗೆ ಅನಂತ ನಮಸ್ಕಾರಗಳು. ಎಲೈ ದ್ವಿಜೋತ್ತಮನಾದ ನಾರದನೇ, ಈಗ ನಾನು ಹೇಳಿದ ವೈಷ್ಣವ ಪಂಜರವು ಪೂರ್ವದಲ್ಲಿ ಭಗವಂತನಾದ ಶಂಕರನಿಂದಲೇ

ಪುರಾ ರಕ್ಷಾರ್ಥಮೀಶೇನ ಕಾತ್ಯಾಯನ್ಯೈ ದ್ವಿಜೋತ್ತಮ ।
ನಾಶಯಾಮಾಸ ಸಾ ಯತ್ರ ದಾನವಂ ಮಹಿಷಾಸುರಂ ।
ನಮರಂ ರಕ್ತಬೀಜಂ ಚ ತಥಾನ್ಯಾನ್ಸುರಕಂಟಕಾನ್ ॥ ೩೮ ॥

ನಾರದ ಉವಾಚ

ಕಶ್ಚಾಸೌ ಮಹಿಷೋ ನಾಮ ರಕ್ತಬೀಜಾದಯಶ್ಚ ಕೇ ।
ಕಾಸೌ ಕಾತ್ಯಾಯನೀ ನಾಮ ಯಾ ಜಘ್ನೇ ಮಹಿಷಾಸುರಂ ॥ ೩೯ ॥

ನಮರಂ ರಕ್ತಬೀಜಂ ಚ ತಥಾನ್ಯಾನ್ಸುರಕಂಟಕಾನ್ ।
ಕಶ್ಚಾಸೌ ಮಹಿಷೋ ನಾಮ ಕ್ವಾಸ್ತೆ ಜಾತಶ್ಚ ಕಸ್ಯ ಸಃ ॥ ೪೦ ॥

ಕಶ್ಚಾಸೌ ರಕ್ತಬೀಜಾಖ್ಯೋ ನಮರಃ ಕಸ್ಯ ಚಾತ್ಮಜಃ ।
ಏತದ್ವಿಸ್ತರತಸ್ತಾತ ಯಥಾವದ್ವಕ್ತುಮರ್ಹಸಿ ॥ ೪೧ ॥

ಪುಲಸ್ತ್ಯ ಉವಾಚ

ಶ್ರೂಯತಾಂ ಸಂಪ್ರವಕ್ಷ್ಯಾಮಿ ಕಥಾಂ ಪಾಪಪ್ರಣಾಶಿನೀಂ ।
ಸರ್ವದಾ ವರದಾ ದುರ್ಗಾ ಯೇಯಂ ಕಾತ್ಯಾಯನೀ ಮುನೇ ॥ ೪೨ ॥

---

ಕಾತ್ಯಾಯನಿಗೆ ಉಪದೇಶಿಸಲ್ಪಟ್ಟಿತು. ಇದರಿಂದ ರಕ್ಷಣೆಯನ್ನು ಹೊಂದಿದ ಕಾತ್ಯಾಯನಿಯು ತನ್ನ ಸಾಮರ್ಥ್ಯದಿಂದ ಮಹಿಷಾಸುರನನ್ನೂ ನಮರ, ರಕ್ತಬೀಜ, ಇವರುಗಳನ್ನೂ ಇತರ ರಾಕ್ಷಸರನ್ನೂ ನಾಶಪಡಿಸಿದಳು.

೩೯-೪೧. ನಾರದರು ಕೇಳುತ್ತಾರೆ, ಮಹರ್ಷಿಯೇ ಮಹಿಷನೆಂಬುವನಾರು ರಕ್ತಬೀಜಾದಿಗಳು ಯಾರು, ಮಹಿಷಾಸುರನನ್ನೂ ನಾಶಮಾಡಿದ ಕಾತ್ಯಾಯನೀ ಎಂಬುವಳಾರು, ಮತ್ತು ಮಹಿಷ, ನಮರ, ರಕ್ತಬೀಜ, ಇವರು ಯಾರ ಮಕ್ಕಳು ಎಲ್ಲಿ ಇರುತ್ತಾರೆ, ಇವೆಲ್ಲವನ್ನೂ ವಿಸ್ತಾರವಾಗಿ ದಯವಿಟ್ಟು ಹೇಳಬೇಕು.

೪೨-೪೫. ಪುಲಸ್ತ್ಯರು ಹೇಳುತ್ತಾರೆ :-ಎಲೈ ದೇವರ್ಷಿಯೇ, ಸರ್ವ ಪಾಪ ನಾಶಕವಾದ ಈ ಕಥೆಯನ್ನು ಹೇಳುತ್ತೇನೆ ಕೇಳಬೇಕು. ಸರ್ವ ವರಪ್ರದಳಾದ ದುರ್ಗಾದೇವಿಯೇ, ಇಲ್ಲಿ ಕಾತ್ಯಾಯನಿ ಎಂದುಪಕ್ರಮಿಸಿ ಪೂರ್ವದಲ್ಲಿ ಜಗತ್ತನ್ನೆಲ್ಲಾ

ಪುರಾಸುರವರೌ ರೌದ್ರೌ ಜಗತ್ಕ್ಷೋಭಕರಾವುಭೌ ।
ರಂಭಶ್ಚೈವ ಕರಂಭಶ್ಚ ದ್ವಾವಾಸ್ತಾಂ ಸುಮಹಾಬಲೌ ॥ ೪೩ ॥

ತಾವಪುತ್ರೌ ಚ ದೇವರ್ಷೇ ಪುತ್ರಾರ್ಥಂ ತೇಪತುಸ್ತಪಃ ।
ಬಹೂನ್ವರ್ಷಗಣಾನ್ ದೈತ್ಯೌ ಸ್ಥಿತೌ ಪಞ್ಚನದೇ ಜಲೇ ॥ ೪೪ ॥

ತತ್ರೈಕೋ ಜಲಮಧ್ಯಸ್ಥಃ ದ್ವಿತೀಯೋಽಪ್ಯಗ್ನಿಪಞ್ಚಮಃ ।
ಕರಂಭಶ್ಚೈವ ರಂಭಶ್ಚ ಯಕ್ಷಂ ಮಾಲವಟಂ ಪ್ರತಿ ॥ ೪೫ ॥

ಏಕಂ ನಿಮಗ್ನಂ ಸಲಿಲೇ ಗ್ರಾಹರೂಪೇಣ ವಾಸವಃ ।
ಚರಣಾಭ್ಯಾಂ ಸಮಾದಾಯ ನಿಜಘಾನ ಯಥೇಚ್ಛಯಾ ॥ ೪೬ ॥

ತತೋ ಭ್ರಾತರಿ ನಷ್ಟೇ ಚ ರಂಭಃ ಕೋಪಪರಿಪ್ಲುತಃ ।
ವಹ್ನೌ ಸ್ವಶೀರ್ಷಂ ಸಂಛಿದ್ಯ ಹೋತುಮೈಚ್ಛನ್ಮಹಾಬಲಃ ॥ ೪೭ ॥

ತತಃ ಪ್ರಗೃಹ್ಯ ಕೇಶೇಷು ಖಡ್ಗಂ ಚ ರವಿಸಪ್ರಭಂ ।
ಛೇತ್ತುಕಾಮೋ ನಿಜಂ ಶೀರ್ಷಂ ವಹ್ನಿನಾ ಪ್ರತಿಷೇಧಿತಃ ॥ ೪೮ ॥

---

ಕ್ಷೋಭಗೊಳಿಸುವಷ್ಟು ಭಯಂಕರರಾದ ರಂಭಕರಂಭರೆಂಬ ಬಲಶಾಲಿಗಳಾದ ರಾಕ್ಷಸರಿಬ್ಬರಿದ್ದರು. ಅವರು ಮಾಲವಟನೆಂಬ ಯಕ್ಷನ ಆಶ್ರಯದಲ್ಲಿದ್ದರು. ಅವರು ಅಪುತ್ರವಂತರಾಗಿದ್ದುದರಿಂದ ಪುತ್ರಪ್ರಾಪ್ತಿಗಾಗಿ ಪಂಚನದವೆಂಬ ಕ್ಷೇತ್ರದಲ್ಲಿ ಬಹುವರ್ಷಪರ್ಯಂತ ತಪಸ್ಸನ್ನು ಮಾಡತೊಡಗಿದರು. ಅವರಲ್ಲಿ ಕರಂಭನು ಜಲಮಧ್ಯದಲ್ಲಿಯೂ ರಂಭನು ಅಗ್ನಿಮಧ್ಯದಲ್ಲಿಯೂ (ನಾಲ್ಕುಕಡೆಗಳಲ್ಲೂ ಅಗ್ನಿಯನ್ನು ಜ್ವಾಲೆಗೊಳಿಸಿ ಮಧ್ಯದಲ್ಲಿ ತಾನು ನಿಂತು ಮಾಡುವ ತಪಸ್ಸು) ನಿಂತು ಉಗ್ರವಾದ ತಪಸ್ಸಿಗೆ ಪ್ರಾರಂಭಿಸಿದರು.

೪೬-೪೮. ನೀರಿನಲ್ಲಿ ಅಡಗಿ ತಪಸ್ಸನ್ನು ಮಾಡುತ್ತಿರುವ ಕರಂಭನನ್ನು ಇಂದ್ರನು ಮೊಸಳೆಯ ರೂಪದಿಂದ ಪ್ರವೇಶಿಸಿ ಕಾಲುಗಳನ್ನು ಹಿಡಿದು ಮನಬಂದಂತೆ ಹಿಂಸಿಸಿ ಕೊಂದುಹಾಕಿದನು. ಅಂತಹ ಸಹೋದರನ ನಾಶದಿಂದ ಬಹಳ ದುಃಖ ಹೊಂದಿದ ರಂಭನು ಸಾಹಸಿಯಾಗಿ ತನ್ನ ಕತ್ತನ್ನು ತಾನೇ ಕತ್ತರಿಸಿ ಅಗ್ನಿಯಲ್ಲಿ ಹೋಮಮಾಡಲು ಅಪೇಕ್ಷೆಪಟ್ಟನು. ಅಪೇಕ್ಷೆಗೆ ತಕ್ಕಂತೆ ಕೇಶಪಾಶಗಳನ್ನು ಕೈಯ್ಯಿನಿಂದ ಸೆಳೆದು ಸೂರ್ಯನಂತೆ ಜ್ವಲಿಸುವ ಕತ್ತಿಯನ್ನು ಹಿಡಿದು ತನ್ನ ತಲೆಯನ್ನೇ ಕತ್ತರಿಸಲು ಉದ್ಯುಕ್ತನಾದ ಈ ರಂಭನನ್ನು ಅಗ್ನಿಪುರುಷನೇ ತಡೆದನು.

ಉಕ್ತಶ್ಚ ಮಾ ದೈತ್ಯವರ ನಾಶಯಾತ್ಮಾನಮಾತ್ಮನಾ ।
ದುಸ್ತರಾ ಪರವಧ್ಯಾಪಿ ಸ್ವವಧ್ಯಾಪ್ಯತಿದುಸ್ತರಾ ॥ ೪೯ ॥

ಯಚ್ಚ ಪ್ರಾರ್ಥಯಸೇ ವೀರ ತದ್ದದಾಮಿ ಯಥೇಪ್ಸಿತಂ ।
ಮಾ ಮ್ರಿಯಸ್ವ ಮೃತಸ್ಯೇಹ ನಷ್ಟಾ ಭವತಿ ವೈ ಕಥಾ ॥ ೫೦ ॥

ತತೋ ಬ್ರವೀದ್ವಚೋ ರಂಭೋ ವರಂ ಚೇನ್ಮೇ ದದಾಸಿ ಹಿ ।
ತ್ರೈಲೋಕ್ಯವಿಜಯೀ ಪುತ್ರಃ ಸ್ಯಾನ್ಮೇ ತ್ವತ್ತೇಜಸಾಧಿಕಃ ॥ ೫೧ ॥

ಅಜೇಯೋ ದೈವತೈಸ್ಸರ್ವೈಃ ಯುಧಿ ದೈತ್ಯಶ್ಚ ಪಾವಕ ।
ಮಹಾಬಲೋ ವಾಯುರಿವ ಕಾಮರೂಪೀ ಕೃತಾಸ್ತ್ರವಿತ್ ॥ ೫೨ ॥

---

೪೯-೫೦. ಆ ರಂಭನನ್ನು ಕುರಿತು ಅಗ್ನಿಯು ಎಲೈ ದೈತ್ಯಶ್ರೇಷ್ಠನೇ, ನಿನ್ನನ್ನು ನೀನೇ ನಾಶಮಾಡಿಕೊಳ್ಳಬೇಡ. ಪರರ ವಧೆಯೂ ದಾಟಲಶಕ್ಯವಾದ ಮಹಾಪಾಪಕ್ಕೆ ಕಾರಣವಾಗುತ್ತದೆ. ಆತ್ಮವಧೆಯಂತೂ ಅದಕ್ಕಿಂತಲೂ ಕ್ರೂರವಾದ ಮಹಾಪಾಪಕ್ಕೆ ಕಾರಣವಾಗುತ್ತದೆ. ನೀನು ಯಾವ ಇಷ್ಟವನ್ನು ಅಪೇಕ್ಷಿಸಿ ಇಂತಹ ಸಾಹಸಕ್ಕೆ ಕೈಹಾಕಿರುವೆಯೋ ಅಂತಹ ವರವನ್ನು ನಿನ್ನ ಇಷ್ಟಬಂದಂತೆ ಕೇಳಿಕೋ, ಕೊಡುವೆನು, ಮರಣಹೊಂದಬೇಡ. ಮೃತನಾದವನಿಗೆ ಈ ಲೋಕದ ಕಥೆಯೇ ನಷ್ಟವಾದೀತು. (ಪರಲೋಕದ ಫಲಕ್ಕಾಗಿ ಸಾಹಸಪಡುವವನಿಗೆ ಮರಣವುಂಟಾದರೂ ಪರಲೋಕದ ಸುಖಕ್ಕೆ ಕುಂದಿಲ್ಲ. ಪಶು ಪುತ್ರಾದಿ ಇಹಲೋಕದ ಸುಖಸಾಧನಕ್ಕಾಗಿ ಸಾಹಸಪಡುವವನಿಗೆ ತಾನು ಬದುಕಿದ್ದರೆ ಅವುಗಳಿಂದ ಸುಖವೇ ಹೊರತು ಇಲ್ಲದಿದ್ದರೆ ಅಂತಹ ಸುಖಸಾಧನಗಳಿಂದ ತನಗೇನೂ ಫಲವಿಲ್ಲ. ಆದುದರಿಂದ ಈ ಲೋಕದ ಸುಖದಲ್ಲಿ ಆಶೆ ಇರುವವನು ಮರಣವನ್ನು ತಾನಾಗಿಯೇ ಹೊಂದಬಾರದೆಂದು ತಾತ್ಪರ್ಯ.)

೫೧-೫೨. ಅನಂತರ ರಂಭನು ಅಗ್ನಿಯನ್ನು ಕುರಿತು ನನಗೆ ಅಂತಹ ವರವನ್ನು ಕೊಡಲು ನಿನಗೆ ಇಷ್ಟವಿದ್ದಲ್ಲಿ ನಿನ್ನ ತೇಜಸ್ಸಿಗಿಂತಲೂ ಅಧಿಕ ತೇಜಸ್ಸುಳ್ಳ ಮೂರು ಲೋಕವನ್ನೂ ಜಯಿಸುವ ಪುತ್ರನು ನನಗೆ ಉಂಟಾಗಲಿ. ಎಲ್ಲಾ ದೇವತೆಗಳಿಗೂ ಅವನು ಅಜೇಯನಾಗಿರಬೇಕು. ವಾಯುವಿನಂತೆ ಮಹಾಬಲಶಾಲಿಯಾಗಿಯೂ ಕಾಮರೂಪಿಯಾಗಿಯೂ ಶಸ್ತ್ರಾಸ್ತ್ರಪಾರಂಗತನಾಗಿಯೂ ಇರಬೇಕು ಎಂದು ಕೇಳಲಾಗಿ ಅಗ್ನಿಯು ಅವನಿಗೆ ಹಾಗೇ ಆಗಲಿ ಎಂದು ವರವಿತ್ತನು. ಆದರೆ

**ತಂ ಪ್ರೋವಾಚ ಕವಿರ್ಬ್ರಹ್ಮಾ ಬಾಢಮೇವಂ ಭವಿಷ್ಯತಿ ।**
**ಯಸ್ಯಾಂ ಚಿತ್ತಂ ಸಮಾಲಂಬ್ಯ ಮರಿಷ್ಯತಿ ತತೋಽಸುರಃ** ॥ ೫೩ ॥

**ಇತ್ಯೇವಮುಕ್ತೋ ದೇವೇನ ವಹ್ನಿನಾ ದಾನವೋ ಯಯೌ ।**
**ದ್ರಷ್ಟುಂ ಮಾಲವಟಂ ಯಕ್ಷಂ ಯಕ್ಷೈಶ್ಚ ಪರಿವಾರಿತಂ** ॥ ೫೪ ॥

**ತೇಷಾಂ ಪದ್ಮನಿಧಿಸ್ತತ್ರ ವಸತೇ ನಾನ್ಯಚೇತನಃ ।**
**ಗಜಾಶ್ಚ ಮಹಿಷಾಶ್ಚಾಶ್ವಾ ಗಾವೋಽಜಾವಿಪರಿಪ್ಲುತಾಃ** ॥ ೫೫ ॥

**ತಾ ದೃಷ್ಟ್ವೈವ ತದಾ ಚಕ್ರೇ ಭಾವಂ ದಾನವಪಾರ್ಥಿವಃ ।**
**ಮಹಿಷ್ಯಾಂ ಭಾವಯುಕ್ತಾಯಾಂ ತ್ರಿಹಾಯಣ್ಯಾಂ ತಪೋಧನ** ॥ ೫೬ ॥

**ಸಾ ಸಮಾಯಾಚ್ಚ ದೈತ್ಯೇಂದ್ರಂ ಕಾಮಯಂತೀ ತರಸ್ವಿನೀ ।**
**ಸಚಾಪಿ ಗಮನಂ ಚಕ್ರೇ ಭವಿತವ್ಯಪ್ರಚೋದಿತಃ** ॥ ೫೭ ॥

**ತಸ್ಯಾಂ ಸಮಭವದ್ಗರ್ಭಃ ತಾಂ ಪ್ರಗೃಹ್ಯಾಥ ದಾನವಃ ।**
**ಪಾತಾಲಂ ಪ್ರವಿವೇಶಾಥ ತತಃ ಸ್ವಭವನಂ ಗತಃ** ॥ ೫೮ ॥

---

ಅಂತಹ ಅಸುರನು ಕಾಮಾತುರನಾಗಿ ಯಾವಳಲ್ಲಿ ಮನಸೋಲುವನೋ ಅವಳಿಂದಲೇ ಅವನು ಮೃತನಾಗುವನು ಎಂದು ಆ ವರಕ್ಕೆ ವಿಶೇಷ ನಿಯಮವನ್ನೂ ಏರ್ಪಡಿಸಿದನು.

೫೪-೫೭. ಅಗ್ನಿಯಿಂದ ಹೇಳಲ್ಪಟ್ಟ ರಂಭನು ಅನೇಕ ಯಕ್ಷರಿಂದ ಕೂಡಿರುವ ಮಾಲವಟನೆಂಬ ಯಕ್ಷನನ್ನು ನೋಡಿ ತನ್ನ ಕೃತಕೃತ್ಯತೆಯನ್ನು ತಿಳಿಸಲು ಹೊರಟನು. ಆ ಯಕ್ಷರ ಮನೆಯಲ್ಲಿ ಮತ್ತಾರಿಗೂ ಇಲ್ಲದಿರುವ ಪದ್ಮನಿಧಿಯೇ ಇದ್ದುದರಿಂದ ಅದಕ್ಕೆ ಅನುಬಂಧಿಯಾದ ಆನೆ, ಕುದುರೆ, ಎಮ್ಮೆ, ಹಸು, ಕುರಿ, ಆಡು ಮೊದಲಾದ ಸರ್ವವಿಧವಾದ ಪಶುಸಮೃದ್ಧಿಯೂ ಅಲ್ಲಿ ತುಂಬಿದ್ದಿತು. ಅವುಗಳೆಲ್ಲವನ್ನೂ ನೋಡಿ ದಾನವೇಶ್ವರನಾದ ಈ ರಂಭನು ಚನ್ನಾಗಿರುವ ಮೂರುವರ್ಷದ ಒಂದು ಎಮ್ಮೆಯಲ್ಲಿ ಕಾಮಾತುರನಾದನು. ಆ ಎಮ್ಮೆಯೂ ಕೂಡ ಕಾಮಪರವಶತೆಯಿಂದ ರಂಭನನ್ನು ಅಪೇಕ್ಷಿಸಿ ತ್ವರೆಯಿಂದ ಓಡಿಬಂದಿತು. ರಂಭನೂ ಸಹ ಭವಿತವ್ಯತೆಗೆ ಅಧೀನನಾಗಿ ಆ ಮಹಿಷಿಯಲ್ಲಿ ರಮಿಸಿದನು.

೫೮-೬೦. ಆಗ ಆ ಮಹಿಷಿಯಲ್ಲಿ ಗರ್ಭವು ಮೂಡಿತು. ಅವಳನ್ನು ಕರೆದುಕೊಂಡು ರಂಭನು ಪಾತಾಲಲೋಕಕ್ಕೆ ಹೋಗಿ ತನ್ನ ಮನೆಯನ್ನು ಸೇರಿದನು.

ಪೃಷ್ಟಶ್ಚ ದಾನವೈಸ್ಸರ್ವೈಃ ಪರಿತ್ಯಕ್ತಶ್ಚ ಬಂಧುಭಿಃ ।
ಅಕಾರ್ಯಕಾರೀಚೇತ್ಯೇವಂ ಭೂಯೋ ಮಾಲವಟಂ ಗತಃ ॥ ೫೯ ॥

ಸಾ ಪಿ ತೇನೈವಪತಿನಾ ಮಹಿಷೀ ಚಾರುದರ್ಶನಾ ।
ಸಮಂ ಜಗಾಮ ತತ್ಪುಣ್ಯಂ ಯಕ್ಷಮಂಡಲಮುತ್ತಮಂ ॥ ೬೦ ॥

ತತಸ್ತು ವಸತಸ್ತಸ್ಯ ಶ್ಯಾಮಾ ಸಾಧುವನೇ ಮುನೇ ।
ಅಜೀಜನತ್ಸುತಂ ಶುಭ್ರಂ ಮಹಿಷಂ ಕಾಮರೂಪಿಣಂ ॥ ೬೧ ॥

ಏತಾಮೃತುಮತೀಂ ಜಾತಾಂ ಮಹಿಷೋಽನ್ಯೋ ದದರ್ಶ ತಾಂ ।
ಸಾ ಚಾಭ್ಯಗಾದ್ದಿತಿವರಂ ರಕ್ಷಂತೀ ಶೀಲಮಾತ್ಮನಃ ॥ ೬೨ ॥

ಸಮುನ್ನಾಮಿತನಾಸಂ ಚ ಮಹಿಷಂ ವೀಕ್ಷ್ಯ ದಾನವಃ ।
ಖಡ್ಗಂ ನಿಷ್ಕೃಷ್ಯ ತರಸಾ ಮಹಿಷಂ ತಮುಪಾದ್ರವತ್ ॥ ೬೩ ॥

---

ಅಲ್ಲಿದ್ದ ಬಂಧುವರ್ಗಕ್ಕೆ ಸೇರಿದ ದಾನವರೆಲ್ಲರೂ ಈ ವಿಷಯದಲ್ಲಿ ಅವನನ್ನು ಪ್ರಶ್ನೆ ಮಾಡಿದರು. ವಿಷಯವು ತಿಳಿದಮೇಲೆ ಅವರೆಲ್ಲರೂ ಇವನು (ಮಹಿಷೀಗಮನದಿಂದ) ಅಕಾರ್ಯಮಾಡಿರುವನೆಂದೂ ನಿಂದ್ಯನೆಂದೂ ಇವನನ್ನು ಎಲ್ಲರೂ ಪರಿತ್ಯಾಗಮಾಡಿದರು. ಬಂಧುಗಳಿಂದ ತಿರಸ್ಕರಿಸಲ್ಪಟ್ಟ ಈ ರಂಭನು ಅವರನ್ನು ಬಿಟ್ಟು ಆಶ್ರಯಾರ್ಥಿಯಾಗಿ ಪುನಃ ಮಾಲವಟನನ್ನೇ ಸೇರಿದನು. ಗರ್ಭಿಣಿಯಾಗಿದ್ದ ಇವನ ಮಹಿಷಿಯೂ ಪತಿಯೊಡನೆ ಪುಣ್ಯಕರವಾದ ಯಕ್ಷರ ಗೋಷ್ಠಿಯನ್ನೇ ಸೇರಿದಳು.

೬೧-೬೩. ಆ ಯಕ್ಷಮಂಡಲದಲ್ಲಿ ರಂಭನು ವಾಸಮಾಡಿಕ್ಕೊಂಡಿರುವಾಗ ಸಾಧುವನದಲ್ಲಿ ಯೌವನವತಿಯಾದ ಆ ಮಹಿಷಿಯು ಶುಭ್ರನಾಗಿಯೂ ಕಾಮರೂಪಿಯಾಗಿಯೂ ಇರುವ ಮಹಿಷಾಸುರನನ್ನು ಪ್ರಸವಿಸಿದಳು. ಪ್ರಸವವಾದನಂತರ ಋತುಮತಿಯಾದ ಈ ಮಹಿಷಿಯನ್ನು ಕಾಮಾತುರವಾದ ಮತ್ತೊಂದು ಮಹಿಷವು ನೋಡಿತು. ಮಹಿಷಿಯು ಈ ಸಂದರ್ಭವನ್ನು ತಿಳಿದು ತನ್ನ ಶೀಲರಕ್ಷಣೆಗಾಗಿ ಪತಿಯಾದ ರಂಭನನ್ನು ಮರೆಹೊಕ್ಕಿತು. ಆಗ ಕಾಮಪರವಶತೆಯಿಂದ ಮೂತಿಯನ್ನು ಎತ್ತಿಕೊಂಡುಬರುತ್ತಿರುವ ಆ ಮಹಿಷವನ್ನು ನೋಡಿ ರಂಭನು ಕತ್ತಿಯನ್ನು ಒರೆಯಿಂದ ಹಿರಿದುಕೊಂಡು ವೇಗದಿಂದ ಅದನ್ನೇ ಅನುಸರಿಸಿ ಧಾವಿಸಿದನು.

ತೇನಾಪಿ ದೈತ್ಯಸ್ತ್ರೀಕ್ಷ್ಣಾಭ್ಯಾಂ ಶೃಂಗಾಭ್ಯಾಂ ಹೃದಿ ತಾಡಿತಃ ।
ನಿಭಿನ್ನಹೃದಯೋ ಭೂಮೌ ಪಪಾತ ಚ ಮಮಾರ ಚ ॥ ೬೪ ॥

ಮೃತೇ ಭರ್ತರಿ ಸಾ ಶ್ಯಾಮಾ ಯಕ್ಷಾಣಾಂ ಶರಣಂ ಗತಾ ।
ರಕ್ಷಿತಾ ಗುಹ್ಯಕೈಸ್ಸಾರ್ಧಂ ನಿವಾರ್ಯ ಮಹಿಷಂ ತತಃ ॥ ೬೫ ॥

ತತೋ ನಿವಾರಿತೋ ಯಕ್ಷೈಃ ಹಯಾರಿ ರ್ಮದನಾತುರಃ ।
ನಿಪಪಾತ ಸರೋ ದಿವ್ಯಂ ತತೋ ದೈತ್ಯೋಽಭವನ್ಮೃತಃ ॥ ೬೬ ॥

ನಮರೋ ನಾಮ ವಿಖ್ಯಾತೋ ಮಹಾಬಲಪರಾಕ್ರಮಃ ।
ಯಕ್ಷಾನಾಶ್ರಿತ್ಯ ತಸ್ಥೌ ಸಾ ಕಾಲಂ ಗಮಯತೀ ವನೇ ॥ ೬೭ ॥

ಸಚ ದೈತ್ಯೇಶ್ವರೋ ಯಕ್ಷೈರ್ಮಾಲವಟಪುರಸ್ಸರೈಃ ।
ಚಿತಾಮಾರೋಪಿತಃ ಸಾ ಚ ಶ್ಯಾಮಾ ತಂ ಚಾರುಹತ್ಪತಿಂ ॥ ೬೮ ॥

---

೬೪-೬೬. ಹೀಗೆ ಕೋಪದಿಂದ ಹೋದ ರಂಭನು ಆ ಮಹಿಷದಿಂದಲೇ ಕೊಂಬುಗಳಿಂದ ಎದೆಯಲ್ಲಿ ತಿವಿಯಲ್ಪಟ್ಟು ಹೃದಯಭೇದನದಿಂದ ಭೂಮಿಯಲ್ಲಿ ಬಿದ್ದು ಸತ್ತನು. ಪತಿಯಾದ ರಂಭನು ಮೃತನಾದಮೇಲೆ ಆಶ್ರಯವಿಲ್ಲದ ರಂಭನ ಪತ್ನಿಯಾದ ಆ ಮಹಿಷಿಯು ತನ್ನ ರಕ್ಷಣೆಗಾಗಿ ಯಕ್ಷರಲ್ಲಿ ಶರಣಾಗತಳಾದಳು. ಆ ಯಕ್ಷರು ಗುಹ್ಯಕರೊಡಗೂಡಿ ಆ ಮಹಿಷವನ್ನು ತಡೆದೋಡಿಸಿ ರಂಭನ ಪತ್ನಿಯಾದ ಮಹಿಷಿಯನ್ನು ರಕ್ಷಿಸಿದರು. ಯಕ್ಷರಿಂದ ಆ ಪ್ರಕಾರ ತಡೆಯಲ್ಪಟ್ಟ ಕಾಮಾತುರವಾದ ಆ ಮಹಿಷವು ಸಂತಾಪಹೊಂದಿ ಒಂದು ಸರೋವರದಲ್ಲಿ ಬಿದ್ದಿತು.. ಆ ದಿವ್ಯ ಸರಸ್ಸಿನಲ್ಲಿ ಬಿದ್ದವಡನೆಯೇ ಅದು ಮೃತವಾಗಿ ದೈತ್ಯರೂಪದಿಂದ ಆವಿರ್ಭಾವ ಹೊಂದಿತು. ಈ ದೈತ್ಯನೇ ಪರಾಕ್ರಮಶಾಲಿಯೆಂದು ಪ್ರಖ್ಯಾತನಾದ ನಮರನು—

೬೭-೭೧. ಯಕ್ಷರನ್ನೇ ಆಶ್ರಯಿಸಿಕೊಂಡು ರಂಭಪತ್ನಿಯಾದ ಮಹಿಷಿಯು ಆ ವನದಲ್ಲಿ ಕಾಲಯಾಪನ ಮಾಡುತ್ತಿದ್ದುದರಿಂದ ಮಾಲವಟನೇ ಮೊದಲಾದ ಆ ಯಕ್ಷರು ಮೃತನಾದ ದೈತ್ಯನನ್ನು (ರಂಭ) ಸಂಸ್ಕಾರಕ್ಕಾಗಿ ಚಿತಿಯನ್ನು ಏರಿಸಿದರು. ಪತ್ನಿಯಾದ ಮಹಿಷಿಯೂ ಪಾತಿವ್ರತ್ಯಕ್ಕೆ ತಕ್ಕಂತೆ ತಾನೇ ಚಿತಿಯನ್ನು ಏರಿದಳು.

ತತೋಽಗ್ನಿಮಧ್ಯಾದುತ್ತಸ್ಥೌ ಪುರುಷೋ ರೌದ್ರದರ್ಶನಃ ।
ವ್ಯದ್ರಾವಯತ್ಸತಾನ್ಯಕ್ಷಾನ್ ಖಡ್ಗಪಾಣಿರ್ಭಯಂಕರಃ ॥ ೬೯ ॥

ತತೋ ಹತಾಸ್ತು ಮಹಿಷಾಃ ಸರ್ವ ಏವ ಮಹಾತ್ಮನಾ ।
ವಿನಾ ಸಂರಕ್ಷಿತಾರಂ ಹಿ ಮಹಿಷಂ ರಂಭನಂದನಂ ॥ ೭೦ ॥

ಸ ನಾಮತಃ ಸ್ಮೃತೋ ದೈತ್ಯಃರಕ್ತಬೀಜೋ ಮಹಾಮುನೇ ।
ಯೋಽಜಯತ್ಸರ್ವತೋ ದೇವಾನ್ಸೇಂದ್ರರುದ್ರಾರ್ಕಮಾರುತಾನ್ ॥ ೭೧ ॥

ಏವಂ ಪ್ರಭಾವೋ ದನುಪುಂಗವೋಽಸೌ
ತೇಜೋಧಿಕಸ್ತತ್ರ ಬಭೌ ಹಯಾರಿಃ ।
ರಾಜ್ಯೇಭಿಷಿಕ್ತಶ್ಚ ಮಹಾಸುರೇನ್ದ್ರೈಃ
ವಿನಿರ್ಜಿತೈಃ ಶಂಬರತಾರಕಾದ್ಯೈಃ ॥ ೭೨ ॥

ಅಶಕ್ನುವದ್ಭಿ ಸ್ಸಹಿತೈಶ್ಚ ದೇವೈಃ
ಸಲೋಕಪಾಲೈ ಸ್ಸಹುತಾಶಭಾಸ್ಕರೈಃ ।

---

ಆಗ ಅವರ ಚಿತಾಗ್ನಿಯ ಮಧ್ಯದಿಂದ ಭಯಂಕರನಾದ ಒಬ್ಬ ಪುರುಷನು ಮೇಲಕ್ಕೆದ್ದನು. ರೌದ್ರಾಕಾರನಾದ ಆ ದೈತ್ಯನು ಕೈಯ್ಯಲ್ಲಿ ಕತ್ತಿಯನ್ನು ಹಿಡಿದುಕೊಂಡು ಅಲ್ಲಿದ್ದ ಯಕ್ಷರೆಲ್ಲರನ್ನೂ ಓಡಿಸಿದನು. ಅಲ್ಲಿದ್ದ ಮಹಿಷಗಳೆಲ್ಲವನ್ನೂ ಕೊಂದುಹಾಕಿದನು. ಎಲ್ಲರಿಗೂ ರಕ್ಷಕನಾಗಿ ರಂಭಪುತ್ರನಾದ ಮಹಿಷಾಸುರನೊಬ್ಬನೇ ಉಳಿದನು. ಈ ರೀತಿ ಚಿತಾಗ್ನಿಯಿಂದ ಹುಟ್ಟಿದ ದೈತ್ಯನೇ ರಕ್ತಬೀಜನೆಂದು ಪ್ರಸಿದ್ಧಿಪಡೆದು ಇಂದ್ರ, ರುದ್ರ, ಸೂರ್ಯ, ವಾಯು ಇವರೇ ಮೊದಲಾದ ಎಲ್ಲಾ ದೇವತೆಗಳನ್ನೂ ಜಯಿಸಿದನು.

೭೨-೭೩. ಇಂತಹ ಪ್ರಭಾವಶಾಲಿಯೂ, ತೇಜಸ್ವಿಯೂ ಆದ ಮಹಿಷಾಸುರನೆಂಬ ಈ ದೈತ್ಯನನ್ನು ಇವನಿಂದಲೇ ಜಯಿಸಲ್ಪಟ್ಟ ಶಂಬರ, ತಾರಕ ಮೊದಲಾದ ಅಸುರಶ್ರೇಷ್ಠರು ಅಸುರರಾಜ್ಯದಲ್ಲಿ ಪಟ್ಟಾಭಿಷೇಕಮಾಡಿದರು. ಅನಂತರ ಇವನ ಹಾವಳಿಯನ್ನು ಸಹಿಸಲಾರದೆ ಲೋಕಪಾಲಕರು, ಸೂರ್ಯನು ಇವರೇ ಮೊದಲಾದ

ಸ್ಥಾನಾನಿ ಮುಕ್ತಾನಿ ಶಶೀಂದ್ರಭಾಸ್ಕರೈ
ಸ್ತಮಶ್ಚ ದೂರೇ ಪ್ರತಿಯೋಜಿತಂ ಚ ॥ ೭೩ ॥

ಇತಿ ಶ್ರೀ ವಾಮನ ಪುರಾಣೇ ಮಹಿಷಾಸುರೋತ್ಪತ್ತಿರ್ನಾಮ
ಸಪ್ತದಶೋಽಧ್ಯಾಯಃ

---

ದೇವತೆಗಳು ತಮ್ಮ ತಮ್ಮ ಸ್ಥಾನಗಳೆಲ್ಲವನ್ನೂ ಬಿಟ್ಟರು. ಸೂರ್ಯಚಂದ್ರರೂ ಸ್ಥಾನಗಳನ್ನು ಬಿಟ್ಟಮೇಲೆ ಪ್ರಪಂಚವೆಲ್ಲವೂ ಅಂಧಕಾರದಿಂದ ಆವರಿಸಲ್ಪಟ್ಟಿತು.

ಇಲ್ಲಿಗೆ ಶ್ರೀ ವಾಮನಪುರಾಣದಲ್ಲಿ ಮಹಿಷಾಸುರೋತ್ಪತಿಯೆಂಬ
ಹದಿನೇಳನೆಯ ಅಧ್ಯಾಯವು ಮುಗಿದಿದೆ.

## ಅಧ್ಯಾಯಾರ್ಥ ಸಂಗ್ರಹ

ಈ ಅಧ್ಯಾಯದಲ್ಲಿ ಹಿಂದಿನ ಅಧ್ಯಾಯದಲ್ಲಿ ಆರಂಭಿಸಲ್ಪಟ್ಟ ವ್ರತವಿಶೇಷಗಳಲ್ಲೊಂದಾದ ಅಖಂಡವೆಂಬ ವೈಷ್ಣವ ವ್ರತವನ್ನು ವಿಸ್ತರಿಸಲು ಮಹಾವಿಷ್ಣುವು ಎದ್ದ ತರುವಾಯ ಅವನ ಆರಾಧನಕ್ಕೆ ಉಪಯುಕ್ತವಾದ ದೇವೋದ್ಯಾನ ಮತ್ತು ಫಲಪುಷ್ಪಗಳ ಉತ್ಪತ್ತಿಯನ್ನು ನಿರೂಪಿಸಿ ಪೂಜಾದ್ರವ್ಯಗಳಿಂದ ವಿಷ್ಣುವಿನ ಅರ್ಚನೆಯನ್ನು ಸಾಂಗವಾಗಿ ವಿವರಿಸಲಾಯಿತು. ಇದರ ಅಖಂಡಫಲಪ್ರಾಪ್ತಿಗೆ ಅಂಗವಾಗಿ ಸರ್ವರಕ್ಷಕವಾದ ವಿಷ್ಣುಪಂಜರವನ್ನೂ ನಿರೂಪಿಸಲಾಯಿತು. ಈ ವಿಷ್ಣುಪಂಜರದ ಮಾಹಾತ್ಮ್ಯ ಪ್ರಶಂಸೆಯ ಸಂದರ್ಭದಲ್ಲಿ ಕಾತ್ಯಾಯನಿಗೆ ಶಂಕರನೇ ಪೂರ್ವದಲ್ಲಿ ಇದನ್ನು ಉಪದೇಶಮಾಡಿದನೆಂಬ ಅವಾಂತರ ಕಥಾಪ್ರಸಂಗದಿಂದ ಮಹಿಷಾಸುರ, ನಮುರ, ರಕ್ತಬೀಜ ಈ ದೈತ್ಯರು ಯಾರು, ಎಂಬ ನಾರದರ ಉಪಪ್ರಶ್ನೆಗೆ ಸಮಾಧಾನವಾಗಿ ಮಹಿಷಾಸುರನ ಮತ್ತು ನಮುರ, ರಕ್ತಬೀಜರ ಉತ್ಪತ್ತಿಯನ್ನೂ ನಿರೂಪಿಸಿ ಅವರ ಪರಾಕ್ರಮಾತಿಶಯದಿಂದ ದೇವತೆಗಳೆಲ್ಲರೂ ಭಯಪಟ್ಟು ತಮ್ಮ ತಮ್ಮ ಸ್ಥಾನಗಳನ್ನೂ ಬಿಟ್ಟರೆಂದು ವರ್ಣಿಸಲಾಯಿತು.

॥ ಶ್ರೀಃ ॥

# ಶ್ರೀ ವಾಮನ ಪುರಾಣಂ

## ಅಷ್ಟಾದಶೋಽಧ್ಯಾಯಃ

ಪುಲಸ್ತ್ಯ ಉವಾಚ

ತತಸ್ತು ದೇವಾ ಮಹಿಷೇಣ ನಿರ್ಜಿತಾಃ
ಸ್ಥಾನಾನಿ ಸಂತ್ಯಜ್ಯ ಸವಾಹನಾಯುಧಾಃ ।
ಜಗ್ಮುಃ ಪುರಸ್ಕೃತ್ಯ ಪಿತಾಮಹಂ ತೇ
ದ್ರಷ್ಟುಂ ಗದಾಚಕ್ರಧರಂ ಶ್ರಿಯಃಪತಿಂ ॥ ೧ ॥

ಗತ್ವಾತ್ವಪಶ್ಯಂಶ್ಚ ಮಿಥಃ ಸುರೋತ್ತಮೌ
ಸ್ಥಿತೌ ಖಗೇಂದ್ರಾಸನಶಂಕರೌ ಹಿ ।
ದೃಷ್ಟ್ವಾ ಪ್ರಣಮ್ಯೈವ ಚ ಸಿದ್ಧಿಸಾಧಕೌ
ನ್ಯವೇದಯಂಸ್ತನ್ಮಹಿಷಾರಿಚೇಷ್ಟಿತಂ ॥ ೨ ॥

---

## ಹದಿನೆಂಟನೆಯ ಅಧ್ಯಾಯವು

೧-೨. ಅನಂತರ ದೇವತೆಗಳೆಲ್ಲರೂ ಮಹಿಷಾಸುರನಿಂದ ಪರಾಜಿತರಾಗಿ ತಮ್ಮ ತಮ್ಮ ಅಧಿಕಾರಗಳೆಲ್ಲವನ್ನೂ ಬಿಟ್ಟು ತಮ್ಮ ತಮ್ಮ ವಾಹನ ಮತ್ತು ಆಯುಧಗಳೊಡನೆ ಚತುರ್ಮುಖನನ್ನು ಮುಂದಿಟ್ಟುಕೊಂಡು ಶ್ರಿಯಃಪತಿಯಾದ ನಾರಾಯಣನನ್ನು ನೋಡಲು ಹೊರಟರು. ಹೋಗಿ ನಾರಾಯಣನೂ ಶಂಕರನೂ ಅನ್ಯೋನ್ಯಸಂಭಾಷಣೆ ಮಾಡುತ್ತಾ ಕುಳಿತಿರುವಾಗ ಅವರನ್ನು ನೋಡಿ ನಮಸ್ಕರಿಸಿ ತಮ್ಮ ಕಾರ್ಯಸಿದ್ಧಿಗೆ ತಕ್ಕಂತೆ ಈ ಮಹಿಷಾಸುರನ ವ್ಯವಹಾರವೆಲ್ಲವನ್ನೂ ಅವರಲ್ಲಿ ವಿಜ್ಞಾಪಿಸಿಕೊಂಡರು.

ಪ್ರಭೋಽಶ್ವಿಸೂರ್ಯೇಂದ್ವನಿಲಾಗ್ನಿವೇಧಸಾಂ
ಜಲೇಶಶಕ್ರಾದಿಸುರಾಧಿಕಾರಾ೯ ।
ಆಕ್ರಮ್ಯ ನಾಕಾತ್ತು ನಿರಾಕೃತಾ ವಯಂ
ಕೃತಾವನಿಸ್ಥಾ ಮಹಿಷಾಸುರೇಣ ॥ ೩ ॥

ಏತದ್ಭವಂತೌ ಶರಣಾಗತಾನಾಂ
ಶ್ರುತ್ವಾ ವಚೋ ಬ್ರೂತ ಹಿತಂ ಸುರಾಣಾಂ ।
ನಚೇದ್ವ್ರಜಾಮೋದ್ಯ ರಸಾತಲಂ ಹಿ
ಸಂಕಾಲ್ಯಮಾನಾ ಯುಧಿ ದಾನವೇನ ॥ ೪ ॥

ಇತ್ಥಂ ಮುರಾರಿಸ್ಸಹ ಶಂಕರೇಣ
ಶ್ರುತ್ವಾ ವಚೋ ವಿಪ್ಲುತಚೇತಸಾಂಹಿ ।
ದೃಷ್ಟ್ವಾತ್ರ ಚಕ್ರೇ ಸಹಸೈವ ಕೋಪಂ
ಕಾಲಾಗ್ನಿಕಲ್ಪೋ ಹರಿರವ್ಯಯಾತ್ಮಾ ॥ ೫ ॥

---

ಎಲೈ ಪ್ರಭುವೇ, ಅಶ್ವಿನೀ ದೇವತೆಗಳು, ಸೂರ್ಯ, ಚಂದ್ರ, ಅಗ್ನಿ, ವಾಯು, ಬ್ರಹ್ಮ, ವರುಣ, ಇಂದ್ರ ಇವರೇ ಮೊದಲಾದ ದೇವತೆಗಳ ಅಧಿಕಾರವನ್ನೆಲ್ಲಾ ಆಕ್ರಮಿಸಿ ಕೊಂಡು ಈ ಮಹಿಷಾಸುರನು ಸ್ವರ್ಗದಲ್ಲಿರುವ ದೇವತೆಗಳನ್ನೆಲ್ಲಾ ಭೂಮಿಗೆ ತಳ್ಳಿ ನಮ್ಮನ್ನು ಈ ರೀತಿ ತಿರಸ್ಕರಿಸುತ್ತಿದ್ದಾನೆ.

೪-೬. ಸ್ಥಾನಭ್ರಷ್ಟರಾಗಿ ತಮ್ಮಲ್ಲಿ ಶರಣಾಗತರಾಗಿ ಬಂದಿರುವ ಈ ನಮ್ಮ ಪ್ರಾರ್ಥನೆಯನ್ನು ಲಾಲಿಸಿ ಈ ಸಮಯದಲ್ಲಿ ದೇವತೆಗಳಿಗೆ ಯಾವದು ಹಿತವೆಂಬುದನ್ನು ಅಪ್ಪಣೆ ಕೊಡಿಸಬೇಕು. ಹಾಗಿಲ್ಲದಿದ್ದರೆ (ನಿಮ್ಮಿಂದಲೂ ಅಭಯದಾನವು ದೊರೆಯು ದಿದ್ದರೆ) ಈ ರಾಕ್ಷಸನಿಂದ ಓಡಿಸಲ್ಪಟ್ಟ ನಾವು ಪಾತಾಳಕ್ಕೆ ಹೋಗಿ ಅಲ್ಲಿ ಜೀವಿಸ ಬೇಕಾಗಬಹುದು. ಈರೀತಿ ಮನನೊಂದ ದೇವತೆಗಳ ದೈನ್ಯವಚನವನ್ನು ಕೇಳಿ ಶಂಕರನೊಡಗೂಡಿದ ನಾರಾಯಣನು ಈ ವಿಷಯದಲ್ಲಿ ಪ್ರತೀಕಾರವನ್ನು ಆಲೋಚಿಸಿ ಪ್ರಳಯಕಾಲದ ಅಗ್ನಿಯಂತೆ ಜ್ವಲಿಸುತ್ತಾ ವೇಗದಿಂದ ಅತ್ಯುಗ್ರವಾದ ಕೋಪವನ್ನು ತಾಳಿದನು. ಆ ಪ್ರಕಾರವಾದ ಮಧುಸೂದನನ ಕೋಪವನ್ನನುಸರಿಸಿ ಬ್ರಹ್ಮನೂ

ತತೋಽನು ಕೋಪಾನ್ಮಧುಸೂದನಸ್ಯ
ಸಶಂಕರಸ್ಯಾಪಿ ಪಿತಾಮಹಸ್ಯ ।
ತಥೈವ ಶಕ್ರಾದಿಷು ದೈವತೇಷು
ಮಹರ್ಧಿ ತೇಜೋ ವದನಾದ್ಧಿ ನಿಸ್ಸೃತಂ ॥ ೬ ॥

ತಚ್ಚೈಕತಾಂ ಪರ್ವತಕೂಟಸನ್ನಿಭಂ
ಜಗಾಮ ತೇಜಃ ಪ್ರವರಾಶ್ರಮೇ ಮುನೇ ।
ಕಾತ್ಯಾಯನಸ್ಯಾಪ್ರತಿಮೇನ ತೇಜಸಾ
ಮಹರ್ಷಿಣಾ ತೇಜ ಉಪಾಕೃತಂ ಚ ॥ ೭ ॥

ತೇನರ್ಷಿಸೃಷ್ಟೇನ ಚ ತೇಜಸಾ ವೃತಂ
ಜ್ವಲತ್ಪ್ರಕಾಶಾರ್ಕಸಹಸ್ರತುಲ್ಯಂ ।
ತಸ್ಮಾಚ್ಚ ಜಾತಾ ತರಲಾಯತಾಕ್ಷೀ
ಕಾತ್ಯಾಯನೀ ಯೋಗವಿಶುದ್ಧದೇಹಾ ॥ ೮ ॥

---

ಶಂಕರನೂ ಕೋಪವನ್ನು ತಾಳಿದರು. ಅದನ್ನು ಅನುಸರಿಸಿ ಇಂದ್ರಾದಿ ದೇವತೆಗಳೆಲ್ಲರೂ ಕುಪಿತರಾದರು. ಈ ಪ್ರಕಾರ ಆ ದೇವತೆಗಳ ಗೋಷ್ಠಿಯಿಂದ ಎಲ್ಲರ ಮುಖದಿಂದಲೂ ಉಂಟಾದ ಅದ್ಭುತವಾದ ಒಂದು ತೇಜಸ್ಸೇ ಹೊರಬಿದ್ದಿತು.

೭-೮. ಆ ತೇಜಸ್ಸೆಲ್ಲವೂ ಏಕೀಭವಿಸಿ ಬೆಟ್ಟದ ಶಿಖರದಂತೆ ಮಹಾಪ್ರಮಾಣವನ್ನು ಹೊಂದಿ ಸಮೀಪದಲ್ಲಿದ್ದ ಕಾತ್ಯಾಯನಋಷಿಯ ಪುಣ್ಯಾಶ್ರಮದಲ್ಲಿ ಪ್ರವಹಿಸಿತು. ಆ ಮಹರ್ಷಿಯೂ ತನ್ನ ಅಸದೃಶವಾದ ತೇಜಸ್ಸಿನಿಂದ ಈ ತೇಜಃಪುಂಜವನ್ನು ಮಂತ್ರಸಂಸ್ಕಾರಪೂರ್ವಕವಾಗಿ ಸ್ವೀಕರಿಸಿದನು. ಮಹರ್ಷಿಯ ತೇಜಸ್ಸಿನಿಂದ ಸಂಸ್ಕೃತವಾಗಿ ಹೊರಗೆ ಬಿಡಲ್ಪಟ್ಟ ಆ ತೇಜಸ್ಸು ಸೂರ್ಯಸಹಸ್ರಪ್ರಕಾಶಕ್ಕೆ ಸಮವಾಗಿ ಜ್ವಲಿಸಿತು. ಅಂತಹ ತೇಜಃಪುಂಜದಿಂದ ಯೋಗಬಲದಿಂದ ಪರಿಶುದ್ಧವಾದ ದೇಹವುಳ್ಳ ಸುಂದರಾಂಗಿಯಾದ ಕಾತ್ಯಾಯನಿ ಎಂಬ ದಿವ್ಯ ವಧುವು ಆವಿರ್ಭವಿಸಿದಳು.

ಮಾಹೇಶ್ವರಾದ್ವಕ್ತ್ರಮತೋ ಬಭೂವ
ನೇತ್ರತ್ರಯಂ ಪಾವಕತೇಜಸಾ ಚ ।
ಯಾಮ್ಯೇನ ಕೇಶಾ ಹರಿತೇಜಸಾ ಚ
ಭುಜಾಸ್ತಥಾಷ್ಟಾದಶ ಸಂಪ್ರಜಜ್ಞಿರೇ ॥ ೯ ॥

ಸೌಮ್ಯೇನ ಯುಗ್ಮಂ ಸ್ತನಯೋಃ ಸುಸಂಹಿತಂ
ಮಧ್ಯಂ ತಥೈಂದ್ರೇಣ ಚ ತೇಜಸಾ ಭವತ್ ।
ಊರೂರುಜಂಘೇ ಚ ನಿತಂಬಸಂಯುತೌ
ಜಾತೌ ಜಲೇಶಸ್ಯ ತು ತೇಜಸಾ ಹಿ ॥ ೧೦ ॥

ಪಾದೌ ಚ ಲೋಕಪ್ರಪಿತಾಮಹಸ್ಯ
ಪದ್ಮಾಭಿಕೋಶಪ್ರತಿಮೌ ಬಭೂವತುಃ ।
ದಿವಾಕರಾಣಾಮಪಿ ತೇಜಸಾಂಗುಲೀಃ
ಕರಾಂಗುಲೀರ್ವಾಸವತೇಜಸಾ ಚ ॥ ೧೧ ॥

ಪ್ರಜಾಪತೀನಾಂ ದಶನಾಶ್ಚ ತೇಜಸಾ
ಯಾಕ್ಷೇಣನಾಸಾ ಶ್ರವಣೌ ಚ ಮಾರುತಾತ್ ।
ಸಾಧ್ಯೇನ ಚ ಭ್ರೂಯುಗಲಂ ಸುಕಾಂತಿಮ
ತ್ಕಂದರ್ಪಬಾಣಾಸನಸನ್ನಿಭಂ ಬಭೌ ॥ ೧೨ ॥

---

೯-೧೨. (ಈ ಪ್ರಕಾರ ದೇವತಾಗ್ರಗಣ್ಯರ ಕೋಪಾಗ್ನಿತೇಜಸ್ಸಿನಿಂದ ಉದ್ಭವಿಸಿ ಕಾತ್ಯಾಯನ ಮಹರ್ಷಿಯಿಂದಲೂ ಅನುಗ್ರಹಿಸಲ್ಪಟ್ಟ ಕಾತ್ಯಾಯನಿಯ ದಿವ್ಯ ದೇಹದಲ್ಲಿ ಆಯಾಯ ದೇವತೆಗಳ ತೇಜಸ್ಸನ್ನು ಅವಯವ ವಿಭಾಗದಿಂದ ನಿರೂಪಿಸುತ್ತಾರೆ.) ರುದ್ರದೇವರ ತೇಜಸ್ಸಿನಿಂದ ಮುಖವು ಉತ್ಪನ್ನವಾಯಿತು. ಅಗ್ನಿಯ ತೇಜಸ್ಸಿನಿಂದ ಮೂರು ನೇತ್ರಗಳೂ, ಯಮನ ತೇಜಸ್ಸಿನಿಂದ ಕೇಶಪಾಶಗಳೂ, ನಾರಾಯಣನ ತೇಜಸ್ಸಿನಿಂದ ಹದಿನೆಂಟು ಭುಜಗಳೂ ಉಂಟಾದವು. ಹಾಗೆಯೇ ಚಂದ್ರನ ತೇಜಸ್ಸಿನಿಂದ ಪರಸ್ಪರಹೊಂದಿಕೊಂಡಿರುವ ಸ್ತನಯುಗ್ಮವೂ, ಇಂದ್ರನ ತೇಜಸ್ಸಿನಿಂದ ಮಧ್ಯಭಾಗವೂ, ವರುಣನ ತೇಜಸ್ಸಿನಿಂದ ತೊಡೆಗಳು ಮತ್ತು ಮೊಣಕಾಲುಗಳು ಮತ್ತು ನಿತಂಬಪ್ರದೇಶ ಇವು ಉಂಟಾದವು. ಲೋಕಕ್ಕೆ ಪ್ರಪಿತಾಮಹನಾದ ನಾರಾಯಣನ ಪದ್ಮಕೋಶದಂತೆ ರಮಣೀಯವಾದ ಪಾದಪದ್ಮಯುಗಗಳು ಉಂಟಾದವು. ದ್ವಾದಶಾದಿತ್ಯರ ತೇಜಸ್ಸುಗಳಿಂದ ಪಾದದ ಬೆರಳುಗಳೂ, ಇಂದ್ರನ ತೇಜಸ್ಸಿನಿಂದ ಕೈಬೆರಳುಗಳೂ, ಪ್ರಜಾಪತಿಗಳ ತೇಜಸ್ಸಿನಿಂದ ಮನ್ಮಥನ ಧನುಸ್ಸಿನಂತೆ ರಮಣೀಯವಾಗಿರುವ ಹುಬ್ಬುಗಳೆರಡೂ ಕಾಂತಿಯಿಂದ ಮೆರೆದವು.

ತಚ್ಚಾಪಿ ತೇಜೋತ್ತಮ ಮುತ್ತಮಂ ಮಹ
ನ್ನಾಮ್ನಾ ಪೃಥಿವ್ಯಾ ಮಭವತ್ಪ್ರಸಿದ್ಧಾ ।
ಕಾತ್ಯಾಯನೀತ್ಯೇವ ತದಾ ಬಭೌ ಸಾ
ನಾಮ್ನಾ ಚ ತೇನೈವ ಜಗತ್ಪ್ರಸಿದ್ಧಾ ॥ ೧೩ ॥

ದದೌ ತ್ರಿಶೂಲಂ ವರದಸ್ತ್ರಿಶೂಲೀ
ಚಕ್ರಂ ಮುರಾರಿರ್ವರುಣಶ್ಚ ಶಂಖಂ ।
ಶಕ್ತಿಂ ಹುತಾಶಃ ಶ್ವಸನಶ್ಚ ಚಾಪಂ
ತೂಣಂ ತಥಾ ಕ್ಷಯ್ಯಶರೌ ವಿವಸ್ವಾನ್ ॥ ೧೪ ॥

ವಜ್ರಂ ತಥೇಂದ್ರಃ ಸಹಘಂಟಯಾ ಚ
ಯಮೋಥ ದಂಡಂ ಧನದೋ ಗದಾಂ ಚ ।
ಬ್ರಹ್ಮಾಕ್ಷಮಾಲಾಂ ಸಕಮಂಡಲುಂ ಚ
ಕಾಲೋಽಸಿಮುಗ್ರಂ ಸಹ ಚರ್ಮಣಾ ಚ ॥ ೧೫ ॥

ಹಾರಂ ಚ ಸೋಮಃ ಸಹ ಚಾಮರೇಣ
ಮಾಲಾಂ ಸಮುದ್ರೋ ಹಿಮವಾನ್ಮೃಗೇಂದ್ರಂ ।

---

೧೩-೧೭. (ಈ ಪ್ರಕಾರ ದೇವತೆಗಳ ತೇಜಸ್ಸುಗಳಿಂದ ಪರಿಪೂರ್ಣದೇಹಳಾದ ಕಾತ್ಯಾಯನೀದೇವಿಗೆ ದೇವತೆಗಳ ಅನುಗ್ರಹದಿಂದಲೇ ಉಂಟಾದ ಶಸ್ತ್ರಾಸ್ತ್ರಸಮೃದ್ಧಿಯನ್ನೂ ನಿರೂಪಿಸುತ್ತಾರೆ.) ಈ ರೀತಿ ದೇವತೆಗಳ ತೇಜಸ್ಸಂವಲನದಿಂದ ಉಂಟಾದ ಉತ್ತಮೋತ್ತಮವಾದ ಆ ತೇಜಸ್ಸು ಜಗತ್ತಿನಲ್ಲಿ ಕಾತ್ಯಾಯನೀ ಎಂದು ಅದೇ ಹೆಸರಿನಿಂದ ಪ್ರಸಿದ್ಧಿಹೊಂದಿತು. ಆ ಕಾತ್ಯಾಯನಿಗೆ ವರಪ್ರದನಾದ ಶಂಕರನು ತ್ರಿಶೂಲವನ್ನೂ, ನಾರಾಯಣನು ಚಕ್ರವನ್ನೂ, ವರುಣನು ಶಂಖವನ್ನೂ, ಅಗ್ನಿಯು ಶಕ್ತ್ಯಾಯುಧವನ್ನೂ, ವಾಯುವು ಧನುಸ್ಸನ್ನೂ, ಸೂರ್ಯನು ಅಕ್ಷಯವಾದ ಬಾಣಬತ್ತಳಿಕೆಗಳನ್ನೂ, ಇಂದ್ರನು ವಜ್ರಾಯುಧವನ್ನೂ, ಯಮನು ಘಂಟೆಯೊಡಗೂಡಿದ ದಂಡವನ್ನೂ, ಕುಬೇರನು ಗದೆಯನ್ನೂ, ಚತುರ್ಮುಖನು ಅಕ್ಷಮಾಲೆ ಕಮಂಡಲುಗಳನ್ನೂ ಪುನಃ ಯಮನು ನಿಶಿತವಾದ ಕತ್ತಿ ಮತ್ತು ಗುರಾಣಿ ಇವುಗಳನ್ನೂ, ಚಂದ್ರನು ಹಾರವನ್ನೂ, ಸಮುದ್ರರಾಜನು ಚಾಮರ ಮತ್ತು ರತ್ನಮಾಲೆ ಇವುಗಳನ್ನೂ, ಹಿಮವಂತನು ಸಿಂಹವನ್ನೂ, ದೇವಶಿಲ್ಪಿಯಾದ ವಿಶ್ವಕರ್ಮನು ಚೂಡಾಮಣಿ ಕಿವಿಯ ಕುಂಡಲ

ಚೂಡಾಮಣಿಂ ಕುಂಡಲಮರ್ಧಚಂದ್ರಂ
ಪ್ರಾದಾತ್ಕುಠಾರಂ ಸುರಶಿಲ್ಪಕರ್ತಾ ॥ ೧೭ ॥

ಗಂಧರ್ವರಾಜೋ ರಜತಾನುಲಿಪ್ತಂ
ಪಾನಸ್ಯ ಪೂರ್ಣಂ ಸದೃಶಂ ಚ ಭಾಜನಂ ।
ಭುಜಂಗಹಾರಂ ಭುಜಗೇಶ್ವರೋಽಪಿ
ಅಮ್ಲಾನಪುಷ್ಪಾಮೃತವಃ ಸ್ರಜಂ ಚ ॥ ೧೮ ॥

ತದಾತಿತುಷ್ಟಾ ಸುರಸತ್ತಮಾ ಸಾ
ಅಟ್ಟಾಟ್ಟಹಾಸಂ ಮುಮುಚೇ ತ್ರಿನೇತ್ರಾ ।
ತಾಂ ತುಷ್ಟುವುರ್ದೇವವರಾ ಸ್ಸಹೇಂದ್ರಾಃ
ಸವಿಷ್ಣುರುದ್ರೇಂದ್ವನಿಲಾಗ್ನಿಭಾಸ್ಕರಾಃ ॥ ೧೯ ॥

ನಮೋಽಸ್ತು ದೇವ್ಯೈ ಸುರಪೂಜಿತಾಯೈ
ಯಾ ಸಂಸ್ಥಿತಾ ಯೋಗವಿಶುದ್ಧದೇಹಾ ।

---

ಗಳು, ಮತ್ತು ಅಲಂಕಾರರೂಪನಾದ ಅರ್ಧಚಂದ್ರ ಮತ್ತು ಕೊಡಲಿ ಇವುಗಳನ್ನೂ, ಗಂಧರ್ವರಾಜನು ಪಾನಕ್ಕೆ ಯೋಗ್ಯವಾಗಿಯೂ, ಉಚಿತವಾಗಿಯೂ ಇರುವ ಬೆಳ್ಳಿಯ ಪಾತ್ರೆಯನ್ನೂ, ಸರ್ಪರಾಜನು ಭುಜಂಗಹಾರಗಳನ್ನೂ, ಋತುಗಳೆಲ್ಲವೂ ಬಾಡದೆ ಇರುವ ಹೂವುಗಳುಳ್ಳ ಹೂವಿನ ಹಾರವನ್ನೂ ಕೊಟ್ಟು ತಮ್ಮ ತಮ್ಮ ಸಂತೋಷ ವನ್ನು ವ್ಯಕ್ತಪಡಿಸಿದರು.

೧೯-೨೦. ಈ ಪ್ರಕಾರವಾದ ದೇವತೆಗಳ ಅನುಗ್ರಹದಿಂದ ಸಂತುಷ್ಟಳಾದ ಆ ದೇವತೋತ್ತಮಳಾದ ಕಾತ್ಯಾಯನಿಯು ಮೂರು ಕಣ್ಣುಗಳನ್ನೂ ಪ್ರಕಾಶಗೊಳಿಸುತ್ತಾ ಘಟ್ಟಿಯಾಗಿ ಮಹಾಟ್ಟಹಾಸವನ್ನು ಮಾಡಿದಳು. ಆಗ ಕಾತ್ಯಾಯನಿಯನ್ನು ಇಂದ್ರ, ಅಗ್ನಿ, ವಿಷ್ಣು, ರುದ್ರ, ವಾಯು, ಸೂರ್ಯ ಮೊದಲಾದ ದೇವತೆಗಳೆಲ್ಲರೂ ಸ್ತೋತ್ರಮಾಡಿದರು. ದೇವತೆಗಳಿಂದಲೂ ಪೂಜಿಸಲ್ಪಟ್ಟ ಎಲೈ ದೇವಿಯೇ ನಿನಗೆ ನಮಸ್ಕಾರಗಳು. ಯೋಗದಿಂದ ಶುದ್ಧಳಾಗಿಯೂ, ಸುಪ್ರತಿಷ್ಠಿತಳಾಗಿಯೂ ಇರುವ ಯಾವ ನೀನು ನಿದ್ರಾರೂಪವಾದ ಮಾಯೆಯಿಂದ(ಪ್ರಕೃತಿಸಂಸರ್ಗದಿಂದ) ಜಗತ್ತನ್ನು ವಿಸ್ತರಿಸಿ ಬಾಯಾರಿಕೆ, ಲಜ್ಜೆ, ಹಸಿವು, ಭಯ ಮುಂತಾದುವನ್ನು ಚೇತನರಿಗೆ ಉಂಟು ಮಾಡುತ್ತಿರುವೆಯೋ ಮತ್ತು ಕಾಂತಿ (ಶೋಭಾವಿಶೇಷ) ಶ್ರದ್ಧಾ (ಆಸ್ತಿಕ್ಯ ಅಥವ

ನಿದ್ರಾಸ್ವರೂಪೇಣ ಮಹೀಂ ವಿತತ್ಯ
ತೃಷ್ಣಾತ್ರಪಾಕ್ಷುದ್ಭಯದಾ ಚ ಕಾಂತಿಃ ॥ ೧೯ ॥

ಶ್ರದ್ಧಾ ಸ್ಮೃತಿಃ ಪುಷ್ಟಿರಥೋ ಕ್ಷಮಾ ಚ
ಛಾಯಾ ಚ ಶಕ್ತಿಃ ಕಮಲಾಲಯಾ ಚ ।
ಮೇಧಾ ಸ್ಮೃತಿಃ ಕ್ಷಾಂತಿರಥೇಹ ಮಾಯಾ
ನಮೋಸ್ತು ದೇವ್ಯೈ ಭವಿತವ್ಯತಾಯೈ ॥ ೨೦ ॥

ತತಸ್ತುತಾ ದೇವವರೈಃ ಮೃಗೇಂದ್ರ
ಮಾರುಹ್ಯ ದೇವೀ ಪ್ರಗತಾ ವನಾಢ್ಯಂ ।
ವಿಂಧ್ಯಂ ಮಹಾಪರ್ವತಮುಚ್ಚಶೃಂಗಂ
ಚಕಾರ ಯಂ ನಿಮ್ನತರಂ ತ್ವಗಸ್ತ್ಯಃ ॥ ೨೧ ॥

ನಾರದ ಉವಾಚ

ಕಿಮರ್ಥಮದ್ರಿಂ ಭಗವಾನಗಸ್ತ್ಯಃ
ತಂ ನಿಮ್ನಶೃಂಗಂ ಕೃತವಾನ್ಮಹರ್ಷಿಃ ।

---

ಆದರ) ಸ್ಮೃತಿ (ಸ್ಮರಣವೆಂಬಮನೊವ್ಯಾಪಾರ) ಪುಷ್ಟಿ (ಉತ್ಕರ್ಷ) ಕ್ಷಮಾ (ಸಹನ ಸಾಮರ್ಥ್ಯ) ಛಾಯಾ (ನೆರಳು ಅಥವಾ ಆನುಕೂಲ್ಯವೆಂಬ ಚಿತ್ತವೃತ್ತಿ) ಶಕ್ತಿ (ಸಾಮರ್ಥ್ಯ) ಕಮಲಾಲಯಾ (ಸಂಪತ್ತು) ಮೇಧಾ(ತೀಕ್ಷ್ಣವಾದಬುದ್ಧಿ) ಮಾಯಾ (ಅಜ್ಞಾನ) ಇವುಗಳ ಸ್ವರೂಪವೇ ಆಗಿರುವೆಯೋ ಅಂತಹ ಅದೃಷ್ಟರೂಪಳಾಗಿರುವ ನಿನಗೆ ನಮಸ್ಕಾರಗಳು. (ಇಲ್ಲಿ ಹೇಳಿರುವ ಕಾಂತಿ ಮೊದಲಾದ ಪದಾರ್ಥಗಳೆಲ್ಲವೂ ಪ್ರಕೃತಿಸಂಸರ್ಗದಿಂದುಂಟಾದ ಸಂಸಾರದ ಫಲವಾದುದರಿಂದ ಇದಕ್ಕೆಲ್ಲಾ ಪ್ರೇರಕಳಾದ ಅವಳೇ ಕಾರಣವಾಗಿರುವದ್ದರಿಂದ ಕಾರ್ಯಕಾರಣಗಳ ಅಭೇದೋಪಚಾರದಿಂದ ಇವೆಲ್ಲವೂ ಅವಳ ಸ್ವರೂಪವೇ ಆಗಿರುವದೆಂದು ತಾತ್ಪರ್ಯ.)

೨೧-೨೨. ದೇವತೆಗಳಿಂದ ಈ ರೀತಿ ಸ್ತೋತ್ರಮಾಡಲ್ಪಟ್ಟ ದೇವಿಯು ತನ್ನ ಕಾರ್ಯನಿರ್ವಾಹಕ್ಕಾಗಿ ಹಿಮವಂತನಿಂದ ಕೊಡಲ್ಪಟ್ಟಿದ್ದ ಸಿಂಹವನ್ನೇ ವಾಹನವನ್ನಾಗಿ ಮಾಡಿಕ್ಕೊಂಡು ಸರ್ವಾಯುಧಸಮೇತಳಾಗಿ ವನದುರ್ಗಗಳಿಂದ ಕೂಡಿದ ಯಾವ ವಿಂಧ್ಯಪರ್ವತದ ಶಿಖರವು ಅಗಸ್ತ್ಯರಿಂದ ಕುಳ್ಳಾಗಿ ಮಾಡಲ್ಪಟ್ಟಿತೋ ಅಂತಹ ವಿಂಧ್ಯ ಪರ್ವತಕ್ಕೆ ಹೊರಟಳು. ಇದನ್ನು ಕೇಳಿ ನಾರದರು ಮಹಾತ್ಮರಾದ ಅಗಸ್ತ್ಯಮಹರ್ಷಿ

ಕಸ್ಮೈ ಕೃತೇ ಕೇನ ಚ ಕಾರಣೇನ
ಏತದ್ವದಸ್ವಾ ಮಲಸತ್ತ್ವವೃತ್ತ ॥ ೨೨ ॥

ಪುಲಸ್ತ್ಯ ಉವಾಚ

ಪುರಾ ಹಿ ವಿಂಧ್ಯೇನ ದಿವಾಕರಸ್ಯ
ಗತಿರ್ನಿರುದ್ಧಾ ಗಗನೇಚರಸ್ಯ ।
ರವಿಸ್ತತಃ ಕುಂಭಭವಂ ಸಮೇತ್ಯ
ಹೋಮಾವಸಾನೇ ವಚನಂ ಬಭಾಷೆ ॥ ೨೩ ॥

ಸಮಾಗತೋಽಹಂ ದ್ವಿಜ ದೂರತಸ್ತ್ವಾಂ
ಕುರುಷ್ವ ವಿಶ್ವೋದ್ಧರಣಂ ಮುನೀಂದ್ರ ।
ದದಸ್ವ ದಾನಂ ಮಮ ಯನ್ಮನೀಷಿತಂ
ಚರಾಮಿ ಯೇನ ತ್ರಿದಿವೇಷು ನಿರ್ವೃತಃ ॥ ೨೪ ॥

ಇತ್ಥಂ ದಿವಾಕರವಚೋ ಗುಣಸಂಪ್ರಯೋಗಿ
ಶ್ರುತ್ವಾ ತದಾ ಕಲಶಜೋ ವಚನಂ ಬಭಾಷೆ ।
ದಾನಂ ದದಾಮಿ ತವ ಯನ್ಮನಸಸ್ತ್ವಭೀಷ್ಟಂ
ನಾರ್ಥೀ ಪ್ರಯಾತಿ ವಿಮುಖೋ ಮಮ ಕಶ್ಚಿದೇವ ॥ ೨೫ ॥

---

ಗಳು ವಿಂಧ್ಯಪರ್ವತದ ಶಿಖರವನ್ನು ಏತಕ್ಕೆ ಕುಳ್ಳಾಗಿಮಾಡಿದರು. ಇದಕ್ಕೆ ಕಾರಣ ವೇನು, ಪ್ರಯೋಜನವೂ ಏನು ಇದನ್ನು ದಯವಿಟ್ಟು ಮಹಾಮತಿಗಳಾದ ತಾವು ಅಪ್ಪಣೆ ಕೊಡಿಸಬೇಕು ಎಂದು ಪ್ರಶ್ನೆಮಾಡಲಾಗಿ

೨೩-೨೭. ಪುಲಸ್ತ್ಯರು ಹೇಳುತ್ತಾರೆ: ಪೂರ್ವಕಾಲದಲ್ಲಿ ಗಗನಸಂಚಾರಿಯಾದ ಸೂರ್ಯನ ಗತಿಯು ಉನ್ನತವಾದ ವಿಂಧ್ಯಪರ್ವತದಿಂದ ತಡೆಯಲ್ಪಟ್ಟಿತು. ಆಗ ಸೂರ್ಯನು ಅಗಸ್ತ್ಯಮಹರ್ಷಿಗಳ ಸಮೀಪಕ್ಕೆ ಹೋಗಿ ಅವರ ಹವನಹೋಮಾದಿ ನಿತ್ಯಕರ್ಮಗಳು ಮುಗಿದನಂತರ ಅವರನ್ನು ಕುರಿತು ಹೀಗೆ ಹೇಳಿದನು. ಎಲೈ ಬ್ರಾಹ್ಮಣೋತ್ತಮನೇ, ಮುನಿವರ್ಯನೇ ನಾನು ಬಹುದೂರದಿಂದ ನಿನ್ನನ್ನು ನೋಡಲು ಬಂದಿದ್ದೇನೆ. ಅರ್ಥಿಯಾಗಿ ಬಂದಿರುವ ನನಗೆ ವಿಶ್ವವನ್ನು ಉದ್ಧರಿಸಲು ಅಭಿಮತವಾದದಾನವೊಂದನ್ನು ನೀನು ಅನುಗ್ರಹಿಸಬೇಕು. ಹಾಗೆ ಮಾಡಿದಲ್ಲಿ ನಾನು ಮೂರು ಲೋಕಗಳಲ್ಲೂ ಸಂತೋಷದಿಂದ ಸಂಚರಿಸಲವಕಾಶವಾದೀತು ಎಂದು ಪ್ರಾರ್ಥಿಸಿದನು.

ಶ್ರುತ್ವಾ ವಚೋಽಮೃತಮಯಂ ಕಲಶೋದ್ಭವಸ್ಯ
ಪ್ರಾಹ ಪ್ರಭುಃ ಕರತಲಂ ವಿನಿಧಾಯ ಮೂರ್ಧ್ನಿ ।
ಏಷೋದ್ಯಮೋ ಗಿರಿವರಃ ಪ್ರರುಣದ್ಧಿ ಮಾರ್ಗಂ
ವಿಂಧ್ಯಶ್ಚ ನಿಮ್ನಕರಣೇ ಭಗವಾನ್ ಯತಸ್ವ ॥ ೨೬ ॥

ಇತಿ ರವಿವಚನಾದಥಾಹ ಕುಂಭಜನ್ಮಾ
ಕೃತಮಿತಿ ವಿದ್ಧಿ ಮಯಾ ಹಿ ನೀಚಶೃಂಗಂ ।
ತವ ಕಿರಣಜಿತೋ ಭವಿಷ್ಯತಿ ಮಹೀಧ್ರೋ
ಮಮ ಚರಣಸಮಾಶ್ರಿತಸ್ಯ ಕಾ ವ್ಯಥಾ ತೇ ॥ ೨೭ ॥

ಇತ್ಯೇವಮುಕ್ತ್ವಾ ಕಲಶೋದ್ಭವಸ್ತು
ಸೂರ್ಯಂ ಹಿ ಸಂಸ್ತೂಯ ವಿನಮ್ರಭಕ್ತ್ಯಾ ।
ಜಗಾಮ ಸಂತ್ಯಜ್ಯ ಹಿ ದಂಡಕಾಂ ತು
ವಿಂಧ್ಯಾಚಲಂ ವೃದ್ಧವಪುರ್ಮಹರ್ಷಿಃ ॥ ೨೮ ॥

---

ಈ ಪ್ರಕಾರವಾದ ಸೂರ್ಯನ ಲೋಕಹಿತವಾದ ಪ್ರಾರ್ಥನೆಯಂ ಕೇಳಿ ಅಗಸ್ತ್ಯಮಹಾ ಮುನಿಗಳು ನಿನಗೆ ಇಷ್ಟವಾದ ದಾನವನ್ನು ನಾನು ಕೊಡುತ್ತೇನೆ. ನನ್ನಲ್ಲಿ ಬಂದ ಅರ್ಥಿಗಳು ಯಾರೂ ವಿಮುಖರಾಗಿ ಹೋಗಕೂಡದು ಎಂದು ಪ್ರತ್ಯುತ್ತರವಂ ಕೊಟ್ಟರು. ಈ ಪ್ರಕಾರವಾದ ಅಮೃತದಂತೆ ಹಿತವಾಗಿಯೂ, ಭೋಗ್ಯವಾಗಿಯೂ ಇರುವ ಅಗಸ್ತ್ಯರ ಮಾತನ್ನು ಕೇಳಿ ಸೂರ್ಯನು ತಯಮೇಲೆ ಕೈಯ್ಯಿಟ್ಟುಕೊಂಡು ಈ ವಿಂಧ್ಯಪರ್ವತವು ತನ್ನ ಶಿಖರದಿಂದ ನನ್ನ ಮಾರ್ಗವನ್ನು ತಡೆದು ಸಂಚಾರಕ್ಕೆ ತೊಂದರೆ ಕೊಡುತ್ತಿದೆ. ಇದರ ಔನ್ನತ್ಯವನ್ನು ಕುಗ್ಗಿಸಲು ಮಹಾತ್ಮರಾದ ತಾವು ಪ್ರಯತ್ನಪಡಬೇಕು. ಇದೇ ನನ್ನ ಪ್ರಾರ್ಥನೆ ಎಂದನು.

೨೭-೨೮. ಈರೀತಿಯಾದ ಸೂರ್ಯನ ಪ್ರಾರ್ಥನೆಯನ್ನು ಕೇಳಿ ಅಗಸ್ತ್ಯರು ವಿಂಧ್ಯಪರ್ವತವು ನಿನ್ನ ಕಿರಣಗಳನ್ನೂ ಜಯಿಸಿದ ಅಪರಾಧಕ್ಕೆ ಈಗ ಅದು ನನ್ನಿಂದ ಕುಗ್ಗಿತೆಂದೇ ತಿಳಿ. (ನಿನಗೂ ತೊಂದರೆಕೊಟ್ಟ ಆ ಪರ್ವತವು ನನ್ನಿಂದ ಕುಳ್ಳಾಗಿ ಮಾಡಲ್ಪಟ್ಟಿತೆಂದೇ ತಿಳಿ ಎಂದು ಸಿದ್ಧವತ್ಕಾರದಿಂದ ನಿರ್ದೇಶ) ನನ್ನ ಪಾದಗಳಲ್ಲಿ ಶರಣಾಗತನಾದ ನಿನಗೆ ವ್ಯಥೆ ಎಂಬುದು ಹೇಗೆ ಬಂದೀತು. ಈ ಪ್ರಕಾರ ಸೂರ್ಯ ನನ್ನು ಸ್ತೋತ್ರಮಾಡಿ ನಮ್ರತೆಯಿಂದ ಸಮಾಧಾನಪಡಿಸಿ ದಂಡಕಾವನವನ್ನು

**ಗತ್ವಾ ವಚಃ ಪ್ರಾಹ ಮುನಿರ್ಮಹೀಧ್ರಂ**
**ಯಾಮ್ಯೇ ಮಹಾತೀರ್ಥವರಂ ಸುಪುಣ್ಯಂ ।**
**ವೃದ್ಧೋಽಸ್ಮ್ಯಶಕ್ತ ಶ್ಚ ತವಾ ಧಿರೋಢುಂ**
**ತಸ್ಮಾದ್ಭವಾನ್ನೀಚತರೋ ಸ್ತುಸದ್ಯಃ** ॥ ೨೯ ॥

**ಇತ್ಯೇವಮುಕ್ತೋ ಮುನಿಸತ್ತಮೇನ**
**ಸ ನೀಚಶೃಂಗಸ್ತ್ವಭವನ್ಮಹೀಧ್ರಃ ।**
**ಸಮಾಕ್ರಮಂಶ್ಚಾಪಿ ಮಹರ್ಷಿಮುಖ್ಯಃ**
**ಪ್ರೋಲ್ಲಂಘ್ಯ ವಿಂಧ್ಯಂ ತ್ವಿದ ಮಾಹಶೈಲಂ** ॥ ೩೦ ॥

**ಯಾವನ್ನಭೂಯೋ ನಿಜಮಾವ್ರಜಾಮಿ**
**ಮಹಾಶ್ರಮಂ ಧೌತವಪುಃ ಸುತೀರ್ಥಾತ್।**
**ತ್ವಯಾ ನ ತಾವತ್ತ್ವಿಹ ವರ್ಧಿತವ್ಯಂ**
**ನಚೇದ್ವಿಶಪ್ಸ್ಯೇಹ ಮವಜ್ಞಯಾ ತೇ** ॥ ೩೧ ॥

---

ಬಿಟ್ಟು ಕಾರ್ಯಸಾಧನೆಗಾಗಿ ವೃದ್ಧಬ್ರಾಹ್ಮಣನ ವೇಷವನ್ನು ಹೊಂದಿ ವಿಂಧ್ಯಪರ್ವತಕ್ಕೆ ಹೊರಟರು. ವಿಂಧ್ಯಪರ್ವತವನ್ನೂ ಸೇರಿ ಆ ಪರ್ವತವನ್ನು ಕುರಿತು ದಕ್ಷಿಣದಿಕ್ಕಿನಲ್ಲಿ ಪುಣ್ಯಕರವಾದ ಮಹಾತೀರ್ಥವಿದೆ. ವೃದ್ಧನಾದ ನಾನು ನಿನ್ನ ಶಿಖರವನ್ನು ಹತ್ತಿ ಹೋಗಲು ಅಶಕ್ತನಾಗಿದ್ದೇನೆ. ಆದ್ದರಿಂದ ನನ್ನ ಪ್ರಯಾಣದ ಸೌಕರ್ಯಕ್ಕಾಗಿ ನೀನು ಈಗಮಾತ್ರ ನಿನ್ನ ಶಿಖರವನ್ನು ಕುಗ್ಗಿಸಿಕೊಂಡು ಕುಳ್ಳಾಗಬೇಕು ಎಂದರು.

೩೦-೩೧. ಹೀಗೆ ಅಗಸ್ತ್ಯರಿಂದ ಹೇಳಲ್ಪಟ್ಟ ವಿಂಧ್ಯಪರ್ವತವು ಆಗಲೇ ಕುಳ್ಳಾಗಿ ಆಯಿತು. ಮಹರ್ಷಿಯು ಆ ಪರ್ವತವನ್ನು ಆಕ್ರಮಿಸಿ ದಾಟಿಬಂದು ಅದನ್ನು ಕುರಿತು ನಾನು ಪುಣ್ಯತೀರ್ಥಗಳಲ್ಲಿ ಸ್ನಾನಮಾಡಿಕೊಂಡು ನನ್ನ ಆಶ್ರಮಕ್ಕೆ ಹಿಂತಿರುಗಿ ಬರುವವರೆವಿಗೂ ನೀನು ಎತ್ತರವಾಗಿ ಬೆಳೆಯಕೂಡದು. ಹಾಗೆ ಮಾಡದೆ ಬೆಳೆದಲ್ಲಿ ನನಗೆ ಮಾಡಿದ ಅವಮಾನಕ್ಕಾಗಿ ನಾನು ಶಪಿಸುವೆನು ಎಂದು ಎಚ್ಚರಿಕೆ ಕೊಟ್ಟರು.

ಇತ್ಯೇವಮುಕ್ತ್ವಾ ಭಗವಾನ್ ಜಗಾಮ
ದಿಶಂ ಸ ಯಾಮ್ಯಾಂ ಸಹಸಾಂತರಿಕ್ಷಂ ।
ಆಕ್ರಮ್ಯ ತಸ್ಥೌ ಸಹಿತಾಂ ತದಾಶಾಂ
ಕಾಲೇ ಪ್ರಜಾಮ್ಯತ್ರ ಯದಾ ಮುನೀಂದ್ರಃ ॥ ೩೨ ॥

ತತ್ರಾಶ್ರಮಂ ರಮ್ಯತರಂ ಹಿ ಕೃತ್ವಾ
ಸಂಶುದ್ಧಜಾಂಬೂನದತೋರಣಾಂತಂ ।
ತತ್ರಾಥ ನಿಕ್ಷಿಪ್ಯ ವಿದರ್ಭಪುತ್ರೀಂ
ಸ್ವಮಾಶ್ರಮಂ ಸೌಮ್ಯಮುಪಾಜಗಾಮ ॥ ೩೩ ॥

ಋತೌ ಋತೌ ಪರ್ವದಿನೇಷು ನಿತ್ಯಂ
ತಮಂಬರೇಹ್ಯಾಶ್ರಮಮಾವಸತ್ಸಃ ।
ಶೇಷಂ ಹಿ ಕಾಲಂ ಸ ಹಿ ದಂಡಕಾಸ್ಥ
ಸ್ತಪಶ್ಚಚಾರಾಮಿಶಕಾಂತಿಮಾನ್ಮುನಿಃ ॥ ೩೪ ॥

ವಿಂಧ್ಯೋಽಪಿ ದೃಷ್ಟ್ವಾಗಮನೇ ಮಹಾಶ್ರಮಂ
ವೃದ್ಧಿಂ ನ ಯಾತ್ಯೇವ ಭಯಾನ್ಮಹರ್ಷೇಃ ।
ನಾಸೌ ನಿವೃತ್ತೇತಿ ಮತಿಂ ವಿಧಾಯ
ಸ ಸಂಸ್ಥಿತೋ ನೀಚತರಾಗ್ರಶೃಂಗಃ ॥ ೩೫ ॥

---

೩೨-೩೪. ಹೀಗೆ ಹೇಳಿ ಅಗಸ್ತ್ಯಮಹಾಮುನಿಗಳು ದಕ್ಷಿಣದಿಕ್ಕಿಗೆ ಬಂದು ಅದನ್ನು ಆಕ್ರಮಿಸಿ ಸಾವಕಾಶದಿಂದ ಹೋಗುತ್ತೇನೆಂದು ಹೇಳಿ ಅಂತರಿಕ್ಷವನ್ನೂ ಆಕ್ರಮಿಸಿ ಅಲ್ಲಿಯೇ ನಿಂತರು. ಅಲ್ಲಿ ಚಿನ್ನದ ತೋರಣಗಳಿಂದ ರಮಣೀಯವಾದ ಆಶ್ರಮವನ್ನೇರ್ಪಡಿಸಿ ವಿದರ್ಭಪುತ್ರಿಯಾದ ಲೋಪಾಮುದ್ರೆಯನ್ನು ಅಲ್ಲಿರಿಸಿ ಅಂತರಿಕ್ಷಮಾರ್ಗದಿಂದ ತಮ್ಮ ಆಶ್ರಮಕ್ಕೆ ತೆರಳಿದರು. ಋತುಕಾಲದಲ್ಲಿಯೂ ಪರ್ವ ದಿನಗಳಲ್ಲಿಯೂ ಆಕಾಶದಲ್ಲಿರುವ ಆ ಆಶ್ರಮಕ್ಕೆ ಬರುತ್ತಾ ಉಳಿದ ಕಾಲದಲ್ಲಿ ದಂಡಕಾ ವನದಲ್ಲಿರುವ ತಮ್ಮ ಆಶ್ರಮದಲ್ಲೇ ಇದ್ದುಕೊಂಡು ತಪಸ್ಸಿನಿಂದ ದೇದೀಪ್ಯಮಾನ ರಾಗಿ ಬೆಳಗಿದರು.

೩೫-೩೭. ವಿಂಧ್ಯಪರ್ವತವೂ ಕೂಡ ತಾನು ಎತ್ತರವಾಗಿ ಬೆಳೆದಲ್ಲಿ ಮಹರ್ಷಿಯ ಆಗಮನದಲ್ಲಿ ಬಹಳ ಶ್ರಮವುಂಟಾಗುತ್ತದೆಂದು ತಿಳಿದು ಭಯಪಟ್ಟು ವೃದ್ಧಿಯನ್ನೇ ಹೊಂದದೆ ಮಹರ್ಷಿಯು ಹಿಂತಿರುಗಿ ಬಂದೇ ಇಲ್ಲವೆಂದು ತಿಳಿದು

ಏವಂ ತ್ವಗಸ್ತ್ಯೇನ ಮಹಾಚಲೇಂದ್ರಃ
ಸ ನೀಚಶೃಂಗೋ ಹಿ ಕೃತೋ ಮಹರ್ಷೇ ।
ತಸ್ಯೋರ್ಧ್ವಶೃಂಗೇ ಮುನಿಸಂಸ್ತುತಾ ಸಾ
ದುರ್ಗಾ ಸ್ಥಿತಾ ದಾನವನಾಶನಾರ್ಥಂ ॥ ೩೬ ॥

ದೇವಾಶ್ಚ ಸಿದ್ಧಾಶ್ಚ ಮಹೋರಗಾಶ್ಚ
ವಿದ್ಯಾಧರಾ ಭೂತಗಣಾಶ್ಚ ಸರ್ವೇ ।
ಸರ್ವಾಪ್ಸರೋಭಿಃ ಪ್ರತಿರಾಮಯಂತಃ
ಕಾತ್ಯಾಯನೀಂ ತಸ್ಥುರಪೇತಶೋಕಾಃ ॥ ೩೭ ॥

ಇತಿ ಶ್ರೀ ವಾಮನಪುರಾಣೇ ದೇವಿಮಾಹಾತ್ಮ್ಯಂನಾಮ
ಅಷ್ಟಾದಶೋಽಧ್ಯಾಯಃ

---

ಕುಳ್ಳಾದ ಶಿಖರಗಳಿಂದ ಹಾಗೆಯೇ ನಿಂತಿತು. ಅಂತಹ ವಿಂಧ್ಯಪರ್ವತದ ಎತ್ತರವಾದೊಂದು ಶಿಖರದಲ್ಲಿ ಮುನಿಗಳಿಂದ ಸ್ತುತಿಸಲ್ಪಟ್ಟ ಈ ಕಾತ್ಯಾಯನಿಯು ದಾನವರ ನಾಶಕ್ಕಾಗಿ ನಿಂತಳು. ಆ ದೇವಿಯನ್ನು ಸ್ತೋತ್ರಗಳಿಂದ ಸಂತೋಷಪಡಿಸುತ್ತಾ ದೇವತೆಗಳು, ಸಿದ್ಧರು, ಸರ್ಪಗಳೂ, ವಿದ್ಯಾಧರರೂ, ಅನೇಕ ಭೂತಗಣಗಳೂ ಸಹ ಯಾವ ಶೋಕವೂ ಇಲ್ಲದೆ ಸುಖದಿಂದಿದ್ದರು.

ಇಲ್ಲಿಗೆ ಶ್ರೀ ವಾಮನಪುರಾಣದಲ್ಲಿ ದೇವೀಮಾಹಾತ್ಮ್ಯವೆಂಬ
ಹದಿನೆಂಟನೆಯ ಅಧ್ಯಾಯವು ಮುಗಿದಿದೆ.

# ಅಧ್ಯಾಯಾರ್ಥ ಸಂಗ್ರಹ



ಈ ಅಧ್ಯಾಯದಲ್ಲಿ ಮಹಿಷಾಸುರನಿಂದ ಪರಾಜಿತರಾಗಿ ದೇವತೆಗಳೆಲ್ಲರೂ ಸ್ಥಾನ ಭ್ರಷ್ಟರಾಗಿ ಶಂಕರನೊಡಗೂಡಿರುವ ನಾರಾಯಣನಲ್ಲಿ ಶರಣಾಗತರಾಗಿ ತಮಗೆ ಮಹಿಷಾಸುರನಿಂದ ಬಂದಿರುವ ಕಷ್ಟವನ್ನು ವಿಜ್ಞಾಪಿಸಿಕೊಂಡರೆಂದೂ ಆಗ ದೇವತೆಗಳಿಗುಂಟಾದ ಅಪಜಯದಿಂದ ನಾರಾಯಣನು ಮಹಿಷಾಸುರನಮೇಲೆ ಬಹಳ ಕೋಪ ಮಾಡಿದನೆಂದೂ ಆ ಕೋಪವನ್ನೇ ಅನುಸರಿಸಿ ಶಂಕರನೂ, ಬ್ರಹ್ಮನೂ, ಇಂದ್ರಾದಿ ದೇವತೆಗಳೂ ಕೋಪಗೊಂಡರೆಂದೂ ಆ ದೇವತಾಗೋಷ್ಠಿಯ ಕೋಪವೆಲ್ಲವೂ ಕಾಲಾಗ್ನಿಯಂತೆ ಒಂದುಗೂಡಿ ಕಾತ್ಯಾಯನನ ಆಶ್ರಮಕ್ಕೆ ಪ್ರವಹಿಸಿ ಅವನ ತೇಜಸ್ಸಿನಿಂದಲೂ ಅಭಿವೃದ್ಧಿಹೊಂದಿ ಕಾತ್ಯಾಯನೀ ಎಂಬ ದಿವ್ಯವಧುವಾಗಿ ಆವಿರ್ಭವಿಸಿತೆಂದೂ ಹೇಳಲಾಯಿತು. ಆ ವಧುವಿಗೆ ದೇವತೆಗಳೆಲ್ಲರೂ ತಮ್ಮ ತಮ್ಮ ಆಯುಧಗಳನ್ನು ಕೊಟ್ಟು ಸಮರ್ಥಳನ್ನಾಗಿಮಾಡಿ ಅವಳನ್ನು ಸ್ತುತಿಸಿ ಕಳುಹಿಸಿದರೆಂದೂ ಆ ಕಾತ್ಯಾಯನಿಯು ದಾನವನಿಗ್ರಹಕ್ಕಾಗಿ ವಿಂಧ್ಯಪರ್ವತದಲ್ಲಿ ನೆಲಸಿದಳೆಂದೂ ನಿರೂಪಿಸಲಾಯಿತು. ಈ ಸಂದರ್ಭದಲ್ಲಿ ವಿಂಧ್ಯಪರ್ವತವು ಏಕೆ ಅಗಸ್ತ್ಯರಿಂದ ಕುಗ್ಗಿಸಲ್ಪಟ್ಟಿತೆಂದು ನಾರದರು ಮಾಡಿದ ಉಪಪ್ರಶ್ನೆಗೆ ಉತ್ತರವಾಗಿ ವಿಂಧ್ಯಪರ್ವತದ ಔನ್ನತ್ಯದಿಂದ ಸೂರ್ಯನ ಸಂಚಾರಕ್ಕೆ ತೊಂದರೆಯಾದುದರಿಂದ ಅಗಸ್ತ್ಯರಲ್ಲಿ ಸೂರ್ಯನು ಪ್ರಾರ್ಥನೆ ಮಾಡಲಾಗಿ ಅವರು ಸೂರ್ಯನಿಗೆ ಅಭಯವನ್ನಿತ್ತರೆಂದೂ ಅದನ್ನು ನೆರವೇರಿಸಲು ಅಗಸ್ತ್ಯರು ವೃದ್ಧವೇಷದಿಂದ ವಿಂಧ್ಯವನ್ನು ನೋಡಿ ತೀರ್ಥಸ್ನಾನಕ್ಕಾಗಿ ದಕ್ಷಿಣ ದಿಕ್ಕಿಗೆ ತಾನು ಬರಬೇಕಾಗಿದೆ ಎಂದೂ ಶಿಖರವನ್ನು ಕುಗ್ಗಿಸಬೇಕೆಂದೂ ಹೇಳಲಾಗಿ ಆ ಪರ್ವತವು ಅವರ ಮಾತಿನಂತೆ ಕುಳ್ಳಾಯಿತು. ತಾನು ಹಿಂತಿರುಗಿ ಬರುವವರಿಗೂ ಹೀಗೆಯೇ ಇರಬೇಕೆಂದು ಮಹರ್ಷಿಗಳು ಮಾಡಿದ ಆಜ್ಞೆಗೆ ಅಧೀನವಾಗಿ ಈಗಲೂ ಕುಳ್ಳಾಗಿಯೇ ಇದೆ ಎಂದು ಉತ್ತರವಿತ್ತು ಆ ವಿಂಧ್ಯಶಿಖರದಲ್ಲಿ ಕಾತ್ಯಾಯನಿಯು ನೆಲಸಿದ್ದಳೆಂದು ಮುಖ್ಯ ವಿಷಯಕ್ಕೆ ಕಥೆಯನ್ನು ಯೋಜಿಸಲಾಯಿತು.



॥ ಶ್ರೀಃ ॥

# ಶ್ರೀ ವಾ ಮ ನ ಪು ರಾ ಣಂ

## ಏಕೋನವಿಂಶೋಽಧ್ಯಾಯಃ

### ಪುಲಸ್ತ್ಯ ಉವಾಚ

ತತಸ್ತು ತಾಂ ತತ್ರ ತದಾ ವಸಂತೀಂ
ಕಾತ್ಯಾಯನೀಂ ಶೈಲವರಸ್ಯ ಶೃಂಗೇ ।
ಅಪಶ್ಯತಾಂ ದಾನವಸತ್ತಮೌ ದ್ವೌ
ಚಂಡಮುಂಡಶ್ಚ ತಪಸ್ವಿನೀಂ ಭೃಶಂ ॥ ೧ ॥

ದೃಷ್ಟ್ವೈವ ಶೈಲಾದವತೀರ್ಯ ಶೀಘ್ರ
ಮಾಜಗ್ಮತುಃ ಸ್ವಂ ಭವನಂ ಸುರಾರೀ ।
ದೃಷ್ಟ್ವೋಚತುಸ್ತೌ ಮಹಿಷಾಸುರಸ್ಯ
ದೂತಾವಿದಂ ಚಂಡಮುಂಡೌ ದಿತೀಶಂ ॥ ೨ ॥

ಸ್ವಸ್ಥೋಽಭವಾನ್ಕಿಂತ್ವಸುರೇಂದ್ರ ಸಾಂಪ್ರತಂ
ಆಗಚ್ಛ ಪಶ್ಯಾಮ ಚ ತತ್ರ ವಿಂಧ್ಯಂ ।
ತತ್ರಾಸ್ತಿ ದೇವೀ ಸುಮಹಾನುಭಾವಾ
ಕನ್ಯಾ ಸುರೂಪಾ ಸುರಸುಂದರೀಣಾಂ ॥ ೩ ॥

---

### ಹತ್ತೊಂಬತ್ತನೆಯ ಅಧ್ಯಾಯವು

೧-೩. ಅನಂತರ ವಿಂಧ್ಯಪರ್ವತದ ಶಿಖರದಲ್ಲಿ ವಾಸಿಸುತ್ತಿರುವ ತಪಸ್ವಿನಿಯಾದ ಆ ಕಾತ್ಯಾಯನಿಯನ್ನು ಚಂಡಮುಂಡ ಎಂಬಿಬ್ಬರು ದಾನವರು ಹೋಗಿ ನೋಡಿದರು. ನೋಡಿದೊಡನೆಯೇ ಆ ಪರ್ವತದಿಂದ ಇಳಿದು ತಮ್ಮ ಮನೆಗೆ ಹೋಗಿ ಮಹಿಷಾಸುರನ ದೂತರಾದ ಇವರಿಬ್ಬರೂ ಧೊರೆಯನ್ನು ಕುರಿತು ಹೀಗೆ ಹೇಳುತ್ತಾರೆ. ಎಲೈ ಅಸುರರಾಜನೇ, ನೀನು ಸುಖಿಯಾಗಿದ್ದೀಯೆ ಆದರೂ ವಿಂಧ್ಯಪರ್ವತಕ್ಕೆ ಹೋಗಿ ನೋಡಿಬರೋಣ ಬಾ. ಅಲ್ಲಿ ಮಹಾನುಭಾವಳಾಗಿಯೂ ಅಪ್ಸರೆಗಿಂತಲೂ ಸುಂದರಿಯಾಗಿಯೂ, ಕನ್ಯಕಾವಸ್ಥೆಯಲ್ಲಿರುವ ದೇವಿಯು ನೆಲಸಿರುತ್ತಾಳೆ.

ಜಿತಸ್ತ್ವಯಾ ತೋಯಧರೋಽಲಕೈರ್ಹಿ
ಜಿತಶ್ಶಶಾಂಕೋ ವದನೇನ ತನ್ವ್ಯಾ ।
ನೇತ್ರೈಸ್ತ್ರಿಭಿಸ್ತ್ರೀಣಿ ಹುತಾಶನಾನಿ
ಜಿತಾನಿ ಕಂಠೇನ ಜಿತಸ್ತು ಶಂಖಃ ॥ ೪ ॥

ಸ್ತನೌ ಸುವೃತ್ತಾವಥ ನಿಮ್ನಚೂಚುಕೌ
ಸ್ಥಿತೌ ವಿಜಿತ್ಯೈವ ಗಜಸ್ಯ ಕುಂಭೌ ।
ತ್ವಾಂ ಸರ್ವಜೇತಾರಮಿತಿ ಪ್ರತರ್ಕ್ಯ
ಕುಚೌ ಸ್ಮರೇಣೈವ ಕೃತೌ ಸುದುರ್ಗೌ ॥ ೫ ॥

ಪೀನಾಸ್ಸಶಸ್ತ್ರಾಃ ಪರಿಘೋಪಮಾಶ್ಚ
ಭುಜಾಸ್ತಥಾ ಷ್ಟಾದಶ ಭಾಂತಿ ತಸ್ಯಾಃ ।
ಪರಾಕ್ರಮಂ ವೈ ಭವತೋ ವಿದಿತ್ವಾ
ಕಾಮೇನ ಯಂತ್ರಾ ಇವ ತೇ ಕೃತಾಸ್ತು ॥ ೬ ॥

ಮಧ್ಯಂ ಚ ತಸ್ಯಾಃ ತ್ರಿವಲೀತರಂಗಂ
ವಿಭಾತಿ ದೈತ್ಯೇಂದ್ರ ಸುರೋಮರಾಜಿ ।

---

೪-೬. ಆ ಕಾತ್ಯಾಯನಿಯು ಮುಂಗುರುಳುಗಳ ಕಾಂತಿಯಿಂದ ನೀಲಮೇಘಗಳನ್ನೂ ಜಯಿಸಿರುತ್ತಾಳೆ. ಹಾಗೆಯೇ ಮುಖದಿಂದ ಚಂದ್ರನನ್ನೂ ಜಯಿಸಿರುತ್ತಾಳೆ. ಮೂರು ಕಣ್ಣುಗಳಿಂದ ಅಗ್ನಿತ್ರಯಗಳನ್ನೂ, ಕಂಠದಿಂದ ಶಂಖವನ್ನೂ ಪರಾಭವಗೊಳಿಸಿರುತ್ತಾಳೆ. ದುಂಡಾಗಿಯೂ, ಜಗ್ಗಿದ ಮುಂಭಾಗವುಳ್ಳದ್ದಾಗಿಯೂ ಇರುವ ಸ್ತನಯುಗ್ಮಗಳು ಆನೆಯ ಕುಂಭಸ್ಥಲವನ್ನೂ ಅಧರೀಕರಿಸಿವೆ. ನೀನು ಎಲ್ಲರನ್ನೂ ಜಯಿಸಿದವನೆಂದು ಊಹಿಸಿ ನಿನ್ನನ್ನೂ ಜಯಿಸಲು ಉದ್ಯುಕ್ತನಾದ ಮನ್ಮಥನು ಆತ್ಮರಕ್ಷಣೆಗಾಗಿ ಏರ್ಪಡಿಸಿಕೊಂಡಿರುವ ದುರ್ಗಸ್ಥಾನಗಳೋ ಎಂಬಂತಿವೆ. ನಿನ್ನ ಪರಾಕ್ರಮವನ್ನು ವೈಭವದಿಂದ ತಿಳಿದೂ ನಿನ್ನನ್ನು ಜಯಿಸಲು ಮನ್ಮಥನಿಂದ ಸಜ್ಜುಗೊಳಿಸಲ್ಪಟ್ಟಿರುವ ಯಂತ್ರಗಳೋ ಎಂಬಂತೆ ದಪ್ಪವಾಗಿಯೂ, ದೀರ್ಘವಾಗಿಯೂ ಇರುವ ಸಶಸ್ತ್ರಾಸ್ತ್ರಗಳಾದ ಹದಿನೆಂಟು ಭುಜಗಳನ್ನು ಹೊಂದಿದ್ದಾಳೆ.

೭-೯. ಎಲೈ ದೈತ್ಯೇಂದ್ರನೇ, ವಲಿತ್ರಯದಿಂದಲೂ, ರೋಮಪಂಕ್ತಿಯಿಂದಲೂ ಕೂಡಿರುವ ಅವಳ ಮಧ್ಯಭಾಗವು ಲೋಕೋತ್ತರವಾಗಿ ಪ್ರಕಾಶಿಸುತ್ತಿದೆ. ಆ ಮಧ್ಯ

ಭಯೊತ್ತ್ರವಾರೋಹಣಕಾತರಸ್ಯ
ಕಾಮೇನ ಸೋಪಾನಮಿವ ಪ್ರಯುಕ್ತಂ ॥ ೭ ॥

ಸಾ ರೋಮರಾಜೀ ನಿತರಾಂ ಹಿ ತಸ್ಯಾ
ವಿರಾಜತೇ ಪೀನಕುಚಾವಲಗ್ನಾ ।
ಆರೋಹಣೇ ತ್ವದ್ಭಯಕಾತರಸ್ಯ
ಸ್ವೇದಪ್ರವಾಹೋಸುರ ಮನ್ಮಥಸ್ಯ ॥ ೮ ॥

ನಾಭಿರ್ಗಭೀರಾ ನಿತರಾಂ ವಿಭಾತಿ
ಪ್ರದಕ್ಷಿಣಾಸ್ಯಾಃ ಪರಿವರ್ತಮಾನಾ
ತಸ್ಯೈವ ಲಾವಣ್ಯಗೃಹಸ್ಯ ಮುದ್ರಾ
ಕಂದರ್ಪರಾಜ್ಞಾ ಸ್ವಯಮೇವ ದತ್ತಾ ॥ ೯ ॥

ವಿಭಾತಿ ರಮ್ಯಂ ಜಘನಂ ಮೃಗಾಕ್ಷ್ಯಾಃ
ಸಮಂತತೋ ಮೇಖಲಯಾವಪೃಷ್ಟಂ ।
ಮನ್ಯೇಹ್ಯಹಂ ಕಾಮನರಾಧಿಪಸ್ಯ
ಪ್ರಾಕಾರಗುಹ್ಯಂ ನಗರಂ ಸುದುರ್ಗಂ ॥ ೧೦ ॥

---

ಪ್ರದೇಶದಲ್ಲಿರುವ ವಲಿತ್ರಯಗಳು ಆರೋಹಣಕಾಲದಲ್ಲಿ ನಿನಗೆ ತೊಂದರೆಯುಂಟಾದೀತೆಂಬ ಭಯದಿಂದ ಮನ್ಮಥನು ನಿರ್ಮಿಸಿರುವ ಸೋಪಾನಗಳೋ (ಮೆಟ್ಟಿಲು) ಎಂಬಂತಿವೆ. ಅವಳ ಸ್ಥೂಲಗಳಾದ ಕುಚಗಳನ್ನು ಅನುಬಂಧಿಸಿಕೊಂಡಿರುವ ರೋಮರಾಜಿಯೂ ಆರೋಹಣಕಾಲದಲ್ಲಿ ನಿನಗೆ ತೊಂದರೆಯಾದೀತೋ ಏನೋ ಎಂಬ ಭಯದಿಂದ ಮನ್ಮಥನಿಗೆ ಉಂಟಾದ ಬೆವರಿನ ಪ್ರವಾಹವೋ ಎಂಬಂತೆ ತೋರುತ್ತಿದೆ. ಆಳವಾಗಿಯೂ ಪ್ರದಕ್ಷಿಣವಾದ ಸುಳಿಯುಳ್ಳದ್ದಾಗಿಯೂ ಇರುವ ಅವಳ ನಾಭಿ (ಹೊಕ್ಕಳು) ಪ್ರದೇಶವು ಇದೇ ನನ್ನ ಲಾವಣ್ಯ ಸರ್ವಸ್ವದ ಗೃಹವು ಎಂಬ ಸೂಚನೆಗಾಗಿ ಮನ್ಮಥರಾಜನಿಂದಲೇ ಹಾಕಲ್ಪಟ್ಟ ಮುದ್ರಿಕೆಯೋ (ಸೀಲು) ಎಂಬಂತೆ ಪ್ರಕಾಶಿಸುತ್ತಿದೆ.

೧೦-೧೨. ಸುತ್ತಲೂ ವಡ್ಯಾಣದಿಂದ ಸುತ್ತುವರಿಯಲ್ಪಟ್ಟ ರಮ್ಯವಾದ ಆ ಸುಂದರಿಯ ಜಘನಪ್ರದೇಶವು (ಕೀಳುಹೊಟ್ಟೆಯ ಮುಂಭಾಗ) ಮನ್ಮಥರಾಜನ ದುರ್ಗಮವಾದ ರಹಸ್ಯವಾಗಿ ಪ್ರಾಕಾರದಿಂದ ರಕ್ಷಿಸಲ್ಪಟ್ಟಿರುವ ಮಹಾನಗರವೆಂದು

ವೃತ್ತಾವರೋಮೌ ಚ ಮೃದೂ ಕುಮಾರ್ಯಾಃ
ಶೋಭೇತ ಊರೂ ಸಮನುತ್ತಮೌ ಹಿ ।
ಆವಾಸನಾರ್ಥಂ ಮಕರಧ್ವಜೇನ
ಜನಸ್ಯ ದೇಶಾವಿವ ಸನ್ನಿವಿಷ್ಟೌ ॥ ೧೧ ॥

ತಜ್ಜಾನುಯುಗ್ಮಂ ಮಹಿಷಾಸುರೇಂದ್ರ
ಹ್ಯತ್ಯುನ್ನತಂ ಭಾತಿ ತಥೈವ ತಸ್ಯಾಃ ।
ಸೃಷ್ಟ್ವಾ ವಿಧಾತಾ ಹಿ ನಿರೂಪಣಾಯ
ಶ್ರಾಂತಸ್ತಥಾ ಹಸ್ತತಲೌ ದದೌ ಹಿ ॥ ೧೨ ॥

ಜಂಘೇ ಸುವೃತ್ತೇ ಪಿಚ ರೋಮಹೀನೇ
ಶುಭೇಚ ದೈತ್ಯೇಶ್ವರ ತೇ ತದೀಯೇ ।
ಆನಮ್ಯ ಲೋಕಾನಿವ ನಿರ್ಮಿತೇ ಯೇಃ
ಸೂಪಂ ವಿಜಿತ್ಯೈವ ಕೃತೇ ವರೇ ಹಿ ॥ ೧೩ ॥

ಪಾದೌ ಚ ತಸ್ಯಾಃ ಕಮಲೋದರಾಭೌ
ಪ್ರಯತ್ನತಸ್ತೌ ಹಿ ಕೃತೌ ವಿಧಾತ್ರಾ ।

---

ನಾನು ಭಾವಿಸುತ್ತೇನೆ. ದುಂಡಾಗಿಯೂ, ರೋಮರಹಿತವಾಗಿಯೂ, ಮೃದುವಾಗಿಯೂ ಇರುವ ಆ ಸುಂದರಿಯ ಲೋಕೋತ್ತರವಾದ ಊರುಯುಗ್ಮವು (ತೊಡೆಗಳು) ಕಾಮಸಂತಪ್ತರಾದವರ ವಾಸಕ್ಕಾಗಿ ಮನ್ಮಥನಿಂದ ನಿರ್ಮಿತವಾದ ಪ್ರದೇಶಗಳಂತೆ ಹೊಳೆಯುತ್ತಿದೆ. ಎಲೈ ಮಹಿಷಾಸುರೇಂದ್ರನೇ, ಅವಳ ಮಂಡಿಗಳ ಸೌಂದರ್ಯವನ್ನು ಎಷ್ಟೆಂದು ಹೇಳಲಿ. ಉನ್ನತವಾದ ಅವಳ ಎರಡು ಮಂಡಿಗಳೂ ಸೃಷ್ಟಿಮಾಡಿದ ಬ್ರಹ್ಮನು ತನ್ನ ಸೃಷ್ಟಿಯ ರಮ್ಯತೆಯನ್ನು ನೋಡುವಾಗ ನೋಡಿ ಶ್ರಮಿಸಿ ತನ್ನ ಹಸ್ತಗಳೆರಡನ್ನೂ ಇಟ್ಟಿರುವನೋ ಎಂಬಂತೆ ತೋರುತ್ತಿವೆ.

೧೩-೧೫. ಎಲೈ ದೈತ್ಯೇಶ್ವರನೇ, ದುಂಡಾಗಿಯೂ, ರೋಮವಿಲ್ಲದೆಯೂ ಇರುವ ಅವಳ ಮೊಳಕಾಲುಗಳು ಲೋಕಗಳೆಲ್ಲವನ್ನೂ ಜಯಿಸಿರುವ ಮನ್ಮಥನ ಬತ್ತಳಿಕೆಯನ್ನೂ ಜಯಿಸುವಂತೆ ನಿರ್ಮಿಸಲ್ಪಟ್ಟಿವೆ. ಕಮಲದ ಗರ್ಭಪ್ರದೇಶದಂತೆ ಕೋಮಲವಾಗಿರುವ ಅವಳ ಪಾದಗಳು ಚತುರ್ಮುಖನಿಂದಲೂ ಬಹಳ ಪ್ರಯತ್ನ

ಆಜ್ಞಾಯಿ ತಸ್ಯಾ ನಖರತ್ನಮಾಲಾ
ನಕ್ಷತ್ರಮಾಲಾ ಗಗನೇ ಯಥೈವ ॥ ೧೪ ॥

ಏವಂ ಸ್ವರೂಪಾ ದನುನಾಥ ಕನ್ಯಾ
ಮಹೋಗ್ರಶಸ್ತ್ರಾಣಿ ಚ ಧಾರಯಂತೀ ।
ದೃಷ್ಟ್ವಾ ಯಥೇಷ್ಟಂ ನ ಚ ವೇದ್ಮಿ ಕಾ ಸಾ
ಸುತಾ ತಥಾ ಕಸ್ಯಚಿದೇವ ಬಾಲಾ ॥ ೧೫ ॥

ತದ್ಭೂತಲೇ ರತ್ನಮನುತ್ತಮಂ ಸ್ಥಿತಂ
ಸ್ವರ್ಗಂ ಪರಿತ್ಯಜ್ಯ ಮಹಾಸುರೇಂದ್ರ ।
ಗತ್ವಾಥ ವಿಂಧ್ಯಂ ಸ್ವಯಮೇವ ಪಶ್ಯ
ಕುರುಷ್ವ ಯತ್ತೇ ಭಿಮತಂ ಕ್ಷಮಂ ಚ ॥ ೧೬ ॥

ಶ್ರುತ್ವೈವ ತಾಭ್ಯಾಂ ಮಹಿಷಾಸುರಸ್ತು
ದೇವ್ಯಾಃ ಪ್ರವೃತ್ತಿಂ ಕಮನೀಯರೂಪಾಂ ।
ಚಕ್ರೇ ಮತಿಂ ನಾತ್ರ ವಿಚಾರ್ಯಮಸ್ತಿ
ಇತ್ಯೇವ ಮುಕ್ತ್ವಾ ಮಹಿಷೋ ಮಹರ್ಷೇ ॥ ೧೭ ॥

ಪ್ರಾಗೇವ ಪುಂಸಸ್ತು ಶುಭಾಶುಭಾನಿ
ಸ್ಥಾನೇವಿಧಾತ್ರಾ ಪ್ರತಿಪಾದಿತಾನಿ ।
ಯಸ್ಮಿನ್ ಯಥಾ ಯಾತಿ ಚ ಸೋಽಥ ವಿಪ್ರ
ಸನೀಯತೇ ವಾ ವ್ರಜತಿ ಸ್ವಯಂ ವಾ ॥ ೧೮ ॥

---

ದಿಂದ ಮಾಡಲ್ಪಟ್ಟಿರಬೇಕು. ಆ ಪಾದಗಳ ಉಗುರುಗಳ ಪಂಕ್ತಿಯು ಆಕಾಶದಲ್ಲಿ ಹೊಳೆಯುವ ನಕ್ಷತ್ರಮಾಲೆಗಳಂತೆ ತೋರುತ್ತಿವೆ. ಎಲೈ ದೊರೆಯೇ, ಮಹೋಗ್ರ ಶಸ್ತ್ರಧಾರಿಣಿಯಾಗಿರುವ ಆ ಕನ್ಯೆಯ ರೂಪಲಾವಣ್ಯಗಳು ಹೀಗಿವೆ. ನೋಡಿದ ಮೇಲೂ ಅವಳು ಯಾರು, ಯಾರ ಮಗಳು ಎಂಬುದು ನನಗೆ ತಿಳಿಯಲಿಲ್ಲ.

೧೬-೧೮. ಎಲೈ ಅಸುರೇಂದ್ರನೇ, ಅಸದೃಶವಾದ ಆ ಕನ್ಯಾರತ್ನವು ಸ್ವರ್ಗವನ್ನು ಬಿಟ್ಟು ಭೂಮಿಯಲ್ಲಿ ಬಂದು ನೆಲಸಿದೆ. ವಿಂಧ್ಯಪರ್ವತಕ್ಕೆ ಹೋಗಿ ನೀನೇ ನೋಡಬಹುದು. ನೋಡಿದಮೇಲೆ ನಿನಗೆ ಯಾವುದು ಇಷ್ಟವೋ, ಹಿತವೋ

ತತೋ ನಮುಂಡಂ ನಮರಂ ಸಚಂಡಂ
ಬಿಡಾಲನೇತ್ರಂ ಕಪಿಲಂ ಸಬಾಷ್ಕಲಂ ।
ಉಗ್ರಾಯುಧಂ ವಿಕ್ಷುರರಕ್ತಬೀಜೌ
ಸಮಾದಿದೇಶಾಥ ಮಹಾಸುರೇಂದ್ರಃ ॥ ೧೯ ॥

ಆಹತ್ಯ ಭೇರೀಂ ರಣಕರ್ಕಶಾಸ್ತೇ
ಸ್ವರ್ಗಂ ಪರಿತ್ಯಜ್ಯ ಮಹೀಧರಂ ತು ।
ಆಗಮ್ಯ ಮೂಲೇ ಶಿಬಿರಂ ನಿವೇಶ್ಯ
ತಸ್ಥುಶ್ಚ ಸಜ್ಜಾ ದನುನಂದನಾಸ್ತೇ ॥ ೨೦ ॥

ತತಸ್ತು ದೈತ್ಯೋ ಮಹಿಷಾಸುರೇಣ
ಸಂಪ್ರೇಷಿತೋ ದಾನವಯೂಥಪಾಲಃ ।
ಮಯಸ್ಯ ಪುತ್ರೋ ರಿಪುಸೈನ್ಯಮರ್ದೀ
ಸ ದುಂದುಭಿರ್ದುಂದುಭಿನಿಸ್ವನಸ್ತು ॥ ೨೧ ॥

---

ಅದನ್ನು ಮಾಡಬಹುದು. ಹೀಗೆ ಚಂಡಮುಂಡರ ವಾಕ್ಯವನ್ನು ಕೇಳಿ ಮಹಿಷಾಸುರನು ಈ ವಿಷಯದಲ್ಲಿ ಏನೂ ವಿಚಾರಮಾಡತಕ್ಕದ್ದಿಲ್ಲವೆಂದು ಹೇಳಿ ದೇವಿಯಲ್ಲಿ ಮನಸ್ಸನ್ನು ಮಾಡಿಯೇ ಮಾಡಿದನು. ಮನುಷ್ಯನಿಗೆ ಮುಂದೆ ಉಂಟಾಗಬಹುದಾದ ಶುಭಾಶುಭಗಳನ್ನು ಚತುರ್ಮುಖನು ಮೊದಲೇ ಸೃಷ್ಟಿಕಾಲದಲ್ಲಿ ಹಣೆಬರಹವನ್ನಾಗಿ ಏರ್ಪಡಿಸಿರುತ್ತೇನೆ. ಯಾವ ಮನುಷ್ಯನು ತಾನಾಗಿಯಾಗಲಿ ಪರಪ್ರೇರಣೆಯಿಂದಾಗಲಿ ಯಾವ ಮಾರ್ಗದಲ್ಲಿ ಹೋಗಬೇಕಾಗಿ ಬರುವುದೋ ಆ ಮಾರ್ಗವು ಮೊದಲು ಲಿಖಿತವಾಗಿರುವ ಫಲಕ್ಕೆ ತಕ್ಕಂತೆಯೇ ಉಂಟಾಗುವುದರಿಂದ ಈ ಮಹಿಷಾಸುರನು ವಿಚಾರಮಾಡದೆ ಕಾರ್ಯಮಾರ್ಗವನ್ನು ನಿಶ್ಚಯಿಸಿದುದು ನ್ಯಾಯವೇ ಆಗಿದೆ.

೧೯-೨೦. ಅನಂತರ ರಾಕ್ಷಸರಾಜನಾದ ಮಹಿಷಾಸುರನು ನಮುಂಡ, ನಮರ, ಚಂಡ, ಬಿಡಾಲನೇತ್ರ, ಕಪಿಲ, ಬಾಷ್ಕಲ, ಉಗ್ರಾಯುಧ, ವಿಕ್ಷುರ, ರಕ್ತಬೀಜ ಇವರೆಲ್ಲರನ್ನೂ ಕರೆಯಿಸಿ ಆಜ್ಞಾಪಿಸಿದನು. ಅನಂತರ ಆ ಆಜ್ಞೆಯಂತೆ ಯುದ್ಧದಲ್ಲಿ ಸಮರ್ಥರಾದ ಈ ರಾಕ್ಷಸರೆಲ್ಲರೂ ರಣಭೇರಿಯನ್ನು ಹೊಡೆದು ಸ್ವರ್ಗವನ್ನು ಬಿಟ್ಟು ಆ ವಿಂಧ್ಯಗಿರಿಗೆ ಬಂದು ಅದರ ಬುಡದಲ್ಲಿ ಶಿಬಿರವನ್ನು ಹೂಡಿ ಸಿದ್ಧರಾಗಿ ನಿಂತರು.

೨೧-೨೨. ಅನಂತರ ಮಹಿಷಾಸುರನು ಮಯನ ಮಗನಾದ ಶತ್ರುನಾಶಕನಾಗಿಯೂ, ಯೂಥಪತಿಯಾಗಿಯೂ ಇರುವ ದುಂದುಭಿಯನ್ನು ದೇವಿಯ ಸಮೀ

ಅಭ್ಯೇತ್ಯ ದೇವೀಂ ಗಗನಸ್ಥಿತೋಽಪಿ
ಸ ದುಂದುಭಿರ್ವಾಕ್ಯಮುವಾಚ ವಿಪ್ರ ।
ಕುಮಾರಿ ದೂತೋಽಸ್ಮಿ ಮಹಾಸುರಸ್ಯ
ರಂಭಾತ್ಮಜಸ್ಯಾಪ್ರತಿಮಸ್ಯ ಯುದ್ಧೇ ॥ ೨೨ ॥

ಕಾತ್ಯಾಯನೀ ದುಂದುಭಿಮಿತ್ಯುವಾಚ
ಏಹ್ಯೇಹಿ ದೈತ್ಯೇಂದ್ರ ಭಯಂ ವಿಮುಚ್ಯ ।
ವಾಕ್ಯಂ ಚ ಯದ್ರಂಭಸುತೋ ಬಭಾಷೇ
ವದಸ್ವ ತತ್ಸತ್ಯಮುಪೇತಮೋಹಃ ॥ ೨೩ ॥

ತತಸ್ತು ವಾಕ್ಯಾದ್ದಿತಿಜಃ ಶಿವಾಯಾ
ಸ್ತ್ಯಕ್ತ್ವಾಂಬರಂ ಭೂಮಿತಲೇ ನಿಷಣ್ಣಃ ।
ಸುಖೋಪವಿಷ್ಟಃ ಪರಮಾಸನೇ ಚ
ರಂಭಾತ್ಮಜೇನೋಕ್ತಮುವಾಚ ವಾಕ್ಯಂ ॥ ೨೪ ॥

---

ಪಕ್ಕೆ ದೂತನನ್ನಾಗಿ ಕಳುಹಿಸಿದನು. ಆ ದುಂದುಭಿಯು ದೇವಿಯ ಸಮೀಪಕ್ಕೆ ಹೋಗಿ ಆಕಾಶದಲ್ಲಿಯೇ ನಿಂತು, ಎಲೈ ಕುಮಾರಿಯೇ, ಅಪ್ರತಿಮಪರಾಕ್ರಮಿಯಾದ ರಂಭ ಪುತ್ರನಾದ ಮಹಿಷಾಸುರನ ದೂತನಾಗಿ ನಾನು ಇಲ್ಲಿ ಬಂದಿದ್ದೇನೆ ಎಂದನು. ಕಾತ್ಯಾಯನಿಯು ದುಂದುಭಿಯನ್ನು ಕುರಿತು ಎಲೈ ದೈತ್ಯೇಂದ್ರನೇ, ಇಲ್ಲಿ ಬಾ. ಭಯಪಡಬೇಡ. ನಿಮ್ಮ ದೊರೆಯಾದ ರಂಭಸುತನು ಏನನ್ನು ಹೇಳಿರುವನೋ ಅದನ್ನೆಲ್ಲಾ ಸತ್ಯವಾಗಿ ವಂಚನೆ ಇಲ್ಲದೆ ಹೇಳು ಎಂದಳು.

೨೪-೨೭. ಈ ಪ್ರಕಾರವಾದ ಕಾತ್ಯಾಯನಿಯ ಸೌಮ್ಯವಚನದಿಂದ ಆ ದುಂದುಭಿಯು ಆಕಾಶವನ್ನು ಬಿಟ್ಟು ಕೆಳಗೆ ಇಳಿದು ದೇವಿಯ ಸಮೀಪದಲ್ಲಿ ಆಸನ ದಲ್ಲಿ ಸುಖೋಪವೇಶಹೊಂದಿದನಂತರ ಮಹಿಷಾಸುರನ ಸಂದೇಶವನ್ನು ಹೀಗೆ ಹೇಳಿ ದನು. ಎಲೈ ದೇವಿಯೇ, ಸಕಲ ದೇವತೆಗಳಿಗೂ ಶತ್ರುವಾಗಿರುವ ದಾನವ ರಾಜ ನಾದ ಮಹಿಷಾಸುರನು ನಿನಗೆ ಹೀಗೆ ಆಜ್ಞಾಪಿಸುತ್ತಾನೆ. ದೇವತೆಗಳೆಲ್ಲರೂ ನನ್ನಿಂದ ಯುದ್ಧದಲ್ಲಿ ಪರಾಜಿತರಾಗಿ, ಬಲಹೀನರಾಗಿ ಸ್ಥಾನಭ್ರಂಶವನ್ನು ಹೊಂದಿ ಭೂಮಿ ಯಲ್ಲಿ ಅಲೆಯುತ್ತಿದ್ದಾರೆ. ಸ್ವರ್ಗ, ಭೂಮಿ, ಆಕಾಶಮಾರ್ಗ, ಪಾತಾಲಲೋಕ, ಮತ್ತು ಇತರ ರಾಜರುಗಳು ಎಲ್ಲವೂ ನನಗೆ ವಶ್ಯವಾಗಿರುತ್ತವೆ. ಎಲೈ ಬಾಲೆಯೇ, ಈಗ ನಾನೇ ಇಂದ್ರ, ರುದ್ರ, ನಾನೇ ಸೂರ್ಯ ಸರ್ವಲೋಕದಲ್ಲಿಯೂ ನಾನೇ ಅಧಿಕ

**ದುಂದುಭಿರುವಾಚ**

ಏವಂ ಸಮಾಜ್ಞಾಪಯತೇಸುರಾರಿಃ
ತ್ವಾಂ ದೇವಿ ದೈತ್ಯೋ ಮಹಿಷಾಸುರಸ್ತು ।
ಯಥಾಮರಾ ಹೀನಬಲಾಃ ಪೃಥಿವ್ಯಾಂ
ಭ್ರಮಂತಿ ಯುದ್ಧೇ ವಿಜಿತಾ ಮಯಾ ತೇ ॥ ೧೫ ॥

ಸ್ವರ್ಗೇ ಮಹೀ ವಾಯುಪಥಾಶ್ಚ ವಶ್ಯಾಃ
ಪಾತಾಲ ಮನ್ಯೇಚ ಮಹೇಶ್ವರಾದ್ಯಾಃ ।
ಇಂದ್ರೋಸ್ಮಿ ರುದ್ರೋಸ್ಮಿ ದಿವಾಕರೋಸ್ಮಿ
ಸರ್ವೇಷು ಲೋಕೇಷ್ವಧಿಕೋಸ್ಮಿ ಬಾಲೇ ॥ ೧೬ ॥

ನಸೋಸ್ತಿ ನಾಕೇ ನ ಮಹೀತಲೇ ವಾ
ಸ್ವರ್ಗೇಪಿ ಪಾತಾಲತಲೇಪಿ ಯುದ್ಧೇ ।
ಸರ್ವಾಣಿ ಮಾಮದ್ಯ ಸಮಾಗತಾನಿ
ವೀರ್ಯಾರ್ಜಿತಾನೀಹ ವಿಶಾಲನೇತ್ರೇ ॥ ೧೭ ॥

ಸ್ತ್ರೀರತ್ನಮಗ್ರ್ಯಂ ಭವತೀ ಚ ಕನ್ಯಾ
ಪ್ರಾಪ್ತೋಸ್ಮಿ ಶೈಲಂ ತವ ಕಾರಣೇನ ।
ತಸ್ಮಾದ್ಭಜಸ್ವೈವ ಜಗತ್ಪತಿಂ ಮಾಂ
ಪತಿಸ್ತವಾರ್ಹೋಸ್ಮಿ ವಿಭುಃ ಪ್ರಭುಶ್ಚ ॥ ೧೮ ॥

---

ನಾಗಿರುವೆನು. ಯುದ್ಧದಲ್ಲಿ ನನ್ನನ್ನು ಜಯಿಸುವವನು ಸ್ವರ್ಗಲೋಕದಲ್ಲಿಯೂ, ನಾಕಲೋಕದಲ್ಲಿಯೂ, ಪಾತಾಲಲೋಕದಲ್ಲೂ ಇಲ್ಲ. ಎಲೈ ವಿಶಾಲಾಕ್ಷಿಯೇ, ಪರಾಕ್ರಮದಿಂದ ಜಯಿಸಲ್ಪಟ್ಟು ಲೋಕಗಳೆಲ್ಲವೂ ಈಗ ನನ್ನನ್ನೇ ಸೇರಿವೆ.

೧೮-೨೦. ನೀನು ಸ್ತ್ರೀರತ್ನವೂ, ಕನ್ಯೆಯೂ ಆಗಿರುತ್ತೀಯೆ. ನಿನಗಾಗಿಯೇ ನಾನು ಈ ಪರ್ವತಕ್ಕೆ ಬಂದಿದ್ದೇನೆ. ಆದುದರಿಂದ ಜಗತ್ಪತಿಯಾದ ನನ್ನನ್ನು ಮದುವೆಯಾಗು. ಪ್ರಭುವಾಗಿಯೂ, ಸಮರ್ಥನಾಗಿಯೂ ಇರುವ ನಾನು ನಿನಗೆ ಅರ್ಹನಾದ ಪತಿ ಎಂದು ತಿಳಿ. ಹೀಗೆ ದುಂದುಭಿಯಿಂದ ಹೇಳಲ್ಪಟ್ಟ ದೇವಿಯ ಪ್ರತ್ಯುತ್ತರವನ್ನು ಪುಲಸ್ತ್ಯರು ಅನುವಾದಮಾಡುತ್ತಾರೆ. ಹೀಗೆ ದುಂದುಭಿಯಿಂದ ಹೇಳಲ್ಪಟ್ಟ ಕಾತ್ಯಾಯನಿಯು ಅವನನ್ನು ಕುರಿತು ನಿಮ್ಮ ರಾಜನಾದ ಮಹಿಷನು

ಪುಲಸ್ತ್ಯ ಉವಾಚ

ಇತ್ಯೇವಮುಕ್ತ್ವಾ ದಿತಿಜೇನ ದುರ್ಗಾ
ಕಾತ್ಯಾಯನೀ ಪ್ರಾಹ ಮಯಸ್ಯ ಪುತ್ರಂ ।
ಸತ್ಯಂ ಪ್ರಭುರ್ದಾನವರಾಟ್ ಪೃಥಿವ್ಯಾಂ
ಸತ್ಯಂ ಚ ಯುದ್ಧೇ ವಿಜಿತಾಮರಾಶ್ಚ ॥ ೨೯ ॥

ಕಿಂತ್ವಸ್ತಿ ದೈತ್ಯೇಶ ಕುಲೇಽಸ್ಮದೀಯೇ
ಧರ್ಮೋಹಿ ಶುಲ್ಕಾಖ್ಯ ಇತಿ ಪ್ರಸಿದ್ಧಃ ।
ತಂ ಚೇತ್ಪ್ರದದ್ಯಾನ್ಮಹಿಷೋ ಮಮಾದ್ಯ
ಭಜಾಮಿ ಸತ್ಯೇನ ಪತಿಂ ಹಯಾರಿಂ ॥ ೩೦ ॥

ಶ್ರುತ್ವಾಥ ವಾಕ್ಯಂ ಮಯಜೋಽಬ್ರವೀಚ್ಚ
ಶುಲ್ಕಂ ವದಸ್ವಾಯತಪತ್ರನೇತ್ರೇ
ದದ್ಯಾತ್ಸ್ವಮೂರ್ಧಾನಮಪಿ ತ್ವದರ್ಥೇ
ಕಿಂನಾಮ ಶುಲ್ಕಂ ಚ ಯದಸ್ತ್ಯಲಭ್ಯಂ ॥ ೩೧ ॥

---

ಪ್ರಭುವಾಗಿಯೂ, ಜಗತ್ಪತಿಯಾಗಿಯೂ ಇರುವದು ನಿಶ್ಚಯ. ಯುದ್ಧದಲ್ಲಿ ದೇವತೆಗಳೆಲ್ಲರನ್ನೂ ಜಯಿಸಿ ವಿಜಯಹೊಂದಿರುವದೂ ನಿಶ್ಚಯ. ಆದರೆ ನಮ್ಮ ವಂಶದಲ್ಲಿ ಕನ್ಯೆಯನ್ನು ಸ್ವೀಕರಿಸಬೇಕಾದರೆ ಶುಲ್ಕವನ್ನು ಕೊಡಬೇಕೆಂಬ ಧರ್ಮವು ಪದ್ಧತಿಯಲ್ಲಿ ನಡೆದುಬಂದಿದೆ. ಅಂತಹ ಶುಲ್ಕವನ್ನು ಕೊಡಲು ನಿಮ್ಮ ಮಹಿಷಾಸುರನು ಸಿದ್ಧನಾದಲ್ಲಿ ಸತ್ಯವಾಗಿಯೂ ನಾನು ಅವನನ್ನು ಪತಿಯನ್ನಾಗಿ ಹೊಂದುವೆನು ಎಂದು ಉತ್ತರಕೊಟ್ಟಳು.

೩೧-೩೩. ಆ ಮಾತನ್ನು ಕೇಳಿ ದುಂದುಭಿಯು ಎಲೈ ವಿಶಾಲಾಕ್ಷಿಯೇ, ಶುಲ್ಕವೇನೆಂಬುದನ್ನು ಹೇಳು. ನಿನಗೋಸ್ಕರ ತನ್ನ ತಲೆಯನ್ನಾದರೂ ಕೊಡಲು ಸಿದ್ಧನಾಗಿರುವ ನಮ್ಮ ಮಹಿಷಾಸುರನಿಗೆ ಯಾವ ಶುಲ್ಕವು ತಾನೇ ಅಲಭ್ಯವಾದೀತು ಎಂದು ಹೇಳಲಾಗಿ ಅದಕ್ಕೆ ದೇವಿಯ ಉತ್ತರವನ್ನು ಪುಲಸ್ತ್ಯರು ಅನುವಾದಮಾಡುತ್ತಾರೆ. ಹೀಗೆ ದುಂದುಭಿಯಿಂದ ಹೇಳಲ್ಪಟ್ಟ ಕಾತ್ಯಾಯನಿಯು ಸದ್ದಾಗುವಂತೆ ಹುಂಕಾರಮಾಡಿ ನಕ್ಕು ಪ್ರಪಂಚದ ಹಿತಕ್ಕಾಗಿ ದೇವಿಯು ಹೀಗೆ ಹೇಳಿದಳು. ಎಲೈ ದೈತ್ಯನೇ, ನಮ್ಮ ವಂಶದಲ್ಲಿ ಹಿಂದಿದ್ದ ಮಹಾತ್ಮರು ಈ ಶುಲ್ಕವನ್ನು ಕಟ್ಟ

ಪುಲಸ್ತ್ಯ ಉವಾಚ

ಇತ್ಯೇವಮುಕ್ತ್ವಾ ದನುನಾಯಕೇನ
ಕಾತ್ಯಾಯನೀ ಸಸ್ವನಮುನ್ನದಿತ್ವಾ ।
ವಿಹಸ್ಯಚೈತದ್ವಚನಂ ಬಭಾಷೇ
ಹಿತಾಯ ಸರ್ವಸ್ಯ ಚರಾಚರಸ್ಯ ॥ ೩೨ ॥

ಶ್ರೀ ದೇವ್ಯುವಾಚ

ಕುಲೇಽಸ್ಮದೀಯೆ ಶೃಣು ದೈತ್ಯ ಶುಲ್ಕಂ
ಕೃತಂಹಿ ಯತ್ ಪೂರ್ವತರೈಃ ಪ್ರಸಹ್ಯ ।
ಯೋ ಜೇಷ್ಯತೇಽಸ್ಮತ್ಕುಲಜಾಂ ರಣಾಗ್ರೆ
ತಸ್ಯಾಃ ಪತಿಃ ಸೋಽಪಿ ಭವಿಷ್ಯತೀತಿ ॥ ೩೩ ॥

ಪುಲಸ್ತ್ಯ ಉವಾಚ

ತಚ್ಛ್ರುತ್ವಾ ವಚನಂ ದೇವ್ಯಾ ದುಂದುಭಿರ್ದಾನವೇಶ್ವರಃ ।
ಗತ್ವಾ ನಿವೇದಯಾಮಾಸ ಮಹಿಷಾಯ ಯಥಾಯಥಂ ॥ ೩೪ ॥

---

ನಿಷ್ಠಾಗಿ ಆಚರಿಸಿಕ್ಕೊಂಡು ಬಂದಿದ್ದಾರೆ. ನಮ್ಮ ವಂಶದಲ್ಲಿ ಹುಟ್ಟಿರುವ ಇವಳನ್ನು ಯಾರು ಯುದ್ಧದಲ್ಲಿ ಜಯಿಸುತ್ತಾರೆಯೋ ಅಂತಹವರಿಗೇ ಇವಳು ಪತ್ನಿ ಯಾಗುವಳು. ಯುದ್ಧದಲ್ಲಿ ಯಾವನು ಇವಳನ್ನು ಜಯಿಸುತ್ತಾನೆಯೋ ಅವನೇ ಇವಳಿಗೆ ಪತಿಯಾಗುವನೆಂದು ತಾತ್ಪರ್ಯ.

೩೪-೩೭. ಪುಲಸ್ತ್ಯರು ಹೇಳುತ್ತಾರೆ: ದೇವಿಯ ಈ ಮಾತನ್ನು ಕೇಳಿದೊಡನೆಯೇ ದುಂದುಭಿಯು ಮಹಿಷಾಸುರನಲ್ಲಿ ಹೋಗಿ ನಡೆದ ವಿಚಾರವನ್ನೆಲ್ಲಾ ಮಹಿಷಾಸುರನಲ್ಲಿ ಯಥಾರ್ಥವಾಗಿ ಅರಿಕೆಮಾಡಿಕೊಂಡನು. ಆ ಮಹಿಷಾಸುರನೂ ಸಹ ಎಲ್ಲಾ ದೈತ್ಯರನ್ನೂ ಮುಂದುಮಾಡಿಕ್ಕೊಂಡು ದೇವಿಯನ್ನು ಜಯಿಸಲಿಚ್ಛೆಯಿಂದ ವಿಂಧ್ಯಶಿಖರವನ್ನು ಮುತ್ತಿ ಯುದ್ಧಮಾಡಲು ಬಂದನು ಆಗ ಸೇನಾಪತಿಯಾದ ವಿಕ್ಷುರನೆಂಬ ದಾನವನು ನಮರನನ್ನು ಸೈನ್ಯದ ಮುಂದಾಳಾಗಿ ನಿಲ್ಲಲು ಆಜ್ಞೆಮಾಡಿದನು. ಸೇನಾಪತಿಯಿಂದ ಅಧಿಕೃತನಾದ ನಮರನೂ ಸಹ ಬಲಿಷ್ಠವಾದ ಹಸ್ತ್ಯಶ್ವರಥ ಪಾದಾತವೆಂಬ ಚತುರಂಗಸೈನ್ಯವುಳ್ಳ ಸೈನ್ಯದ ಕೆಲಭಾಗವನ್ನು ಮಾತ್ರ ತೆಗೆದುಕೊಂಡು ಮುಂದೆ ಹೋಗಿ ದುರ್ಗಾದೇವಿಯನ್ನು ವೇಗದಿಂದ ಆಕ್ರಮಿಸಲು ಓಡಿದನು.

ಸಚಾಭ್ಯಗಾನ್ಮಹಾತೇಜಾಃ ಸರ್ವದೈತ್ಯಪುರಸ್ಸರಃ ।
ಆವೃತ್ಯ ವಿಂಧ್ಯಶಿಖರಂ ಯೋದ್ಧುಕಾಮ ಸ್ಸರಸ್ವತೀಂ ॥ ೩೫ ॥

ತತ ಸ್ಸೇನಾಪತಿರ್ದೈತ್ಯೋ ವಿಕ್ಷುರೋನಾಮ ನಾರದ ।
ಸೇನಾಗ್ರಗಾಮಿನಂ ಚಕ್ರೇ ನಮುರಂ ನಾಮ ದಾನವಂ ॥ ೩೬ ॥

ಸ ಚಾಪಿ ತೇನಾಧಿಕೃತಃ ಚತುರಙ್ಗಂ ಸಮೂರ್ಜಿತಂ ।
ಬಲೈಕದೇಶಮಾದಾಯ ದುರ್ಗಾಂ ದುದ್ರಾವ ವೇಗತಃ ॥ ೩೭॥

ತಮಾಪತಂತಂ ವೀಕ್ಷ್ಯಾಥ ದೇವಾ ಬ್ರಹ್ಮಪುರೋಗಮಾಃ ।
ಊಚುರ್ವಾಕ್ಯಂ ಮಹಾದೇವೀಂ ವರ್ಮಬಂಧನಮಾಶ್ರಯ ॥ ೩೮ ॥

ಅಥೋವಾಚ ಸುರಾನ್ದುರ್ಗಾ ನ ಬಧ್ನಾಮಿ ಚ ದೇವತಾಃ ।
ಕವಚಂ ಕೋತ್ರಸಂತಿಷ್ಠೇನ್ಮಮಾಗ್ರೇ ದಾನವಾಧಮಃ ॥ ೩೯ ॥

ಯದಾ ನ ದೇವ್ಯಾ ಕವಚಂ ಕೃತಂ ಶಸ್ತ್ರನಿವಾರಣಂ ।
ತದಾ ರಕ್ಷಾರ್ಥಮುಸ್ಯಾಸ್ತು ವಿಷ್ಣುಪಂಜರಮುಕ್ತವಾನ್ ॥ ೪೦ ॥

ಸಾ ತೇನ ರಕ್ಷಿತಾ ಬ್ರಹ್ಮನ್ ದುರ್ಗಾ ದಾನವಸತ್ತಮಂ ।
ಅವಧ್ಯಂ ದೈವತೈ ಸ್ಸರ್ವೈಃ ಮಹಿಷಂ ಪ್ರತ್ಯಪೇಷಯತ್ ॥ ೪೧ ॥

---

೩೮-೪೦. ಆ ಪ್ರಕಾರ ವೇಗವಾಗಿ ಮೇಲೆ ಬೀಳಲು ಬರುತ್ತಿರುವ ನಮುರನನ್ನು ನೋಡಿ ಚತುರ್ಮುಖನೇ ಮೊದಲಾದ ದೇವತೆಗಳು ದೇವಿಯನ್ನು ಕುರಿತು ಕವಚವನ್ನು ಧರಿಸು ಎಂದು ಹೇಳಿದರು. ದೇವಿಯು ದೇವತೆಗಳನ್ನು ಕುರಿತು, ನಾನು ಕವಚವನ್ನು ಧರಿಸುವುದಿಲ್ಲ ಹೀಗೆಯೇ ಯುದ್ಧಮಾಡುವೆನು. ನನ್ನ ಮುಂದೆ ಯಾವ ದಾನವಾಧಮನು ಸಮರ್ಥನಾಗಿ ನಿಂತಾನು ನೋಡೋಣವೆಂದು ಹಾಗೆಯೇ ಯುದ್ಧೋನ್ಮುಖಿಯಾದಳು. ಆ ಸಮಯದಲ್ಲಿ ದೇವಿಯು ಕವಚವನ್ನು ಧರಿಸದೇ ಇದ್ದುದರಿಂದ ಅವಳ ರಕ್ಷಣಕ್ಕಾಗಿ ಈ ವಿಷ್ಣುಪಂಜರವನ್ನು ಅವಳಿಗೆ ಉಪದೇಶಿಸಲಾಯಿತು.

೪೧-೪೩. ಆಗ ಕಾತ್ಯಾಯನಿಯು ವಿಷ್ಣುಪಂಜರದಿಂದ ರಕ್ಷಿತಳಾಗಿ ಸರ್ವದೇವತೆಗಳಿಂದಲೂ ಅವಧ್ಯನಾಗಿದ್ದ ಮಹಿಷಾಸುರನನ್ನು ಮರ್ದಿಸಿದಳು. ಈ ರೀತಿ

ಏವಂ ಪುರಾ ದೇವವರೇಣ ಶಂಭುನಾ
ತದ್ವೈಷ್ಣವಂ ಪಂಜರಮಾಯತಾಕ್ಷ್ಯಾಃ ।
ಪ್ರೋಕ್ತಂ ತಯಾ ಚಾಪಿಹಿ ಪಾದಘಾತೈ
ರ್ನಿಷೂದಿತೋಽಸೌ ಮಹಿಷಾಸುರೇಂದ್ರಃ ॥ ೪೨ ॥

ಏವಂ ಪ್ರಭಾವೋ ದ್ವಿಜ ವಿಷ್ಣುಪಂಜರಃ
ಸರ್ವಾಸು ರಕ್ಷಾಸ್ವಧಿಕೋಽಹಿ ಗೀತಃ ।
ಕಸ್ತಸ್ಯ ಕುರ್ಯಾದ್ಭುವಿ ದರ್ಪಹಾನಿಂ
ಯಸ್ಯ ಸ್ಥಿತಶ್ಚೇತಸಿ ಚಕ್ರಪಾಣಿಃ ॥ ೪೩ ॥

ಇತಿ ಶ್ರೀ ವಾಮನಪುರಾಣೇ ದೇವೀಮಾಹತ್ಮ್ಯ ಪರಿಕೀರ್ತನಂ
ನಾಮ ಏಕೋನವಿಂಶೋಽಧ್ಯಾಯಃ

---

ಪೂರ್ವದಲ್ಲಿ ಶಂಭುವಿನಿಂದ ವೈಷ್ಣವಪಂಜರದ ಉಪದೇಶವಂ ಪಡೆದ ಕಾತ್ಯಾಯನಿಯು ಮಹಿಷಾಸುರನನ್ನು ಕಾಲಿನಿಂದಲೇ ಪ್ರಹರಿಸಿ ನಾಶಮಾಡಿದಳು. ಈ ವಿಧವಾದ ಮಾಹಾತ್ಮ್ಯವುಳ್ಳ ಈ ವೈಷ್ಣವಪಂಜರವು ರಕ್ಷಕವಾದ ಎಲ್ಲಾ ಮಂತ್ರಗಳಿಗಿಂತಲೂ ಅಧಿಕವಾದ ಮಾಹಾತ್ಮ್ಯವುಳ್ಳದ್ದು. ಈ ಪಂಜರದ ಅನುಸಂಧಾನದಿಂದ ಯಾವನು ಮನಸ್ಸಿನಲ್ಲಿ ಚಕ್ರಪಾಣಿಯಾದ ನಾರಾಯಣನನ್ನು ಧ್ಯಾನಿಸುವನೋ ಅಂತಹವನ ದರ್ಪವನ್ನು ಹೋಗಲಾಡಿಸಲು ಭೂಮಿಯಲ್ಲಿ ಯಾರು ತಾನೇ ಇದ್ದಾರೆ.

ಇಲ್ಲಿಗೆ ಶ್ರೀ ವಾಮನಪುರಾಣದಲ್ಲಿ ದೇವೀಮಾಹಾತ್ಮ್ಯಕೀರ್ತನವೆಂಬ
ಹತ್ತೊಂಭತ್ತನೆಯ ಅಧ್ಯಾಯವು ಮುಗಿದಿದೆ.

## ಅಧ್ಯಾಯಾರ್ಥ ಸಂಗ್ರಹ



ಈ ಅಧ್ಯಾಯದಲ್ಲಿ ವಿಂಧ್ಯಪರ್ವತದ ಶಿಖರದಲ್ಲಿ ವಾಸಿಸುತ್ತಿದ್ದ ಕಾತ್ಯಾಯನಿಯನ್ನು ನೋಡಿ ಚಂಡಮುಂಡರೆಂಬ ಮಹಿಷಾಸುರನ ದೂತರು ಅವಳ ಸೌಂದರ್ಯವನ್ನು ಧೊರೆಯಾದ ಮಹಿಷಾಸುರನಲ್ಲಿ ವರ್ಣಿಸಿದರೆಂದೂ ಆ ವರ್ಣನೆಯಿಂದ ಕಾಮಪರವಶನಾದ ಮಹಿಷಾಸುರನು ಸಾಮಾನ್ಯಸ್ತ್ರೀಬುದ್ಧಿಯಿಂದ ದೇವಿಯಲ್ಲಿ ವ್ಯಾಮೋಹ ಹೊಂದಿದನೆಂದೂ ಆ ವ್ಯಾಮೋಹದಿಂದಲೇ ದೇವಿಯನ್ನು ಜಯಿಸಲು ಯುದ್ಧಹೂಡಿ ವಿನಾಶವನ್ನು ಹೊಂದಿದನೆಂದೂ ಸ್ಪಷ್ಟವಾಗಿರುವ ಕಥಾಸರಣಿ. ಇದರಲ್ಲಿ ದೇವಿಯ ವಿಜಯಕ್ಕೂ ಅವಳಿಗೆ ವಿಷ್ಣುಪಂಜರದ ಉಪದೇಶದಿಂದುಂಟಾದ ರಕ್ಷಣೆಯೇ ಕಾರಣವಾದುದರಿಂದ ಹಿಂದಿನ ಅಧ್ಯಾಯಗಳಲ್ಲಿ ಹೇಳಿರುವ ವೈಷ್ಣವ ವ್ರತದ ಮಾಹಾತ್ಮ್ಯವನ್ನೇ ಕಾರ್ಯದ್ವಾರದಿಂದ ಇಲ್ಲಿ ವಿಸ್ತರಿಸಿದಂತಾಯಿತು. ಇಲ್ಲಿ ಉತ್ತಮ ದೇವತಾ ವಿಷಯಕವಾದ ಅವಯವ ಸೌಂದರ್ಯವನ್ನು ಕಾಮೋದ್ರೇಕಕ್ಕೆ ಅನುಗುಣವಾಗಿ ವರ್ಣಿಸಕೂಡದೆಂದು ಅಲಂಕಾರಶಾಸ್ತ್ರಕಾರರ ನಿಯಮವಿದ್ದರೂ ಈ ಸಂದರ್ಭದಲ್ಲಿ ಹಿಂದೆ ರಂಭನಿಗೆ ಅಗ್ನಿಯು ವರವನ್ನು ಕೊಡುವಕಾಲದಲ್ಲಿ ನಿನಗೆ ನನ್ನ ವರದಿಂದ ಉಂಟಾಗುವ ಮಗನು ನಿನ್ನ ಕೋರಿಕೆಯಂತೆ ಸರ್ವದೇವತೆಗಳಿಂದಲೂ ಅವಧ್ಯನೇ ಆಗುತ್ತಾನೆ. ಆದರೆ ಯಾವೊಬ್ಬಳಲ್ಲಿ ಕಾಮುಕನಾಗಿ ಯುದ್ಧೋದ್ಯೋಗಿಯಾಗುತ್ತಾನೆಯೋ ಅವಳಿಂದಲೇ ನಿನ್ನ ಆ ಪುತ್ರನಿಗೆ ಮರಣವುಂಟಾಗುತ್ತದೆ ಎಂದು ನಿಯಮವನ್ನು ಕಲ್ಪಿಸಿದ್ದುದರಿಂದ ಅದಕ್ಕೆ ತಕ್ಕಂತೆ ಸರ್ವ ದೇವತೆಗಳಿಂದಲೂ ಬೇರೆಯಾದ ಈ ಕಾತ್ಯಾಯನಿಯನ್ನು ಮಹಿಷಾಸುರನಿಗೆ ಮೋಹಕಳಾಗುವಂತೆ ವರ್ಣಿಸಬೇಕಾದ ಅವಶ್ಯಕತೆ ಇರುವುದರಿಂದ ಇದು ದೋಷವಲ್ಲವೆಂದು ಭಾವಿಸಬೇಕು.



॥ ಶ್ರೀಃ ॥

# ಶ್ರೀವಾಮನಪುರಾಣಂ

## ವಿಂಶತಿತಮೋಽಧ್ಯಾಯಃ

ನಾರದ ಉವಾಚ

ಕಥಂ ಕಾತ್ಯಾಯನೀ ದೇವೀ ಸಾನುಗಂ ಮಹಿಷಾಸುರಂ ।
ಸವಾಹನಂ ಹತವತೀ ತಥಾ ವಿಸ್ತರತೋ ವದ ॥ ೧ ॥

ಅಯಂ ಚ ಸಂಶಯೋ ಬ್ರಹ್ಮನ್ ಹೃದಿ ಮೇಪರಿವರ್ತತೇ ।
ವಿದ್ಯಮಾನೇಷು ಶಸ್ತ್ರೇಷು ಯತ್ ಪದ್ಭ್ಯಾಂ ತಮಮರ್ದಯತ್ ॥ ೨ ॥

ಪುಲಸ್ತ್ಯ ಉವಾಚ

ಶೃಣುಷ್ವಾವಹಿತೋ ಭೂತ್ವಾ ಕಥಾಮೇತಾಂ ಪುರಾತನೀಂ ।
ವೃತ್ತಾಂ ದೇವಯುಗಸ್ಯಾದೌ ಪುಣ್ಯಾಂ ಪಾಪಭಯಾಪಹಾಂ ॥ ೩ ॥

ಸ ಏವಮಸುರಃ ಕ್ರುದ್ಧಃ ಸಮಾಪತತ ವೇಗವಾನ್ ।
ಸಗಜಾಶ್ವರಥೋ ಬ್ರಹ್ಮನ್‌ದೃಷ್ಟ್ವಾ ದೇವ್ಯಾ ಯಥೇಚ್ಛಯಾ ॥ ೪ ॥

---

## ಇಪ್ಪತ್ತನೆಯ ಅಧ್ಯಾಯವು

೧-೨. ನಾರದರು ಕೇಳುತ್ತಾರೆ: ಕಾತ್ಯಾಯನೀದೇವಿಯು ವಾಹನ ಮತ್ತು ಸಹಾಯಸಹಿತನಾದ ಮಹಿಷಾಸುರನನ್ನು ಹೇಗೆ ಕೊಂದಳು. ಈ ವಿಷಯವನ್ನು ವಿಸ್ತಾರವಾಗಿ ಅಪ್ಪಣೆಕೊಡಿಸಬೇಕು ಮತ್ತು ಶಸ್ತ್ರಾಸ್ತ್ರಗಳಿದ್ದರೂ ಪಾದಗಳಿಂದಲೇ ಅವನನ್ನು ಮರ್ದಿಸಿದಳೆಂಬ ವಿಷಯದಲ್ಲಿ ನನಗೆ ಬಹಳ ಸಂಶಯವುಂಟಾಗಿದೆ ಇದನ್ನೂ ಹೇಳಬೇಕು.

೩-೫. ಪುಲಸ್ತ್ಯರು ಹೇಳುತ್ತಾರೆ: ಪುರಾತನವಾದ ಈ ಕಥೆಯು ದೇವ ಯುಗದ ಆದಿಯಲ್ಲಿಯೇ ನಡೆಯಿತು. ಪುಣ್ಯಕರವಾಗಿಯೂ ಸಮಸ್ತಪಾಪನಾಶಕ

ತತೋ ದೇವಗಣೈ ರ್ದೈತ್ಯಾನ್ ಸಮಾನಮ್ಯಾಥ ಕಾರ್ಮುಕಂ।
ವವರ್ಷ ದೇವೀ ಬಾಣೌಘೈಃ ದ್ಯೌರಿವಾಂಬುದವೃಷ್ಟಿಭಿಃ ॥೫॥

ತದ್ಧನು ದಾರ್ನವೆ ಸೈನ್ಯೇ ದುರ್ಗಯಾ ನಮಿತಂ ಬಲಾತ್।
ಸುವರ್ಣಪುಷ್ಪಂ ವಿಬಭೌ ವಿದ್ಯುದಂಬುಧರೇಷ್ವಿವ ॥೬॥

ಬಾಣೈಸ್ಸುರರಿಪೂನನ್ಯಾಂಸ್ತಾಡಯಾಮಾಸ ಸುವ್ರತ।
ಗದಯಾ ಮುಸಲೇನಾನ್ಯಾನ್ ಸ್ವಸ್ಥಾನೇಭ್ಯೋ ನ್ಯಪಾತಯತ್। ॥೭॥

ಏಕೋಪ್ಯಸೌ ಬಹೂನ್ದೈತ್ಯಾನ್ಕೇಸರೀ ಕಾಲಸನ್ನಿಭಃ।
ವಿಧುನ್ವನ್ಕೇಸರಸಟಾ ನಿಷೂದಯತಿ ದಾನವಾನ್ ॥೮॥

ಕುಲಿಶಾಭಿಹತಾ ದೈತ್ಯಾಃ ಶಕ್ತ್ಯಾ ನಿರ್ಭಿನ್ನವಕ್ಷಸಃ।
ಲಾಂಗಲೈ ರ್ದಾರಿತಗ್ರೀವಾ ದ್ವಿಧಾ ಕೃತ್ತಾಃ ಪರಶ್ವಧೈಃ ॥೯॥

ದಂಡನಿರ್ಭಿನ್ನಶಿರಸಃ ಚಕ್ರವಿಚ್ಛಿನ್ನಬಂಧನಾಃ।
ಚೇಲುಃ ಪೇತುಶ್ಚ ಮತ್ತಾಶ್ಚ ತತ್ಯಜುಶ್ಚಾಪರೆ ರಣಂ ॥೧೦॥

---

ವಾಗಿಯೂ ಇರುವ ಈ ಕಥೆಯನ್ನು ಅವಧಾನದಿಂದ ಕೇಳು. ಅಂತಹ ಈ ಮಹಿಷಾಸುರನು ಬಹಳ ಕೋಪದಿಂದ ಗಜ, ಅಶ್ವ ಮುಂತಾದ ಸೇನಾಸಾಮಗ್ರಿಯಿಂದ ವೇಗದಿಂದ ಎದುರಿಸತೊಡಗಿದನು. ಇಂತಹ ದೈತ್ಯನನ್ನು ನೋಡಿ ದೇವಿಯು ಧನುಸ್ಸನ್ನು ಬಗ್ಗಿಸಿ ದೇವತೆಗಳ ಶಕ್ತಿಸ್ವರೂಪವಾದ ಬಾಣಗಳಿಂದ ಆಕಾಶವು ಮೋಡಗಳಿಂದ ಮಳೆಗರೆಯುವಂತೆ ಮಳೆಗರೆದಳು.

೬-೮. ಆ ದಾನವ ಸೈನ್ಯದ ಮೇಲೆ ದೇವಿಯಿಂದ ಬಗ್ಗಿಸಿ ಹಿಡಿಯಲ್ಪಟ್ಟ ಧನುಸ್ಸು ಸುವರ್ಣಮಯವಾದ ಕುಸುಮಗಳಿಂದ ಕೂಡಿ ಕಪ್ಪಾದ ಮೇಘಗಳಲ್ಲಿ ಪ್ರತಿಫಲಿಸುವ ಮಿಂಚಿನಂತೆ ತೋರಿತು. ಬಾಣಗಳಿಂದ ಇತರ ದಾನವರನ್ನೂ ಪ್ರಹರಿಸಿದಳು. ಗದಾ ಮುಸಲಗಳಿಂದ ಕೆಲವು ದಾನವರನ್ನು ವಾಹನಗಳಿಂದಕೆಳಕ್ಕೆ ಕೆಡವಿದಳು. ಅವಳ ವಾಹನವಾದ ಸಿಂಹವು ಏಕಾಕಿಯಾಗಿದ್ದರೂ ಕಾಲಯಮನಂತೆ ರೌದ್ರಾಕಾರದಿಂದ ಕೇಸರಗಳನ್ನು ಕೆದರಿಕೊಂಡು ಅನೇಕ ದಾನವರನ್ನು ನಾಶಮಾಡಿತು.

೯-೧೨. ಆ ದೈತ್ಯಸೈನ್ಯದಲ್ಲಿ ಕೆಲವರು ವಜ್ರಾಯುಧದಿಂದ ಹೊಡೆಯಲ್ಪಟ್ಟೂ, ಕೆಲವರು ಶಕ್ತ್ಯಾಯುಧದಿಂದ ಶೀಳಲ್ಪಟ್ಟ ಹೃದಯವುಳ್ಳವರಾಗಿಯೂ, ಕೆಲವರು

ತೇ ವಧ್ಯಮಾನಾ ರುದ್ರಾಸ್ತ್ರ್ಯಾ ದುರ್ಗಯಾ ದೈತ್ಯದಾನವಾಃ ।
ಕಾಲರಾತ್ರಿಂ ಮನ್ಯಮಾನಾ ದುದ್ರುವುರ್ಭಯಪೀಡಿತಾಃ ॥ ೧೧ ॥

ಸೇನಾನ್ಯಂ ಭಗ್ನಮಾಲೋಕ್ಯ ದುರ್ಗಾಮಗ್ರೇ ತಥಾ ಸ್ಥಿತಾಂ ।
ದೃಷ್ಟ್ವಾ ಜಗಾಮ ನಮರೋ ಮತ್ತದ್ವಿರದಸಂಸ್ಥಿತಃ ॥ ೧೨ ॥

ಸಮಾಗಮ್ಯ ಚ ವೇಗೇನ ದೇವ್ಯಾಂ ಶಕ್ತಿಂ ಮುಮೋಚ ಹ ।
ತ್ರಿಶೂಲಮಪಿ ಸಿಂಹಾಯ ಪ್ರಾಹಿಣೋದ್ದಾನವೋರಣೇ ॥ ೧೩ ॥

ತಾವಾಯಾಂತೌ ತತೋ ದೇವ್ಯಾ ಹುಂಕಾರೇಣಾಥ ಭಸ್ಮಸಾತ್ ।
ಕೃತೌ ತತೋ ಗಜೇಂದ್ರೇಣ ಗೃಹೀತೋ ಮಧ್ಯತೋ ಹರಿಃ ॥ ೧೪ ॥

ಅಥೋತ್ಪತ್ಯ ಚ ವೇಗೇನ ತಲೇನಾಹತ್ಯ ದಾನವಂ ।
ಗತಾಸುಂ ಕುಂಜರಸ್ಕಂಧಾತ್ಕ್ಷಿಪ್ಯ ದೇವ್ಯೈ ನಿವೇದಿತಃ ॥ ೧೫ ॥

ಗೃಹೀತ್ವಾ ದಾನವಂ ಯುದ್ಧೇ ಬ್ರಹ್ಮರ್ಕ ಕಾತ್ಯಾಯನೀ ರುಷಾ ।
ಸವ್ಯೇನ ಪಾಣಿನಾ ಭ್ರಾಮ್ಯಾ ವಾದಯತ್ಪಟಹಂ ಯಥಾ ॥ ೧೬ ॥

---

ನೇಗಲಿನಿಂದ ಕಡಿಯಲ್ಪಟ್ಟ ಕತ್ತುಳ್ಳವರಾಗಿಯೂ, ಕೆಲವರು ಕೊಡಲಿಯಿಂದ ಎರಡುಭಾಗವಾಗುವಂತೆ ಕತ್ತರಿಸಲ್ಪಟ್ಟೂ, ಮತ್ತೆ ಕೆಲವರು ದೊಣ್ಣೆಯಿಂದ ಒಡೆದ ತಲೆಯುಳ್ಳವರಾಗಿಯೂ, ಇನ್ನು ಕೆಲವರು ಚಕ್ರಾಯುಧದಿಂದ ಕತ್ತರಿಸಲ್ಪಟ್ಟ ಕೀಲು ಉಳ್ಳವರಾಗಿಯೂ, ಕೆಲವರು ಓಡಿದರು, ಮತ್ತೆ ಕೆಲವರು ಕೆಳಗೆ ಬಿದ್ದರು, ಇನ್ನು ಕೆಲವರು ಮೂರ್ಛಿತರಾದರು, ಕೆಲವರು ಯುದ್ಧಭೂಮಿಯನ್ನೇ ಬಿಟ್ಟು ಓಡಿದರು. ಈಶ್ವರನ ಶಕ್ತಿಯನ್ನು ಹಿಡಿದು ದುರ್ಗಾದೇವಿಯಿಂದ ಪ್ರಹರಿಸಲ್ಪಡುತ್ತಿರುವ ಆ ದಾನವರು ಕಾಲರಾತ್ರಿಯೇ ಈ ರೀತಿ ಸನ್ನಿಹಿತವಾಗಿದೆ ಎಂದು ತಿಳಿದು ಬಹಳ ಭಯದಿಂದ ದಿಕ್ಕಾಪಾಲಾಗಿ ಚದುರಿ ಓಡಿದರು. ಆಗ ಸೇನಾಪತಿಯಾದ ವಿಕ್ಷುರನು ಭಗ್ನನಾದುದನ್ನೂ ದುರ್ಗಾದೇವಿಯು ಪರಾಕ್ರಮದಿಂದ ಎದುರಿಗೆ ನಿಂತಿರುವುದನ್ನೂ ನೋಡಿ ನಮರನು ಆನೆಯ ಮೇಲೇರಿ ಎದುರಿಸಲು ಅಭಿಮುಖನಾಗಿ ಬಂದನು.

೧೩-೧೬. ಹೀಗೆ ದೇವಿಯನ್ನು ಎದುರಿಸಲು ಬಂದ ನಮರನು ಬಹಳ ವೇಗದಿಂದ ದೇವಿಯ ಮೇಲೆ ಶಕ್ತ್ಯಾಯುಧವನ್ನು ಅವಳ ವಾಹನವಾದ ಸಿಂಹದ ಮೇಲೆ ತ್ರಿಶೂಲಾಯುಧವನ್ನೂ ಪ್ರಯೋಗಿಸಿದನು. ಹಾಗೆ ವೇಗದಿಂದ ಬಂದ ಆ ಆಯುಧ

ತತೋಽಟ್ಟಹಾಸಂ ಮುಮುಚೇ ತಾದೃಶೇ ವಾದ್ಯತಾಂ ಗತೇ ।
ಹಾಸ್ಯಾತ್ಸಮುದ್ಭವಂಸ್ತಸ್ಯಾ ಭೂತಾ ನಾನಾವಿಧಾಃ ಕ್ರಮಾತ್ ॥ ೧೭ ॥

ಕೇಚಿದ್ವ್ಯಾಘ್ರಮುಖಾ ರೌದ್ರಾ ವೃಕಾಕಾರಾಸ್ತಥಾಪರೇ ।
ಹಯಾಸ್ಯಾ ಮಹಿಷಾಸ್ಯಾಶ್ಚ ವರಾಹವದನಾಃ ಪರೇ ॥ ೧೮ ॥

ಆಖುಕುಕ್ಕುಟವಕ್ತ್ರಾಶ್ಚ ಗೋಜಾವಿಕಮುಖಾಸ್ತಥಾ ।
ನಾನಾವಕ್ತ್ರಾಕ್ಷಿಚರಣಾ ನಾನಾಯುಧಧರಾಸ್ತಥಾ ॥ ೧೯ ॥

ಗಾಯಂತ್ಯನ್ಯೇ ಹಸಂತ್ಯನ್ಯೇ ಕ್ರೀಡಂತ್ಯನ್ಯೇ ತು ಸಂಹತಾಃ ।
ವಾದಯಂತ್ಯಪರೇ ತತ್ರ ಸ್ತುವಂತ್ಯನ್ಯೇ ತಥಾಂಬಿಕಾಂ ॥ ೨೦ ॥

---

ಗಳೆರಡೂ ದೇವಿಯ ಹುಂಕಾರದಿಂದ ಕ್ಷಣಮಾತ್ರದಲ್ಲಿ ಭಸ್ಮವಾದವು. ಅನಂತರ ನಮರನ ವಾಹನವಾದ ಆನೆಯು ದೇವಿಯ ವಾಹನವಾದ ಸಿಂಹವನ್ನು ಮಧ್ಯಭಾಗದಲ್ಲಿ ಹಿಡಿದುಕೊಂಡಿತು. ಸಿಂಹವು ಒಡನೆಯೇ ವೇಗದಿಂದ ಮೇಲಕ್ಕೆ ಹಾರಿ ದಾನವನಾದ ನಮರನನ್ನು ಕೈಯ್ಯಿನಿಂದ ಅಪ್ಪಳಿಸಿ ಕೆಳಕ್ಕೆ ಕೆಡವಿ ಮೃತನಾದ ಅವನ ದೇಹವನ್ನು ದೇವಿಗೆ ಒಪ್ಪಿಸಿತು. ಆಗ ಕಾತ್ಯಾಯನಿಯು ಆ ದಾನವನನ್ನು ಯುದ್ಧಮಧ್ಯದಲ್ಲೇ ಎಡದ ಕೈಯ್ಯಿನಿಂದ ಹಿಡಿದು ತಿರುಗಿಸಿ ಪಟಹವಾದ್ಯದಂತೆ ಬಾರಿಸಿದಳು.

೧೭-೨೦. ಆಗ ದೇವಿಯು ನಮರನೆಂಬ ವಾದ್ಯವನ್ನು ಹೊಂದಿ ಅಟ್ಟಹಾಸವನ್ನು ಮಾಡಿದಳು. ಆ ಅಟ್ಟಹಾಸದಿಂದ ನಾನಾವಿಧವಾದ ಭೂತಗಳು ಆವಿರ್ಭವಿಸಿದವು. ಅವುಗಳಲ್ಲಿ ಕೆಲವು ಹುಲಿಯ ಮುಖದಂತೆ ಮುಖವುಳ್ಳವುಗಳಾಗಿಯೂ, ಕೆಲವು ಭಯಂಕರವಾದ ತೋಳದ ಮುಖದಂತೆ ಮುಖವುಳ್ಳವುಗಳಾಗಿಯೂ ಮತ್ತೆ ಕೆಲವು ಕುದುರೆಯ ಮತ್ತು ಎಮ್ಮೆಯ ಮತ್ತು ಹಂದಿಯ ಮುಖದಂತೆ ಮುಖವುಳ್ಳವುಗಳಾಗಿಯೂ, ಇನ್ನೂ ಕೆಲವು ಇಲಿ, ಕೋಳಿ, ಹಸು, ಆಡು, ಕುರಿ ಮುಂತಾದುವುಗಳ ಮುಖದಂತೆ ಮುಖವುಳ್ಳವುಗಳಾಗಿಯೂ ನಾನಾವಿಧವಾದ ಮುಖ, ಕಣ್ಣು, ಕೈಕಾಲುಗಳಿಂದ ಕೂಡಿ ನಾನಾವಿಧವಾದ ಆಯುಧಗಳನ್ನು ಧರಿಸಿ ಕೆಲವು ಗಾನಮಾಡುತ್ತಲೂ, ಕೆಲವು ಹಾಸ್ಯದಿಂದ ಪರಸ್ಪರ ನಲಿದಾಡುತ್ತಲೂ, ಕೆಲವು ಒಟ್ಟಾಗಿ ಸೇರಿ ಆಟವಾಡುತ್ತಲೂ ಮತ್ತೆ ಕೆಲವು ವಾದ್ಯಗಳನ್ನು ಬಾರಿಸುತ್ತಲೂ, ಇನ್ನು ಕೆಲವು ದೇವಿಯನ್ನು ಸ್ತೋತ್ರಮಾಡುತ್ತಲೂ ನಿಂತವು.

ಸಾ ತೈರ್ಭೂತಗಣೈರ್ದೇವೀ ಸಾರ್ಧಂ ತದ್ದಾನವಂ ಬಲಂ ।
ಶಾತಯಾಮಾಸ ಚಂಕ್ರಾಮ್ಯ ಯಥಾ ತೃಣ್ಯಾಂ ಮಹಾಶನಿಃ ॥ ೨೧ ॥

ಸೇನಾನ್ಯೇ ನಿಹತೇ ತಸ್ಮಿಂಸ್ತಥಾ ಸೇನಾಗ್ರಗಾಮಿಭಿಃ ।
ಚಿಕ್ಷುರಃ ಸೈನ್ಯಪಾಲಸ್ತು ಯೋಧಯಾಮಾಸ ದೇವತಾಃ ॥ ೨೨ ॥

ಕಾರ್ಮುಕಂ ದೃಢಮಾಕರ್ಣಮಾಕೃಷ್ಯ ರಥಿನಾಂವರಃ ।
ವವರ್ಷ ಶರಜಾಲಾನಿ ಯಥಾ ಮೇಘೋ ವಸುಂಧರಾಂ ॥ ೨೩ ॥

ತಾನ್ ದುರ್ಗಾ ಸ್ವಶರೈಶ್ಛಿತ್ವಾ ಶರಸಂಘಾನ್ಸುಪರ್ವಭಿಃ ।
ಸೌವರ್ಣಪುಂಖಾನಪರಾನ್ ಶರಾನ್ ಜಗ್ರಾಹ ಷೋಡಶ ॥ ೨೪ ॥

ತತಶ್ಚತುರ್ಭಿ ಶ್ಚತುರಸ್ತುರಂಗಾನಪಿ ಭಾಮಿನೀ ।
ಹತ್ವಾ ಸಾರಥಿಮೇಕೇನ ಧ್ವಜಮೇಕೇನ ಚಿಚ್ಛಿದೆ ॥ ೨೫ ॥

ತತಸ್ತು ಸಶರಂ ಚಾಪಂ ಚಿಚ್ಛೇದೈಕೇಷುಣಾಂಬಿಕಾ ।
ಛಿನ್ನೇ ಧನುಷಿ ಖಡ್ಗಂ ಚ ಚರ್ಮ ಚಾದತ್ತವಾನ್ ಬಲೀ ॥ ೨೬ ॥

---

೨೧-೨೪. ಆ ಭೂತಗಣಗಳೊಡನೆ ಅಲ್ಲಲ್ಲಿ ಹಾರಿಹಾರಿ ದೇವಿಯು ಸಿಡಿಲು ಹುಲ್ಲಿನ ಮೆದೆಯನ್ನು ಭಸ್ಮಮಾಡುವಂತೆ ಎಲ್ಲಾ ದಾನವಬಲವನ್ನೂ ಕೊಚ್ಚಿಹಾಕಿದಳು. ಆ ಸೇನಾಪತಿಯು ತನ್ನ ಸಹಾಯಬಲದೊಡನೆ ನಾಶಹೊಂದಿದಮೇಲೆ ಚಿಕ್ಷುರನೆಂಬ ಮತ್ತೊಬ್ಬ ಸೇನಾಪತಿಯು ದೇವತೆಗಳೊಡನೆ ಹೋರಾಡಲುಪಕ್ರಮಿಸಿದನು. ರಥಿಗಳಲ್ಲಿ ಅಗ್ರೇಸರನಾದ ಆ ದಾನವನು ದೃಢವಾದ ಧನುಸ್ಸನ್ನು ಸೆಳೆದು ಮೇಘವು ಭೂಮಿಯಲ್ಲಿ ಮಳೆಗರೆಯುವಂತೆ ವೇಗದಿಂದ ಅನೇಕ ಬಾಣಗಳನ್ನು ಸುರಿಸಿದನು. ದುರ್ಗಾದೇವಿಯು ಆ ಬಾಣಗಳೆಲ್ಲವನ್ನೂ ತನ್ನ ಬಾಣಗಳಿಂದ ಕತ್ತರಿಸಿ ಸುವರ್ಣದ ಹಿಡಿಗಳುಳ್ಳ ಬೇರೆ ಹದಿನಾರು ಬಾಣಗಳನ್ನು ಪ್ರಯೋಗಿಸಲು ಸಿದ್ಧಗೊಳಿಸಿದಳು.

೨೫-೨೬. ಅನಂತರ ದೇವಿಯು ನಾಲ್ಕು ಬಾಣಗಳಿಂದ ಅವನ ರಥದ ನಾಲ್ಕು ಕುದುರೆಗಳನ್ನೂ ಒಂದು ಬಾಣದಿಂದ ಸಾರಥಿಯನ್ನೂ ಮತ್ತೊಂದು ಬಾಣದಿಂದ ಧ್ವಜವನ್ನೂ ಕತ್ತರಿಸಿ ಇನ್ನೊಂದು ಬಾಣದಿಂದ ಅವನ ಧನುಸ್ಸನ್ನೂ ಬಾಣವನ್ನೂ ಕತ್ತರಿಸಿದಳು. ಧನುಸ್ಸು ಕತ್ತರಿಸಲ್ಪಟ್ಟಮೇಲೆ ಆ ಬಲಶಾಲಿಯಾದ ದಾನವನು ಕತ್ತಿಯನ್ನೂ ಗುರಾಣಿಯನ್ನೂ ಸ್ವೀಕರಿಸಿ ನಿಂತನು. ಆ ಪ್ರಕಾರ ಕತ್ತಿಯನ್ನೂ

ತಂ ಖಡ್ಗಂ ಚರ್ಮಣಾ ಸಾರ್ಧಂ ದೈತ್ಯಸ್ಯಾಧುನ್ವತೋ ಬಲಾತ್ ।
ಶರೈಶ್ಚತುರ್ಭಿಶ್ಚಿಚ್ಛೇದ ತತಶ್ಶೂಲಂ ಸಮಾದದೇ ॥ ೨೭ ॥

ಸಮುದ್ಯಮ್ಯ ಮಹಾಶೂಲಂ ಪ್ರಾದ್ರವತ್ಸತಥಾಂಬಿಕಾಂ ।
ಕ್ರೋಷ್ಟುಕೋ ಮುದಿತೋಽರಣ್ಯೇ ಮೃಗರಾಜವಧೂಂ ಯಥಾ ॥ ೨೮ ॥

ತಸ್ಯಾಭಿಪತತಃ ಪಾದೌ ಕರೌ ಶೀರ್ಷಂ ಚ ಪಂಚಭಿಃ ।
ಶರೈಶ್ಚಿಚ್ಛೇದ ಸಂಕ್ರುದ್ಧಾ ನ್ಯಪತತ್ಸಹತೋಽಸುರಃ ॥ ೨೯ ॥

ತಸ್ಮಿನ್ ಸೇನಾಪತೌ ಕ್ಷುಣ್ಣೇ ತದೋಗ್ರಾಸ್ಯೋ ಮಹಾಸುರಃ ।
ಸಮಾದ್ರವತ ವೇಗೇನ ಕರಾಲಾಸ್ಯಾಸ್ತು ದಾನವಾಃ ॥ ೩೦ ॥

ಬಾಷ್ಕಲಶ್ಚೋದ್ಧತಶ್ಚೈವ ಉಗ್ರಾಸ್ಯೋ ಘೋರಕಾರ್ಮುಕಃ ।
ದುರ್ಧರೋ ದುರ್ಮುಖಶ್ಚೈವ ಬಿಡಾಲನಯನೋಽಪರಃ ॥ ೩೧ ॥

ಏತೇಽನ್ಯೇಚ ಮಹಾತ್ಮಾನೋ ದಾನವಾ ಬಲಿನಾಂ ವರಾಃ ।
ಕಾತ್ಯಾಯನೀಮಾದ್ರವಂತ ನಾನಾಶಸ್ತ್ರಾಸ್ತ್ರಪಾಣಯಃ ॥ ೩೨ ॥

---

ಗುರಾಣಿಯನ್ನೂ ಕೊಡಹುತ್ತಾಬಂದು ನಿಂತಮೇಲೆ ಅವನ ಆ ಆಯುಧಗಳನ್ನು ನಾಲ್ಕು ಬಾಣಗಳಿಂದ ದೇವಿಯು ಕತ್ತರಿಸಿದಳು. ಅನಂತರ ಆ ದಾನವನು ಶೂಲಾಯುಧದೊಡನೆ ಯುದ್ಧಕ್ಕೆ ಸಿದ್ಧನಾದನು.

೨೮-೩೦. ಅನಂತರ ಶೂಲವನ್ನು ಎತ್ತಿಕೊಂಡು ಅರಣ್ಯದಲ್ಲಿ ಸಂತೋಷದಿಂದಿರುವ ನರಿಯ ಮರಿಯು ಸಿಂಹಿಯನ್ನಟ್ಟಿಸಿಕೊಂಡು ಬರುವಂತೆ ದೇವಿಯನ್ನೆದುರಿಸಲು ಅಟ್ಟಿಸಿಕೊಂಡುಬಂದನು. ಹಾಗೆ ಎದುರಾಗಿಬರುತ್ತಿರುವ ಚಿಕ್ಷುರನ ಕಾಲುಗಳನ್ನೂ ಕೈಗಳನ್ನೂ ತಲೆಯನ್ನೂ ಐದು ಬಾಣಗಳಿಂದ ದೇವಿಯು ಕೋಪದಿಂದ ಕತ್ತರಿಸಿದಳು. ಆಗ ಅವನು ಹತನಾಗಿ ಬಿದ್ದನು. ಆ ಸೇನಾಪತಿಯು ಹೋದನಂತರ ಉಗ್ರಾಸ್ಯನೆಂಬ ಅಸುರನು ಕರಾಲಾಸ್ಯನೇ ಮೊದಲಾದ ದಾನವರೊಡನೆ ದೇವಿಯನ್ನು ಎದುರಿಸಲು ಬಂದನು.

೩೧-೩೪. ಅನಂತರ ಬಾಷ್ಕಲ, ಉದ್ಧತ, ಉಗ್ರಾಸ್ಯ, ಉಗ್ರಕಾರ್ಮುಕ, ದುರ್ಧರ, ದುರ್ಮುಖ, ಬಿಡಾಲನಯನ ಇವರೇ ಮೊದಲಾದ ಬಲಿಷ್ಠರಾದ ದಾನವ

ತಾನ್ ದೃಷ್ಟ್ವಾ ಲೀಲಯಾ ದುರ್ಗಾ ವೀಣಾಂ ಜಗ್ರಾಹ ಪಾಣಿನಾ ।
ವಾದಯಾಮಾಸ ಹಸತೀ ತಥಾ ಡಮರುಕಂ ವರಂ ॥ ೩೩ ॥

ಯಥಾ ಯಥಾ ವಾದಯತೇ ದೇವೀ ವಾದ್ಯಾನಿ ತಾನಿ ಚ ।
ತಥಾ ತಥಾ ಭೂತಗಣಾ ನೃತ್ಯಂತಿ ಚ ಹಸಂತಿ ಚ ॥ ೩೪ ॥

ತತೋಽಸುರಾಃ ಶಸ್ತ್ರಧರಾಃ ಸಮಭ್ಯೇತ್ಯ ಸರಸ್ವತೀಂ ।
ಅಭ್ಯಘ್ನಂಸ್ತಾಂಶ್ಚ ಸಾ ದೇವೀ ಜಗ್ರಾಹ ಪರಮೇಶ್ವರೀ ॥ ೩೫ ॥

ಪ್ರಸಹ್ಯ ಕೇಶೇಷು ಮಹಾಸುರಾಂಸ್ತಾ
ನುತ್ಪತ್ಯ ಸಿಂಹಾತ್ತುನಗಸ್ಯ ಸಾನುಂ ।
ನನರ್ತ ವೀಣಾಂ ಪರಿವಾದಯಂತೀ
ಪಪೌ ಚ ಪಾನಂ ಜಗತಾಂ ಜನಿತ್ರೀ ॥ ೩೬ ॥

ತತಸ್ತು ದೇವ್ಯಾ ಬಲಿನೋ ಮಹಾಸುರಾ
ದೋರ್ದಂಡನಿರ್ಧೂತವಿಶೀರ್ಣದರ್ಪಾಃ ।
ವಿಶಸ್ತ್ರವಸ್ತ್ರಾಃ ಮೃಸವಶ್ಚ ಜಾತಾ
ತತಸ್ತು ತಾನ್ವೀಕ್ಷ್ಯ ಮಹಾಸುರೇಂದ್ರಾನ್ ॥ ೩೭ ॥

---

ಶ್ರೇಷ್ಠರೆಲ್ಲರೂ ನಾನಾವಿಧವಾದ ಶಸ್ತ್ರಾಸ್ತ್ರಗಳನ್ನು ಹಿಡಿದು ಒಂದೇಕಾಲದಲ್ಲೇ ದೇವಿಯನ್ನು ಎದುರಿಸಲು ಬಂದರು. ಅವರನ್ನು ನೋಡಿ ದೇವಿಯು ಅಲಕ್ಷ್ಯದಿಂದ ಲೀಲಾಪರವಶಳಾಗಿ ವೀಣೆಯನ್ನು ತೆಗೆದುಕೊಂಡು ನಗುತ್ತಾ ಡಮರುಕವನ್ನು ವಾದಿಸತೊಡಗಿದಳು. ದೇವಿಯು ವಾದ್ಯಗಳನ್ನು ಬಾರಿಸಿದಹಾಗೆಲ್ಲಾ ಅದಕ್ಕೆ ತಕ್ಕಂತೆ ಭೂತಗಣಗಳು ನಗುತ್ತಾ ಲೀಲೆಯಿಂದ ನರ್ತನಮಾಡತೊಡಗಿದುವು.

೩೫-೩೭. ಅನಂತರ ಈ ರಾಕ್ಷಸರೆಲ್ಲರೂ ಶಸ್ತ್ರಧಾರಿಗಳಾಗಿ ವೀಣಾವಾದನದಿಂದ ಸರಸ್ವತೀರೂಪಳಾಗಿದ್ದ ದೇವಿಯನ್ನು ಎದುರಿಸಿ ಪ್ರಹರಿಸಿದರು. ಒಡನೆಯೇ ದೇವಿಯು ಸಿಂಹದಿಂದ ಮೇಲಕ್ಕೆ ಚಿಗಿದು ಆ ಅಸುರರನ್ನೆಲ್ಲಾ ಕೇಶಗಳಲ್ಲಿ ಹಿಡಿದುಕೊಂಡು ಪರ್ವತದ ತಪ್ಪಲು ಪ್ರದೇಶದಲ್ಲಿ ಹಾಕಿ ವೀಣೆಯನ್ನು ಲೀಲೆಯಿಂದ ಬಾರಿಸುತ್ತಾ ವೀರಪಾಣವನ್ನು ಮಾಡಿ ವಿಹರಿಸಿದಳು. ಅನಂತರ ಬಲಿಷ್ಠರಾದ ಆ ಮಹಾಸುರರೆಲ್ಲರೂ ದೇವಿಯ ಭುಜದಂಡಗಳಿಂದ ಮರ್ದಿಸಲ್ಪಟ್ಟು ದರ್ಪಶೂನ್ಯರಾಗಿ ಶಸ್ತ್ರವನ್ನು ಬಿಟ್ಟು ವಸ್ತ್ರರಹಿತರಾಗಿ ಮೃತರಾಗಿ ಬಿದ್ದರು.

ದೇವ್ಯಾ ಮಹೌಜಾ ಮಹಿಷಾಸುರಸ್ತು
ವ್ಯದ್ರಾವಯದ್ಭೂತಗಣಾನ್ ಖುರಾಗ್ರೈಃ ।
ತುಂಡೇನ ಪುಚ್ಛೇನ ತಥೌಜಸಾನ್ಯಾ
ನ್ನಿಶ್ವಾಸವಾತೇನ ಚ ಭೂತಸಂಘಾನ್ ॥ ೩೮ ॥

ವಿಷಾಣಕೋಟ್ಯಾ ಚ ಪರಾನ್ಪ್ರಮಥ್ಯ
ದುದ್ರಾವ ಸಿಂಹಂ ಪ್ರತಿಹಂತುಕಾಮಃ ।
ತತೋಂಬಿಕಾ ಕ್ರೋಧವಶಂ ಜಗಾಮ
ಚಿಕ್ಷೇಪ ದೈತ್ಯಂ ಸಹಸೈವ ಲೀಲಯಾ ॥ ೩೯ ॥

ತತಃ ಸಕೋಪಾದಥ ತೀಕ್ಷ್ಣಶೃಂಗಃ
ಕ್ಷಿಪ್ರಂ ಗಿರೀನ್ಭೂಮಿಮಶೀರ್ಣಯಚ್ಚ ।
ಸಂಕ್ಷೋಭಯನ್ ತೋಯನಿಧೀನ್ ಘನಾಂಶ್ಚ
ವಿಧ್ವಂಸಯನ್ ಪ್ರಾದ್ರವತಾಥ ದುರ್ಗಾಂ ॥ ೪೦ ॥

ಸಾ ಚಾಥ ಪಾಶೇನ ಬಬಂಧ ದುಷ್ಟಂ
ಸ ಚಾಪ್ಯಭೂದ್ಭಿನ್ನಕಟಃ ಕರೀಂದ್ರಃ ।

---

೩೮-೪೦. ಈ ಪ್ರಕಾರ ಮೃತರಾಗಿ ಬಿದ್ದ ಆ ಅಸುರರನ್ನು ನೋಡಿ ಮಹಾ ಪರಾಕ್ರಮಿಯಾದ ಮಹಿಷಾಸುರನು ದೇವಿಯ ಪರಿವಾರದ ಭೂತಗಣಗಳನ್ನೆಲ್ಲಾ ತೀಕ್ಷ್ಣವಾದ ಗೊರಸುಗಳಿಂದಲೂ ತಲೆಯಿಂದಲೂ ಬಾಲದಿಂದಲೂ ನಿಶ್ವಾಸವಾಯುವಿನಿಂದಲೂ ಪರಾಕ್ರಮದಿಂದಲೂ ಓಡಿಸಿ ಕೆಲವರನ್ನು ಕೊಂಬುಗಳಿಂದಲೂ ಪ್ರಹರಿಸಿ ದೇವಿಯ ವಾಹನವಾದ ಸಿಂಹವನ್ನು ಕೊಲ್ಲಲು ಓಡಿಸಿಕೊಂಡುಬಂದನು. ಅದನ್ನು ನೋಡಿ ದೇವಿಯು ಕೋಪದಿಂದ ಪ್ರತೀಕಾರಮಾಡಲು ಲೀಲೆಯಿಂದ ಅವನನ್ನು ಹಿಂದಕ್ಕೆ ತಳ್ಳಿದಳು. ಅನಂತರ ಕ್ರೋಧಪರವಶನಾದ ಆ ಮಹಿಷಾಸುರನು ಹರಿತವಾದ ಕೊಂಬುಗಳಿಂದ ಬೆಟ್ಟಗಳನ್ನೂ ಭೂಮಿಯನ್ನೂ ಗುದ್ದಿ ಪುಡಿಪುಡಿಮಾಡುತ್ತಾ ಆರ್ಭಟದಿಂದ ಸಮುದ್ರಗಳನ್ನೂ ಅಲ್ಲೋಲಕಲ್ಲೋಲಮಾಡುತ್ತಾ ಮೇಘಗಳನ್ನೂ ನಾಶಪಡಿಸುತ್ತಾ ದೇವಿಯನ್ನು ಎದುರಿಸಲು ಅಭಿಮುಖನಾಗಿ ಓಡಿಬಂದನು.

ಕರಂಪ್ರಚಿಚ್ಛೇದ ಚ ಹಸ್ತಿನೋಗ್ರಂ
ಸಚಾಪಿ ಭೂಯೋ ಮಹಿಷೋಽಭಿಜಾತಃ । ॥ ೪೧ ॥

ತತೋಽಸ್ಯ ಶೂಲಂ ವ್ಯಸೃಜದ್ಭವಾನೀ
ಸಶೀರ್ಣಮೂಲೋ ನ್ಯಪತತ್ಪೃಥಿವ್ಯಾಂ
ಶಕ್ತಿಂ ಪ್ರಚಿಕ್ಷೇಪ ಹುತಾಶವಕ್ತ್ರಾಂ
ಸಾ ಕುಂಠಿತಾಗ್ರಾ ನ್ಯಪತನ್ಮಹರ್ಷೇ ॥ ೪೨ ॥

ಚಕ್ರಂ ಹರೇರ್ದಾನವಚಕ್ರಹಂತುಃ
ಕ್ಷಿಪ್ರಂ ವಚಕ್ರತ್ವಮುಪಾಗತಂ ಹಿ ।
ಗದಾ ಸಮಾವಿದ್ಧ್ಯ ಧನೇಶ್ವರಸ್ಯ
ಕ್ಷಿಪ್ತಾಽಶುಭಗ್ನಾ ನ್ಯಪತತ್ಪೃಥಿವ್ಯಾಂ ॥ ೪೩ ॥

ಜಲೇಶಪಾಶೋಽಪಿ ಮಹಾಸುರೇಣ
ವಿಷಾಣತುಂಡಾಗ್ರಖುರಪ್ರಣುನ್ನಃ ।
ನಿರಸ್ಯತಾ ಕೋಪಿತಯಾ ಚ ಮುಕ್ತೋ
ದಂಡಸ್ತು ಯಾಮ್ಯೋ ಬಹುಖಂಡತಾಂ ಗತಃ ॥ ೪೪ ॥

---

೪೧-೪೪. ಹೀಗೆ ಬಂದ ಮಹಿಷನನ್ನು ದುಷ್ಟನೆಂದು ತಿಳಿದು ದೇವಿಯು ಮೊದಲು ಪಾಶದಿಂದ ಬಂಧಿಸಿದಳು. ಒಡನೆಯೇ ಮಾಯಾವಿಯಾದ ಆ ದಾನವನು ಮದಗಜದ ರೂಪವನ್ನು ಹೊಂದಿದನು. ಆಗ ದೇವಿಯು ಆ ಆನೆಯ ಸೊಂಡಲಿನ ಅಗ್ರಭಾಗವನ್ನು ಕತ್ತರಿಸಿದಳು. ದಾನವನು ಒಡನೆಯೇ ಮಹಿಷರೂಪವನ್ನೇ ಹೊಂದಿದನು. ಅನಂತರ ಅವನನ್ನು ಕೊಲ್ಲಲು ದೇವಿಯು ಶೂಲಾಯುಧವನ್ನು ಪ್ರಯೋಗಿಸಿದಳು. ಆ ಆಯುಧವು ಮುರಿದು ಕೆಳಗೆ ಬಿದ್ದಿತು. ಅನಂತರ ದೇವಿಯು ಅಗ್ನಿಯಂತೆ ಜ್ವಲಿಸುವ ಮುಖವುಳ್ಳ ಶಕ್ತಿಯನ್ನು ದಾನವನಮೇಲೆ ಪ್ರಯೋಗಿಸಲಾಗಿ ಅದೂ ಮುರಿದ ಅಗ್ರಭಾಗವುಳ್ಳದ್ದಾಗಿ ಕೆಳಗೆ ಬಿದ್ದಿತು. ಹಾಗೆಯೇ ದೈತ್ಯಾರಿಯ ಚಕ್ರಾಯುಧವನ್ನು ಪ್ರಯೋಗಿಸಲಾಗಿ ಅದೂ ಅಕಾರ್ಯಕಾರಿಯಾಯಿತು. ಹಾಗೆಯೇ ದೇವಿಯಿಂದ ಪ್ರಯೋಗಿಸಲ್ಪಟ್ಟ ಕುಬೇರನ ಗದೆಯೂ ಮುರಿದು ಕೆಳಗೆ ಬಿದ್ದಿತು. ಹಾಗೆಯೇ ವರುಣನ ಪಾಶವೂ ಕೂಡ ಕೊಂಬು ಮುಖ ಗೊರಸು ಇವುಗಳಿಂದ ಚೂರುಚೂರಾಗಿ ಮಾಡಲ್ಪಟ್ಟಿತು. ಹೀಗೆಯೇ ಪ್ರಯೋಗಿಸಲ್ಪಟ್ಟ ಯಮದಂಡವೂ ಸಹ ಕೋಪಿಯಾದ ಮಹಿಷನಿಂದ ಚೂರುಚೂರಾಗಿ ಮಾಡಲ್ಪಟ್ಟಿತು.

ವಜ್ರಂ ಸುರೇಂದ್ರಸ್ಯ ಚ ವಿಗ್ರಹೇಸ್ಯ
ಮುಕ್ತಂ ಸುಸೂಕ್ಷ್ಮತ್ವ ಮುಪಾಜಗಾಮ ।
ಸಂತ್ಯಜ್ಯ ಸಿಹ್ಮಂ ಮಹಿಷಾಸುರಸ್ಯ
ದುರ್ಗಾಧಿರೂಢಾ ಸಹಸೈವ ಪೃಷ್ಠಂ ॥ ೪೫ ॥

ಪೃಷ್ಠಸ್ಥಿತಾಯಾಂ ಮಹಿಷಾಸುರೋಽಪಿ
ಪೋಪ್ಲೂಯತೇ ವೀರ್ಯಮದಾನ್ಮೃಡಾನ್ಯಾಂ ।
ಸಾ ಚಾಪಿ ಪದ್ಭ್ಯಾಂ ಮೃದುಕೋಮಲಾಭ್ಯಾಂ
ಮಮರ್ದ ತಂ ಕ್ಲಿನ್ನಮಿವಾಜಿನಂ ಹಿ ॥ ೪೬ ॥

ಸ ಮೃದ್ಯಮಾನೋ ಧರಣೀಧರಾಭೋ
ದೇವ್ಯಾ ಬಲೀ ಹೀನಬಲೋ ಬಭೂವ ।
ತತೋಽಸ್ಯ ಶೂಲೇನ ಬಿಭೇದ ಕಂಠಂ
ತಸ್ಮಾತ್ಪುಮಾನ್ ಖಡ್ಗಧರೋ ವಿನಿರ್ಗತಃ ॥ ೪೭ ॥

ನಿಷ್ಕ್ರಾಂತಮಾತ್ರಂ ಹೃದಯೇ ಯದಾತ
ಮಾಹತ್ಯ ಸಂಗೃಹ್ಯ ಕಚೇಷು ಕೋಪಾತ್ ।
ಶಿರಃ ಪ್ರಚಿಚ್ಛೇದ ವರಾಸಿನಾಸ್ಯ
ಹಾಹಾಕೃತಂ ದೈತ್ಯಬಲಂ ತದಾಭೂತ್ ॥ ೪೮ ॥

---

೪೫-೪೬. ಇಂದ್ರನ ವಜ್ರಾಯುಧವೂ ಸಹ ದೇವಿಯಿಂದ ಈ ದಾನವನ ಶರೀರದಲ್ಲಿ ಪ್ರಯೋಗಿಸಲ್ಪಟ್ಟು ಅದೂ ಸೂಕ್ಷ್ಮರೂಪದಿಂದ ನಿಷ್ಪ್ರಯೋಜನವಾಯಿತು. ಹೀಗೆ ಆಯುಧಗಳೆಲ್ಲವೂ ವ್ಯರ್ಥವಾದಮೇಲೆ ದೇವಿಯು ತನ್ನ ವಾಹನವಾದ ಸಿಂಹವನ್ನು ಬಿಟ್ಟು ವೇಗದಿಂದ ಮಹಿಷಾಸುರನ ಬೆನ್ನನ್ನೇ ಹತ್ತಿ ಕೂತಳು. ಆ ಮಹಿಷನೂ ಸಹ ದೇವಿಯು ಬೆನ್ನಿನಮೇಲೆ ಕುಳಿತ ನಂತರ ಮದದಿಂದ ಕುಪ್ಪಳಿಸಿ ನಡೆಯಲಾರಂಭಿಸಿದನು. ಬೆನ್ನಿನಮೇಲೆ ಕುಳಿತಿದ್ದ ದೇವಿಯೂ ಕೂಡ ಇವನ ದರ್ಪವನ್ನು ನಾಶಮಾಡಲು ನೀರಿನಿಂದ ನೆನೆದ ಚರ್ಮವನ್ನು ಮರ್ದಿಸುವಂತೆ ಸುಕುಮಾರವಾದ ತನ್ನ ಪಾದಗಳಿಂದಲೇ ಈ ದಾನವನನ್ನು ಮರ್ದಿಸಿದಳು.

೪೭-೪೮. ಪರ್ವತಾಕಾರವಾದ ದೇಹವುಳ್ಳ ಆ ಮಹಾಸುರನು ಸಮರ್ಥನಾಗಿದ್ದರೂ ದೇವಿಯ ಮರ್ದನದಿಂದ ಬಲಹೀನನಾಗಿ ಬಿದ್ದನು. ಅನಂತರ ದೇವಿಯು ಶೂಲಾಯುಧದಿಂದ ಅವನ ತಲೆಯನ್ನು ಕತ್ತರಿಸಿದಳು. ಅನಂತರ ಅವನ ದೇಹದಿಂದ ಖಡ್ಗಧಾರಿಯಾದ ಒಬ್ಬ ಪುರುಷನು ಹೊರಗೆ ಹೊರಟನು. ದೇವಿಯು ಅವನನ್ನೂ ಹೊರಗೆ ಹೊರಡುವಾಗಲೇ ಕೇಶಗಳಲ್ಲಿ ಹಿಡಿದು ಎದೆಯಮೇಲೆ ಪ್ರಹರಿಸಿ

ಸ ಚಂಡಮುಂಡಾಃ ಸಮಯೋಃ ಸತಾರಾಃ
ಸಹಾಸಿಲೋಮ್ನಾ ಭಯಕಾತರಾಕ್ಷಾಃ ।
ಸಂತಾಡ್ಯಮಾನಾಃ ಪ್ರಮಥೈರ್ಭವಾನ್ಯಾಃ
ಪಾತಾಲಮೇವಾವಿವಿಶುರ್ಭಯಾರ್ತಾಃ ॥ ೪೯ ॥

ದೇವ್ಯಾ ಜಯಂ ದೇವಗಣಾ ವಿಲೋಕ್ಯ
ಸ್ತುವಂತಿ ದೇವೀಂ ಸ್ತುತಿಭಿರ್ಮಹರ್ಷೇ ।
ನಾರಾಯಣೀಂ ಸರ್ವಜಗತ್ಪ್ರತಿಷ್ಠಾಂ
ಕಾತ್ಯಾಯನೀಂ ಘೋರಮುಖೀಂ ಸುರೂಪಾಂ ॥ ೫೦ ॥

ಸಂಸ್ತೂಯಮಾನಾ ಸುರಸಿದ್ಧಸಂಘೈಃ
ಕಾತ್ಯಾಯನೀ ಸಾ ಹರಪಾದಮೂಲೆ ।
ಭೂಯೋ ಭವಿಷ್ಯಾಮ್ಯಮರಾರ್ಥಮೇವ
ಮುಕ್ತ್ವಾ ಸುರಾಂ ಸ್ತಾನ್ಪ್ರವಿವೇಶ ದುರ್ಗಾ ॥ ೫೧ ॥

ಇತಿ ಶ್ರೀ ವಾಮನಪುರಾಣೇ ದೇವೀಮಾಹಾತ್ಮ್ಯೇ ಮಹಿಷಾಸುರವಧೋ
ನಾಮ ವಿಂಶತಿತಮೋಽಧ್ಯಾಯಃ

---

ಅವನ ತಲೆಯನ್ನೂ ಕತ್ತರಿಸಿದಳು. ಅದನ್ನು ನೋಡಿ ಆ ದೈತ್ಯಬಲವೆಲ್ಲವೂ ಹಾಹಾಕಾರದಿಂದ ಕೂಗಿತು. ಅನಂತರ ಚಂಡ, ಮುಂಡ, ಮಯ, ತಾರ, ಅಸಿಲೋಮಾ, ಮೊದಲಾದ ದಾನವರೆಲ್ಲಾ ದೇವಿಯ ಪ್ರಮಥಗಣಗಳಿಂದ ತಾಡಿಸಲ್ಪಟ್ಟವರಾಗಿ ಭಯದಿಂದ ದಿಕ್ಕುತೋಚದೆ ಪಾತಾಲಲೋಕಕ್ಕೆ ಓಡಿದರು.

೫೦-೫೧. ದೇವಿಯ ಸರ್ವತೋಮುಖವಾದ ವಿಜಯವನ್ನು ನೋಡಿದ ದೇವತೆಗಳೆಲ್ಲರೂ ನಾರಾಯಣನ ಶಕ್ತಿರೂಪಳಾಗಿ ಜಗತ್ತಿನ ಸ್ಥಿತಿಗೆ ಕಾರಣಳಾಗಿಯೂ ಕಾತ್ಯಾಯನರ ತೇಜಸ್ಸಿನಿಂದ ಘೋರಮುಖಿಯಾದ ಕಾತ್ಯಾಯಿನಿಯಾಗಿಯೂ ಸುರೂಪಳಾಗಿಯೂ ಇರುವ ದೇವಿಯನ್ನು ನಾನಾಪ್ರಕಾರವಾಗಿ ಸ್ತೋತ್ರಮಾಡಿದರು. ಈ ಪ್ರಕಾರ ದೇವತೆಗಳ ಮತ್ತು ಸಿದ್ಧರ ಸಂಘದಿಂದ ಹೊಗಳಲ್ಪಟ್ಟ ದೇವಿಯು ದೇವತೆಗಳನ್ನು ಕುರಿತು ಪುನಃ ನಾನು ದೇವತೆಗಳ ಉಪಕಾರಕ್ಕಾಗಿ ಆವಿರ್ಭವಿಸುತ್ತೇನೆ ಎಂದು ಹೇಳಿ ಈಶ್ವರನ ಪಾದದಲ್ಲಿ ಪ್ರವೇಶಿಸಿದಳು.

ಇಲ್ಲಿಗೆ ಶ್ರೀ ವಾಮನಪುರಾಣದ ದೇವೀಮಾಹಾತ್ಮ್ಯದಲ್ಲಿ ಮಹಿಷಾಸುರವಧವೆಂಬ
ಇಪ್ಪತ್ತನೆಯ ಅಧ್ಯಾಯವು ಮುಗಿದಿದೆ.

## ಅಧ್ಯಾಯಾರ್ಥ ಸಂಗ್ರಹ



ಈ ಅಧ್ಯಾಯದಲ್ಲಿ ಕಾತ್ಯಾಯನಿಯು ಮಹಿಷಾಸುರನನ್ನು ಹೇಗೆ ಸಂಹರಿಸಿದಳು ಮತ್ತು ಅನೇಕ ದಿವ್ಯಾಯುಧಗಳಿದ್ದರೂ ಪಾದಗಳಿಂದಲೇ ಏಕೆ ಮರ್ದಿಸಿದಳೆಂದು ನಾರದರ ಉಪಪ್ರಶ್ನೆಗೆ ಉತ್ತರವಾಗಿ ಮಹಿಷಾಸುರನೊಡನೆ ಮತ್ತು ಅವನ ಅನುಯಾಯಿಗಳೊಡನೆ ದೇವಿಗೆ ಉಂಟಾದ ಯುದ್ಧವನ್ನು ವರ್ಣಿಸಿ ವಜ್ರ, ಪಾಶ, ಚಕ್ರ ಮೊದಲಾದ ಆಯುಧಗಳೆಲ್ಲವೂ ವ್ಯರ್ಥವಾಗಲು ಬೆನ್ನಿನಮೇಲೆ ಆ ದಾನವನನ್ನು ಆಕ್ರಮಿಸಿ ಪಾದಗಳಿಂದಲೇ ಮರ್ದಿಸಿ ಕೊಲ್ಲಬೇಕಾಯಿತೆಂದೂ ಪ್ರತ್ಯುತ್ತರವನ್ನು ಕೊಟ್ಟಂತಾಯಿತು. ಮುಂದಿನ ಅಧ್ಯಾಯದ ಪೀಠಿಕೆಗಾಗಿ ಆ ಕಾತ್ಯಾಯನಿಗೇ ಪುನಃ ಉದ್ಭವವನ್ನು ಸೂಚಿಸಲಾಯಿತು.



॥ ಶ್ರೀಃ ॥

# ಶ್ರೀ ವಾಮನ ಪುರಾಣಂ

## ಏಕವಿಂಶೋಽಧ್ಯಾಯಃ

**ನಾರದ ಉವಾಚ**

**ಪುಲಸ್ತ್ಯ ಕಥ್ಯತಾಂ ತಾವದ್ಭೂಯೋ ದೇವ್ಯಾಃ ಸಮುದ್ಭವಃ ।**
**ಮಹತ್ಕೌತೂಹಲಂ ಮೇಽದ್ಯ ವಿಸ್ತರಾದ್ಬ್ರಹ್ಮವಿತ್ತಮ ॥ ೧ ॥**

**ಪುಲಸ್ತ್ಯ ಉವಾಚ**

**ಶ್ರೂಯತಾಂ ಕಥಯಿಷ್ಯಾಮಿ ಭೂಯೋಽಸ್ಯಾಃ ಸಂಭವಂ ಮುನೇ ।**
**ಶುಂಭಾಸುರವಧಾರ್ಥಾಯ ಲೋಕಾನಾಂ ಹಿತಕಾಮ್ಯಯಾ ॥ ೨ ॥**

**ಯಾ ಸಾ ಹಿಮವತಃ ಪುತ್ರೀ ಭವೇನೋಢಾ ತಪೋಧನ ।**
**ಉಮಾ ನಾಮ್ನಾ ಚ ತಸ್ಯಾಃ ಸಾ ಕೋಶಾಜ್ಜಾತಾ ತು ಕೌಶಿಕೀ ॥ ೩ ॥**

---

## ಇಪ್ಪತ್ತೊಂದನೆಯ ಅಧ್ಯಾಯವು

೧-೪. ನಾರದರು ಪುನಃ ಪ್ರಶ್ನೆ ಮಾಡುತ್ತಾರೆ: ಎಲೈ ಬ್ರಹ್ಮವೇದಿಯೇ, ಪುನಃ ದೇವಿಯ ಉದ್ಭವವು ಹೇಗೆ ಆಯಿತು, ಏತಕ್ಕೆ ಆಯಿತು ಎಂಬ ವಿಷಯವನ್ನು ಕೇಳಲು ನನಗೆ ಬಹಳ ಕುತೂಹಲವಾಗುತ್ತಿದೆ ದಯವಿಟ್ಟು ವಿಸ್ತಾರವಾಗಿ ಅಪ್ಪಣೆಕೊಡಬೇಕು. ಹೀಗೆ ಕೇಳಿದ ನಾರದ ಮಹರ್ಷಿಗಳನ್ನು ಕುರಿತು ಪುಲಸ್ತ್ಯರು ಶುಂಭನೆಂಬ ದಾನವನ ವಧಕ್ಕಾಗಿಯೂ, ಲೋಕಕ್ಕೆ ಹಿತವನ್ನುಂಟುಮಾಡುವುದಕ್ಕಾಗಿಯೂ ಯಾವ ದೇವಿಯು ಉಮಾ ಎಂಬ ಹೆಸರಿನಿಂದ ಹಿಮವಂತನ ಪುತ್ರಿಯಾಗಿ ಹುಟ್ಟಿದಳೋ ಕೋಶದಿಂದ ಹುಟ್ಟಿದುದರಿಂದ ಕೌಶಿಕೀ ಎಂಬದಾಗಿಯೂ ಪ್ರಸಿದ್ಧಿ ಹೊಂದಿ ಈಶ್ವರ

**ಸಂಭೂಯ ವಿಂಧ್ಯಂ ಗತ್ವಾ ಚ ಭೂಯೋ ಭೂತಗಣೈರ್ವೃತಾ ।**
**ಶುಂಭಂ ಚೈವ ನಿಶುಂಭಂ ಚ ವಧಿಷ್ಯತಿ ವರಾಯುಧೈಃ ॥ ೪ ॥**

**ನಾರದ ಉವಾಚ**

**ಬ್ರಹ್ಮಂಸ್ತ್ವಯಾ ಮಮಾಖ್ಯಾತಾ ಮೃತಾ ದಕ್ಷಾತ್ಮಜಾ ಸತೀ ।**
**ಸಂಜಾತಾ ಹಿಮವತ್ಪುತ್ರೀತ್ಯೇವಂ ಮೇ ವಕ್ತುಮರ್ಹಸಿ ॥ ೫ ॥**

**ಯಥಾ ಹಿ ಪಾರ್ವತೀ ಕೋಶಾತ್ಸಮುದ್ಭೂತಾ ಹಿ ಕೌಶಿಕೀ ।**
**ಯಥಾ ಹತವತೀ ಶುಂಭಂ ನಿಶುಂಭಂ ಚ ಮಹಾಸುರಂ ॥ ೬ ॥**

**ಕಸ್ಯ ಚೇಮೌ ಸುತೌ ವೀರೌ ಖ್ಯಾತೌ ಶುಂಭ ನಿಶುಂಭಕೌ ।**
**ಏತನ್ಮೇ ತತ್ವತಸ್ಸರ್ವಂ ಯಥಾವದ್ವಕ್ತುಮರ್ಹಸಿ ॥ ೭ ॥**

**ಭಗವಂ ಸ್ತ್ವತ್ಪ್ರಸಾದೇನ ದೇವ್ಯಾಶ್ಚರಿತಮುತ್ತಮಂ ।**
**ಶ್ರುತಂ ವಿಸ್ತರತೋ ಬ್ರೂಹಿ ಪಾರ್ವತ್ಯಾಸ್ಸಂಭವಂ ಮುನೇ ॥ ೮ ॥**

---

ನನ್ನ ಮದುವೆಯಾದಳೋ ಪುನಃ ಪ್ರಮಥಗಣಗಳೊಡನೆ ಸೇರಿ ವಿಂಧ್ಯಕ್ಕೆ ಬಂದು ಶುಂಭನಿಶುಂಭರನ್ನು ಕೊಂದಳೋ. ಅಂತಹ ದೇವಿಯ ಪುನರುದ್ಭವವನ್ನು ವಿಸ್ತಾರವಾಗಿ ಹೇಳುತ್ತೇನೆ ಕೇಳು .ಎಂದುಪಕ್ರಮಿಸಿದರು.

೫-೮. ಈ ಸಂದರ್ಭದಲ್ಲಿ ನಾರದರು ತಮ್ಮ ಪ್ರಶ್ನೆಯ ಆಶಯವನ್ನು ವಿಸ್ತರಿಸಿ ಕೇಳುತ್ತಾರೆ. ಪೂಜ್ಯರೇ, ತಾವು ಮೊದಲು ದಕ್ಷಪುತ್ರಿಯಾದ ಸತೀದೇವಿಯು ಮೃತಳಾದಮೇಲೆ ಹಿಮವಂತನ ಪುತ್ರಿಯಾಗಿ ಹುಟ್ಟಿದಳೆಂದು ಹೇಳಿದ್ದಿರಿ. ಪರ್ವತ ಪುತ್ರಿಯಾದ ಆ ಪಾರ್ವತಿಯು ಕೋಶದಿಂದ ಹುಟ್ಟಿ ಹೇಗೆ ಕೌಶಿಕಳಾದಳು, ಶುಂಭ ನಿಶುಂಭರೆಂಬ ದಾನವರಾರು, .ಯಾರ ಮಕ್ಕಳು, ಅವರನ್ನು ಪಾರ್ವತಿಯು ಹೇಗೆ ಸಂಹರಿಸಿದಳು ಇವೆಲ್ಲವನ್ನೂ ದಯವಿಟ್ಟು ಹೇಳಬೇಕು. ತಮ್ಮ ಅನುಗ್ರಹದಿಂದ ಈ ವಿಧವಾದ ದೇವಿಯ ಉತ್ತಮವಾದ ಚರಿತ್ರೆಯನ್ನು ನಾನು ಕೇಳಿದ್ದಾಯಿತು. ಪಾರ್ವತಿಯ ಉತ್ಪತ್ತಿಯನ್ನೂ ದಯವಿಟ್ಟು ಹೇಳಬೇಕು ಎಂಬ ನಾರದರ ವಿಸ್ತಾರವಾದ ಪ್ರಶ್ನೆಗೆ ಪುಲಸ್ತ್ಯರು ಉತ್ತರ ಹೇಳುತ್ತಾರೆ.

## ಪುಲಸ್ತ್ಯ ಉವಾಚ

ದಿಷ್ಟ್ಯಾ ಸಂಕಥಯಿಷ್ಯಾಮಿ ಪಾರ್ವತ್ಯಾಸ್ಸಂಭವಂ ಮುನೇ ।
ಶೃಣುಷ್ವಾವಹಿತೋ ಭೂತ್ವಾ ಸ್ಕಂದೋತ್ಪತ್ತಿಂ ಚ ಶಾಶ್ವತೀಂ ॥೯॥

ರುದ್ರಃ ಸತ್ಯಾಂ ಪ್ರನಷ್ಟಾಯಾಂ ಬ್ರಹ್ಮಚಾರಿವ್ರತೇ ಸ್ಥಿತಃ ।
ನಿರಾಶ್ರಮತ್ವ ಮಾಪನ್ನ ಸ್ತಪಸ್ತಪ್ತುಂ ವ್ಯವಸ್ಥಿತಃ ॥೧೦॥

ಸ ಚಾಸೀದ್ದೇವಸೇನಾನೀ ರ್ದೈತ್ಯದರ್ಪವಿನಾಶನಃ ।
ಶಿವರೂಪತ್ವಮಾಸ್ಥಾಯ ಸೈನಾಪತ್ಯಂ ಸಮುತ್ಸೃಜತ್ ॥೧೧॥

ತತೋ ವಿನಾಕೃತಾ ದೇವಾಃ ಸೇನಾನಾಥೇನ ಶಂಭುನಾ ।
ದಾನವೇಂದ್ರೇಣ ವಿಕ್ರಮ್ಯ ನಿಶುಂಭೇನ ಪರಾಜಿತಾಃ ॥೧೨॥

ತತೋ ಜಗ್ಮುಃ ಸುರೇಶಾನಂ ದ್ರಷ್ಟುಂ ಚಕ್ರಗದಾಧರಂ ।
ಶ್ವೇತದ್ವೀಪೇ ಮಹಾಹಂಸಂ ಪ್ರಪನ್ನಾಃ ಶರಣಂ ಹರಿಂ ॥೧೩॥

---

೯-೧೨. ಪುಲಸ್ತ್ಯರು ಹೇಳುತ್ತಾರೆ: ಸಂತೋಷ ಎಲೈ ಮಹರ್ಷಿಯೇ, ಪಾರ್ವತಿಯ ಉತ್ಪತ್ತಿಯನ್ನೂ ದಾನವ ಸಂಹಾರಕ್ಕೆ ಉಪಯುಕ್ತವಾದ ಸ್ಕಂದನ ಉತ್ಪತ್ತಿಯನ್ನೂ ವಿಸ್ತಾರವಾಗಿ ಹೇಳುತ್ತೇನೆ, ಅವಧಾನದಿಂದ ಕೇಳು. ಸತೀದೇವಿಯು ನಾಶಹೊಂದಿದಮೇಲೆ ರುದ್ರನು ನಿರಾಶ್ರಮಿಯಾಗಿ ಬ್ರಹ್ಮಚರ್ಯವ್ರತವನ್ನು ಹೊಂದಿ ತಪಸ್ಸಿನಲ್ಲಿ ನಿರತನಾದನು. ದೈತ್ಯರ ದರ್ಪವನ್ನೆಲ್ಲಾ ನಾಶಮಾಡುತ್ತಿದ್ದ ಆ ಹರನು ದೇವಸೈನ್ಯಕ್ಕೆಲ್ಲಾ ಸೇನಾಪತಿಯಾಗಿದ್ದನು. ಅವನು ತಪಸ್ಸಿನಲ್ಲಿ ನಿರತನಾಗಿ ಬ್ರಹ್ಮ ಭಾವನೆಯಿಂದ ಅಂತರ್ಮುಖನಾದ ನಂತರ ದೇವಸೈನ್ಯದ ಸೇನಾಪತಿತ್ವವನ್ನು ಬಿಟ್ಟನು. ಆಮೇಲೆ ದೇವತೆಗಳು ಸಮರ್ಥನಾದ ಸೇನಾಪತಿ ಇಲ್ಲದೆ ನಿರಾಶ್ರಯ ಹೊಂದಿದರು. ಈ ಸಮಯದಲ್ಲಿ ದಾನವಾಗ್ರೇಸರನಾದ ನಿಶುಂಭನಿಂದ ದೇವತೆಗಳಿಗೆ ಪರಾಜಯವುಂಟಾಯಿತು.

೧೩-೧೫. ಅನಂತರ ದೇವತೆಗಳೆಲ್ಲರೂ ಶ್ವೇತದ್ವೀಪದಲ್ಲಿರುವ ನಾರಾಯಣ ನನ್ನು ನೋಡಿ ಅವನಲ್ಲಿ ಮೊರೆಯಿಡಲು ಹೊರಟರು. ಅಲ್ಲಿ ಹೋಗಿ ಮಹಾಹಂಸ ದಂತೆ ನೆಲೆಸಿರುವ ನಾರಾಯಣನಲ್ಲಿ ಶರಣಾಗತರಾದರು ಹೀಗೆ ಒಟ್ಟಾಗಿ ಬಂದ

ತಾನಾಗತಾನ್ ಸುರಾನ್ದೃಷ್ಟ್ವಾ ತತಃ ಶಕ್ರಪುರೋಗಮಾನ್ ।
ವಿಹಸ್ಯ ಮೇಘಗಂಭೀರಂ ಪ್ರೋವಾಚ ಪುರುಷೋತ್ತಮಃ ॥ ೧೪ ॥

ಕಿಂ ಜಿತಾಃಸ್ಥ ಸುರೇಂದ್ರೇಣ ನಿಶುಂಭೇನ ದುರಾತ್ಮನಾ ।
ಯೇನ ಸರ್ವೇ ಸಮೇತ್ಯೈವ ಮಮಪಾರ್ಶ್ವಮುಪಾಗತಾಃ ॥ ೧೫ ॥

ತದ್ಯುಷ್ಮಾಕಂ ಹಿತಾರ್ಥಾಯ ಯದ್ವದಾಮಿ ಸುರೋತ್ತಮಾಃ ।
ತತ್ಕುರುಧ್ವಂ ಜಯೋಯದ್ಧಿ ಸಮಾಶ್ರಿತ್ಯ ಭವೇತ್ತತಃ ॥ ೧೬ ॥

ಯ ಏತೇ ಪಿತರೋ ದೇವಾ ಸ್ತ್ವಗ್ನಿಷ್ವಾತ್ತೇತಿ ವಿಶ್ರುತಾಃ ।
ಅಮೀಷಾಂ ಮಾನಸೀ ಕನ್ಯಾ ಮೇನಾ ನಾಮ್ನಾಸ್ತಿ ದೇವತಾ ॥ ೧೭ ॥

ತಾಮಾರಾಧ್ಯ ಮಹಾತಿಥ್ಯಾಂ ಶ್ರದ್ಧಯಾ ಪರಯಾಮರಾಃ ।
ಪ್ರಾರ್ಥಯಧ್ವಂ ಸತೀಮೇನಾಂ ಪ್ರಾಲೇಯಾದ್ರಿಮಹಾರ್ಥತಃ ॥ ೧೮ ॥

ತಸ್ಯಾಂ ಸಾ ರೂಪಸಂಯುಕ್ತಾ ಭವಿಷ್ಯತಿ ತಪಸ್ವಿನೀ ।
ದಕ್ಷಕೋಪಾದ್ಯಯಾ ಮುಕ್ತಂ ಮಲವಜ್ಜೀವಿತಂ ಪ್ರಿಯಂ ॥ ೧೯ ॥

---

ಇಂದ್ರನೇ ಮೊದಲಾದ ದೇವತೆಗಳನ್ನು ನೋಡಿ ಪುರುಷೋತ್ತಮನು ನಗುತ್ತಾ ಗಂಭೀರವಾದ ಧ್ವನಿಯಿಂದ ನೀವೆಲ್ಲರೂ ನನ್ನಲ್ಲಿ ಬಂದಿರುವದನ್ನು ನೋಡಿದರೆ ದುರಾತ್ಮನಾದ ನಿಶುಂಭದಾನವನಿಂದ ನಿಮಗೆ ಪರಾಜಯ ಉಂಟಾಗಿರಬಹುದಲ್ಲವೇ!

೧೬-೧೮. ಆದುದರಿಂದ ನಿಮ್ಮ ಮುಂದಿನ ಹಿತಕ್ಕೋಸ್ಕರ ಈಗ ನಾನು ಏನು ಹೇಳುತ್ತೇನೆಯೋ ಅದರಂತೆ ನಡೆದುಕೊಳ್ಳಿರಿ. ಇದರಿಂದ ನಿಮಗೆ ಜಯವು ಉಂಟಾಗುತ್ತದೆ. ಅಗ್ನಿಷ್ವಾತ್ತರೆಂದು ಪ್ರಸಿದ್ಧರಾದ ಯಾವ ಪಿತೃದೇವತೆಗಳಿರುವರೋ ಅವರ ಮಾನಸಪುತ್ರಿಯಾದ ಮೇನಾ ಎಂಬ ಹೆಸರಿನ ದೇವತಾರೂಪಳಾದ ಕನ್ಯೆಯೊಬ್ಬಳಿರುವಳು. ಆ ಕನ್ಯೆಯನ್ನು ಬಹಳ ಶ್ರದ್ಧೆಯಿಂದ ಮಹಾತಿಥಿಯಲ್ಲಿ ಆರಾಧಿಸಿ ಅವಳನ್ನು ಹಿಮವಂತನಿಗೋಸ್ಕರ (ಅವನ ಪತ್ನಿಯಾಗಲು) ಪ್ರಾರ್ಥಿಸಿರಿ.

೧೯-೨೨. ಆ ಮೇನಾದೇವಿಯಲ್ಲಿ ದಕ್ಷನಮೇಲೆ ಕೋಪದಿಂದ ಪ್ರಿಯವಾದ ಪ್ರಾಣಗಳನ್ನೂ ಕೂಡ ದೇಹದಮಲದಂತೆ ನಿರ್ಲಕ್ಷ್ಯವಾಗಿ ತ್ಯಜಿಸಿದ ಸತೀದೇವಿಯೇ ಶಂಕರನಿಗೂ ಮೋಹಕವಾದ ಸೌಂದರ್ಯಶಾಲಿನಿಯಾಗಿಯೂ, ತಪಸ್ವಿನಿಯಾಗಿಯೂ ಪಾರ್ವತೀರೂಪ

ಸಾ ಶಂಕರಾತ್ಸತೇಜೋಂಶಂ ಜನಯಿಷ್ಯತಿ ಯಂ ಸುತಂ ।
ಸ ಹನಿಷ್ಯತಿ ದೈತ್ಯೇಂದ್ರಂ ಶುಂಭಂ ಚ ಸಪದಾನುಗಂ ॥ ೨೦ ॥

ತಸ್ಮಾದ್ಗಚ್ಛತ ಪುಣ್ಯಂ ತತ್ಕುರುಕ್ಷೇತ್ರಂ ಮಹಾಫಲಂ ।
ತತ್ರ ಪೃಥೂದಕೇ ತೀರ್ಥೇ ಪೂಜ್ಯಂತಾಂ ಪಿತರೋಽವ್ಯಯಾಃ ॥ ೨೧ ॥

ಮಹಾತಿಥ್ಯಾಂ ಮಹಾಪುಣ್ಯೇ ಯದಿ ಶತ್ರುಪರಾಭವಂ ।
ಭವನಾಥಾತ್ಮನಾ ಸರ್ವೇ ಇಚ್ಛಥ ಕ್ರಿಯತಾ ಮಿತಿ ॥ ೨೨ ॥

ಪುಲಸ್ತ್ಯ ಉವಾಚ

ಇತ್ಯುಕ್ತಾ ವಾಸುದೇವೇನ ದೇವಾಃ ಶಕ್ರಪುರೋಗಮಾಃ ।
ಕೃತಾಂಜಲಿಪುಟಾ ಭೂತ್ವಾ ಪಪ್ರಚ್ಛುಃ ಪರಮೇಶ್ವರಂ ॥ ೨೩ ॥

ದೇವಾ ಊಚುಃ

ಕಿಂ ತತ್ಕುರುಕ್ಷೇತ್ರಮಿತಿ ಯತ್ರ ಪುಣ್ಯಂ ಪೃಥೂದಕಂ ।
ಉದ್ಭವಂ ತಸ್ಯ ತೀರ್ಥಸ್ಯ ಭಗವಾನ್ ಪ್ರಬ್ರವೀತು ನಃ ॥ ೨೪ ॥

---

ದಿಂದ ಹುಟ್ಟುತ್ತಾಳೆ. ಆ ಪಾರ್ವತಿಯು ಶಂಕರನಿಂದ ಅವನ ತೇಜೋಂಶಗಳಿಂದ ಕೂಡಿದ ಯಾವ ಮಗನನ್ನು ಪ್ರಸುವಿಸುತ್ತಾಳೆಯೋ ಅವನೇ ನಿಮಗೆ ವಿರೋಧಿಯಾಗಿರುವ ಶುಂಭನನ್ನು ಅವನ ಅನುಯಾಯಿಗಳನ್ನೂ ನಾಶಮಾಡುತ್ತಾನೆ. ಆದುದರಿಂದ ಮಹಾಫಲಪ್ರದವಾಗಿಯೂ, ಪುಣ್ಯಕರವಾಗಿಯೂ ಇರುವ ಆ ಕುರುಕ್ಷೇತ್ರಕ್ಕೆ ಹೋಗಿ ಅಲ್ಲಿರುವ ಪೃಥೂದಕವೆಂಬ ತೀರ್ಥದಲ್ಲಿ ಪಿತೃದೇವತೆಗಳನ್ನು ಪೂಜಿಸಿರಿ. ಶತ್ರುಗಳಿಂದ ಪರಾಭವವನ್ನು ಹೊಂದಿರುವ ನೀವು ಆ ಶತ್ರುವನ್ನು ಜಯಿಸಿ ಸುಖಿಗಳಾಗಲು ಇಚ್ಛೆಪಟ್ಟಲ್ಲಿ ಶಂಕರನನ್ನೇ ನಂಬಿ ಅವನ ತೇಜಸ್ಸಿನಿಂದಲೇ ಕಾರ್ಯವನ್ನು ಸಾಧಿಸಬೇಕಾಗಿರುವದ್ದರಿಂದ ನಾನು ಹೇಳಿದ ಪುಣ್ಯಕರವಾದ ಕ್ಷೇತ್ರದಲ್ಲಿ ಮಹಾತಿಥಿಯಲ್ಲಿ ಪೂಜಾದಿಗಳನ್ನು ನೆರವೇರಿಸಿರಿ.

೨೩-೨೪. ಪುಲಸ್ತ್ಯರು ಹೇಳುತ್ತಾರೆ: ನಾರಾಯಣನಿಂದ ಹೀಗೆ ಹೇಳಲ್ಪಟ್ಟ ಇಂದ್ರಾದಿದೇವತೆಗಳು ಕೈಮುಗಿದುಕೊಂಡು ಆ ಸರ್ವೇಶ್ವರನನ್ನು ಕೇಳಿದರು. ಕುರುಕ್ಷೇತ್ರವೆಂದರೆ ಯಾವ ಕ್ಷೇತ್ರ, ಅದು ಎಲ್ಲಿದೆ, ಅಲ್ಲಿರುವ ಪೃಥೂದಕವೆಂಬ ತೀರ್ಥದ ಸ್ವರೂಪವೇನು, ಅದರ ಉತ್ಪತ್ತಿಯು ಹೇಗೆ ಉಂಟಾಯಿತು ಮತ್ತು ಅಲ್ಲಿ

ಕೇಯಂ ಪ್ರೋಕ್ತಾ ಮಹಾಪುಣ್ಯಾ ತಿಥೀನಾಮುತ್ತಮಾ ತಿಥಿಃ ।
ಯಸ್ಯಾಂ ಹಿ ಪಿತರೋ ದಿವ್ಯಾಃ ಅದ್ಭಿಃ ಪೂಜ್ಯಾಃ ಪ್ರಯತ್ನತಃ ॥ ೨೫ ॥

ತತ ಸ್ಸುರಾಣಾಂ ವಚನಾನ್ಮುರಾರಿಃ ಕೈಟಭಾರ್ದನಃ ।
ಕುರುಕ್ಷೇತ್ರೋದ್ಭವಂ ಪುಣ್ಯಂ ಪ್ರೋಕ್ತವಾಂಸ್ತಾಂ ತಿಥೀಮಪಿ ॥ ೨೬ ॥

ಶ್ರೀ ಭಗವಾನುವಾಚ

ಸೋಮವಂಶೋದ್ಭವೋ ರಾಜಾ ಋಕ್ಷೋ ನಾಮ ಮಹಾಬಲಃ ।
ಕೃತಸ್ಯಾದೌ ಸಮಭವದೃಕ್ಷಾತ್ಸಂವರಣೋಽಭವತ್ ॥ ೨೭ ॥

ಸ ಚ ಪಿತ್ರಾ ನಿಜೇ ರಾಜ್ಯೇ ಬಾಲ ಏವಾಭಿಷೇಚಿತಃ ।
ಬಾಲ್ಯೇಽಪಿ ಧರ್ಮನಿರತೋ ಮದ್ಭಕ್ತಶ್ಚ ಸದಾಭವತ್ ॥ ೨೮ ॥

ಪುರೋಹಿತಸ್ತು ತಸ್ಯಾಸೀದ್ವಸಿಷ್ಠೋ ವರುಣಾತ್ಮಜಃ ।
ಸ ತಮಧ್ಯಾಪಯಾಮಾಸ ಸಾಂಗಾನ್ವೇದಾನುದಾರಧೀಃ ॥ ೨೯ ॥

---

ನಾವು ಪಿತೃಗಳನ್ನು ನೀರಿನಿಂದಲೇ ಪೂಜೆಮಾಡಬೇಕಾದರೆ ಯಾವ ಮಹಾತಿಥಿಯಲ್ಲಿ ಮಾಡಬೇಕು, ತಿಥಿಗಳೆಲ್ಲೆಲ್ಲಾ ಉತ್ತಮವಾದ ಅಂತಹ ಪುಣ್ಯತಿಥಿ ಯಾವದು.

೨೬-೨೯. ಈರೀತಿಯಾದ ದೇವತೆಗಳ ಮಾತನ್ನು ಕೇಳಿ ಶತ್ರುನಾಶನದಲ್ಲಿ ಪ್ರಗಲ್ಭನಾದ ನಾರಾಯಣನು ಕುರುಕ್ಷೇತ್ರದಲ್ಲಿರುವ ಪೃಥೂದಕವೆಂಬ ಪುಣ್ಯತೀರ್ಥವನ್ನೂ ಮತ್ತು ಅಲ್ಲಿ ಪೂಜೆಗೆ ಅರ್ಹವಾದ ಮಹಾತಿಥಿಯನ್ನೂ ಹೇಳಲುಪಕ್ರಮಿಸಿ ತೀರ್ಥದ ಉತ್ಪತ್ತಿಯನ್ನು ಈ ರೀತಿ ನಿರೂಪಿಸಿದನು. ಕೃತಯುಗದಆದಿಭಾಗದಲ್ಲಿ ಚಂದ್ರವಂಶಕ್ಕೆ ಸೇರಿದ ಮಹಾಪರಾಕ್ರಮಿಯಾದ ಋಕ್ಷನೆಂಬ ಅಭಿಧಾನವುಳ್ಳ ರಾಜನೊಬ್ಬನಿದ್ದನು. ಅವನಿಗೆ ಸಂವರಣನೆಂಬ ಮಗನಿದ್ದನು. ಧೊರೆಯು ಬಾಲ್ಯದಲ್ಲಿಯೇ ತನ್ನ ಮಗನಾದ ಸಂವರಣನಿಗೆ ಪಟ್ಟಾಭಿಷೇಕ ಮಾಡಿ ರಾಜ್ಯವನ್ನು ವಹಿಸಿದನು. ಸಂವರಣನೂ ಸಹ ಬಾಲ್ಯದಲ್ಲಿದ್ದರೂ ಬಹಳ ಧರ್ಮಿಷ್ಠನಾಗಿಯೂ ನನಗೆ (ವಿಷ್ಣುವಿಗೆ) ಅತ್ಯಂತ ಭಕ್ತನಾಗಿಯೂ ಇದ್ದನು. ವರುಣಪುತ್ರರಾದ ವಸಿಷ್ಠರು ಅವನಿಗೆ ಪುರೋಹಿತರಾಗಿದ್ದುಕೊಂಡು ಬಹಳ ಶ್ರದ್ಧೆಯಿಂದ ಅವನಿಗೆ ಸಾಂಗವೇದಾಧ್ಯಯನವನ್ನೆಲ್ಲಾ ಮಾಡಿಸಿದರು.

ತತೋ ಜಗಾಮ ಚಾರಣ್ಯೇ ತ್ವನಧ್ಯಾಯೇ ನೃಪಾತ್ಮಜಃ ।
ಸರ್ವಕರ್ಮಸು ನಿಕ್ಷಿಪ್ಯ ವಸಿಷ್ಠಂ ತಪಸಾಂ ನಿಧಿಂ ॥ ೩೦ ॥

ತತೋ ಮೃಗಸ್ಯ ವ್ಯಾಕ್ಷೇಪಾದೇಕಾಕೀ ವಾಜಿನಾ ವನಂ ।
ವೈಭ್ರಾಜಂ ಸ ಜಗಾಮಾಥ ಮನೋನ್ಮಾದೇನ ತನ್ಮನೇ ॥ ೩೧ ॥

ತತಸ್ತು ಕೌತುಕಾವಿಷ್ಟಃ ಸರ್ವರ್ತುಕುಸುಮೇ ವನೇ ।
ಅವಿತೃಪ್ತಃ ಸುಗಂಧಸ್ಯ ಸಮಂತಾದ್ವಿಚರದ್ವನಂ ॥ ೩೨ ॥

ಸ ವನಾಂತಂ ದದರ್ಶಾಥ ಪುಲ್ಲಕೋಕನದಾವೃತಂ ।
ಕಲ್ಹಾರಪದ್ಮಕುಮುದೈಃ ಕಮಲೇಂದೀವರೈರಪಿ ॥ ೩೩ ॥

ತತ್ರ ಕ್ರೀಡಂತಿ ಸತತಮಪ್ಸರೋಮರಕನ್ಯಕಾಃ ।
ತಾಸಾಂ ಮಧ್ಯೇ ದದರ್ಶಾಥ ಕನ್ಯಾಂ ಸಂವರಣೋಧಿಕಾಂ ॥ ೩೪ ॥

ದರ್ಶನಾದೇವ ಸ ನೃಪಃ ಕಾಮಮಾರ್ಗಣಪೀಡಿತಃ ।
ತಥಾ ಸಾ ತಂ ಸಮೀಕ್ಷ್ಯೈವ ಕಾಮಬಾಣಾತುರಾ ಭವತ್ ॥ ೩೫ ॥

---

೩೦-೩೨. ಒಂದಾನೊಂದು ಕಾಲದಲ್ಲಿ ಆ ಸಂವರಣನು ತನ್ನ ಕೆಲಸಗಳಲ್ಲಿ ವಸಿಷ್ಠರನ್ನು ನಿಯಮಿಸಿ ಅನಧ್ಯಯನಕಾಲದಲ್ಲಿ ಅರಣ್ಯಕ್ಕೆ ಹೊರಟನು. ಅಲ್ಲಿ ಒಂದು ಮೃಗವನ್ನು ಅಟ್ಟಿಸಿಕ್ಕೊಂಡುಹೋಗುವ ತ್ವರೆಯಿಂದ ಏಕಾಕಿಯಾಗಿ ಕುದುರೆಯನ್ನು ಹತ್ತಿ ವೈಭ್ರಾಜವೆಂಬ ಕಾಡಿಗೆ ಹೋಗಿ ಸೇರಿ ಅಲ್ಲಿ ಉನ್ಮತ್ತನಾಗಿ ನಿಂತನು. ಎಲ್ಲಾ ಋತುಗಳ ಹೂವುಗಳಿಂದ ಸುಗಂಧಿಯಾಗಿದ್ದ ಆ ವನದಲ್ಲಿ ಹೂವುಗಳ ಸೌಗಂಧ್ಯದಲ್ಲಿ ಕುತೂಹಲಿಯಾಗಿ ಅತೃಪ್ತಿಯಿಂದ ಎಲ್ಲಾ ಕಡೆಗಳಲ್ಲೂ ಸಂಚರಿಸಹತ್ತಿದನು.

೩೩-೩೫. ಆ ಸಂವರಣನು ಅಲ್ಲಿ ಅರಳಿದ ಕೆಂಪು ಕಮಲಗಳಿಂದಲೂ ಕಲ್ಹಾರ, ಪದ್ಮ, ಕುಮುದ ಮೊದಲಾದ ಪುಷ್ಪಗಳಿಂದಲೂ ರಮಣೀಯವಾದ ಪ್ರದೇಶ ವನ್ನು ನೋಡುತ್ತಾ ನಿಂತನು. ಅಲ್ಲಿ ಅಪ್ಸರಸ್ತ್ರೀಯರೂ ದೇವಕನ್ಯಕೆಗಳೂ ವಿಹ ರಿಸುತ್ತಾ ಯಾವಾಗಲೂ ನೆಲಸಿರುವರು. ಅಲ್ಲಿ ವಿಹರಿಸುತ್ತಿರುವ ಸ್ತ್ರೀಯರುಗಳಲ್ಲಿ ಸೌಂದರ್ಯದಿಂದ ಅಧಿಕಳಾದ ಒಬ್ಬ ಕನ್ಯಕೆಯನ್ನು ಸವಂರಣನು ದೃಷ್ಟಿಸಿ ನೋಡಿದನು. ನೋಡಿದೊಡನೆಯೇ ಅವನು ಮನ್ಮಥನ ಬಾಣದಿಂದ ಪೀಡಿತನಾದನು. ಆ ಕನ್ಯೆಯೂ ಕೂಡ ಇವನನ್ನು ನೋಡಿ ಕಾಮಬಾಣಕ್ಕೆ ಗುರಿಯಾದಳು.

**ಉಭೌ ತೌ ಪೀಡಿತೌ ಮೋಹಂ ಜಗ್ಮತುಃ ಕಾಮಮಾರ್ಗಣೈಃ ।**
**ರಾಜಾ ಚಲಾಸನೋ ಭೂಮ್ಯಾಂ ನಿಪಪಾತ ತುರಂಗಮಾತ್ ॥ ೩೬ ॥**

**ತಮಭ್ಯೇತ್ಯ ಮಹಾತ್ಮಾನೋ ಗಂಧರ್ವಾಃ ಕಾಮರೂಪಿಣಃ ।**
**ಸಿಷಿಚು ರ್ವಾರಿಣಾ ತೇನ ಲಬ್ಧಸಂಜ್ಞೋ ಭವತ್ಕ್ಷಣಾತ್ ॥ ೩೭ ॥**

**ಸಾಚಾಪ್ಸರೋಭಿರುತ್ಪಾಟ್ಯ ನೀತಾ ಪಿತೃಕುಲಂ ನಿಜಂ ।**
**ತಾಭಿರಾಶ್ವಾಸಿತಾ ಚಾಪಿ ಮಧುರೈರ್ವಚನಾಂಬುಭಿಃ ॥ ೩೮ ॥**

**ಸಚಾಪ್ಯಾರುಹ್ಯ ತುರಗಂ ಪ್ರತಿಷ್ಠಾನಂ ಪುರೋತ್ತಮಂ ।**
**ಗತಸ್ತು ಮೇರುಶಿಖರಂ ಕಾಮಚಾರೀ ಯಥಾಮರಃ ॥ ೩೯ ॥**

**ಯದಾ ಪ್ರಭೃತಿ ಸಾ ದೃಷ್ಟಾ ಚಕ್ಷುಷಾ ತಪತೀ ಗಿರೌ ।**
**ತದಾ ಪ್ರಭೃತಿ ನಾಶ್ನಾತಿ ದಿವಾ ಸ್ವಪಿತಿ ವಾ ನಿಶಿ ॥ ೪೦ ॥**

**ತತಃ ಸರ್ವವಿದವ್ಯಗ್ರೋ ವಿದಿತ್ವಾ ವರುಣಾತ್ಮಜಃ ।**
**ತಪತೀತಾಪಿತಂ ವೀರಂ ಪಾರ್ಥಿವಂ ತಪಸಾಂ ನಿಧಿಃ ॥ ೪೧ ॥**

---

೩೬-೩೯. ಹೀಗೆ ಆ ಇಬ್ಬರೂ ಕಾಮಬಾಣಪೀಡಿತರಾಗಿ ಮೋಹಗೊಂಡರು. ರಾಜನು ಮೋಹಾತಿಶಯದಿಂದ ಪರವಶನಾಗಿ ಆಸನ ಚಾಂಚಲ್ಯದಿಂದ ಕುದುರೆಯ ಮೇಲಿನಿಂದ ಕೆಳಗೆ ಬಿದ್ದನು. ಆಗ ಅಲ್ಲಿದ್ದ ಕಾಮರೂಪಿಗಳಾದ ಗಂಧರ್ವರು ದಯೆಯಿಂದ ಹತ್ತಿರಕ್ಕೆ ಬಂದು ನೀರನ್ನು ಎರಚಿ ಸಂತೈಸಿದೊಡನೆ ಸಂಜ್ಞೆಯನ್ನು ಹೊಂದಿದನು. ಆ ಅಮರಕನ್ಯೆಕೆಯೂ ಮೋಹದಿಂದ ಪರವಶಳಾಗಿ ಬಿದ್ದನಂತರ ಅಪ್ಸರಸ್ತ್ರೀಯರುಗಳು ಅವಳನ್ನು ಮಧುರವಾದ ವಚನಾಮೃತದಿಂದ ಸಂತೈಸಿ ತಂದೆಯ ಮನೆಗೆ ಕರೆದುಕೊಂಡುಹೋದರು. ಪ್ರಜ್ಞೆಹೊಂದಿದಮೇಲೆ ಧೊರೆಯು ಕುದುರೆಯನ್ನೇರಿ ಪ್ರತಿಷ್ಠಾನಪುರಕ್ಕೆ ಹೊರಟುಬಂದನು. ಬಂದರೂ ಕಾಮಚಾರಿಯಾಗಿ ಮೇರುಶಿಖರಗಳಲ್ಲಿ ಸಂಚರಿಸುತ್ತಿದ್ದನು.

೪೦-೪೩. ಧೊರೆಯಾದ ಸಂವರಣನು ವಿಹಾರಪರ್ವತದಲ್ಲಿ ತಪತಿಯನ್ನು ಯಾವಾಗ ನೋಡಿದನೋ ಅದು ಮೊದಲು ಅಧಿಕವಾದ ಆಸಕ್ತಿಯಿಂದ ಹಗಲಿನಲ್ಲಿ ಭೋಜನವನ್ನೂ ರಾತ್ರಿಯಲ್ಲಿ ನಿದ್ದೆಯನ್ನೂ ಅವನು ತೊರೆದನು. ಅನಂತರ ತಪೋನಿಧಿಯಾಗಿಯೂ ಸರ್ವಜ್ಞನಾಗಿಯೂ ಇರುವ ವಸಿಷ್ಠನು ಶೂರನಾದ ರಾಜನಿಗೆ

ಸಮುತ್ಪತ್ಯ ಮಹಾಯೋಗೀ ಗಗನಂ ರವಿಮಂಡಲಂ ।
ವಿವೇಶ ದೇವಂ ತಿಗ್ಮಾಂಶುಂ ದದರ್ಶ ಸ್ಯಂದನೇ ಸ್ಥಿತಂ ॥ ೪೨ ॥

ತಂ ದೃಷ್ಟ್ವಾ ಭಾಸ್ಕರಂ ದೇವಂ ನನಾಮ ದ್ವಿಜಸತ್ತಮಃ ।
ಪ್ರತಿಪ್ರಣಮಿತಶ್ಚಾಸೌ ಭಾಸ್ಕರೇಣಾಪ್ಯಸೌ ಋಷಿಃ ॥ ೪೩ ॥

ಜ್ವಲಜ್ಜಟಾಕಲಾಪೋಽಸೌ ದಿವಾಕರ ಸಮೀಪಗಃ ।
ಶೋಭತೇ ವಾರುಣೀಃ ಶ್ರೀಮಾನ್ ದ್ವಿತೀಯ ಇವ ಭಾಸ್ಕರಃ ॥ ೪೪ ॥

ತತಸ್ಸಂಪೂಜಿತೋಽರ್ಘಾದ್ಯೈಃ ಭಾಸ್ಕರೇಣ ತಪೋಧನಃ ।
ಪೃಷ್ಟಶ್ಚಾಗಮನೇಹೇತುಂ ಪ್ರತ್ಯುವಾಚ ದಿವಾಕರಂ ॥ ೪೫ ॥

ಸಮಾಯಾತೋಽಸ್ಮಿ ದೇವೇಶ ಯಾಚಿತುಂ ತ್ವಾಂ ಮಹಾದ್ಯುತೇ ।
ಸುತಾಂ ಸಂವರಣಸ್ಯಾರ್ಥೇ ತ್ವಂ ಚ ತಾಂ ದಾತುಮರ್ಹಸಿ ॥ ೪೬ ॥

---

ತಪತಿಯ ಮೇಲಿನ ಅನುರಾಗದಿಂದ ಉಂಟಾಗಿರುವ ಕಾಮಪೀಡೆಯನ್ನು ತಿಳಿದು ಯೋಗಮಹಿಮೆಯಿಂದ ಆಕಾಶಕ್ಕೆ ಹಾರಿಹೋಗಿ ಸೂರ್ಯಮಂಡಲವನ್ನು ಪ್ರವೇಶಿಸಿದನು. ಅಲ್ಲಿ ರಥದಲ್ಲಿರುವ ಸೂರ್ಯನನ್ನು ನೋಡಿ ಅವನಿಗೆ ನಮಸ್ಕರಿಸಿದನು. ಸೂರ್ಯನಿಂದಲೂ ಪ್ರತಿಪ್ರಣಾಮದಿಂದ ಸತ್ಕರಿಸಲ್ಪಟ್ಟು ಅಲ್ಲಿ ಕುಳಿತನು.

೪೪-೪೬. ಸೂರ್ಯನ ಸಮೀಪದಲ್ಲಿ ಜ್ವಲಿಸುತ್ತಿರುವ ಜಟೆಗಳಿಂದ ಕೂಡಿದ ಈ ವಸಿಷ್ಠ ಋಷಿಯು ಎರಡನೇ ಸೂರ್ಯನಂತೆಯೇ ಪ್ರಕಾಶಿಸಿದನು. ಅನಂತರ ಸೂರ್ಯನಿಂದ ಪೂಜಾದಿಗಳಿಂದ ಸತ್ಕರಿಸಲ್ಪಟ್ಟು ತಮ್ಮ ಈ ಗಮನಕ್ಕೆ ಕಾರಣವೇನೆಂದು ಸೂರ್ಯನಿಂದ ಪ್ರಶ್ನೆ ಮಾಡಲ್ಪಟ್ಟವನಾಗಿ ಅವನನ್ನು ಕುರಿತು ವಸಿಷ್ಠನು ಹೀಗೆ ಹೇಳಿದನು. ಎಲೈ ಮಹಾದ್ಯುತಿಯೇ, ದೇವತಾಶ್ರೇಷ್ಠನೇ, ನಿನ್ನನ್ನು ಯಾಚಿಸಲು ನಾನು ಬಂದಿದ್ದೇನೆ. ನಿನ್ನ ಮಗಳನ್ನು ಧೊರೆಯಾದ ಸಂವರಣನಿಗೋಸ್ಕರ ನೀನು ಮದುವೆಮಾಡಿಕೊಡಬೇಕು.

ತತೋ ವಸಿಷ್ಠಾಯ ದಿವಾಕರೇಣ
ನಿವೇದಿತಾ ಸಾ ತಪತೀ ತನೂಜಾ ।
ಗೃಹಾಗತಾಯ ದ್ವಿಜಪುಂಗವಾಯ
ರಾಜ್ಞೋರ್ಥೇತ ಸ್ಸಂವರಣಸ್ಯ ಚೈವ ॥ ೪೭ ॥

ಸಾವಿತ್ರಮಾಸಾದ್ಯ ವಚೋ ವಸಿಷ್ಠಃ
ಸ್ವಮಾಶ್ರಮಂ ಪುಣ್ಯಮುಪಾಜಗಾಮ ।
ಸಾ ಚಾಪಿ ಸಂಸ್ಮೃತ್ಯ ನೃಪಾತ್ಮಜಂ ತಂ
ಕೃತಾಂಜಲಿರ್ವಾರುಣಿಮಾಹ ದೇವೀ ॥ ೪೮ ॥

ತಪತ್ಯುವಾಚ

ಬ್ರಹ್ಮನ್ಮಯಾ ಖೇದ ಮುಪೇತ್ಯ ಯೋಹಿ
ಸಹಾಪ್ಸರೋಭಿಃ ಪರಿಚಾರಿಕಾಭಿಃ ।
ದೃಷ್ಟೋಹ್ಯರಣ್ಯೇಮರಗರ್ಭತುಲ್ಯೋ
ನೃಪಾತ್ಮಜೋ ಲಕ್ಷಣತೋಪಿ ಜಾನೇ ॥ ೪೯ ॥

---

೪೭-೪೮. ಅನಂತರ ಮನೆಗೆ ಬಂದಿರುವ ಬ್ರಾಹ್ಮಣಶ್ರೇಷ್ಠನ ಸಂತೋಷಕ್ಕಾಗಿ ಮಗಳಾದ ತಪತಿಯನ್ನು ರಾಜಕುಮಾರನಾದ ಸಂವರಣನಿಗೆ ಕೊಡಲು ಒಪ್ಪಿ ಸೂರ್ಯನು ಮಹರ್ಷಿಯಲ್ಲಿ ತನ್ನ ಸಮ್ಮತಿಯನ್ನು ಅರಿಕೆಮಾಡಿ ತಪತಿಯನ್ನೂ ಒಪ್ಪಿಸಿದನು ಈ ರೀತಿಯಾದ ಸೂರ್ಯನ ಅಂಗಿಕಾರವಚನವನ್ನು ಕೇಳಿ ವಸಿಷ್ಠರು ಸಂತೋಷದಿಂದ ತಮ್ಮ ಆಶ್ರಮಕ್ಕೆ ಹಿಂತಿರುಗಿದರು. ಆಗ ಧೊರೆಯಾದ ಸಂವರಣನನ್ನು ನೆನೆಸಿಕ್ಕೊಂಡು ತಪತಿಯು ವಸಿಷ್ಠರನ್ನು ಕುರಿತು ಕೈಮುಗಿದುಕ್ಕೊಂಡು ಹೇಳುತ್ತಾಳೆ. (ಇಲ್ಲಿ ಕನ್ಯಕಾವಸ್ಥೆಯಲ್ಲಿದ್ದರೂ ವಾಗ್ದಾನ ಮಾತ್ರದಿಂದ ರಾಜಮಹಿಷಿಯಾದಳೆಂದು ಭಾವಿಸಿ ಅವಳನ್ನು ಪುಲಸ್ತ್ಯರು ದೇವೀಶಬ್ದದಿಂದ ಕರೆದಿದ್ದಾರೆ.)

೪೯-೫೧. ಎಲೈ ಮಹರ್ಷಿಯೇ, ನಾನು ನನ್ನ ಪರಿಚಾರಿಕೆಗಳಾದ ಅಪ್ಸರಸ್ತ್ರೀಗಳೊಡನೆ ಬಹಳ ಖೇದಪಟ್ಟು ಸಮಾನನಾದ ರಾಜಕುಮಾರನನ್ನು ನೋಡಿ ಶುಭಲಕ್ಷಣಗಳಿಂದಲೂ ಅವನನ್ನು ಮಹಾಪುರುಷನೆಂದು ತಿಳಿದಿದ್ದೇನೆ. ಅವನ ಮಂಗಲಕರವಾದ ಪಾದಗಳು, ಚಕ್ರ, ಗದೆ, ಖಡ್ಗ ಇವುಗಳ ಚಿಹ್ನೆಗಳಿಂದ ಕೂಡಿವೆ. ಕಣಕಾಲು,

ಪಾದೌ ಶುಭೌ ಚಕ್ರಗದಾಸಿಚಿಹ್ನೌ
ಜಂಘೇ ತಥೋರೂ ಕರಿಹಸ್ತತುಲ್ಯೌ ।
ಕಟಿರ್ಯಥಾ ಕೇಸರಿಣ ಸ್ತಥೈವ
ಕ್ಷಾಮಂ ಚ ಮಧ್ಯಂ ತ್ರಿವಲೀ ನಿಬದ್ಧಂ ॥ ೫೦ ॥
ಗ್ರೀವಾಸ್ಯ ಶಂಖಾಕೃತಿ ಮಾದಧಾತಿ
ಭುಜೌ ಚ ಪೀನೌ ಕಠಿನೌ ಸುದೀರ್ಘೌ ।
ಹಸ್ತೌ ತಥಾ ಪದ್ಮದಲೋದ್ಭವಾಂಕೌ
ಛತ್ರಾಕೃತಿಸ್ತಸ್ಯ ಶಿರೋ ವಿಭಾತಿ ॥ ೫೧ ॥
❦ನೀಲಾಶ್ಚ ಕೇಶಾಃ ಕುಟಿಲಾಶ್ಚ ತಸ್ಯ
ಕರ್ಣೌ *ಸಮಾಂಸೌ ಸುಸಮಾ* ಚ ನಾಸಾ ।

---

ತೊಡೆ ಇವು ಆನೆಯ ಸೊಂಡಲಿನಂತೆ ದೀರ್ಘವಾಗಿಯೂ ದೃಢವಾಗಿಯೂ ಇವೆ. ಕಟಿ ಪ್ರದೇಶವು ಸಿಂಹದ ಕಟಿಯಂತೆಯೂ ವಲಿತ್ರಯಗಳಿಂದ ಕೂಡಿದ ಮಧ್ಯಭಾಗವು (ಸೊಂಟ) ಸಣ್ಣದಾಗಿಯೂ ಇವೆ ಆ ರಾಜಕುಮಾರನ ಕತ್ತು ಶಂಖಾಕಾರವಾಗಿ ರಮಣೀಯವಾಗಿದೆ. ಭುಜಗಳು ದಪ್ಪನಾಗಿಯೂ, ದೀರ್ಘವಾಗಿಯೂ, ದೃಢವಾಗಿಯೂ, ಇವೆ. ಹಸ್ತಗಳು ಪದ್ಮದಳದ ಚಿಹ್ನೆಯಿಂದ ಕೂಡಿಯೂ, ಶಿರಸ್ಸು ಛತ್ರಾಕಾರವಾಗಿಯೂ ಶೋಭಿಸುತ್ತಿದೆ.

೫೨. ❦ಕೇಶಪಾಶಗಳು ಕಪ್ಪಾಗಿಯೂ ವಕ್ರ ವಕ್ರವಾಗಿಯೂ ಇವೆ, ಕಿವಿಗಳು *ಭುಜದವರಿಗೂ ದೀರ್ಘವಾಗಿವೆ, ಮೂಗೂ ಒಂದೇ *ಸಮವಾಗಿ ರಮ್ಯವಾಗಿದೆ. ಮತ್ತು ಕೈಗಳಲ್ಲಿಯೂ ಕಾಲುಗಳಲ್ಲಿಯೂ ಬೆರಳುಗಳು *ದೀರ್ಘವಾಗಿಯೂ ಗಿಣ್ಣುಗಳು ಅಂದವಾಗಿಯೂ ಇವೆ, ಹಲ್ಲುಗಳು †ಶುಭ್ರವಾಗಿವೆ.

---

❦ ಏಕೈಕಭವೈಃ ಸ್ನಿಗ್ಧೈಃ ಕೃಷ್ಣೈಃ ಆಕುಂಚಿತೈ ರಭಿನ್ನಾಗ್ರೈಃ ।
ಮೃದುಭಿಃ ನ ಚಾತಿಬಹುಭಿಃ ಕೇಶೈಃ ಸುಖಭಾಕ್ ನರೇಂದ್ರೋ ವಾ ॥

ಎಂಬ ಬೃಹತ್ಸಂಹಿತಾ ವಚನವು ಇದಕ್ಕೆ ಪ್ರಮಾಣ, ಕವಲಿಲ್ಲದೆ ಬಿಡಿಬಿಡಿಯಾಗಿಯೂ ಹೊಳಪಿನಿಂದ ಕೂಡಿ ಕಪ್ಪಾಗಿಯೂ, ವಕ್ರವಕ್ರವಾಗಿಯೂ, ಅಗ್ರಭಾಗದಲ್ಲಿ ಕವಲಿಲ್ಲದೆಯೂ, ಮೃದುವಾಗಿಯೂ, (ಬಹಳ ದಟ್ಟವಾಗಿರದೆ) ತೆಳುವಾಗಿಯೂ, ಇರುವ ಕೇಶಗಳು ಯಾರಿಗೆ ಇವೆಯೋ ಅವರು ಸುಖಿಗಳಾಗುವರು. ಅಥವಾ ದೊರೆಯಾಗುವರು ಎಂದು ಇದರ ಅರ್ಥ.

***ದೀರ್ಘಾಶ್ಚ ತಸ್ಯಾಂಗುಲಯಃ ಸುಪರ್ವಾಃ**
**ಪದ್ಭ್ಯಾಂ ಕರಾಭ್ಯಾಂ ದಶನಾಶ್ಚ †ಶುಭ್ರಾಃ** ॥ ೫೨ ॥

---

*** ದೀರ್ಘಾಯುಷಃ ಶಂಕುಕರ್ಣಾಃ ಸ್ಫುಟಕರ್ಣಾ ಮಹಾಧನಾಃ ।**
**ಸುಖಾನ್ವಿತಾ ದೀರ್ಘಕರ್ಣಾಃ ಲಂಭಕರ್ಣಾ ಸ್ತಪಸ್ವಿನಃ ॥**

ಎಂದು ಬೃಹತ್ಸಂಹಿತಾ ವಚನವಿದೆ, ಸಣ್ಣ ಕಿವಿಯುಳ್ಳವರು ದೀರ್ಘಾಯುಸ್ಸನ್ನು ಹೊಂದುವರು, (ಹೆಚ್ಚಾಗಿ ವಕ್ರತೆ ಇಲ್ಲದೆ) ಸ್ಫುಟವಾದ ಕಿವಿಗಳುಳ್ಳವರು ಧನಿಕರಾಗುವರು, ದೀರ್ಘವಾದ ಕಿವಿಯುಳ್ಳವರು ಸುಖಿಗಳಾಗುತ್ತಾರೆ, ಜೋಲಾಡುವ ಕಿವಿಯುಳ್ಳವರು ತಪಸ್ವಿಗಳಾಗುವರು ಎಂದು ಇದರ ಅರ್ಥ. ಇಲ್ಲಿ ಸಮಾಂಸೌ ಎಂಬ ಪದಕ್ಕೆ ಮಾಂಸದಿಂದಕೂಡಿ ಬಲಿಷ್ಠವಾಗಿದೆ ಎಂದು ಅರ್ಥ ಹೇಳುವುದಾದರೆ, ಬೃಹತ್ಕರ್ಣಾಶ್ಚ ಧನಿನೋರಾಜಾನಃ ಪರಿಕೀರ್ತಿತಾಃ । ಕರ್ಣೈಃಸ್ನಿಗ್ಧೈರನದ್ಧೈಶ್ಚವ್ಯಾಲಂಬೈರ್ಮಾಂಸಲೈಃ ನೃಪಾಃ ಎಂಬ ಬೃಹತ್ಸಾಮುದ್ರಿಕವಚನವೂ ಪ್ರಮಾಣವಾಗುತ್ತದೆ.

*** ದೀರ್ಘನಾಸಾ ಭೋಗಯುಕ್ತಾಃ ಅಗ್ರವಕ್ರಾ ಧನಾನ್ವಿತಾಃ ।**
**ಶುಕನಾಸಃ ಸೌಖ್ಯಭಾಜಃ ಶುಷ್ಕನಾಸ ಶ್ಚಿರಾಯುಷಃ ॥**

ಎಂದು ಬೃಹಸ್ಸಂಹಿತಾ ವಚನವಿದೆ, ಉದ್ದವಾದ ಮೂಗುಳ್ಳವರು ಭೋಗಿಗಳಾಗುವರು, ಮೂಗಿನ ಅಗ್ರಭಾಗವು ಬಗ್ಗಿದ್ದಲ್ಲಿ ಧನಿಕರಾಗುವರು, ಗಿಣಿಯ ಕೊಕ್ಕಿನಂತೆ ಇದ್ದಲ್ಲಿ ಸುಖಿ. ಳಾಗುವರು, (ದಪ್ಪವಾಗಿರದೆ) ಕೃಶವಾಗಿದ್ದಲ್ಲಿ ಚಿರಾಯುಗಳಾಗುತ್ತಾರೆ. ಎಂದು ಇದರ ಅರ್ಥ

*** ಅಂಗುಷ್ಠಯವೈರಾಢ್ಯಾಃ ಸುತವಂತೋ ಅಂಗುಷ್ಠಮೂಲಜೈಶ್ಚಯವೈಃ**
**ದೀರ್ಘಾಂಗುಲಿಪರ್ವಾಣಃ ಸುಭಗಾ ದೀರ್ಘಾಯುಷಶ್ಚೈವ ॥**

ಎಂದು ಬೃಹತ್ಸಂಹಿತಾ ವಚನವಿದೆ, ಅಂಗುಷ್ಠದಲ್ಲಿ ಗೋಧಿಯಕಾಳಿನ ಆಕಾರವಂತಿರುವ ರೇಖೆಯಿಂದ ಕೂಡಿರುವವರು ಪುತ್ರವಂತರಾಗುವರು, ಅಂಗುಷ್ಠದ ಬುಡವಲ್ಲಿ ಅಂತಹ ರೇಖೆಯಿಂದ ಕೂಡಿ, ದೀರ್ಘವಾದ ಬೆರಳು ಮತ್ತು ಗಿಣ್ಣುಗಳಿಂದ ಕೂಡಿರುವವರು ಸೌಭಾಗ್ಯವಂತರೂ ಚಿರಾಯುಗಳೂ ಆಗುತ್ತಾರೆ, ಎಂದು ಇದರ ಅರ್ಥ.

**† ಶುಭ್ರಾಃ ಘನಾಶ್ಚದಶನಾಃ ಸುತೀಕ್ಷ್ಣದಂಷ್ಟ್ರಾಃ ಸಮಾಶ್ಚ ಶುಭಾಃ ॥**
ಎಂದು ಬೃಹತ್ಸಂಹಿತಾ ವಚನವಿದೆ, ಬಿಳುಪಾಗಿಯೂ, ದೃಢವಾಗಿಯೂ, ಚೂಪಾದ ಅಗ್ರಭಾಗದಿಂದ ಕೂಡಿಯೂ ಇರುವ ಸಮವಾದ ಹಲ್ಲುಗಳು ಶುಭ ಪ್ರದವಾಗುತ್ತವೆ. ಎಂದು ಇದರ ಅರ್ಥ.

*ಸಮುನ್ನತಃ ಷಡ್ಭಿರುದಾರವೀರ್ಯಃ
‡ತ್ರಿಭಿರ್ಗಭೀರಃ †ತ್ರಿಷು ಚ ಪ್ರಲಂಬಃ ।
§ರಕ್ತಸ್ತಥಾ ಸಪ್ತಸು ರಾಜಪುತ್ರಃ
⁑ಕೃಷ್ಣಶ್ಚತುರ್ಭಿಃ ⁂ಸ್ತ್ರಿಭಿರಾನತೋಽಪಿ ॥ ೫೩ ॥

೫೩. *"ಸಮುನ್ನತಃಷಡ್ಭಿಃ" ಪಾರ್ಶ್ವ, ಹೊಟ್ಟೆ, ಎದೆ, ಮೂಗು, ಭುಜಗಳು,ಮುಖ, ಈ ಆರು ಅವಯವಗಳೂ ಸಾಮುದ್ರಿಕ ಶಾಸ್ತ್ರದಲ್ಲಿ ಹೇಳಿರುವ ಮಹಾಪುರುಷಲಕ್ಷಣಕ್ಕೆ ತಕ್ಕಂತೆ ರಮ್ಯವಾಗಿವೆ. ‡"ತ್ರಿಭಿರ್ಗಭೀರಃ" ಸ್ವರ, ಬಲ, ನಾಭಿ, ಈ ಮೂರೂ ಗಂಭೀರವಾಗಿವೆ. †"ತ್ರಿಷುಚಪ್ರಲಂಬಃ" ಹುಬ್ಬು, ತೋಳುಗಳು, ಅಂಡಕೋಶ, ಈ ಮೂರು ಅವಯವಗಳು (ಲಂಬಿತ) ದೀರ್ಘವಾಗಿವೆ. §"ರಕ್ತಸ್ತಥಾ ಸಪ್ತಸು" ಅಂಗಾಲು, ಅಂಗೈಗಳು, ಕಡೆಗಣ್ಣು, ಉಗುರುಗಳು, ದವಡೆಗಳ ಭಾಗ (ತಾಲು) ನಾಲಗೆ, ತುಟಿಗಳು ಈ ಏಳು ಅವಯವಗಳು ಕೆಂಪಗೆ ರಮ್ಯವಾಗಿವೆ. ⁑"ಕೃಷ್ಣಃಚತುರ್ಭಿಃ" ಕೇಶಪಾಶಗಳು, ಹುಬ್ಬು, ಕಣ್ಣಿನ ಗುಳ್ಳೆಗಳು, ಗಡ್ಡಮಿಸೆಗಳು, ಈ ನಾಲ್ಕು ಅವಯವಗಳು ಕೃಷ್ಣವರ್ಣವಾಗಿರುವುವು. ⁂"ತ್ರಿಭಿರಾನತೋಽಪಿ" ಸ್ತನ, ಅದರ ಅಗ್ರಭಾಗ, ಪಾದರೇಖಾ ಈ ಮೂರು ಬಗ್ಗಿ ಇರುತ್ತವೆ.

---

*ಕಕ್ಷಃ ಕುಕ್ಷಿಶ್ಚ ವಕ್ಷಶ್ಚ ಘ್ರಾಣಸ್ಕಂದಲಲಾಟಕಂ ।
ಸರ್ವಭೂತೇಷು ನಿರ್ದಿಷ್ಟಂ ತದ್ವರ್ಧಿಷ್ಣು ಷಡುನ್ನತಂ ॥
ಯಶಸ್ವಿನೋ ಮಹಾವೀರ್ಯಾ ಧನಿನಶ್ಚ ಭವಂತಿ ತೇ ॥

ಎಂದು ಪ್ರಹ್ಲಾದ ಸಾಮುದ್ರಿಕಶಾಸ್ತ್ರದ ವಚನವಿದೆ, ಪಾರ್ಶ್ವ, ಹೊಟ್ಟೆ, ಎದೆ, ಮೂಗು, ಭುಜದ ಮೇಲುಭಾಗ, ಹಣೆ, ಈ ಆರು ಅವಯವಗಳು ಸರ್ವಪ್ರಾಣಿಗಳಿಗೂ ಎತ್ತರವಾಗಿದ್ದಲ್ಲಿ ಇವು ಅಭಿವೃದ್ಧಿ ಹೊಂದುವವನ ಲಕ್ಷಣಗಳು, ಅಂತಹವರು ಯಶಸ್ವಿಗಳಾಗಿಯೂ, ಮಹಾ ಪರಾಕ್ರಮಿಗಳಾಗಿಯೂ, ಐಶ್ವರ್ಯಶಾಲಿಗಳಾಗಿಯೂ, ಆಗುತ್ತಾರೆ ಎಂದು ಇದರ ಅರ್ಥ.

**‡ಸ್ವರಃ ಸತ್ತ್ವಂ ಚ ನಾಭಿಶ್ಚ ತ್ರಿಗಂಭೀರಂ ಗುರುತ್ವಕೃತ್ ।**

ಎಂಬ ಪ್ರಹ್ಲಾದ ಸಾಮುದ್ರಿಕಶಾಸ್ತ್ರ, ಮತ್ತು "ಸ್ವರಃ ಸತ್ವಂ ಚ ನಾಭಿಶ್ಚ ಗಂಭೀರಃ ಶಸ್ಯತೇ ಬುಧೈಃ ಎಂಬ" ವರರುಚಿವಚನ ಮತ್ತು ಸ್ವರೇ ಗತೌ ಚ ನಾಭೌ ಚ ಗಂಭೀರಃ ತ್ರಿಷು ಶಸ್ಯತೇ ಎಂಬ ಬ್ರಾಹ್ಮಪುರಾಣ ವಚನವೂ ಇದಕ್ಕೆ ಪ್ರಮಾಣ. ಸ್ವರ, ಬಲ, ಅಥವಾ ಗಮನ, ನಾಭಿಪ್ರದೇಶ (ಹೊಕ್ಕಳು) ಇವು ಗಂಭೀರವಾಗಿದ್ದಲ್ಲಿ ಅವನು ಪ್ರಶಸ್ತ ಪುರುಷನಾಗುತ್ತಾನೆ, ಎಂದು ಈ ವಚನಗಳಿಗೆ ಅರ್ಥ.

**†ದೀರ್ಘಭ್ರೂಬಾಹುಮುಷ್ಕಸ್ತು ಚಿರಜೀವೀ ಧನೀ ನರಃ ।**

ಎಂಬ ಸಾಮುದ್ರಿಕ ವಚನ.

**ತ್ರಯಶ್ಚ ಯಸ್ಯ ವಿದ್ಯಂತೇ ಪ್ರಲಂಬಾ ಮೇಢ್ರಬಾಹವಃ ॥**

ಎಂಬ ವಚನಾಂತರವೂ ಪ್ರಮಾಣ.

ಇಲ್ಲಿ ಲಂಬವೆಂಬ ಪದಕ್ಕೆ ವಿಸ್ತೀರ್ಣವೆಂದು ಅರ್ಥ ಹೇಳುವುದಾದರೆ ಉರಃ ಶಿರೋ ಲಲಾಟಂ ಚ ತ್ರಿವಿಸ್ತೀರ್ಣಂ ಮಹತ್ವಕೃತ್, ಎಂಬ ಪ್ರಹ್ಲಾದ ಸಾಮುದ್ರಿಕ ವಚನವೂ ಪ್ರಮಾಣವಾಗುತ್ತದೆ.

**§ಪಾಣಿಪಾದತಲೇ ರಕ್ತೇ ನೇತ್ರಾಂತೇ ಚ ನಖಾಸ್ತಥಾ ।**
**ತಾಲುಜಿಹ್ವಾಧರೋಷ್ಠಾನಿ ಸಪ್ತರಕ್ತಂ ಶ್ರಿಯಃಪದಂ ॥**

ಎಂದು ಪ್ರಹ್ಲಾದ ಸಾಮುದ್ರಿಕ ವಚನವಿದೆ, ಅಂಗೈಗಳು, ಅಂಗಾಲು ಕಡೆಗಣ್ಣು, ಉಗುರುಗಳು, ದವಡೆಗಳ ಒಳಭಾಗ, ನಾಲಗೆ, ತುಟಿಗಳು, ಈ ಏಳು ಅವಯವಗಳೂ ಕೆಂಪಾಗಿದ್ದಲ್ಲಿ ಅವನು ಐಶ್ವರ್ಯವಂತನಾಗುತ್ತಾನೆ ಎಂದು ಇದರ ಅರ್ಥ.

**‡ಅಕ್ಷಿತಾರೇ, ಭ್ರುವೌ ಶ್ಮಶ್ರುಕೇಶಾಶ್ಚೈವಾಸಿತಾಃ ಶುಭಾಃ ॥**

ಎಂದು ಬೃಹತ್ಸಂಹಿತೆಯಲ್ಲಿ ಉದಾಹರಿಸಿರುವ ಗರ್ಗಸಂಹಿತಾವಚನವು ಪ್ರಮಾಣ. ಕಣ್ಣಿನ ಗುಡ್ಡೆಗಳು ಹುಬ್ಬುಗಳು, ಗಡ್ಡಮೀಸೆಗಳು ಕೇಶಗಳು, ಈ ನಾಲ್ಕು ಕಪ್ಪಾಗಿದ್ದಲ್ಲಿ ಶುಭಕರಗಳು ಎಂದು ಇದರ ಅರ್ಥ.

**‡‡ಪೀನೋಪಚಿತೈಃ ನಿಮ್ನೈಃ ಕ್ಷಿತಿಪತಯಃ ಚೂಚುಕೈ ಸ್ತನೈ ಸ್ಸುಖಿನಃ ॥**
**ಸ್ನಿಗ್ಧಾ ನಿಮ್ನಾ ರೇಖಾ ಧನಿನಾಂ ತದ್ವ್ಯತ್ಯಯೇನ ನಿಸ್ವಾನಾಂ ॥**

ಎಂಬ ವರಾಹಮಿಹಿರಾಚಾರ್ಯರ ವಚನವಿದೆ. ಸ್ತನಗಳೂ, ಅದರ ಅಗ್ರಭಾಗಗಳೂ ಪುಷ್ಟಿಯಾಗಿದ್ದು ಕೆಳಮುಖವಾಗಿ ಬಗ್ಗಿದ್ದಲ್ಲಿ ಮತ್ತು ಪಾದರೇಖೆಯು ಕೆಳಮುಖವಾಗಿ ಬಗ್ಗಿದ್ದಲ್ಲಿ ಅವರು ಸುಖಿಗಳಾಗಿಯೂ ಧನಿಕರಾಗಿಯೂ ಆಗುವರು ಎಂದು ಇದರ ಅರ್ಥ.

**×ದ್ವಾಭ್ಯಾಂ ಚ ಶುಕ್ಲಃ ಸುರಭಿಶ್ಚತುರ್ಭಿಃ**
**ಸಂತ್ಯೇವ ಪದ್ಮಾನಿ ⚘ದಶೈವಚಾಸ್ಯ ।**
**ವೃತಸ್ಸ ಭರ್ತಾ ಭಗವಾನ್ ಹಿ ಪೂರ್ವಂ**
**ತಂ ರಾಜಪುತ್ರಂ ಪರಮಂ ವಿಚಿಂತ್ಯ ॥ ೫೪ ॥**

೫೪. ×"ದ್ವಾಭ್ಯಾಂಚಶುಕ್ಲಃ" ಹಲ್ಲುಗಳು, ಮತ್ತು ಕಣ್ಣುಗಳೂ ಬಿಳುಪಾಗಿವೆ. "ಸುರಭಿಶ್ಚತುರ್ಭಿಃ" ಮುಖ, ನಿಶ್ವಾಸ, ಪಾರ್ಶ್ವ, ಬೆವರು ಅಥವಾ ವೀರ್ಯ, ಈ ನಾಲ್ಕೂ ಸುಗಂಧಿಗಳಾಗಿವೆ. (ಇದಕ್ಕೆ ಬೇರೆ ಬೇರೆ ಲಕ್ಷಣಗಳು ಸಾಮುದ್ರಿಕ ಶಾಸ್ತ್ರದಲ್ಲಿ ಹೇಳಲ್ಪಟ್ಟಿವೆ.) ⚘"ಪದ್ಮಾನಿದಶೈವ" ಪದ್ಮಾಕಾರಗಳೆಂದು ಹೇಳಲಾಗಿರುವ, ನಾಲಗೆ, ಮೇಲುತುಟಿ, ದವಡೆಯ ಒಳಭಾಗ, ಮುಖ, ಕಣ್ಣುಗಳು, ಸ್ತನಗಳು, ಉಗುರುಗಳು, ಕೈಗಳು, ಕಾಲುಗಳು, ಈ ಹತ್ತು ಅವಯವಗಳೂ ಹಾಗೆಯೇ ಇಲ್ಲಿ ಇವೆ. ಇಲ್ಲಿ ಕೆಲವು ಅವಯವಗಳಿಗೆ ಪದ್ಮದ ವರ್ಣದಿಂದ ಸಾಮ್ಯವೂ ಕೆಲವು ಅವಯವಗಳಿಗೆ ಆಕಾರದಿಂದ ಸಾಮ್ಯವೂ ವಿವಕ್ಷಿತವೆಂದು ತಿಳಿಯಬೇಕು. ಆ ರಾಜಪುತ್ರನೇ ಬಹಳ ಉತ್ಕೃಷ್ಟನೆಂದು ತಿಳಿದು ಆ ಭಾಗ್ಯಶಾಲಿಯನ್ನೇ ನಾನು ಪತಿಯೆಂದು ತಿಳಿದು ವರಿಸಿದ್ದೇನೆ.

---

**×ನೇತ್ರೇ ತಾರಾ ವಿರಹಿತೇ ದಶನಾ ಶ್ಚಲಿತಾಃ ಶುಭಾಃ ।**
**ಏತಚ್ಚ ಲಕ್ಷಣಂ ಕೃತ್ಸ್ನಂ ನರಾಣಾಂ ಸಮುದಾಹೃತಂ ॥**

ಎಂದು ಬೃಹತ್ಸಂಹಿತೆಯಲ್ಲಿ ಉದಾಹರಿಸಿರುವ ಗರ್ಗಸಂಹಿತೆಯ ಪ್ರಮಾಣ ವಚನವಿದೆ, ಕಣ್ಣುಗುಡ್ಡೆಯನ್ನು ಬಿಟ್ಟಿರುವ ಕಣ್ಣಿನ ಮಧ್ಯಭಾಗ ಮತ್ತು ವಿರಳವಾಗಿ ಶುಭ್ರವಾಗಿರುವ ಹಲ್ಲುಗಳು ಇವು ಬಿಳುಪಾಗಿದ್ದಲ್ಲಿ ಶುಭಕರವಾಗುತ್ತವೆ ಎಂದು ಇದರ ಅರ್ಥ.

**⚘ಜಿಹ್ವೋಷ್ಠತಾಲು ಚಾಸ್ಯಂ ಚ ಮುಖಂ ನೇತ್ರೇ ಸ್ತನೌ ನಖಾಃ ।**
**ಹಸ್ತೌ ಪಾದೌ ಚ ಶಸ್ಯಂತೇ ಪದ್ಮಾಭಾಃ ದಶ ದೇಹಿನಾಂ ॥**

ಎಂಬ ಬೃಹತ್ಸಂಹಿತೆಯಲ್ಲಿ ಉದಾಹರಿಸಿರುವ ಗರ್ಗಸಂಹಿತಾ ವಚನವು ಇದಕ್ಕೆ ಪ್ರಮಾಣ. ನಾಲಗೆ, ಮೇಲುತುಟಿ, ದವಡೆಯ ಒಳಭಾಗ, ಮುಖ, ಕಣ್ಣುಗಳು, ಸ್ತನಗಳು, ಉಗುರುಗಳು, ಕೈಗಳು, ಕಾಲುಗಳು ಈ ಹತ್ತು ಅವಯವಗಳು ಪದ್ಮದಂತೆ ರಮ್ಯಗಳಾಗಿದ್ದಲ್ಲಿ ಮನುಷ್ಯರಿಗೆ ಪ್ರಾಶಸ್ತ್ಯವನ್ನುಂಟುಮಾಡುತ್ತವೆ, ಎಂದು ಈ ವಚನದ ಅರ್ಥ.

ದದಸ್ವ ಮಾಂ ನಾಥ ತಪಸ್ವಿಮುಖ್ಯ
ಗುಣೋಪಪನ್ನಾಯ ಸಮೀಹಿತಾಯ ।
ಸ್ನೇಹಾತ್ಪ್ರಕಾಮಂ ಪ್ರವದಂತಿ ಸಂತೋ
ದಾತುಂ ತಥಾನ್ಯಸ್ಯ ವಿಭೋ ಕ್ಷಮಸ್ತ್ವಂ ॥ ೫೫ ॥

ದೇವ ದೇವ ಉವಾಚ

ಇತ್ಯೇವಮುಕ್ತಸ್ಸವಿತುಶ್ಚ ಪುತ್ರ್ಯಾ
ಋಷಿಸ್ತದಾ ಧ್ಯಾನಪರೋ ಬಭೂವ ।
ಜಾನೇ ತಮೇವರ್ಕ್ಷಸುತಂ ಸಕಾಮಂ
ಮುದಾ ಯುತೋ ವಾಕ್ಯಮಿದಂ ಜಗಾದ ॥ ೫೬ ॥

ಸ ಏವ ಪುತ್ರಿ ಕ್ಷಿತಿಪಾತ್ಮಜಸ್ತ್ವಯಾ
ದೃಷ್ಟಃ ಪುರಾ ಕಾಮಯಸೇ ಯಮದ್ಯ ।

---

೫೫. ಎಲೈ ಪ್ರಭುವೇ, ತಪೋನಿಧಿಯೇ, ಈ ಗುಣಗಳಿಂದ ಕೂಡಿರುವ ಅಭಿಮತನಾದ ಆ ರಾಜಪುತ್ರನಿಗೇ ನನ್ನನ್ನು ಕೊಡಬೇಕು. ಸತ್ಪುರುಷರು ಪ್ರೀತಿಯಿಂದ ಅನುರೂಪನಿಗೆ ಕೊಡೆಂದು ಸಾಮಾನ್ಯವಾಗಿ ಹೇಳುತ್ತಾರೆ. ಅನುರೂಪನೆಂದು ತಿಳಿದು ಮತ್ತೊಬ್ಬನಿಗೆ ನಿನ್ನ ಇಷ್ಟದಂತೆ ಕೊಡಕೂಡದು. ಯಾವ ರಾಜಪುತ್ರನನ್ನು ನಾನು ಮನಮೆಚ್ಚಿ ವರಿಸಿದ್ದೇನೆಯೋ ಅವನಿಗೇ ನನ್ನನ್ನು ಕೊಡಬೇಕು ಎಂದಳು.

೫೬-೫೭. ನಾರಾಯಣನು ಮುಂದಿನ ವೃತ್ತಾಂತವನ್ನು ಹೇಳುತ್ತಾನೆ. (ಈ ಸಂದರ್ಭದಲ್ಲಿ ಸೂರ್ಯನಿಂದ ಪುತ್ರಿಯಾದ ತಪತಿಯು ರಾಜಪುತ್ರನಿಗಾಗಿ ವಸಿಷ್ಠರಿಗೆ ಕೊಡಲ್ಪಟ್ಟಾಗ್ಯೂ ವಸಿಷ್ಠರ ಮನಸ್ಸಿನಲ್ಲಿ ವರನೆಂದು ಭಾವಿಸಿದ್ದ ರಾಜಪುತ್ರನು ಬೇರೆಯಾಗಿದ್ದು ತನಗೆ ಅಭಿಮತನಾಗಿರುವ ಸಂವರಣನು ಪತಿಯಾಗಿ ಲಭಿಸದೇಹೋದಲ್ಲಿ ತನ್ನ ಇಷ್ಟಾರ್ಥವು ಭಗ್ನವಾಗುತ್ತದೆ ಎಂಬ ಶಂಕೆಯಿಂದ ತಪತಿಯ ಪ್ರಾರ್ಥನೆಯು ಹಿಂದಿನ ಶ್ಲೋಕದಲ್ಲಿ ನಿಬದ್ಧವಾಗಿದೆ.) ಈ ಪ್ರಕಾರ ತಪತಿಯಿಂದ ಹೇಳಲ್ಪಟ್ಟ ವಸಿಷ್ಠಮುನಿಯೂ ಧ್ಯಾನಪರನಾಗಿ ಆದನು. (ಧ್ಯಾನದೃಷ್ಟಿಯಿಂದ ವಿಚಾರಮಾಡಿ ತಾನು ಉದ್ದೇಶಿಸಿರುವ ಸಂವರಣನೇ ತಪತಿಯ ಅನುರಾಗಕ್ಕೂ ಪಾತ್ರನೆಂಬುದನ್ನು ಸಾಕ್ಷಾತ್ಕರಿಸಿದನು ಎಂದು ತಾತ್ಪರ್ಯ.) ಕಾಮಾರ್ತನಾಗಿರುವ ಆ ಋಕ್ಷಸುತನೇ(ಸಂವರಣ) ತಪತಿಯಿಂದ ನೋಡಲ್ಪಟ್ಟು ಅನುರಾಗಕ್ಕೆ ಪಾತ್ರನಾಗಿದ್ದಾ

ಸ ನಿಷಚಾಯಾತಿ ಮಮಾಶ್ರಮಂ ವೈ
ಋಕ್ಷಾತ್ಮಜಸ್ಸಂವರಣೋಹಿ ನಾಮ್ನಾ ॥ ೫೭ ॥

ಅಥಾಜಗಾಮ್ಯೈವ ನೃಪಸ್ಯ ಪುತ್ರಃ
ತದಾಶ್ರಮಂ ಬ್ರಾಹ್ಮಣಪುಂಗವಸ್ಯ ।
ದೃಷ್ಟ್ವಾ ವಸಿಷ್ಠಂ ಪ್ರಣಿಪತ್ಯ ಮೂರ್ಧ್ನಾ
ಸ್ಥಿತಾಂ ತ್ವಪಶ್ಯತ್ತಪತೀಂ ನರೇಂದ್ರಃ ॥ ೫೮ ॥

ದೃಷ್ಟ್ವಾ ಚ ತಾಂ ಪದ್ಮವಿಶಾಲನೇತ್ರಾಂ
ಸಂದೃಷ್ಟಪೂರ್ವೇಯಮಿತಿ ವ್ಯಚಿಂತಯತ್ ।
ಪಪ್ರಚ್ಛ ಕೇಯಂ ಲಲನಾ ದ್ವಿಜೇಂದ್ರ
ಸ ವಾರುಣಿಃ ಪ್ರಾಹ ನರಾಧಿಪೇಂದ್ರಂ ॥ ೫೯ ॥

ಇಯಂ ವಿವಸ್ವದ್ದುಹಿತಾ ನರೇಂದ್ರ
ನಾಮ್ನಾ ಪ್ರಸಿದ್ಧಾ ತಪತೀ ಪೃಥಿವ್ಯಾಂ ।

---

ನೆಂದು ತಿಳಿದು ಸಂತೋಷದಿಂದ ತಪತಿಯನ್ನು ಕುರಿತು ಎಲೈ ಪುತ್ರಿಯೇ, ಯಾವ ರಾಜಪುತ್ರನನ್ನು ನೀನು ಮೊದಲು ನೋಡಿ ಅನುರಕ್ತಳಾಗಿ ಅಭಿಲಷಿಸುತ್ತಿದ್ದೀಯೋ ಆ ರಾಜಪುತ್ರನಿಗೇ ನಿನ್ನನ್ನು ಕೊಡುತ್ತೇನೆ. ಸಂವರಣನೆಂಬ ಅಭಿದಾನವುಳ್ಳ ಆ ಋಕ್ಷಕುಮಾರನು ಈ ನನ್ನ ಆಶ್ರಮಕ್ಕೇ ಬರುತ್ತಾನೆ. (ಅವನನ್ನು ನೀನು ಇಲ್ಲಿ ನೋಡಿಯೂ ಗುರುತಿಸಬಹುದೆಂದು ತಾತ್ಪರ್ಯ).

೫೭-೬೦. ಹೀಗೆ ಹೇಳಿ ಅವಳನ್ನು ವಸಿಷ್ಠರು ಸಂತೈಸಿದನಂತರ ಆ ರಾಜ ಕುಮಾರನು ಅವರ ಆಶ್ರಮಕ್ಕೆ ಬಂದನು. ಅವನು ವಸಿಷ್ಠರನ್ನು ನೋಡಿ ನಮಸ್ಕರಿಸಿ ಅಲ್ಲಿಯೇ ಇದ್ದ ತಪತಿಯನ್ನೂ ನೋಡಿದನು ಸುಂದರಿಯಾಗಿಯೂ, ವಿಶಾಲನೇತ್ರೆ ಯಾಗಿಯೂ ಇರುವ ಆ ತಪತಿಯನ್ನು ನೋಡಿ ಇವಳನ್ನು ಮೊದಲು ನಾನು ನೋಡಿ ದಂತಿದೆ. ಎಂದು ಭಾವಿಸಿ ಆಲೋಚಿಸಿದನು. ವಸಿಷ್ಠರನ್ನು ಕುರಿತು ಈ ಕನ್ಯಕೆಯು ಯಾರು ಎಂದು ಪ್ರಶ್ನೆಯನ್ನೂ ಮಾಡಿದನು. ಆಗ ವಸಿಷ್ಠರು ಎಲೈ, ನರೇಂದ್ರನೇ, ಇವಳು ತಪತಿ ಎಂದು ಪ್ರಪಂಚದಲ್ಲೆಲ್ಲಾ ಪ್ರಸಿದ್ಧಿ ಹೊಂದಿರುವ ಸೂರ್ಯನ ಪುತ್ರಿ, ನಾನು ನಿನಗೋಸ್ಕರ ಸೂರ್ಯನನ್ನು ಪ್ರಾರ್ಥಿಸಲಾಗಿ ಸೂರ್ಯನು ನಿನಗೆ ಮದುವೆ

ಮಯಾ ತವಾರ್ಥಾಯ ದಿವಾಕರೋರ್ಥಿತಃ
ಪ್ರಾದಾನ್ಮಯಾತ್ವಾಶ್ರಮನುಪಾಪಿತೇಯಂ ॥ ೬೦ ॥

ತಸ್ಮಾತ್ಸಮುತ್ತಿಷ್ಠ ನರೇಂದ್ರ ದೇವ್ಯಾಃ
ಪಾಣಿಂ ತಪತ್ಯಾ ವಿಧಿವದ್ಗೃಹಾಣ ।
ಇತ್ಯೇವಮುಕ್ತೋ ನೃಪತಿಃ ಪ್ರಹೃಷ್ಟೋ
ಜಗ್ರಾಹ ಪಾಣಿಂ ವಿಧಿವತ್ತಪತ್ಯಾಃ ॥ ೬೧ ॥

ಸಾ ತಂ ಪತಿಂ ಪ್ರಾಪ್ಯ ಮನೋಭಿರಾಮಂ
ಸೂರ್ಯಾತ್ಮಜಾ ಶಕ್ರಸಮಪ್ರಭಾವಂ ।
ರೇಮೇ ಚ ತೇನೈವ ಗೃಹೋತ್ತಮೇಷು
ಯಥಾ ಮಹೇಂದ್ರೇಣ ಪುಲೋಮಜಾ ದಿವಿ ॥ ೬೨ ॥

ಇತಿ ಶ್ರಿ ವಾಮನಪುರಾಣೇ ತಾಪತ್ಯೇ ಉಮಾಸಂಭವೋ
ನಾಮ್ಯೈಕವಿಂಶೋಽಧ್ಯಾಯಃ

---

ಮಾಡಿಕೊಡಲು ನನ್ನಲ್ಲಿ ಒಪ್ಪಿಸಿದನು. ನಾನೂ ನಿನಗೋಸ್ಕರವೇ ಆಶ್ರಮಕ್ಕೆ ಇವಳನ್ನು ಕರೆದುಕೊಂಡು ಬಂದಿರುವೆನು.

೬೧-೬೨. ಆದುದರಿಂದ ಎಲೈ, ನರೇಂದ್ರನೇ, ಏಳು ಈ ತಪತಿಯ ಪಾಣಿಗ್ರಹಣವನ್ನು ಯಥಾವಿಧಿಯಾಗಿ ನೆರವೇರಿಸು, ಎಂದು ವಸಿಷ್ಠರಿಂದ ಹೇಳಲ್ಪಟ್ಟ ಆ ಸಂವರಣನು ಸಂತುಷ್ಟನಾಗಿ ಅವರ ಅಪ್ಪಣೆಯಂತೆ ಯಥಾವಿಧಿಯಾಗಿ ತಪತಿಯನ್ನು ಪಾಣಿಗ್ರಹಣಪೂರ್ವಕವಾಗಿ ಸ್ವೀಕರಿಸಿದನು. ಆ ತಪತಿಯೂ ಕೂಡ ಇಂದ್ರನಂತೆ ಪ್ರಭಾವಶಾಲಿಯಾದ ತನಗೆ ಅಭಿಮತನಾದ ಪತಿಯನ್ನು ಹೊಂದಿ ರಮ್ಯವಾದ ರಾಜಗೃಹದಲ್ಲಿ ಶಚಿದೇವಿಯು ಇಂದ್ರನೊಡನೆ ವಿಹರಿಸುವಂತೆ ಸುಖದಿಂದ ವಿಹರಿಸಿದಳು.

ಇಲ್ಲಿಗೆ ಶ್ರೀ ವಾಮನಪುರಾಣದ ಉಮಾಸಂಭವದಲ್ಲಿ ತಪತೀ ವಿವಾಹವೆಂಬ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿದಿದೆ.

# ಅಧ್ಯಾಯಾರ್ಥ ಸಂಗ್ರಹ

ಈ ಅಧ್ಯಾಯದಲ್ಲಿ ಸತೀದೇವಿಯು ಪುನರುತ್ಪತ್ತಿಯಿಂದ ಹೇಗೆ ಪಾರ್ವತಿಯಾದಳು. ಅದಕ್ಕೆ ಕಾರಣವೇನು ಎಂಬ ನಾರದರ ಪ್ರಶ್ನೆಗೆ ಉತ್ತರವಾಗಿ ಶುಂಭ ನಿಶುಂಭರಿಂದ ಪರಾಜಿತರಾದ ದೇವತೆಗಳು ನಾರಾಯಣನಲ್ಲಿ ಹೋಗಿ ಪ್ರಾರ್ಥಿಸಿದರೆಂದೂ, ಅದಕ್ಕೆ ನಾರಾಯಣನು ಮಹಾತಿಥಿಯಲ್ಲಿ ಪೃಥೂದಕ ತೀರ್ಥದಲ್ಲಿ ಅಗ್ನಿಷ್ವಾತ್ತರೆಂಬ ಪಿತೃದೇವತೆಗಳನ್ನು ಪೂಜಿಸಿ ಅವರ ಮಾನಸಪುತ್ರಿಯಾದ ಮೇನಾದೇವಿಯನ್ನು ಹಿಮವಂತನಿಗೆ ಮದುವೆ ಮಾಡಿಕೊಡಲು ಪ್ರಾರ್ಥಿಸಿರಿ. ಅಂತಹ ಮೇನಾದೇವಿಯ ಗರ್ಭದಲ್ಲಿ ಹುಟ್ಟುವ ಪಾರ್ವತಿಯು ಶಂಕರನನ್ನು ಮದುವೆಯಾಗಿ ಅವನ ತೇಜೋಂಶದಿಂದ ಕುಮಾರನನ್ನು ಪ್ರಸುವಿಸುವಳೆಂದೂ ಆ ಕುಮಾರನು ಶುಂಭನೇ ಮೊದಲಾದ ದೈತ್ಯರನ್ನು ನಾಶಮಾಡುತ್ತಾನೆಂದೂ ನಾರಾಯಣನು ದೇವತೆಗಳಿಗೆ ಹೇಳಿದನೆಂದು ವಿವರಿಸಲಾಯಿತು. ಅನಂತರ ದೇವತೆಗಳು ಪೃಥೂದಕ ಕ್ಷೇತ್ರವನ್ನೂ ಮಹಾತಿಥಿಯನ್ನೂ ಹೇಳಬೇಕೆಂದು ಮಾಡಿದ ಉಪಪ್ರಶ್ನೆಗೆ ಉತ್ತರವಾಗಿ ಅದನ್ನು ವಿವರಿಸಲು ಉಪೋದ್ಘಾತರೂಪವಾಗಿ ನಾರಾಯಣನಿಂದ ಹೇಳಲ್ಪಟ್ಟ ಈ ತಪತೀ ಸಂವರಣರ ವಿವಾಹವನ್ನು ಈ ಅಧ್ಯಾಯದಲ್ಲಿ ಪ್ರಸ್ತಾವಿಸಲಾಗಿದೆ.

॥ ಶ್ರೀಃ ॥

# ಶ್ರೀ ವಾ ಮ ನ ಪು ರಾ ಣಂ

## ದ್ವಾವಿಂಶೋಽಧ್ಯಾಯಃ

### ದೇವ ದೇವ ಉವಾಚ

ತಸ್ಯಾಂ ತಪತ್ಯಾಂ ನರಸತ್ತಮೇನ
 ಜಾತಃ ಸುತಃ ಪಾರ್ಥಿವಲಕ್ಷಣಸ್ತು ।
ಸ ಜಾತಕರ್ಮಾದಿಭಿರೇವ ಸಂಸ್ಕೃತೋ
 ಹ್ಯವರ್ಧತಾಜ್ಯೇನ ಹುತೋ ಯಥಾಗ್ನಿಃ ॥ ೧ ॥

ಕೃತಂ ಚ ಚೂಡಾಕರಣಂ ತು ದೇವಾ
 ವಿಪ್ರೇಣ ಮಿತ್ರಾವರುಣಾತ್ಮಜೇನ ।
ನವಾಬ್ಧಿಕಸ್ಯ ವ್ರತಬಂಧನಂ ಚ
 ವೇದೇ ಚ ಶಾಸ್ತ್ರೇ ವಿಧಿಪಾರಗೋಽಭೂತ್ ॥ ೨ ॥

ತತಶ್ಚತುಷ್ಷಡ್ಭಿರಪೀಹ ವರ್ಷೈಃ
 ಸರ್ವಜ್ಞತಾ ಮಭ್ಯಗಮತ್ತದಾಸೌ ।
ಖ್ಯಾತಃ ಪೃಥಿವ್ಯಾಂ ಪುರುಷೋತ್ತಮೋಽಸೌ
 ನಾಮ್ನಾ ಕುರುಃ ಸಂವರಣಸ್ಯ ಪುತ್ರಃ ॥ ೩ ॥

---

### ಇಪ್ಪತ್ತೆರಡನೆಯ ಅಧ್ಯಾಯವು

೧-೩. ಆ ತಪತಿಯಲ್ಲಿ ಸಂವರಣ ರಾಜನಿಂದ ರಾಜಲಕ್ಷಣಗಳಿಂದ ಕೂಡಿದ ಒಬ್ಬ ಮಗನು ಜನಿಸಿದನು. ಅವನು ಜಾತಕರ್ಮಾದಿಗಳಿಂದ ಸಂಸ್ಕೃತನಾಗಿ ಆಜ್ಯಾಹುತಿಯಿಂದ ಅಗ್ನಿಯೋಪಾದಿಯಲ್ಲಿ ಅಭಿವೃದ್ಧಿಹೊಂದಿದನು. ಅವನಿಗೆ ವಸಿಷ್ಠರಿಂದ ಯಥಾವಿಧಿಯಾಗಿ ಚೂಡಾಕರ್ಮವೂ ಅನಂತರ ನವವರ್ಷದ ವ್ರತಬಂಧನವೂ ಮಾಡಲ್ಪಟ್ಟಿತು. ಹೀಗೆಯೇಅವನು ವೇದಶಾಸ್ತ್ರಗಳಲ್ಲಿ ಪಾರಂಗತನಾಗಿ ಹತ್ತುವರ್ಷದ ಕಾಲದಲ್ಲಿಯೇ ಸರ್ವಜ್ಞನಾದನು. ಈ ಸಂವರಣನ ಪುತ್ರನೇ ಪ್ರಪಂಚದಲ್ಲೆಲ್ಲಾ ಪ್ರಖ್ಯಾತನಾಗಿ ಕುರು ಎಂಬ ಹೆಸರಿನಿಂದ ಪುರುಷಶ್ರೇಷ್ಠನಾದನು.

ತತೋ ನರಪತಿ ರ್ದೃಷ್ಟ್ವಾ ಪುತ್ರಂ ತಂ ಷೋಡಶಾಬ್ದಿಕಂ ।
ದಾರಕ್ರಿಯಾರ್ಥಮಕರೋದ್ಯತ್ನಂ ಶುಭಕುಲೇ ತತಃ ॥ ೪ ॥

ಸೌದಾಮ್ನೀಂ ಚ ಸುದಾಮ್ನಸ್ತು ಸುತಾಂ ರೂಪಾಧಿಕಾಂ ನೃಪಃ ।
ಕುರೋರರ್ಥಾಯ ವೃತವಾನ್ಸಪ್ರಾದಾತ್ಕುರವೇಽಪಿ ತಾಂ ॥ ೫ ॥

ಸ ತಾಂ ನೃಪಸುತಾಂ ಲಬ್ಧ್ವಾ ಸ್ವಧರ್ಮಾನವಿರೋಧಯನ್ ।
ರೇಮೇ ತನ್ವ್ಯಾ ಸಹ ತಯಾ ಪೌಲೋಮ್ಯಾ ಮಘವಾನಿವ ॥ ೬ ॥

ತತೋ ನರಪತಿಃ ಪುತ್ರಂ ರಾಜ್ಯಭಾರಕ್ಷಮಂ ಬಲೀ ।
ವಿದಿತ್ವಾ ಯೌವರಾಜ್ಯಾಯ ವಿಧಾನೇನಾಭ್ಯಷೇಚಯತ್ ॥ ೭ ॥

ತತೋ ರಾಜ್ಯೇಽಭಿಷಿಕ್ತಸ್ತು ಕುರುಃ ಪಿತ್ರಾ ನಿಜೇ ಪದೇ ।
ಸ ಪಾಲಯಾಮಾಸ ಮಹೀಂ ಪುತ್ರವಚ್ಚ ಪ್ರಜಾಃ ಸ್ವಯಂ ॥ ೮ ॥

ಸ ಏವ ಕ್ಷೇತ್ರಪಾಲೋಽಭೂತ್ಪಶುಪಾಲಸ್ಸ ಏವ ಹಿ ।
ಸ ಏವ ರಾಜಪಾಲಶ್ಚ ಅಜಾಪಾಲೋ ಮಹಾಬಲಃ ॥ ೯ ॥

---

೪-೬. ಅನಂತರ ದೊರೆಯು ಪುತ್ರನಿಗೆ ಹದಿನಾರು ವರ್ಷವಾದುದನ್ನು ನೋಡಿ ಅವನ ವಿವಾಹಕ್ಕಾಗಿ ಶುಭಕುಲದಲ್ಲಿ ಕನ್ಯೆಯನ್ನು ತರಲು ಪ್ರಯತ್ನಿಸಿದನು. ಸುದಾಮನ ಪುತ್ರಿಯಾದ ಸೌದಾಮ್ನಿ ಎಂಬ ರೂಪವತಿಯಾದ ಕನ್ಯಕೆಯನ್ನು ಆರಿಸಿ ಅವಳನ್ನು ಮಗನಿಗಾಗಿ ಅಪೇಕ್ಷಿಸಲು ಸುದಾಮನೂ ಒಪ್ಪಿ ಕನ್ಯಾಪ್ರದಾನಮಾಡಿದನು. ಆ ರಾಜಪುತ್ರಿಯನ್ನು ಹೊಂದಿ ಕುರುವು ಗಾರ್ಹಸ್ಥ್ಯದ ಮರ್ಯಾದೆಗೆ ತಕ್ಕಂತೆ ಯಾವ ಧರ್ಮಕ್ಕೂ ಚ್ಯುತಿ ಇಲ್ಲದೆ ಇಂದ್ರನು ಶಚೀದೇವಿಯೊಡನೆ ವಿಹರಿಸುವಂತೆ ಸುಖಿಸಿದನು.

೭-೯. ಅನಂತರ ದೊರೆಯು ಪುತ್ರನು ರಾಜ್ಯಭಾರಕ್ಕೆ ಅರ್ಹನಾಗಿರುವದನ್ನು ತಿಳಿದು ಅವನನ್ನು ಯಥಾವಿಧಿಯಾಗಿ ಯೌವರಾಜ್ಯದಲ್ಲಿ ಅಭಿಷೇಕಮಾಡಿದನು. ತಂದೆಯಿಂದ ಸ್ವಸ್ಥಾನದಲ್ಲಿ ಅಭಿಷಿಕ್ತನಾದ ಕುರುವು ಪುತ್ರರಂತೆ ಸ್ವತಃ ಪ್ರಜೆಗಳನ್ನು ಪಾಲಿಸುತ್ತಲೂ ಕ್ಷೇತ್ರಪಾಲಕನೂ, ಪಶುಪಾಲಕನೂ, ರಾಜಪಾಲಕನೂ, ಅಜಾ (ಆಡು) ಪಾಲಕನೂ ತಾನೇ ಆಗಿ ಮಹಾಪರಾಕ್ರಮದಿಂದ ಪ್ರಪಂಚವನ್ನೇ ಆಳಿದನು.

**ತತೋಽಸ್ಯ ಬುದ್ಧಿರುತ್ಪನ್ನಾಹ್ಯಸ್ಮಿನ್ ಲೋಕೇ ಗರೀಯಸೀ ।**
**ಯಾವತ್ಕೀರ್ತಿ ಸ್ಸುಸಂಸ್ಥಾಹಿ ತಾವದ್ವಾಸಸ್ತಯಾ ಸಹ ॥ ೧೦ ॥**

**ಅಸ್ತ್ವೇವಂ ನೃಪತಿಶ್ರೇಷ್ಠೋ ಯಥಾತಥ್ಯಮುಮನ್ಯತ ।**
**ವಿಚಚಾರ ಮಹೀಂ ಸರ್ವಾಂ ಕೀರ್ತ್ಯರ್ಥಂ ತು ನರಾಧಿಪಃ ॥ ೧೧ ॥**

**ತತೋ ದ್ವೈತವನಂ ನಾಮ ಪುಣ್ಯಂ ಲೋಕಚರೋ ವಶೀ ।**
**ತದಾಸಾವತಿಸಂತುಷ್ಟೋ ವಿವೇಶಾಭ್ಯಂತರಂ ತತಃ ॥ ೧೨ ॥**

**ತತ್ರ ದೇವೀಂ ದದರ್ಶಾಥ ಪುಣ್ಯಾಂ ಪಾಪವಿಮೋಚನೀಂ ।**
**ಪ್ಲಕ್ಷಜಾಂ ಬ್ರಹ್ಮಣಃ ಪುತ್ರೀಂ ಹರಿಜಿಹ್ವಾಂ ಸರಸ್ವತೀಂ ॥ ೧೩ ॥**

**ಸುದರ್ಶನಸ್ಯ ಜನನೀಂ ಹ್ರದಂ ಕೃತ್ವಾ ಸುವಿಸ್ತೃತಂ ।**
**ತಸ್ಯಾಸ್ತಜ್ಜಲಮಾಸಾದ್ಯ ಸ್ನಾತ್ವಾ ಪ್ರೀತೋಽಭವನ್ನೃಪಃ ॥ ೧೪ ॥**

**ಸಮಾಜಗಾಮ ಚ ಪುನಃ ಬ್ರಹ್ಮಣೋ ವೇದಿಮುತ್ತರಾಂ ।**
**ಸಮನ್ತಪಂಚಕಂ ನಾಮ ಧರ್ಮಸ್ಥಾನ ಮನುತ್ತಮಂ ॥ ೧೫ ॥**

---

೧೦-೧೨. ಅನಂತರ ಆ ದೊರೆಗೆ ಈ ರೀತಿ ಮನಸ್ಸುಂಟಾಯಿತು. ಈ ಲೋಕದಲ್ಲಿ ಹುಟ್ಟಿದ ಮನುಷ್ಯನು ಶಾಶ್ವತವಾದ ದೊಡ್ಡ ಕೀರ್ತಿಯನ್ನು ಎಲ್ಲಿಯವರಿಗೆ ಗಳಿಸುವನೋ ಅಲ್ಲಿಯವರಿಗೆ ಆ ಕೀರ್ತಿಯೊಡನೆ ವಾಸಮಾಡಬೇಕು. ಇದೇ ಮನುಷ್ಯ ಜನ್ಮವನ್ನು ಹೊಂದಿದವನಿಗೆ ಯಥಾರ್ಥವಾದ ಫಲವೆಂದೂ ತಿಳಿದನು. ಅಂತಹ ಕೀರ್ತಿಯನ್ನು ಸಂಪಾದಿಸಲು ದೊರೆಯು ಮಹೀಮಂಡಲವೆಲ್ಲವನ್ನೂ ಸಂಚರಿಸಲಾರಂಭಿಸಿದನು. ಹೀಗೆ ಲೋಕಸಂಚಾರಿಯಾದ ಜಿತೇಂದ್ರಿಯನಾದ ಆ ದೊರೆಯು ದ್ವೈತವನವೆಂಬ ಪುಣ್ಯಕರವಾದ ಸ್ಥಲವನ್ನು ಹೊಂದಿ ಸಂತೋಷದಿಂದ ಅದಕ್ಕೆ ಪ್ರವೇಶಿಸಿದನು.

೧೩, ೧೫. ಅಲ್ಲಿ ಪುಣ್ಯಕರವಾಗಿಯೂ ಪಾಪನಾಶಕವಾಗಿಯೂ ಇರುವ ಬ್ರಹ್ಮಪುತ್ರಿಯಾದ ಪ್ಲಕ್ಷಜಾನದಿಯನ್ನೂ ಹರಿಜಿಹ್ವಾನದಿಯನ್ನೂ ಸುದರ್ಶನಕ್ಕೆ ಉತ್ಪಾದಕವಾದ ಸರಸ್ವತೀನದಿಯನ್ನೂ ನೋಡಿದನು. ಆಗ ದೊರೆಯು ವಿಸ್ತಾರವಾದ ದೊಡ್ಡದೊಂದು ಹಳ್ಳವನ್ನು (ಸರೋವರ) ಮಾಡಿ ಆ ನೀರನ್ನು ಸರೋವರದಲ್ಲಿ ತುಂಬಿ ಅಲ್ಲಿ ಸ್ನಾನಮಾಡಿ ಸಂತುಷ್ಟನಾದನು. ಅನಂತರ ಸಮಂತಪಂಚಕವೆಂಬ ಬ್ರಹ್ಮನ ಉತ್ತರವೇದಿಗೆ ಬಂದನು. ಅದೊಂದು ಉತ್ತಮವಾದ ಧರ್ಮಕ್ಷೇತ್ರ.

**ಆಸಮಂತಾತ್ ಯೋಜನಾನಿ ಪಂಚ ಪಂಚಚ ಸರ್ವತಃ ।**

**ದೇವಾ ಊಚುಃ**

**ಕಿಮನ್ಯಾ ವೇದಯೋ ದೇವ ಬ್ರಹ್ಮಣಃ ಪುರುಷೋತ್ತಮ ॥ ೧೬ ॥**

**ಯೇನೋತ್ತರತಯಾ ವೇದೀ ಗದಿತಾ ಸರ್ವಪಂಚಕೇ ।**

**ಹರಿರುವಾಚ**

**ವೇದಯೋ ಲೋಕನಾಥಸ್ಯ ಪಂಚ ಧರ್ಮಸ್ಯ ಸರ್ವತಃ ॥ ೧೭ ॥**

**ಯಾಸು ಚೇಷ್ಟಂ ಸುರೇಶೇನ ಲೋಕನಾಥೇನ ಶಂಭುನಾ ।**
**ಪ್ರಯಾಗೋ ಮಧ್ಯಮಾ ವೇದಿಃ ಪೂರ್ವಾ ವೇದಿ ರ್ಗಯಾಶಿರಃ ॥ ೧೮ ॥**

**ವಿರಜಾ ದಕ್ಷಿಣಾ ವೇದಿಃ ಅನಂತಫಲದಾಯಿನೀ ।**
**ಪ್ರತೀಚೀ ಪುಷ್ಕರಾ ವೇದಿ ಸ್ತ್ರಿಭಿಃ ಕುಂಡೈರಲಂಕೃತಾ ॥ ೧೯ ॥**

**ಸ್ಯಮಂತಪಂಚಕೇ ಚೋಕ್ತಾ ವೇದಿರೇವೋತ್ತರಾ ತಥಾ ।**
**ತದಮನ್ಯತ ರಾಜರ್ಷಿರಿದಂ ಕ್ಷೇತ್ರಂ ಮಹಾಫಲಂ ॥ ೨೦ ॥**

---

೧೬-೧೯. ಆ ಸಮಂತಪಂಚಕವು ಐದೈದು ಯೋಜನದ ಅಗಲ ಉದ್ದ ವಿಸ್ತಾರವುಳ್ಳದ್ದು (ಇಪ್ಪತ್ತೈದು ಚದರ ಹರಿದಾರಿ) ದೇವತೆಗಳು ಕೇಳುತ್ತಾರೆ ಎಲೈ, ಪುರುಷೋತ್ತಮನೇ ಈ ಸಮಂತಪಂಚಕವು ಉತ್ತರವೇದಿಯೆಂದು ಹೇಳಲಾಯಿತು. ಬೇರೆ ಚತುರ್ಮುಖನ ವೇದಿಗಳಾವುವು. ಇದಕ್ಕೆ ಹರಿಯು ಲೋಕರಕ್ಷಕನಾದ ಚತುರ್ಮುಖನಿಗೆ ಧರ್ಮಸ್ಥಾನಗಳಾದ ಐದು ವೇದಿಗಳಿರುವುವು. ಅವುಗಳಲ್ಲಿ ಲೋಕ ರಕ್ಷಕನಾದ ಶಂಭುವು ಯಾವ ವೇದಿಯಲ್ಲಿ ಯಜ್ಞಮಾಡಿದನೋ ಆ ಪ್ರಯಾಗವೇ ಮಧ್ಯಮವೇದಿ, ಗಯಾಶಿರಸ್ಸೇ ಪೂರ್ವವೇದಿ, ವಿರಜಾನದಿಯೇ ಅನಂತಫಲಪ್ರದವಾದ ದಕ್ಷಿಣವೇದಿ, ಮೂರು ಕುಂಡಗಳಿಂದ ಅಲಂಕರಿಸಲ್ಪಟ್ಟಿರುವ ಪುಷ್ಕರಕ್ಷೇತ್ರವೇ ಪಶ್ಚಿಮ ವೇದಿ, ಮೇಲೆ ಹೇಳಿದ ಸ್ಯಮಂತಪಂಚಕವೇ ಉತ್ತರವೇದಿ, ಎಂದು ವಿವರಿಸಿದನು.

೨೦-೨೩. ಆಗ ಆ ಧೊರೆಯು ಈ ಕ್ಷೇತ್ರವನ್ನೇ ಮಹಾಫಲಪ್ರದವಾದ ಕ್ಷೇತ್ರವನ್ನಾಗಿ ಮಾಡುವೆನು. ಎಲ್ಲಾ ಪುರುಷಾರ್ಥಗಳನ್ನೂ ಯಥೇಷ್ಟವಾಗಿ ಇಲ್ಲಿ ಕರ್ಷಣಮಾಡುವೆನು. (ಉಳುವುದರಿಂದ ಉತ್ಪಾದನೆ ಮಾಡುವೆನು) ಹೀಗೆ ಮನಸ್ಸಿ

**ಕರಿಷ್ಯಾಮಿ ಕೃಷಿಷ್ಯಾಮಿ ಸರ್ವಾನ್ಕಾಮಾನ್ಯಥೇಪ್ಸಿತಂ ।**
**ಇತಿ ಸಂಚಿಂತ್ಯ ಮನಸಾ ತ್ಯಕ್ತ್ವಾ ಸ್ಯಂದನಮುತ್ತಮಂ ॥ ೨೦ ॥**

**ಚಕ್ರೇ ಕೀರ್ತ್ಯರ್ಥಮತುಲಂ ಸ್ಥಾನಂ ತತ್ಪಾರ್ಥಿವರ್ಷಭಃ ।**
**ಕೃತ್ವಾ ಸೀರಂ ಸಸೌವರ್ಣಂ ಗೃಹ್ಯ ರುದ್ರವೃಷಂ ಪ್ರಭುಃ ॥ ೨೨ ॥**

**ಪೌಂಡ್ರಕಂ ಯಾಮ್ಯಮಹಿಷಂ ಸ್ವಯಂ ಕರ್ಷಿತುಮುದ್ಯತಃ ।**
**ತಂ ಕರ್ಷಂತಂ ನರವರಂ ಸಮಭ್ಯೇತ್ಯ ಶತಕ್ರತುಃ ॥ ೨೩ ॥**

**ಪ್ರೋವಾಚ ರಾಜರ್ಷೇ ಕಿಮಿದಂ ಭವಾನ್ ಕರ್ತುಮಿಹೋದ್ಯತಃ ।**
**ರಾಜಾಬ್ರವೀತ್ಸುರವರಂ ತಪಃ ಸತ್ಯಂ ಕ್ಷಮಾಂ ದಯಾಂ ॥ ೨೪ ॥**

**ಕೃಷಾಮಿ ಶೌಚದಾನೇ ಚ ಯೋಗಂ ಚ ಬ್ರಹ್ಮಚಾರಿತಾಂ ।**
**ತಂ ಚೋವಾಚ ಹರಿರ್ದೇವಃ ಕಸ್ಮಾದ್ಬೀಜಂ ನರೇಶ್ವರ ॥ ೨೫ ॥**

---

ನಲ್ಲಿ ಆಲೋಚಿಸಿ ತನ್ನ ರಾಜಾರ್ಹವಾದ ದಿವ್ಯರಥವನ್ನು ತ್ಯಜಿಸಿ ಕೀರ್ತಿಗಾಗಿ ಅಲ್ಲೇ ನೆಲಸಿದನು. ಅಲ್ಲಿ ಆ ಧೊರೆಯು ಚಿನ್ನದ ನೇಗಲನ್ನು ಮಾಡಿಕೊಂಡು ರುದ್ರನ ವೃಷಭವನ್ನೂ ಯಮನ ಮಹಿಷವನ್ನೂ ನೊಗವನ್ನು ವಹಿಸಲು ಏರ್ಪಡಿಸಿ ತಾನೇ ಉಳಲು ಪ್ರಾರಂಭಿಸಿದನು. ಹಾಗೆ ಉಳುತ್ತಿರುವ ಧೊರೆಯನ್ನು ಇಂದ್ರನು ಸಮೀಪಕ್ಕೆ ಬಂದು ಕೇಳುತ್ತಾನೆ. ಎಲೈ, ರಾಜನೇ ನೀನು ಇಲ್ಲಿ ಏನನ್ನು ಮಾಡಲು ಪ್ರಯತ್ನಿಸಿರುವೆ.

೨೪-೨೭. ರಾಜನಾದ ಕುರುವು ಇಂದ್ರನನ್ನು ಕುರಿತು ತಪಸ್ಸು, ಸತ್ಯ, ಕ್ಷಮಾ, ದಯೆ, ಮತ್ತು ಶೌಚವನ್ನುಂಟುಮಾಡುವ ಉಪಾಯ, ಬ್ರಹ್ಮಚರ್ಯ ಇವುಗಳನ್ನು ಇಲ್ಲಿ ಉಳುವುದರಿಂದ ಉಂಟುಮಾಡುತ್ತೇನೆ ಎಂದನು. (ತನ್ನ ಪ್ರಯತ್ನದಿಂದ ಇದು ಮಹಾಕ್ಷೇತ್ರವಾದಲ್ಲಿ ಇದನ್ನು ಸೇವಿಸಿದವರಿಗೆ ಈ ಫಲಗಳೆಲ್ಲಾ ಸುಖವಾಗಿ ಲಭಿಸುತ್ತವೆ ಎಂದು ತಾತ್ಪರ್ಯ.) ಆ ಧೊರೆಯನ್ನು ಕುರಿತು ಇಂದ್ರನು ಹಾಸ್ಯಾನ್ವಿತನಾಗಿ ಎಲೈ, ಧೊರೆಯೇ ಈ ಕರ್ಷಣದಿಂದ ಫಲವನ್ನು ಹೊಂದಲು ತಕ್ಕ ಬೀಜವು ನಿನಗೆ ಯಾರಿಂದ ಲಭಿಸಿದೆ. ಎಂದು ಹೇಳಿ ಹೊರಟುಹೋದನು (ಉತ್ತು ಫಲವನ್ನು

ಲಬ್ಧಂ ತ್ವಯೇತಿ ಸಹಸಾ ಹ್ಯವಹಸ್ಯ ಗತಸ್ತತಃ ।
ಗತೇಽಪಿ ಶಕ್ರೇ ನೃಪತಿರಹನ್ಯಹನಿ ಸೀರಧೃಕ್ ॥ ೨೬ ॥

ಕೃಷತೇ ನ್ಯತ್ಸಮಂತಾಚ್ಚ ಸಪ್ತಕ್ರೋಶಾನ್ಮಹೀಪತಿಃ ।
ತತೋಽಹಮಬ್ರವಂ ಗತ್ವಾ ಕುರೋ ಕಿಮಿದ ಮಿತ್ಯಥ ॥ ೨೭ ॥

ತದಾಷ್ಟಾಂಗಂ ಮಹಾಧರ್ಮಂ ಸಮಾಖ್ಯಾತಂ ನೃಪೇಣ ಹಿ ।
ತತೋ ಮಂಯಾಸ್ಯಗದಿತಂ ನೃಪಬೀಜಂ ಕ್ವ ತಿಷ್ಠತಿ ॥ ೨೮ ॥

ಸಚಾಹ ಮಮ ದೇಹಸ್ಥಂ ಬೀಜಂ ತಮಹಮಬ್ರವಂ ।
ದೇಹ್ಯಹಂ ವಾಪಯಿಷ್ಯಾಮಿ ಸೀರಂ ಕೃಷತು ವೈಭವಾನ್ ॥ ೨೯ ॥

ತತೋ ನೃಪತಿನಾ ಬಾಹು ರ್ದಕ್ಷಿಣಃ ಪ್ರಸೃತಃ ಕೃತಃ ।
ಪ್ರಸೃತಂ ತಂ ಭುಜಂ ದೃಷ್ಟ್ವಾ ಮಹಾಚಕ್ರೇಣ ವೇಗತಃ ॥ ೩೦ ॥

---

ಹೊಂದಬೇಕಾದರೆ ಬೀಜವನ್ನು ಉಪಯೋಗಿಸಬೇಕು ಅದಿಲ್ಲದಿದ್ದರೆ ಕೇವಲ ಕರ್ಷಣದಿಂದ ಫಲವಿಲ್ಲವೆಂದು ಇಂದ್ರನ ಹಾಸ್ಯವಚನಕ್ಕೆ ತಾತ್ಪರ್ಯ.) ಇಂದ್ರನು ಹೀಗೆ ಹಾಸ್ಯಮಾಡಿ ಹೊರಟುಹೋದ ಮೇಲೂ ಕೂಡ ಧೊರೆಯು ತನ್ನ ಪ್ರಯತ್ನವನ್ನು ಬಿಡದೆ ಪ್ರತಿನಿತ್ಯವೂ ಸುತ್ತಲೂ ಇರುವ ಏಳು ಹರಿದಾರಿಯ ಪ್ರದೇಶವನ್ನು ಉಳುತ್ತಲೇ ಇದ್ದನು. ಅನಂತರ ನಾನು (ನಾರಾಯಣನು) ಅಲ್ಲಿಗೆ ಹೋಗಿ ಕುರುವೇ ಇದೇನು ನಿನ್ನ ಈ ಪ್ರಯತ್ನವೆಂದು ಪ್ರಶ್ನೆಮಾಡಿದೆನು.

೨೮-೩೨. ಆಗ ಧೊರೆಯು ಅಷ್ಟಾಂಗಯುಕ್ತವಾದ ಮಹಾಧರ್ಮವನ್ನು ಹೇಳಿದನು. ಆಗ ನಾನು ಅಂತಹ ಧರ್ಮವನ್ನು ನೀನು ಇಲ್ಲಿ ಉಂಟುಮಾಡಲು ಬೀಜವನ್ನು ಎಲ್ಲಿಂದ ತರುವೆ. ಎಂದು ಪ್ರಶ್ನೆಮಾಡಲಾಗಿ ಆ ಧೊರೆಯು ನನ್ನ ದೇಹದಲ್ಲಿರುವ ಧರ್ಮ್ಯ ವಸ್ತುಗಳೇ ಬೀಜಗಳೆಂದನು. ಆಗ ನಾನು ಆ ಬೀಜಗಳನ್ನು ನನಗೆ ಕೊಡು, ನಾನು ಬಿತ್ತುತ್ತೇನೆ. ನೀನು ನೇಗಿಲನ್ನು ಹಿಡಿದುಕೊಂಡು ಉಳು ಎಂದು ಹೇಳಲು, ಆ ಧೊರೆಯು ತನ್ನ ಬಲದ ಭುಜವನ್ನು ನೀಡಿದನು. ಆಗ ನಾನು ಧೊರೆಯಿಂದ ನೀಡಲ್ಪಟ್ಟ ಆ ಭುಜವನ್ನು ವೇಗಶಾಲಿಯಾದ ಚಕ್ರದಿಂದ ಸಹಸ್ರ ಖಂಡಗಳಾಗುವಂತೆ ಛೇದಿಸಿದನು. ನಂತರ ಧೊರೆಯು ಏಕಮಾತ್ರಭುಜದಿಂದ ನಿಂತನು. ಆಗ ಎಡಭುಜವೂ ರಾಜನಿಂದ ನೀಡಲ್ಪಟ್ಟು ಅದೂ ನನ್ನಿಂದ ಹಾಗೆಯೇ

**ಸಹಸ್ರಧಾ ಪ್ರಚಿಚ್ಛೇದ ಯಸ್ಮಾದೇಕಭುಜೋಽಭವತ್ ।**
**ತತಸ್ಸವ್ಯೋ ಭುಜೋ ರಾಜ್ಞಾ ದತ್ತಶ್ಛಿನ್ನೋಽಪ್ಯಸೌ ಮಯಾ ॥ ೩೧ ॥**

**ತಥೈವೋರುಯುಗಂ ಪ್ರಾದಾತ್ ಮಯಾಚ್ಛಿನ್ನೌ ಚ ತಾವುಭೌ ।**
**ತತಸ್ಸ ಮೇ ಶಿರಃ ಪ್ರಾದಾತ್ತೇನ ಪ್ರೀತೋಽಸ್ಮಿ ತಸ್ಯ ಚ ॥ ೩೨ ॥**

**ವರದೋಸ್ಮೀತ್ಯಥೇತ್ಯುಕ್ತೇ ಕುರುರ್ವರಮಯಾಚತ ।**

**ಕುರುರುವಾಚ**

**ಯಾವದೇತನ್ಮಯಾ ಕೃಷ್ಟಂ ಧರ್ಮಕ್ಷೇತ್ರಂ ತದಸ್ತು ವಃ ॥ ೩೩ ॥**

**ಸ್ನಾತಾನಾಂ ಚ ಮೃತಾನಾಂ ಚ ಮಹಾಪುಣ್ಯಫಲಂ ತ್ವಿಹ ।**
**ಉಪವಾಸಶ್ಚ ದಾನಂ ಚ ಸ್ನಾನಂ ಜಪ್ಯಂ ಚ ಮಾಧವ ॥ ೩೪ ॥**

**ಹೋಮಯಜ್ಞಾದಿಕಂ ಚಾನ್ಯಚ್ಛುಭಂ ವಾಪ್ಯಶುಭಂ ವಿಭೋ ।**
**ತ್ವತ್ಪ್ರಸಾದಾದ್ಧೃಷೀಕೇಶ ಶಂಖಚಕ್ರಗದಾಧರ ॥ ೩೫ ॥**

**ಅಕ್ಷಯಂ ಪ್ರವರೇ ಕ್ಷೇತ್ರೇ ಭವತ್ವತ್ರ ಮಹಾಫಲಂ ।**
**ತಥಾ ಭವಾನ್ ಸುರೈಸ್ಸಾರ್ಧಂ ಸಮಂ ದೇವೇನ ಶೂಲಿನಾ ॥ ೩೬ ॥**

---

ಕತ್ತರಿಸಲ್ಪಟ್ಟಿತು. ಅನಂತರ ತನ್ನ ತೊಡೆಗಳನ್ನೂ ಕೊಟ್ಟನು. ಆ ತೊಡೆಗಳೆರಡೂ ನನ್ನಿಂದ ಮೊದಲಿನಂತೆಯೇ ಕತ್ತರಿಸಲ್ಪಟ್ಟವು. ಅನಂತರ ಆ ಧೊರೆಯು ನನಗೆ ಶಿರಸ್ಸನ್ನೂ ಒಪ್ಪಿಸಿದನು. ಆಗ ನಾನು ಸಂತುಷ್ಟನಾಗಿ ವರಪ್ರದನಾಗಿರುತ್ತೇನೆ. ನಿನಗೆ ಯಾವ ವರವು ಬೇಕೋ ಕೇಳಿಕೋ ಎಂದೆನು. ಆಗ ಕುರುವು ಈ ವರವನ್ನು ಬೇಡಿದನು.

೩೩-೩೬. ಎಲೈ, ಪ್ರಭುವೇ, ನಾನು ಈಗ ಎಷ್ಟು ಭೂಮಿಯನ್ನು ಉತ್ತಿರುವೆನೋ ಈ ಭೂಮಿಯೆಲ್ಲವೂ ನಿನ್ನ ಅನುಗ್ರಹದಿಂದ ಧರ್ಮಕ್ಷೇತ್ರವಾಗಲಿ, ಇಲ್ಲಿ ಸ್ನಾನಮಾಡಿದವರಿಗೂ, ಮೃತರಾದವರಿಗೂ, ಮಹಾಪುಣ್ಯಫಲವು ಲಭಿಸಲಿ. ಮತ್ತು ಇಲ್ಲಿ ನಡೆಸಲ್ಪಟ್ಟ ಉಪವಾಸ, ಸ್ನಾನ, ದಾನ, ಜಪ, ಹೋಮ, ಯಜ್ಞ, ಇತರ ಶುಭಾಶುಭ ಕರ್ಮಗಳೆಲ್ಲವೂ ಶಂಖಚಕ್ರಗದಾಪಾಣಿಯಾದ ನಿನ್ನ ಅನುಗ್ರಹದಿಂದ ಅಕ್ಷಯವಾದ ಫಲದಾಯಕಗಳಾಗಲಿ, ಮತ್ತು ನನ್ನ ಹೆಸರಿಗೆ ಜ್ಞಾಪಕವಾಗಿರುವ ಈ ಮಹಾಕ್ಷೇತ್ರದಲ್ಲಿ ಶಂಕರನಿಂದಲೂ ಇತರ ದೇವತೆಗಳಿಂದಲೂ ಕೂಡಿ ನೀನು ಇಲ್ಲಿ

ವಸಾತ್ರ ಪುಂಡರೀಕಾಕ್ಷ ಮನ್ನಾಮನ್ಯಂಜಕೇಽಚ್ಯುತ ।
ಇತ್ಯೇವಮುಕ್ತಸ್ತೇನಾಹಂ ರಾಜ್ಞಾ ಬಾಢಮುವಾಚತಂ ॥ ೩೭ ॥

ತಥಾ ಚ ತ್ವಂ ದಿವ್ಯವಪುರ್ಭವ ಭೂಯೋ ಮಹೀಪತೇ ।
ತಥಾಂತಕಾಲೇ ಮಯ್ಯೇವ ಲಯಮೇಷ್ಯಸಿ ಸುವ್ರತ ॥ ೩೮ ॥

ಶಾಶ್ವತೀ ತವ ಕೀರ್ತಿಶ್ಚ ಭವಿಷ್ಯತಿ ನ ಸಂಶಯಃ ।
ತತ್ರ ನೈ ಯಾಜಕೋ ಯಜ್ಞಾನ್ಯಜಿಷ್ಯತಿ ಸಹಸ್ರಶಃ ॥ ೩೯ ॥

ಪುಲಸ್ತ್ಯ ಉವಾಚ

ತಸ್ಯ ಕ್ಷೇತ್ರಸ್ಯ ರಕ್ಷಾರ್ಥಂ ದದೌ ಸ ಪುರುಷೋತ್ತಮಃ ।
ಯಕ್ಷಂ ಚ ಚಂದ್ರನಾಮಾನಂ ವಾಸುಕಿಂ ಚಾಪಿ ಪನ್ನಗಂ ॥ ೪೦ ॥

ವಿದ್ಯಾಧರಂ ಶಂಕುಕರ್ಣಂ ಸುಕೇಶಂ ರಾಕ್ಷಸೇಶ್ವರಂ ।
ಅಜಾವನಂ ಚ ನೃಪತಿಂ ಮಹಾದೇವಂ ಚ ಪಾವಕಂ ॥ ೪೧ ॥

---

ಯಾವಾಗಲೂ ವಾಸಿಸು. ಈ ಪ್ರಕಾರ ಆ ಕುರುರಾಜನಿಂದಹೇಳಲ್ಪಟ್ಟ ನಾನು ಹಾಗೇ ಆಗಲೆಂದು ಒಪ್ಪಿ ಅವನನ್ನು ಕುರಿತು ಹೀಗೆ ಹೇಳಿದನು.

೩೮-೩೯. ಎಲೈ, ಮಹೀಪತಿಯೇ, ನೀನು ಇನ್ನು ಮುಂದೆ ದಿವ್ಯದೇಹವನ್ನು ಹೊಂದಿ ಅಂತ್ಯಕಾಲದಲ್ಲಿ ನನ್ನ ಧ್ಯಾನದಿಂದ ಮುಕ್ತನಾಗಿ ನನ್ನನ್ನೇ ಹೊಂದುತ್ತೀಯೆ. ನಿನಗೆ ಈ ಧರ್ಮಕ್ಷೇತ್ರದ ನಿಮಿತ್ತವಾಗಿ ಶಾಶ್ವತವಾದ ಕೀರ್ತಿಯೂ ಉಂಟಾಗುತ್ತದೆ. ಇದಕ್ಕೆ ಸಂಶಯವಿಲ್ಲ. ನಿನ್ನ ಕೋರಿಕೆಯಂತೆ ಈ ಮಹಾಕ್ಷೇತ್ರದಲ್ಲಿ ಯಾಜಕರು ಅಕ್ಷಯ ಫಲಸಿದ್ಧಿಗಾಗಿ ಯಜ್ಞಯಾಗಾದಿಕರ್ಮಗಳನ್ನು ಸಹಸ್ರ ಸಂಖ್ಯೆಯಿಂದ ಆಚರಿಸಲಿ.

೪೦-೪೨. ಪುಲಸ್ತ್ಯರು ಹೇಳುತ್ತಾರೆ. ಅಂತಹ ಕ್ಷೇತ್ರದ ರಕ್ಷಣೆಗಾಗಿ ನಾರಾಯಣನು ಚಂದ್ರನೆಂಬ ಯಕ್ಷನನ್ನೂ ವಾಸುಕಿಯೆಂಬ ಸರ್ಪವನ್ನೂ ಶಂಕು ಕರ್ಣನೆಂಬ ವಿದ್ಯಾಧರನನ್ನೂ ರಾಕ್ಷಸನಾದ ಸುಕೇಶನನ್ನೂ ಅಜಾವನನೆಂಬ ದೊರೆ ಯನ್ನೂ ಮಹಾದೇವನೆಂಬ ಅಗ್ನಿಯನ್ನೂ ಕೊಟ್ಟಿರುವನು. ಇವರೆಲ್ಲರೂ ಮತ್ತು

ಏತಾನಿ ಸರ್ವತೋಽಭ್ಯೇತ್ಯ ರಕ್ಷಂತಿ ಕುರುಜಾಂಗಲಂ ।
ಅಮೀಷಾಂ ಬಲಿನೋಽನ್ಯೇ ಚ ಭೃತ್ಯಾಶ್ಚೈವಾನುಯಾಯಿನಃ ॥ ೪೨ ॥

ಅಷ್ಟೌ ಸಹಸ್ರಾಣಿ ಧನುರ್ಧರಾಣಾಂ
ನಿವಾರಯಂತೀಹ ಸುದುಷ್ಕೃತಾನ್ ವೈ ।
ಸ್ನಾತುಂ ನ ಯಚ್ಛಂತಿ ಮಹೋಗ್ರರೂಪಾ
ಸ್ತ್ವನ್ಯಸ್ಯ ತೇ ವೀರ ಚರಾಚರಾಣಾಂ ॥ ೪೩ ॥

ತಸ್ಯೈವ ಮಧ್ಯೇ ಬಹುಪುಣ್ಯಯುಕ್ತಂ
ಪೃಥೂದಕಂ ಪಾಪಹರಂ ಶಿವಂ ಚ ।
ಪುಣ್ಯಾನದೀ ಪ್ರಾಙ್ಮುಖತಾಂ ಪ್ರಯಾತಾ
ಜಲೌಘಯುಕ್ತಸ್ಯ ಸುತಾ ಜಲಾಢ್ಯಾ ॥ ೪೪ ॥

ಪೂರ್ವಂ ನದೀಯಂ ಪ್ರಪಿತಾಮಹೇನ
ಸೃಷ್ಟ್ವಾ ಸಮಂ ಭೂತಗಣೈಃ ಸಮಸ್ತೈಃ ।
ಮಹೀ ಜಲಂ ವಹ್ನಿಸಮೀರಮೇವ
ಖಂ ತ್ವೇವಮಾದೌ ವಿಬಭೌ ಪೃಥೂದಕಂ ॥ ೪೫ ॥

---

ಇವರ ಅನುಯಾಯಿಗಳಾದ ಇತರ ಬಲಶಾಲಿಗಳಾದ ಭೃತ್ಯರೂ ಸಹ ಎಲ್ಲ ಕಡೆಯಲ್ಲೂ ನಿಂತು ಕುರುಜಾಂಗಲವನ್ನು ರಕ್ಷಿಸುತ್ತಿದ್ದಾರೆ.

೪೩-೪೫. ಎಂಟು ಸಹಸ್ರ ವೀರರು ಧನುರ್ಧಾರಿಗಳಾಗಿ ನಿಂತು ಪಾಪಿಗಳನ್ನು ತಡೆಯುತ್ತಾರೆ. ಚರಾಚರ ಪ್ರಪಂಚದಲ್ಲಿ ಬಹಳ ಉಗ್ರರೂಪರಾದ ಈ ವೀರರು ಅಂತಹ ಪಾಪಿಗಳನ್ನು ಇಲ್ಲಿ ಸ್ನಾನಕ್ಕೆ ಬಿಡುವುದಿಲ್ಲ. ಆ ಕ್ಷೇತ್ರದ ಮಧ್ಯಭಾಗದಲ್ಲೇ ಪುಣ್ಯಕರವಾಗಿಯೂ ಸರ್ವಪಾಪಹರವಾಗಿಯೂ ಇರುವ ಪೃಥೂದಕವೆಂಬ ಸರೋವರ ವಿದೆ. ಆ ಸರೋವರದಿಂದ ಪುಣ್ಯಕರವಾದ ನದಿಯು ಪ್ರವಾಹದಿಂದ ವೇಗವಾಗಿ ಪೂರ್ವಾಭಿಮುಖವಾಗಿ ಹರಿಯುತ್ತದೆ. ಈ ನದಿಯು ಸೃಷ್ಟಿಕಾಲದಲ್ಲೇ ನಾರಾಯಣ ನಿಂದ ಭೂಮಿ, ಜಲ, ಅಗ್ನಿ, ವಾಯು, ಆಕಾಶವೆಂಬ ಪಂಚಭೂತಗಳಿಂ ನಿರ್ಮಿತವಾಗಿದ್ದಿತು. ಇಂತಹ ನದಿಗೆ ಕಾರಣವಾದ ಪೃಥೂದಕವೂ ಮೊದಲೇ ಪ್ರಸಿದ್ಧಿ ಹೊಂದಿದ್ದಿತು.

ಸರ್ವೇ ತಥಾ ತೋಯಧಯೋ ಮಹಾಂತ
ಸ್ತೀರ್ಥಾನಿ ನದ್ಯಃ ಸ್ರವಣಾಃ ಸರಾಂಸಿ ।
ಸನ್ನಿರ್ಮಿತಾನೀಹ ಮಹಾಭುಜೇನ
ಸದೇವಮಾರ್ಗಃ ಸಲಿಲಂ ಹಿ ತೇಷು ॥ ೪೬ ॥

ಸರಸ್ವತೀ ದೃಷದ್ವತ್ಯೋರಂತರೇ ಕುರುಜಾಂಗಲೇ ।
ಮುನಿಪ್ರವರಮಾಸೀನಂ ಪುರಾಣಂ ಲೋಮಹರ್ಷಣಂ ॥
ಅಪೃಚ್ಛಂತ ದ್ವಿಜವರಾಃ ಪ್ರಭವಂ ಸುರಸತ್ತಮಾಃ ॥ ೪೭ ॥

ಋಷಯ ಊಚುಃ

ಪ್ರಮಾಣಂ ಸರಸೋ ಬ್ರೂಹಿ ತೀರ್ಥಾನಾಂ ಚ ವಿಶೇಷತಃ ।
ದೇವತಾನಾಂ ಚ ಮಾಹಾತ್ಮ್ಯಂ ಉತ್ಪತ್ತಿಂ ವಾಮನಸ್ಯ ಚ ॥ ೪೮ ॥

ಏತಚ್ಛ್ರುತ್ವಾ ವಚಸ್ತೇಷಾಂ ತಾನ್ದ್ವಿಜಾಲ್ಲೋಮಹರ್ಷಣಃ ।
ಪ್ರಣಿಪತ್ಯ ಪುರಾಣರ್ಷಿಮಿದಂ ವಚನ ಮಬ್ರವೀತ್ ॥ ೪೯ ॥

---

೪೬-೪೮. ಹೀಗೆಯೇ ಎಲ್ಲಾ ಮಹಾಸಮುದ್ರಗಳೂ ತೀರ್ಥಗಳೂ ಹರಿಯುವ ಮಹಾನದಿಗಳೂ ಸರಸ್ಸುಗಳೂ ಸಹ ಸತ್ಪುರುಷರಿಗಾಗಿ ಮಹಾಪುರುಷನಾದ ನಾರಾಯಣನಿಂದ ನಿರ್ಮಿಸಲ್ಪಟ್ಟಿವೆ. ಈ ಜಲವೇ ಅಂತಹ ಸತ್ಪುರುಷರಿಗೆ ದೇವ ಮಾರ್ಗಸಾಧನವಾಗಿ ಪರಿಣಮಿಸುತ್ತದೆ. ಪೂರ್ವದಲ್ಲಿ ಸರಸ್ವತೀ ದೃಷದ್ವತೀ ನದಿಗಳ ಮಧ್ಯದಲ್ಲಿ ಕುರುಜಾಂಗಲದಲ್ಲಿ ಕುಳಿತು ತಪಸ್ಸುಮಾಡುತ್ತಿದ್ದ ಪುರಾತನನಾದ ಲೋಮಹರ್ಷಣನೆಂಬ ಮುನಿಯನ್ನು ಹೊಂದಿ ತಾಪಸರಾದ ಬ್ರಾಹ್ಮಣೋತ್ತಮರು ಈ ರೀತಿ ಪ್ರಶ್ನೆಮಾಡಿದರು. ಮಹರ್ಷಿಯೇ, ಈ ಸರೋವರದ ಪ್ರಮಾಣವೆಷ್ಟು ಇಲ್ಲಿರುವ ತೀರ್ಥಗಳ ಮತ್ತು ದೇವತೆಗಳ ಮಾಹಾತ್ಮ್ಯವನ್ನೂ ವಾಮನನ ಉತ್ಪತ್ತಿ ಯನ್ನೂ ದಯವಿಟ್ಟು ಹೇಳಬೇಕು.

೪೯-೫೦. ಈ ಪ್ರಕಾರವಾದ ಆ ಬ್ರಾಹ್ಮಣೋತ್ತಮರ ಪ್ರಾರ್ಥನೆಯನ್ನು ಕೇಳಿ ಲೋಮಹರ್ಷಣಋಷಿಯು ಸನಾತನ ಮಹರ್ಷಿಯಾದ ನಾರಾಯಣನನ್ನು ನಮಸ್ಕರಿಸಿ ಹೀಗೆ ಹೇಳಲುಪಕ್ರಮಿಸಿದನು. ಕಮಲಾಸನನಾದ ಜಗತ್ಸೃಷ್ಟಿ

## ಲೋಮಹರ್ಷಣ ಉವಾಚ

ಬ್ರಹ್ಮಾಣಮೀಶಂ ಕಮಲಾಸನಸ್ಥಂ
ವಿಷ್ಣುಂ ಚ ಲಕ್ಷ್ಮೀಸಹಿತಂ ತಥೈವ ।
ರುದ್ರಂ ಚ ದೇವಂ ಪ್ರಣಿಪತ್ಯ ಮೂರ್ಧ್ನಾ
ತೀರ್ಥಂ ವರಂ ಬ್ರಹ್ಮಸರಃ ಪ್ರವಕ್ಷ್ಯೇ ॥ ೩೦ ॥

ರಂತುಕಾದೌಜಸಂ ಚಾಪಿ ಪಾವನಾಚ್ಚ ಚತುರ್ಮುಖಂ ।
ಸರಸ್ಸನ್ನಿಹಿತಂ ಪ್ರೋಕ್ತಂ ಬ್ರಹ್ಮಣಾ ಪೂರ್ವಮೇವ ತು ॥ ೩೧ ॥

ಕಲಿದ್ವಾಪರಯೋರ್ಮಧ್ಯೇ ವ್ಯಾಸೇನ ಚ ಮಹಾತ್ಮನಾ ।
ಸರಃಪ್ರಮಾಣಂ ಯತ್ ಪ್ರೋಕ್ತಂ ತಚ್ಛೃಣ್ವಂತು ದ್ವಿಜೋತ್ತಮಾಃ॥ ೩೨ ॥

ವಿಶ್ವೇಶ್ವರಾದ್ಧಸ್ತಿಪುರಂ ತಥಾ ಕನ್ಯಾ ಜರದ್ಗವೀ ।
ಯಾವದೋಘವತೀ ಪ್ರೋಕ್ತಾ ತಾವತ್ಸಂನಿಹಿತಂ ಸರಃ ॥ ೩೩ ॥

ಮಯಾ ಶ್ರುತಂ ಪ್ರಮಾಣಂ ತು ಕಥ್ಯಮಾನಂ ತು ವಾಮನಂ
ತಚ್ಛೃಣ್ವಂ ತು ದ್ವಿಜಶ್ರೇಷ್ಠಾಃ ಪುಣ್ಯಂ ವೃದ್ಧಿಕರಂ ಮಹತ್ ॥ ೩೪ ॥

---

ಕಾರಣನಾದ ಚತುರ್ಮುಖನನ್ನೂ ಹಾಗೆಯೇ ಲಕ್ಷ್ಮೀಸಹಿತನಾದ ಮಹಾವಿಷ್ಣುವನ್ನೂ ಮತ್ತು ದೇವತಾಶ್ರೇಷ್ಠನಾದ ರುದ್ರನನ್ನೂ ತಲೆಬಾಗಿ ನಮಸ್ಕರಿಸಿ ತೀರ್ಥಶ್ರೇಷ್ಠವಾದ ಬ್ರಹ್ಮಸರಸ್ಸಿನ ವೃತ್ತಾಂತವನ್ನು ಹೇಳುತ್ತೇನೆ.

೩೧-೩೩. ರಂತುಕವೆಂಬ ದೇಶದಿಂದ ಓಜಸದೇಶದವರಿಗೂ ಪಾವನದೇಶದಿಂದ ಚತುರ್ಮುಖ ಭೂಮಿಯವರಿಗೂ ಈ ಸರೋವರದ ವ್ಯಾಪ್ತಿಯುಂಟೆಂದು ಚತುರ್ಮುಖನೇ ಮೊದಲು ಹೇಳಿರುವನು. ಕಲಿ ಮತ್ತು ದ್ವಾಪರಯುಗದ ಮಧ್ಯ ಭಾಗದಲ್ಲಿ ಮಹಾತ್ಮರಾದ ವ್ಯಾಸರು ವಿಶ್ವೇಶ್ವರಕ್ಷೇತ್ರದಿಂದ ಹಸ್ತಿನಾವತಿಯವರಿಗೂ ಜರದ್ಗವೀ ಮತ್ತು ಓಘವತೀ ನದಿಯವರಿಗೂ ಈ ಸರಸ್ಸಿನ ವ್ಯಾಪ್ತಿಯುಂಟೆಂದು ಹೇಳಿರುವದನ್ನು ನಿಮಗೆ ತಿಳಿಸುತ್ತೇನೆ.

೩೪-೩೫. ನನಗೆ ವಾಮನನಿಂದ ತಿಳಿದುಬಂದ ಪ್ರಮಾಣವನ್ನೂ ನಿಮಗೆ ಹೇಳುತ್ತೇನೆ ಕೇಳಿರಿ. ವಿಶ್ವೇಶ್ವರಕ್ಷೇತ್ರದಿಂದ ಪವಿತ್ರವಾದ ಸರಸ್ವತೀನದಿಯು

ವಿಶ್ವೇಶ್ವರಾದ್ದೇವವರಾತ್ಪಾವನೀ ಚ ಸರಸ್ವತೀ ।
ಸರಃ ಸನ್ನಿಹಿತಂ ಪ್ರೋಕ್ತಂ ಸಮಂತಾದರ್ಧಯೋಜನಂ ॥ ೫೫ ॥

ಏತದಾಶ್ರಿತ್ಯ ದೇವಾಶ್ಚ ಋಷಯಶ್ಚ ಸಮಾಗತಾಃ ।
ಸೇವಂತೇ ಮುಕ್ತಿಕಾಮಾರ್ಥಂ ಸ್ವರ್ಗಾರ್ಥಂ ಚಾ ಪರೇ ಸ್ಥಿತಾಃ ॥ ೫೬ ॥

ಬ್ರಹ್ಮಣಾ ಸೇವಿತಮಿದಂ ಸೃಷ್ಟಿಕಾಮೇನ ಯೋಗಿನಾ ।
ವಿಷ್ಣುನಾ ಸ್ಥಿತಿಕಾಮೇನ ಹರಿರೂಪೇಣ ಸೇವಿತಂ ॥ ೫೭ ॥

ರುದ್ರೇಣ ಚ ಸರೋಮಧ್ಯಂ ಪ್ರವಿಷ್ಟೇಸ ಮಹಾತ್ಮನಾ ।
ಸೇವ್ಯ ತೀರ್ಥಂ ಮಹಾತೇಜಾಃ ಸ್ಥಾಣುತ್ವಂ ಪ್ರಾಪ್ತವಾನ್ ಹರಃ ॥ ೫೮ ॥

ಆದ್ಯೈಷಾ ಬ್ರಹ್ಮಣೋ ವೇದಿಃ ತತೋ ರಾಮಹ್ರದಃ ಸ್ಮೃತಃ ।
ಕುರುಣಾ ಚ ಯತಃ ಕೃಷ್ಟಂ ಕುರುಕ್ಷೇತ್ರಂ ತತಃ ಸ್ಮೃತಂ । ॥ ೫೯ ॥

---

ಪ್ರವಹಿಸುವವರೆಗೂ ನಾಲ್ಕುಕಡೆಯಲ್ಲೂ ಅರ್ಧಯೋಜನದವರಿಗೂ ಈ ಸರೋವರದ ವ್ಯಾಪ್ತಿಯುಂಟೆಂದು ಕೇಳಿದ್ದೇನೆ.

೫೬-೫೭. ಇದನ್ನೇ ಉದ್ದೇಶಿಸಿ ದೇವತೆಗಳೂ ಋಷಿಗಳೂ ಇಲ್ಲಿ ಬಂದು ಅವರವರ ಇಷ್ಟಕ್ಕೆ ತಕ್ಕಂತೆ ಮೋಕ್ಷಕ್ಕಾಗಿಯೂ ಸ್ವರ್ಗಕ್ಕಾಗಿಯೂ ಇದನ್ನು ಸೇವಿಸುತ್ತಾರೆ. ಎಷ್ಟು ಹೇಳಿದರೂ ಇದರ ಮಾಹಾತ್ಮ್ಯವು ಮುಗಿಯುವುದಿಲ್ಲ. ಚತುರ್ಮುಖನು ಜಗತ್ಸೃಷ್ಟಿಗೆ ತಕ್ಕ ಸರ್ವಜ್ಞತೆಯನ್ನು ಹೊಂದಲು ಯೋಗಿಯಾಗಿ ಇದನ್ನು ಸೇವಿಸಿದನು. ವಿಷ್ಣುವೂ ಜಗತ್ತಿನ ಸ್ಥಿತಿಯನ್ನು ಉಂಟುಮಾಡುವ ಸಾಮರ್ಥ್ಯವನ್ನು ಹರಿರೂಪದಿಂದ ಇದನ್ನು ಸೇವಿಸಿ ಹೊಂದಿದನು. ರುದ್ರನೂ ಸಹ ಸರೋವರದ ಮಧ್ಯಭಾಗವನ್ನು ಪ್ರವೇಶಿಸಿ ಈ ತೀರ್ಥವನ್ನೂ ಸೇವಿಸಿ ತೇಜಸ್ವಿಯಾಗಿ ಸ್ಥಾಣುತ್ವವನ್ನು ಹೊಂದಿದನು.

೫೮-೬೦. ಇದೇ ಬ್ರಹ್ಮನ ಮೊದಲನೇ ವೇದಿಯು ಪಶ್ಚಿಮಕ್ಕೆ ರಾಮಹ್ರದ ವಿರುವದು. ಇದರ ಮಧ್ಯಭಾಗವು ಕುರುರಾಜನಿಂದ ಕೃಷ್ಟವಾದ ನಿಮಿತ್ತ ಕುರುಕ್ಷೇತ್ರವೆಂದು ಪ್ರಸಿದ್ಧಿಹೊಂದಿದೆ. ತರಂತುಕಾ ಅರಂತುಕವೆಂಬ ದೇಶಗಳ ಮಧ್ಯಭಾಗವೂ ದಕ್ಷಿಣೋತ್ತರವಾಗಿ ರಾಮಹ್ರದದಿಂದ ಸಮಂತಪಂಚಕದವರಿಗಿನ ಭಾಗವೂ

**ತರಂತುಕಾರಂತುಕಯೋರ್ಯದಂತರಂ**
**ಯದಂತರಂ ರಾಮಹ್ರದಸ್ಯ ಪಂಚಕಾತ್ ।**
**ಏತತ್ಕುರುಕ್ಷೇತ್ರಸಮಂತಪಂಚಕಂ**
**ಪಿತಾಮಹಸ್ಯೋತ್ತರವೇದಿರುಚ್ಯತೇ ॥ ೬೦ ॥**

**ಇತಿ ಶ್ರೀ ವಾಮನಪುರಾಣೇ ಸರೋಮಾಹಾತ್ಮ್ಯೇ**
**ದ್ವಾವಿಂಶೋಽಧ್ಯಾಯಃ**

---

ಕುರುಕ್ಷೇತ್ರವೆಂದು ಪ್ರಸಿದ್ಧಿಪಡೆದಿದೆ. ಇದೇ ಚತುರ್ಮುಖನ ಉತ್ತರವೇದಿ ಎಂದು ಹೇಳಲ್ಪಡುತ್ತಿದೆ.

ಇಲ್ಲಿಗೆ ಶ್ರೀ ವಾಮನಪುರಾಣದಲ್ಲಿ ಸರೋಮಾಹಾತ್ಮ್ಯವೆಂಬ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದಿದೆ.

**ಅಧ್ಯಾಯಾರ್ಥ ಸಂಗ್ರಹ**

ಈ ಅಧ್ಯಾಯದಲ್ಲಿ ಕುರುಕ್ಷೇತ್ರದ ವೃತ್ತಾಂತವನ್ನು ಹೇಳಲುಪಕ್ರಮಿಸಿದ ಹಿಂದಿನ ಅಧ್ಯಾಯಾರ್ಥವನ್ನೇ ಮುಂದುವರಿಸಿ ಸಂವರಣ ಪುತ್ರನಾದ ಕುರುವು ಬಾಲ್ಯದಲ್ಲಿಯೇ ಜ್ಞಾನಿಯಾಗಿ ಕೀರ್ತಿಹೊಂದಲು ಪ್ರಯತ್ನಿಸಿ ದೇಶಸಂಚಾರಿಯಾದ ನೆಂದೂ ಸಂಚಾರಕಾಲದಲ್ಲಿ ದ್ವೈತವನಕ್ಕೆ ಪ್ರವೇಶಿಸಿ ಅಲ್ಲಿದ್ದ ಸರಸ್ವತೀ ಮತ್ತು ದೃಷದ್ವತೀ ನದಿಗಳನ್ನು ನೋಡಿ ಸಂತೋಷಪಟ್ಟು ಒಂದು ಸ್ಥಳದಲ್ಲಿ ಎರಡು ನದಿಗಳ ನೀರನ್ನೂ ಕೂಡಿಸಿ ಸ್ನಾನಮಾಡಿ ಅಲ್ಲಿಂದ ಬ್ರಹ್ಮನ ಉತ್ತರವೇದಿಯಾದ ಸಮಂತ ಪಂಚಕಕ್ಕೆ ಬಂದು ಇದನ್ನು ಮಹಾಕ್ಷೇತ್ರವನ್ನಾಗಿ ಮಾಡುವೆನೆಂದು ಚಿನ್ನದ ನೇಗಲಿ ನಿಂದ ಉಳಲು ಪ್ರಾರಂಭಿಸಿದನೆಂದೂ ಹೇಳಲಾಯಿತು. ಅಲ್ಲಿಗೆ ಇಂದ್ರನು ಬಂದು ಹಾಸ್ಯಮಾಡಿ ಹೋದ ತರುವಾಯ ಮಹಾವಿಷ್ಣುವು ಸನ್ನಿಹಿತನಾಗಿ ಧೊರೆಯೇ ಈ ಕ್ಷೇತ್ರಕ್ಕೆ ಬೀಜವನ್ನು ಎಲ್ಲಿಂದ ತರುವೆ ಎಂದು ಕೇಳಲು ರಾಜನು ತನ್ನ ಬಲಗೈಯ್ಯನ್ನೂ ಎಡಗೈಯ್ಯನ್ನೂ ಕೊಡಲು ಅದನ್ನು ಕತ್ತರಿಸಿ ನಂತರ ರಾಜನು ತಲೆಯನ್ನು ಕೊಡಲಾಗಿ ಹರಿಯು ಸಂತೋಷಪಟ್ಟು ಅವನ ಕೋರಿಕೆಯಂತೆ ವರವನ್ನು ಕೊಟ್ಟು ಪುಣ್ಯಕ್ಷೇತ್ರವನ್ನಾಗಿ ಮಾಡಿದನೆಂದೂ ಪ್ರತಿಪಾದಿಸಿ ಉಪಪ್ರಶ್ನೆಗೆ ಉತ್ತರವಾಗಿ ಲೋಮಹರ್ಷಣನೆಂಬ ಮುನಿಯಿಂದ ಹಿಂದೆ ಋಷಿಗಳಿಗೆ ಉಪದೇಶಿಸಲಾಗಿದ್ದ ಕುರುಕ್ಷೇತ್ರದ ಎಲ್ಲೆಗಳನ್ನೂ ಅದರ ಮಧ್ಯದಲ್ಲಿರುವ ಪೃಥೂದಕದ ಮಾಹಾತ್ಮ್ಯವನ್ನೂ ವಿಸ್ತರಿಸಲಾಯಿತು.

॥ ಶ್ರೀಃ ॥

# ಶ್ರೀವಾಮನಪುರಾಣಂ

## ತ್ರಯೋವಿಂಶೋಽಧ್ಯಾಯಃ

ಋಷಯ ಊಚುಃ

ಬ್ರೂಹಿ ವಾಮನಮಾಹಾತ್ಮ್ಯಮುತ್ಪತ್ತಿಂ ಚ ವಿಶೇಷತಃ ।
ಯಥಾ ಬಲಿರ್ನಿಯಮಿತೋ ದತ್ತಂ ರಾಜ್ಯಂ ಶತಕ್ರತೋಃ ॥ ೧ ॥

ಲೋಮಹರ್ಷಣ ಉವಾಚ

ಶೃಣ್ವಂತು ಮುನಯಃ ಪ್ರೀತಾ ವಾಮನಸ್ಯ ಮಹಾತ್ಮನಃ ।
ಉತ್ಪತ್ತಿಂ ಚ ಪ್ರಭಾವಂ ಚ ನಿವಾಸಂ ಕುರುಜಾಂಗಲೇ ॥ ೨ ॥

ತಥೈವ ವಂಶಂ ದೈತ್ಯಾನಾಂ ಶೃಣ್ವಂತು ದ್ವಿಜಸತ್ತಮಾಃ ।
ಯಸ್ಮಿನ್ ವಂಶೇ ಸಮುಭವದ್ಬಲಿರ್ವೈರೋಚನಿಃ ಪುರಾ ॥ ೩ ॥

---

## ಇಪ್ಪತ್ತಮೂರನೆಯ ಅಧ್ಯಾಯವು

೧-೩. ಋಷಿಗಳು ಪುನಃ ಪ್ರಶ್ನೆಮಾಡುತ್ತಾರೆ. ಬಲಿಚಕ್ರವರ್ತಿಯನ್ನು ನಿಗ್ರಹಿಸಿ ಲೋಕತ್ರಯವನ್ನೂ ಇಂದ್ರನಿಗೆ ಕೊಟ್ಟ ವಾಮನನ ಮಾಹಾತ್ಮ್ಯವನ್ನೂ ಅವನ ಉತ್ಪತ್ತಿಯನ್ನೂ ಹೇಳಬೇಕು. ಈ ಪ್ರಶ್ನೆಗೆ ಉತ್ತರವಾಗಿ ಲೋಮಹರ್ಷಣನು ಸಂತೋಷದಿಂದ ಎಲೈ, ಮುನಿಗಳಿರಾ, ಕೇಳಿರಿ. ವಾಮನನ ಉತ್ಪತ್ತಿಯನ್ನೂ ಅವನ ಮಾಹಾತ್ಮ್ಯವನ್ನೂ ಕುರುಜಾಂಗಲದಲ್ಲಿ ವಾಸಮಾಡಿದ್ದನ್ನೂ ಹೇಳುತ್ತೇನೆ. ಮತ್ತು ಯಾವ ವಂಶದಲ್ಲಿ ವಿರೋಚನನ ಪುತ್ರನಾದ ಬಲಿಯು ಹುಟ್ಟಿದನೋ ಆ ತಹ ದೈತ್ಯ ವಂಶವನ್ನೂ ಹೇಳುತ್ತೇನೆ. ಕೇಳಿರಿ ಎಂದುಪಕ್ರಮಿಸಿದನು.

**ದೈತ್ಯಾನಾಮಾದಿಪುರುಷೋ ಹಿರಣ್ಯಕಶಿಪುರ್ಭವತ್ ।**
**ತಸ್ಯ ಪುತ್ರೋ ಮಹಾತೇಜಾಃ ಪ್ರಹ್ಲಾದೋ ನಾಮ ದಾನವಃ ॥ ೪ ॥**

**ತಸ್ಮಾದ್ವಿರೋಚನೋ ಜಜ್ಞೇ ಬಲಿರ್ಜಜ್ಞೇ ವಿರೋಚನಾತ್ ।**
**ಹತೇ ಹಿರಣ್ಯಕಶಿಪೌ ದೇವಾನುತ್ಸಾದ್ಯ ಸರ್ವತಃ ॥ ೫ ॥**

**ರಾಜ್ಯಂ ಕೃತಂ ಚ ತೇನೇಷ್ಟಂ ತ್ರೈಲೋಕ್ಯೇ ಸಚರಾಚರೇ ।**
**ಕೃತಯಜ್ಞೇಷು ದೈತ್ಯೇಷು ತ್ರೈಲೋಕ್ಯೇ ದೈತ್ಯತಾಂ ಗತೇ ॥ ೬ ॥**

**ಜಯೇ ತಥಾ ಬಲವತೋರ್ಮಯಶಂಬರಯೋಸ್ತಥಾ ।**
**ಶುದ್ಧಾಸು ದಿಕ್ಷು ಸರ್ವಾಸು ಪ್ರವೃತ್ತೇ ಧರ್ಮಕರ್ಮಣಿ ॥ ೭ ॥**

**ಸಂಪ್ರವೃತ್ತೇ ದೈತ್ಯಪಥೇ ಅಯನಸ್ಥೇ ದಿವಾಕರೇ ।**
**ಪ್ರಹ್ಲಾದಶಂಬರಮಯೈ ರನುರಾಗೇಣ ಚೈವ ಹಿ ॥ ೮ ॥**

**ದಿಕ್ಷು ಸರ್ವಾಸು ಗುಪ್ತಾಸು ಗಗನೇ ದೈತ್ಯಪಾಲಿತೇ ।**
**ವೇದೇಷು ಮಖಶೋಭಾಂ ಚ ಸ್ವರ್ಗಸ್ಥಾಂ ದರ್ಶಯಂತ್ಸು ಚ ॥ ೯ ॥**

---

೪-೭. ದೈತ್ಯರಿಗೆ ಆದಿಪುರುಷನಾದ ಹಿರಣ್ಯಕಶಿಪುವು ಇದ್ದನಷ್ಟೆ. ಅವನ ಮಗನಾದ ಪ್ರಹ್ಲಾದನು ತೇಜಸ್ವಿಯಾಗಿ ಬದುಕಿ ವಿರೋಚನನೆಂಬ ಮಗನನ್ನು ಪಡೆದನು. ಆ ವಿರೋಚನನ ಮಗನೇ ಬಲಿಚಕ್ರವರ್ತಿ, ಹಿರಣ್ಯಕಶಿಪುವಿನ ಕಾಲಾನಂತರ ಅವನು ಪರಾಕ್ರಮದಿಂದ ದೇವತೆಗಳೆಲ್ಲರನ್ನೂ ಜಯಿಸಿ ತ್ರೈಲೋಕ್ಯ ಸಾಮ್ರಾಜ್ಯವನ್ನು ಹೊಂದಿದನು. ಲೋಕತ್ರಯದಲ್ಲೂ ಯಜ್ಞಯಾಗಾದಿಗಳನ್ನು ನಡೆಸಿದನು. ಹೀಗೆ ದೈತ್ಯರೆಲ್ಲರೂ ಯಜ್ಞಯಾಗಾದಿ ನಿರತರಾಗಿ ಮೂರು ಲೋಕವೂ ದೈತ್ಯಮಯವಾಗಿ ಪರಿಣಮಿಸಿತು. ಮಯ ಮತ್ತು ಶಂಬರ ಇವರ ಪರಾಕ್ರಮದಿಂಗ ದೈತ್ಯರಿಗೆ ವಿಜಯ ಲಭಿಸಿ ದಿಕ್ಕುಗಳೆಲ್ಲವೂ ಶತ್ರುರಹಿತವಾಗಿ ಶುದ್ಧವಾದುವು. ಯಜ್ಞಾದಿಧರ್ಮಗಳು ಬಹಳ ಹೆಚ್ಚಿದವು.

೮ ೧೧. ಈ ಪ್ರಕಾರ ದೈತ್ಯಮಾರ್ಗವು ವಿಸ್ತಾರಹೊಂದಿತು. ಸೂರ್ಯನೂ ಇವರ ಮಾರ್ಗಕ್ಕೆ ಸರಿಯಲು ಪ್ರಹ್ಲಾದ ಶಂಬರ ಮಯ ಇವರುಗಳಿಂದ ಅನುರಾಗ ಪೂರ್ವಕವಾಗಿ ಎಲ್ಲಾ ದಿಕ್ಕುಗಳೂ ಗಗನಮಾರ್ಗವೂ ಸಹ ಸ್ವಾಧೀನಪಡಿಸಿಕೊಳ್ಳಲ್ಪಟ್ಟುವು. ವೇದವಿಹಿತವಾದ ಯಜ್ಞಯಾಗಾದಿಗಳು ಇವರಿಂದ ಸ್ವರ್ಗದಲ್ಲಿಯೂ ವಿಸ್ತರಿಸಲ್ಪಟ್ಟವು. ಲೋಕವೆಲ್ಲವೂ ಯಾವ ಕ್ಷೋಭೆಯೂ ಇಲ್ಲದೆ ಸನ್ಮಾರ್ಗದಲ್ಲಿ

ಪ್ರಕೃತಿಸ್ಥೇ ತತೋ ಲೋಕೇ ವರ್ತಮಾನೇ ಚ ಸತ್ಪಥೇ ।
ಅಭಾವೇ ಸರ್ವಪಾಪಾನಾಂ ಧರ್ಮಭಾವೇ ಸದೋತ್ಥಿತೇ ॥ ೧೦ ॥

ಚತುಃಪಾದೇ ಸ್ಥಿತೇ ಧರ್ಮೇ ಹ್ಯಧರ್ಮೇ ಪಾದವಿಗ್ರಹೇ ।
ಪ್ರಜಾಪಾಲನಯುಕ್ತೇಷು ಭ್ರಾಜಮಾನೇಷು ರಾಜಸು ॥
ಸ್ವಧರ್ಮಯುಕ್ತೇಷು ತಥಾ ಸರ್ವೇಷ್ವಾಶ್ರಮವಾಸಿಷು ॥ ೧೧ ॥

ಅಭಿಷಿಕ್ತೋಽಸುರೈಸ್ಸರ್ವೈಃ ದೈತ್ಯರಾಜ್ಯೇ ಬಲಿಸ್ತದಾ ।
ಹೃಷ್ಟೇಷ್ವಸುರಸಂಘೇಷು ನದತ್ಸು ಮುದಿತೇಷು ಚ ॥ ೧೨ ॥

ಅಥಾಭ್ಯುಪಗತಾ ಲಕ್ಷ್ಮೀಃ ಬಲಿಂ ಪದ್ಮಾಂತರಪ್ರಭಾ ।
ಪದ್ಮೋದ್ಯತಕರಾ ದೇವೀ ವರದಾ ಸುಪ್ರವೇಶಿನೀ ॥ ೧೩ ॥

ಶ್ರೀರುವಾಚ

ಬಲೇ ಬಲವತಾಂ ಶ್ರೇಷ್ಠ ದೈತ್ಯರಾಜ ಮಹಾದ್ಯುತೇ ।
ಪ್ರೀತಾಸ್ಮಿ ತವ ಭದ್ರಂ ತೇ ದೇವರಾಜಪರಾಜಯೇ ॥ ೧೪ ॥

---

ನಿಂತು ಸ್ವಸ್ವಭಾವವನ್ನು ಹೊಂದಿತು. ಪಾಪಕರ್ಮಗಳೆಲ್ಲವೂ ನಾಶಹೊಂದಿ ಸದ್ಧರ್ಮವು ಪ್ರಕಾಶಹೊಂದಿತು. ಅಧರ್ಮವು ಒಂದೇ ಪಾದದಿಂದ ನಿಂತ ತರುವಾಯ ಧರ್ಮವು ನಾಲ್ಕು ಪಾದದಿಂದಲೂ ಸ್ಥಿರವಾಗಿ ಬೇರೂರಿ ನಿಂತಿತು. ರಾಜರುಗಳೆಲ್ಲರೂ ಸ್ವಧರ್ಮದಲ್ಲಿದ್ದುಕೊಂಡು ಪ್ರಜಾಪಾಲನದಿಂದ ಪ್ರಕಾಶಿಸುತ್ತಿದ್ದರು. ಆಶ್ರಮಿಗಳೆಲ್ಲರೂ ತಮ್ಮ ತಮ್ಮ ಧರ್ಮದಲ್ಲಿ ನಿರತರಾಗಿದ್ದರು.

೧೨-೧೫. ಆ ಸಮಯದಲ್ಲಿ ಅಸುರರೆಲ್ಲರೂ ಬಲಿಯನ್ನು ದೈತ್ಯರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದರು. ಅಸುರರೆಲ್ಲರೂ ಸಂತೋಷದಿಂದ ಕೋಲಾಹಲ ಧ್ವನಿ ಮಾಡಿ ತಮ್ಮ ವೈಭವವನ್ನು ಕೊಂಡಾಡ ತೊಡಗಿದರು. ಆಗ ಪದ್ಮದಂತೆ ರಮಣೀಯ ಪ್ರಭೆಯುಳ್ಳ ಪದ್ಮಹಸ್ತೆಯಾದ ಮಹಾಲಕ್ಷ್ಮಿಯು ಪ್ರಸನ್ನಳಾಗಿ ಬಲಿಯನ್ನು ಆಶ್ರಯಿಸಲು ಅಭಿಮುಖವಾಗಿ ಬಂದು, ಎಲೈ ದೈತ್ಯರಾಜನೇ, ಶೂರಾಗ್ರಗಣ್ಯನೇ, ತೇಜಸ್ವಿಯೇ, ನೀನು ಯುದ್ಧದಲ್ಲಿ ಇಂದ್ರನನ್ನೂ ಜಯಿಸಿ ಮಹಾಪರಾಕ್ರಮಿಯಾಗಿ

ಯತ್ತ್ವಯಾ ಯುಧಿ ವಿಕ್ರಮ್ಯ ದೇವರಾಜಃ ಪರಾಜಿತಃ ।
ದೃಷ್ಟ್ವಾ ತೇ ಪರಮಂ ಸತ್ವಂ ತತೋಽಹಂ ಸ್ವಯಮಾಗತಾ ॥ ೧೫ ॥

ನಾಶ್ಚರ್ಯಂ ದಾನವವ್ಯಾಘ್ರ ಹಿರಣ್ಯಕಶಿಪೋಃ ಕುಲೇ ।
ಪ್ರಸೂತಸ್ಯಾಸುರೇಂದ್ರಸ್ಯ ತವ ಕರ್ಮೇದ ಮೀದೃಶಂ ॥ ೧೬ ॥

ವಿಶೇಷಿತಸ್ತ್ವಯಾ ರಾಜನ್ ದೈತ್ಯೇಂದ್ರಃ ಪ್ರಪಿತಾಮಹಃ ।
ಯೇನ ಯುಕ್ತಂಹಿ ನಿಖಿಲಂ ತ್ರೈಲೋಕ್ಯಮಿದಮವ್ಯಯಂ ॥ ೧೭ ॥

ಏವಮುಕ್ತ್ವಾ ತು ಸಾ ದೇವೀ ಲಕ್ಷ್ಮೀರ್ದೈತ್ಯನೃಪಂ ಬಲಿಂ ।
ಪ್ರವಿಷ್ಟಾ ವರದಾ ಸೇವ್ಯಾ ಸರ್ವದೇವಮನೋರಮಾ ॥ ೧೮ ॥

ತುಷ್ಟಾಶ್ಚ ದೇವ್ಯಃ ಪ್ರವರಾಃ ಹ್ರೀಃ ಕೀರ್ತಿರ್ದ್ಯುತಿರೇವ ಚ ।
ಪ್ರಭಾ ಧೃತಿಃ ಕ್ಷಮಾ ಶಕ್ತಿಃ ಋದ್ಧಿರ್ದಿವ್ಯಾ ಮಹಾಮತಿಃ ॥ ೧೯ ॥

ಶ್ರುತಿ ರ್ವಿದ್ಯಾ ಸ್ಮೃತಿಃ ಕೀರ್ತಿಃ ಶಾಂತಿಃ ಪುಷ್ಟಿಸ್ತಥಾ ಕ್ರಿಯಾ ।
ಸರ್ವಾಶ್ಚಾಪ್ಸರಸೋದಿವ್ಯಾ ನೃತ್ತಗೀತವಿಶಾರದಾಃ ॥ ೨೦ ॥

---

ರುವೆ, ನಿನಗೆ ಮಂಗಳವಾಗಲಿ, ನಿನ್ನ ಲೋಕೋತ್ತರವಾದ ಸತ್ವವನ್ನು ನೋಡಿ ನಾನು ಸಂತೋಷಪಟ್ಟು ನಿನ್ನನ್ನು ಆಶ್ರಯಿಸಲು ನಾನೇ ಬಂದಿರುವೆನು.

೧೬-೧೮. ಎಲೈ, ದಾನವಶ್ರೇಷ್ಠನೇ, ಹಿರಣ್ಯಕಶಿಪುವಿನ ವಂಶದಲ್ಲಿ ಹುಟ್ಟಿರುವ ನಿನ್ನಲ್ಲಿ ಇಂತಹ ಲೋಕೋತ್ತರವಾದ ಪರಾಕ್ರಮವು ಆಶ್ಚರ್ಯಕರವೇನೂ ಅಲ್ಲ (ಸಹಜವೇ ಎಂದು ತಾತ್ಪರ್ಯ) ನಿನ್ನ ಮುತ್ತಾತನಾದ ಯಾವ ಹಿರಣ್ಯ ಕಶಿಪುವಿನಿಂದ ಲೋಕತ್ರಯವೂ ವ್ಯಾಪ್ತವಾಗಿದ್ದಿತೋ ಅಂತಹ ದೈತ್ಯಾಧಿ ಪತಿಯನ್ನೂ ಸಹ ನೀನು ಅತಿಕ್ರಮಿಸಿದ್ದೀಯೆ, ಈ ಪ್ರಕಾರ ಬಲಿಯನ್ನು ಪ್ರಶಂಸಿಸಿ ಸರ್ವ ದೇವತೆಗಳಿಗೂ ಆದರಣೀಯಳಾದ ವರಪ್ರದಳಾದ ಮಹಾಲಕ್ಷ್ಮಿಯು ಆ ಬಲಿಯನ್ನು ಆಶ್ರಯಿಸಿದಳು.

೧೯-೨೦. ಈ ಪ್ರಕಾರ ಮಹಾಲಕ್ಷ್ಮಿಯ ಸಾನ್ನಿಧ್ಯ ಒದಗಿದ ಬಳಿಯೇ ಬಲಿ ಚಕ್ರವರ್ತಿಯ ಪಟ್ಟ ಮಹಿಷಿಗಳೆಲ್ಲರೂ ಸಂತುಷ್ಟರಾಗಿರುತ್ತಿದ್ದರು. ಮಹಾಲಕ್ಷ್ಮಿಯ ಸಾನ್ನಿಧ್ಯದ ಫಲವಾಗಿ, ಹ್ರೀದೇವಿ, ಕೀರ್ತಿ, ಕಾಂತಿ, ತೇಜಸ್ಸು, ಧಾರಣ ಸಾಮರ್ಥ್ಯ ಸಹನಸಾಮರ್ಥ್ಯ, ಶಕ್ತಿ, ಸಮೃದ್ಧಿ, ದಿವ್ಯವಾದ ಬುದ್ಧಿ, ವೇದವಿದ್ಯೆ, ಸ್ಮೃತಿಗಳು, ಸುಖ, ಪುಷ್ಟಿ, ಕಾರ್ಯಕ್ಷಮತೆ, ಎಲ್ಲವೂ ರಾಜಗೃಹದಲ್ಲಿ ಪ್ರಕಾಶಿಸಿದವು,

ಪ್ರಪದ್ಯಂತೇ ತು ದೈತ್ಯೇಂದ್ರಂ ತ್ರೈಲೋಕ್ಯಂ ಸಚರಾಚರಂ ।
ಪ್ರಾಪ್ತಮೈಶ್ವರ್ಯಮತುಲಂ ಬಲಿನಾ ಬ್ರಹ್ಮವಾದಿನಾ ॥ ೨೧ ॥

ಇತಿ ಶ್ರೀ ವಾಮನಪುರಾಣೇ ಸರೋಮಾಹಾತ್ಮ್ಯೇ
ತ್ರಯೋವಿಂಶೋಽಧ್ಯಾಯಃ

---

ನೃತ್ಯ, ಗಾನ, ಇತ್ಯಾದಿಗಳಲ್ಲಿ ನಿಪುಣರಾದ ಅಪ್ಸರಸ್ತ್ರೀಯರುಗಳೆಲ್ಲರೂ ಹಾಗೆಯೇ ಮೂರು ಲೋಕದ ಜನಗಳೆಲ್ಲರೂ, ಮಹಾ ಪುರುಷನಾದ ದೈತ್ಯರಾಜನನ್ನು ಸೇವಿಸಲು ಬಂದು ಸೇರಿದರು. ಈ ರೀತಿ ಬ್ರಹ್ಮವಿದಗ್ರೇಸರನಾದ ಬಲಿಚಕ್ರವರ್ತಿಯು ಅಪ್ರತಿಮ ಐಶ್ವರ್ಯಶಾಲಿಯಾದನು.

ಇಲ್ಲಿಗೆ ಶ್ರೀ ವಾಮನಪುರಾಣದಲ್ಲಿ ಸರೋಮಾಹಾತ್ಮ್ಯವೆಂಬ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದಿದೆ.

## ಅಧ್ಯಾಯಾರ್ಥ ಸಂಗ್ರಹ

ಈ ಅಧ್ಯಾಯದಲ್ಲಿ ಹಿಂದಿನ ಅಧ್ಯಾಯದಿಂದ ಬಂದ ಸರೋಮಾಹಾತ್ಮ್ಯವನ್ನು ಮುಂದುವರಿಸಲು ಕುರುಕ್ಷೇತ್ರದಲ್ಲಿ ಸರಸ್ವತೀ, ದೃಷದ್ವತೀ ನದಿಗಳ ಮಧ್ಯದಲ್ಲಿ ತಪಸ್ಸು ಮಾಡುತ್ತಿದ್ದ ಲೋಮಹರ್ಷಣಮುನಿಯನ್ನು ವಾಮನಾವತಾರ ವಿಷಯವಾಗಿ ಋಷಿಗಳು ಪ್ರಶ್ನೆಮಾಡಲಾಗಿ ಆ ಋಷಿಯು ದೈತ್ಯರ ವಂಶಕ್ರಮವನ್ನೂ ಆ ವಂಶದಲ್ಲಿ ವಿರೋಚನನ ಪುತ್ರನಾಗಿ ಬಲಿಯು ಉತ್ಪನ್ನನಾದನೆಂದೂ ವಿವರಿಸಿ ಅವನ ದಿಗ್ವಿಜಯವನ್ನೂ ಧರ್ಮಶೀಲತೆಯನ್ನೂ ಕೊಂಡಾಡಿ ಮಹಾಲಕ್ಷ್ಮಿಯು ತಾನೇ ಅವನನ್ನು ಮೆಚ್ಚಿ ಪ್ರಶಂಸಿಸಿ ಬಂದು ಸೇರಿದಳೆಂದೂ ಅವಳ ಸಾನ್ನಿಧ್ಯದಿಂದ ಬಲಿಚಕ್ರವರ್ತಿಯು ಇಂದ್ರಾದಿದೇವತೆಗಳಿಗಿಂತಲೂ ಮೇಲಾಗಿ ವೈಭವದಿಂದಲೂ ಧರ್ಮಿಷ್ಠತೆಯಿಂದಲೂ ಮಹಾ ಬ್ರಹ್ಮವಾದಿಯಾಗಿ ಪ್ರಕಾಶಿಸಿದನೆಂತಲೂ ಉಪಪಾದಿಸಲಾಯಿತು.

॥ ಶ್ರೀಃ ॥

# ಶ್ರೀವಾಮನಪುರಾಣಂ

## ಚತುರ್ವಿಂಶೋಽಧ್ಯಾಯಃ

ಋಷಯ ಊಚುಃ

ದೇವಾನಾಂ ಬ್ರೂಹಿ ಮೇ ಕರ್ಮ ಯದ್ವೃತ್ತಾಸ್ತೇ ಪರಾಜಿತಾಃ ।
ಕಥಂ ದೇವಾಧಿದೇವೋಽಸೌ ವಿಷ್ಣುರ್ವಾಮನತಾಂ ಗತಃ ॥ ೧ ॥

ಲೋಮಹರ್ಷಣ ಉವಾಚ

ಬಲಿಸಂಸ್ಥಂ ಚ ತ್ರೈಲೋಕ್ಯಂ ದೃಷ್ಟ್ವಾ ದೇವಃ ಪುರಂದರಃ ।
ಮೇರುಸಂಸ್ಥಂ ಯಯೌ ಶಕ್ರಃ ಸ್ವಮಾತುರ್ನಿಲಯಂ ಶುಭಂ ॥ ೨ ॥

ಸಮೀಪಂ ಪ್ರಾಪ್ಯ ಮಾತುಶ್ಚ ಕಥಯಾಮಾಸ ತಾಂ ಗಿರಂ ।
ಆದಿತ್ಯಾಶ್ಚ ರಣೇ ಸರ್ವೇ ದಾನವೇನ ಪರಾಜಿತಾಃ ॥ ೩ ॥

---

## ಇಪ್ಪತ್ತನಾಲ್ಕನೆಯ ಅಧ್ಯಾಯವು

೧-೩. ಋಷಿಗಳು ಪುನಃ ಪ್ರಶ್ನೆ ಮಾಡುತ್ತಾರೆ. ದೇವತೆಗಳು ಪರಾಜಿತರಾಗಲು ಕಾರಣವೇನು, ನಂತರ ಅವರು ಏನು ಮಾಡಿದರು, ದೇವತಾ ಸಾರ್ವಭೌಮನಾದ ಮಹಾ ವಿಷ್ಣುವು ವಾಮನನಾಗಿ ಏತಕ್ಕೆ ಅವತರಿಸಿದನು. ಈ ಪ್ರಶ್ನೆಗೆ ಉತ್ತರವಾಗಿ ಲೋಮಹರ್ಷಣ ಮುನಿಯು ದೇವತೆಗಳ ವ್ಯಾಪಾರವನ್ನು ಹೇಳಲುಪಕ್ರಮಿಸುತ್ತಾನೆ ಮೂರು ಲೋಕದ ಯಾಜಮಾನ್ಯವೂ ಬಲಿಯನ್ನು ಹೊಂದಿದ ಮೇಲೆ ಇಂದ್ರನು ಇದನ್ನು ನೋಡಿ ಇದಕ್ಕೆ ಪ್ರತೀಕಾರವನ್ನು ಆಲೋಚಿಸಲು ಮೇರುಪರ್ವತದಲ್ಲಿರುವ ತನ್ನ ತಾಯಿಯಾದ ಅದಿತಿಯ ಮನೆಗೆ ಹೋದನು. ಅಲ್ಲಿ ತಾಯಿಯನ್ನು ನೋಡಿ ನಿನ್ನ ಮಕ್ಕಳಾದ ದೇವತೆಗಳೆಲ್ಲರೂ ದಾನವನಾದ ಬಲಿಯಿಂದ ಪರಾಜಯವನ್ನು ಹೊಂದಿದರೆಂಬ ಸುದ್ದಿಯನ್ನು ಅವಳಿಗೆ ತಿಳಿಯಪಡಿಸಿದನು.

**ಅದಿತಿರುವಾಚ**

ಯದ್ಯೇವಂ ಪುತ್ರ ಯುಷ್ಮಾಭಿರ್ನಶಕ್ಯೋ ಹಂತುಮಾಹವೇ ।
ಬಲಿರ್ವಿರೋಚನಸುತಃ ಸರ್ವೈಶ್ಚೈವ ಮರುದ್ಗಣೈಃ ॥ ೪ ॥

ಸಹಸ್ರಶಿರಸಾ ಶಕ್ಯಂ ಕೇವಲಂ ಹಂತುಮೇವ ಹಿ ।
ತೇನೈಕೇನ ಸಹಸ್ರಾಕ್ಷ ಹಂತುಂ ನಾನ್ಯೇನ ಶಕ್ಯತೇ ॥ ೫ ॥

ತದ್ವತ್ಪೃಚ್ಛಾಧ್ಯ ಪಿತರಂ ಕಶ್ಯಪಂ ಬ್ರಹ್ಮವಾದಿನಂ ।
ಪರಾಜಯಾರ್ಥಂ ದೈತ್ಯಸ್ಯ ಬಲೇಸ್ತಸ್ಯ ಮಹಾತ್ಮನಃ ॥ ೬ ॥

ತತೋ ದೇವಾಸ್ಸಹಸುರಾಃ ಸಂಪ್ರಾಪ್ತಾಃ ಕಾಶ್ಯಪಾಂತಿಕಂ ।
ತತ್ರಾಪಶ್ಯಂಶ್ಚ ಮಾರೀಚಂ ಮುನಿಂ ದೀಪ್ತತಪೋನಿಧಿಂ ॥ ೭ ॥

ಆದ್ಯಂ ದೇವಗುರುಂ ದಿವ್ಯಂ ಪ್ರದೀಪ್ತಂ ಬ್ರಹ್ಮತೇಜಸಾ ।
ತೇಜಸಾ ಭಾಸ್ಕರಾಕಾರಂ ಸ್ಥಿತ ಮಗ್ನಿಶಿಖೋಪಮಂ ॥ ೮ ॥

---

೪-೬. ಅದಿತಿಯು ಹೇಳುತ್ತಾಳೆ. ಎಲೈ, ಪುತ್ರನೇ, ಹೀಗಾಗಿದ್ದ ಪಕ್ಷದಲ್ಲಿ ಆ ವಿರೋಚನ ಪುತ್ರನಾದ ಬಲಿಯು ನಿನ್ನಿಂದಲೂ ಇತರ ದೇವತಾ ಸಮೂಹದಿಂದಲೂ ಸಹ ಕೊಲ್ಲಲು ಶಕ್ಯನಾಗುವುದಿಲ್ಲ. ಅವನನ್ನು ಕೊಲ್ಲಬೇಕಾದಲ್ಲಿ ಸಾವಿರತಲೆ ಇರುವವನಾಗಬೇಕು. ಅವನೊಬ್ಬನಿಂದಲೇ ಆ ಕೆಲಸವು ಸಾಧ್ಯವೇ ಹೊರತು ಬೇರೆ ಯಾರಿಂದಲೂ ಸಾಧ್ಯವಿಲ್ಲ. (ಇಲ್ಲಿ ಸಹಸ್ರ ಶಿರಸಾ ಎಂಬ ಪದವು ಪುರುಷಸೂಕ್ತಪ್ರತಿಪಾದ್ಯನಾದ ಮಹಾ ವಿಷ್ಣುವನ್ನು ಬೋಧಿಸುತ್ತದೆ.) ಆದುದರಿಂದ ಈ ವಿಷಯದಲ್ಲಿ ಮಹಾತ್ಮನಾದ ಬಲಿಗೆ ಪರಾಜಯವನ್ನುಂಟುಮಾಡಲು ಉಚಿತವಾದ ಉಪಾಯವನ್ನು ನಿಮ್ಮ ತಂದೆಯಾದ ಬ್ರಹ್ಮವಾದಿಯಾದ ಕಶ್ಯಪರನ್ನೇ ಕೇಳಿ ತಿಳಿದುಕೋ ಎಂದಳು.

೭-೧೦. ಅನಂತರ ದೇವತೆಗಳೆಲ್ಲರೂ ಒಟ್ಟುಗೂಡಿ ಕಾಶ್ಯಪರ ಸಮೀಪಕ್ಕೆ ಬಂದರು. ಅಲ್ಲಿ ತಪಸ್ಸಿನಿಂದ ದೇದೀಪ್ಯಮಾನನಾಗಿಯೂ, ಬ್ರಹ್ಮತೇಜಸ್ಸಿನಿಂದ ಜ್ವಲಿಸುತ್ತಲೂ, ತೇಜಸ್ಸಿನಿಂದ ಸೂರ್ಯನಿಗೂ ಅಗ್ನಿಗೂ ಸದೃಶನಾಗಿಯೂ,' ಬ್ರಹ್ಮ ದಂಡವನ್ನು ಕೆಳಗಿಟ್ಟು ಕೃಷ್ಣಾಜಿನವನ್ನೂ ನಾರು ಮಡಿಯನ್ನೂ ಉಟ್ಟು ಅಗ್ನಿ

ನ್ಯಸ್ತದಂಡಂ ತಪೋಯುಕ್ತಂ ಬದ್ಧಕೃಷ್ಣಾಜಿನಾಂಬರಂ ।
ವಲ್ಕಲಾಜಿನಸಂವೀತಂ ಪ್ರದೀಪ್ತಮಿವ ತೇಜಸಾ ॥ ೯ ॥

ಹುತಾಶವದ್ದೀಪ್ಯಮಾನ ಮಾಜ್ಯಗಂಧಪುರಸ್ಕೃತಂ ।
ಸ್ವಾಧ್ಯಾಯವಂತಂ ಪಿತರಂ ವಪುಷ್ಮಂತಮಿವಾನಲಂ ॥ ೧೦ ॥

ಬ್ರಹ್ಮವಾದಿನಮತ್ಯುಗ್ರಂ ಚರಾಚರಗುರುಂ ಪ್ರಭುಂ ।
ಬ್ರಹ್ಮಣಾ ಪ್ರತಿಮಂ ಲಕ್ಷ್ಮ್ಯಾ ಕಶ್ಯಪಂ ದೀಪ್ತತೇಜಸಂ ॥ ೧೧ ॥

ಯಃ ಸ್ರಷ್ಟಾ ಸರ್ವಲೋಕಾನಾಂ ಪ್ರಜಾನಾಂ ಪತಿರುತ್ತಮಃ ।
ಆತ್ಮಭಾವವಿಶೇಷೇಣ ತೃತೀಯೋಯಂ ಪ್ರಜಾಪತಿಃ ॥ ೧೨ ॥

ಅಥ ಪ್ರಣಮ್ಯ ತೇ ದೇವಾಃ ಸಹಾದಿತ್ಯಾಃ ಸುರರ್ಷಭಾಃ ।
ಊಚುಃ ಪ್ರಾಂಜಲಯಸ್ಸರ್ವೇ ಬ್ರಹ್ಮಣ್ಯಾಃ ಶಿವಮಾನಸಾಃ ॥ ೧೩ ॥

ಅಜೇಯೋ ಯುಧಿ ಶಕ್ರೇಣ ಬಲಿರ್ದೈತ್ಯೋ ಬಲಾಧಿಕಃ ।
ತಸ್ಮಾದ್ವಿಧತ್ತ ನಃ ಶ್ರೇಯೋ ದೇವಾನಾಂ ಪುಷ್ಟಿವರ್ಧನಂ ॥ ೧೪ ॥

---

ಶುಶ್ರೂಷೆಯಿಂದ ಆಜ್ಯಗಂಧದೊಡನೆ ಕೂಡಿ ಅಧ್ಯಯನ ಮಾಡುತ್ತಲೂ ಇರುವ ದೇವತೆಗಳಿಗೆಲ್ಲರಿಗೂ ಆದಿಗುರುವಾದ, ಶರೀರವನ್ನು ಹೊಂದಿರುವ ಅಗ್ನಿಯೋ ಎಂಬಂತಿರುವ ತಂದೆಯಾದ ಆ ಮಾರೀಚಮುನಿಯನ್ನು ನೋಡಿದರು.

೧೧-೧೩. ಬ್ರಹ್ಮವಾದಿಗಳಲ್ಲಿ ಅಗ್ರೇಸರನಾಗಿಯೂ, ಸಕಲ ಜಗತ್ತಿಗೂ ಗುರುವಾಗಿಯೂ, ನಿಗ್ರಹಾನುಗ್ರಹಸಮರ್ಥನಾಗಿಯೂ ಪರಮಾತ್ಮನಿಗೆ ಸಮಾನವಾದ ಕಾಂತಿಯುಳ್ಳವನಾಗಿಯೂ ಇರುವ ಆ ಕಶ್ಯಪ ಮಹಾ ಮುನಿಯು ತನ್ನ ಸಂಕಲ್ಪ ಮಾತ್ರದಿಂದ ಸರ್ವಲೋಕಸೃಷ್ಟಿಕರ್ತನಾಗಿ ಮೂರನೇ ಪ್ರಜಾಪತಿಯಾಗಿ ಪ್ರಕಾಶಿಸುತ್ತಿದ್ದನು. ಅವನನ್ನು ನೋಡಿ ದೇವತೆಗಳು ಭಕ್ತಿಯಿಂದ ನಮಸ್ಕರಿಸಿ ಶುದ್ಧ ಮನಸ್ಕರಾಗಿಯೂ ಪರಮಾತ್ಮನ ಭಕ್ತಿಯಿಂದ ಕೂಡಿಯೂ ಕೈ ಮುಗಿದುಕೊಂಡು ಈ ರೀತಿ ಪ್ರಾರ್ಥಿಸಿದರು.

೧೪-೧೫. ಇಂದ್ರನಿಂದಲೂ ಯುದ್ಧದಲ್ಲಿ ಜಯಿಸಲಶಕ್ಯನಾಗಿ ಬಲಿಯು ಪರಾಕ್ರಮದಿಂದ ಅಭಿವೃದ್ಧಿ ಹೊಂದುತ್ತಿದ್ದಾನೆ. ಆದುದರಿಂದ ದೇವತೆಗಳಾದ ನಾವು ಈ ಪರಾಜಯದಿಂದ ಪಾರಾಗಿ ವಿಜಯವನ್ನುಗಳಿಸಲು ಪುಷ್ಟಿವರ್ಧಕವಾಗಿಯೂ

**ಶ್ರುತ್ವಾ ತು ವಚನಂ ತೇಷಾಂ ಪುತ್ರಾಣಾಂ ಕಶ್ಯಪಃ ಪ್ರಭುಃ ।**

**ಕಶ್ಯಪ ಉವಾಚ**

**ಕುರುದ್ಧ್ವಂ ಗಮನೇ ಬುದ್ಧಿಂ ಬ್ರಹ್ಮಲೋಕಾಯ ಲೋಕಕೃತ್ ॥**
**ಕಥಯಿಸ್ಯತ್ಯುಪಾಯಂ ವೋ ಯಥಾ ಜೇಷ್ಯಥ ದೈತ್ಯಪಂ ॥ ೧೫ ॥**

**ಶಕ್ರ ಗಚ್ಛಾಮ ಸದನಂ ಬ್ರಹ್ಮಣಃ ಪರಮಾದ್ಭುತಂ ।**
**ಯಥಾ ಪರಾಜಯಂ ಸರ್ವೇ ಬ್ರಹ್ಮಣಃ ಖ್ಯಾತು ಮುದ್ಯತಾಃ ॥ ೧೬ ॥**

**ಸಹಾದಿತ್ಯಾಸ್ತತೋ ಯಾತಾಃ ದೇವಾಃ ಕಾಶ್ಯಪಮಾಶ್ರಮಂ ।**
**ಪ್ರಸ್ಥಿತಾ ಬ್ರಹ್ಮಸದನಂ ಬ್ರಹ್ಮರ್ಷಿಗಣಸೇವಿತಂ ॥ ೧೭ ॥**

**ತೇ ಮುಹೂರ್ತೇನ ಸಂಪ್ರಾಪ್ತಾ ಬ್ರಹ್ಮಲೋಕಂ ಸುವರ್ಚಸಃ ।**
**ದಿವ್ಯೈಃ ಕಾಮಗಮ್ಯೈರ್ಯಾನೈರ್ಯಥಾರ್ಹೈಃ ಸುಮಹಾಬಲೈಃ ॥ ೧೮ ॥**

---

ಶ್ರೇಯಸ್ಕರವಾಗಿಯೂ ಇರುವ ಉಪಾಯವನ್ನು ಅನುಗ್ರಹಿಸಬೇಕು. ಈ ರೀತಿಯಾದ ಪುತ್ರರ ವಾಕ್ಯವನ್ನು ಕೇಳಿ ಕಶ್ಯಪಮಹಾಮುನಿಯು ಅವರನ್ನು ಕುರಿತು ದೈತ್ಯ ರಾಜನಾದ ಬಲಿಯನ್ನು ಜಯಿಸುವ ಅಪೇಕ್ಷೆಯು ನಿಮಗೆ ಇದ್ದಲ್ಲಿ ಬ್ರಹ್ಮಲೋಕಕ್ಕೆ ಹೋಗಲು ಪ್ರಯತ್ನಿಸಿರಿ. ಅಲ್ಲಿರುವ ಲೋಕಕರ್ತನಾದ ಚತುರ್ಮುಖನು ನಿಮ್ಮ ವಿಜಯಕ್ಕೆ ತಕ್ಕ ಉಪಾಯವನ್ನು ಹೇಳುತ್ತಾನೆ, ಎಂದು ಉತ್ತರಕೊಟ್ಟನು.

೧೫-೧೮. ಮತ್ತು ಎಲೈ, ಇಂದ್ರನೇ, ಆಶ್ಚರ್ಯಕರವಾದ ಚತುರ್ಮುಖನ ಸ್ಥಾನಕ್ಕೆ ಹೋಗೋಣ, ನಮಗೆ ಉಂಟಾಗಿರುವ ಪರಾಜಯವನ್ನು ಚತುರ್ಮುಖನಲ್ಲಿ ತಿಳಿಸೋಣ, ಎಂದು ಕಶ್ಯಪರ ಆಶ್ರಮಕ್ಕೆ ಬಂದಿದ್ದ ದೇವತೆಗಳೆಲ್ಲರೂ ಕಶ್ಯಪರನ್ನೊಡ ಗೂಡಿ ಬ್ರಹ್ಮರ್ಷಿಗಳಿಂದ ಸೇವಿಸಲ್ಪಡುತ್ತಿರುವ ಬ್ರಹ್ಮಲೋಕಕ್ಕೆ ಹೊರಟರು. ಅವರೆಲ್ಲರೂ ತಮತಮಗೆ ಅರ್ಹವಾದ ಮಹಾಬಲವುಳ್ಳ ಯಾನಗಳಿಂದ ಮುಹೂರ್ತ ಮಾತ್ರದಲ್ಲಿ ಬ್ರಹ್ಮಲೋಕಕ್ಕೆ ಸೇರಿದರು.

ಬ್ರಹ್ಮಾಣಂ ಪ್ರಷ್ಟು ಮಿಚ್ಛಂತ ಸ್ತಪೋರಾಶಿಂ ತಮವ್ಯಯಂ ।
ಅಧ್ಯಗಚ್ಛಂತ ವಿಸ್ತೀರ್ಣಾಂ ಬ್ರಹ್ಮಣಃ ಪರಮಾಂ ಸಭಾಂ ॥ ೧೯ ॥

ಷಟ್ಪದೋದ್ಗೀತಮಧುರಾಂ ಸಾಮಗೈಸ್ಸಮುದೀರಿತಾಂ ।
ಶ್ರೇಯಸ್ಕರೀಮಮಿತ್ರಘ್ನೀಂ ದೃಷ್ಟ್ವಾ ಸಂಜಹೃಷುಸ್ತದಾ ॥ ೨೦ ॥

ಋಚೋ ಬಹ್ವೃಚಮುಖ್ಯೈಶ್ಚ ಪ್ರೋಕ್ತಾಃ ಕ್ರಮಪದಾಕ್ಷರೈಃ ।
ಶುಶ್ರುವು ಸ್ತ್ವಮರವ್ಯಾಘ್ರಾಃ ವಿತತೇಷು ಚ ಕರ್ಮಸು ॥ ೨೧ ॥

ಯಜ್ಞವಿದ್ಯಾವೇದವಿದಃ ಪದಕ್ರಮವಿದಸ್ತಥಾ ।
ಸ್ವರೇಣ ಪರಮರ್ಷೀಣಾಂ ಸಾ ಬಭೂವ ಪ್ರಣಾದಿತಾ ॥ ೨೨ ॥

ಯಜ್ಞಸಂಸ್ತವವಿದ್ಭಿಶ್ಚ ಶಿಕ್ಷಾವಿದ್ಭಿಸ್ತಥಾ ದ್ವಿಜೈಃ ।
ಛಂದಸಾಂ ಚ ತಥಾ ವಿಜ್ಞೈಃ ಸರ್ವವಿದ್ಯಾವಿಶಾರದೈಃ ॥ ೨೩ ॥

ಲೋಕಾಯತಿಕಮುಖ್ಯೈಶ್ಚ ಶುಶ್ರುವುಃ ಸ್ವರಮೀರಿತಂ ।
ತತ್ರ ತತ್ರ ಚ ವಿಪೇಂದ್ರಾನ್ನಿಯತಾನ್ಸಂಶಿತವ್ರತಾನ್ ॥ ೨೪ ॥

---

೧೯-೨೧. ಅಲ್ಲಿ ತಪೋನಿಧಿಯಾಗಿರುವ ಚತುರ್ಮುಖನನ್ನು ಸಂದರ್ಶಿಸಿ ಅವನೊಡನೆ ಪ್ರಶ್ನೆಮಾಡಲು ಆಶೆಪಟ್ಟು ವಿಸ್ತಾರವಾದ ಅವನ ಸಭೆಗೆ ಹೋಗಿ ಸೇರಿದರು. ಆ ಮಹಾಸಭೆಯಲ್ಲಿ ಸಾಮವೇದಿಗಳಿಂದ ಹೇಳಲ್ಪಡುತ್ತಿರುವ ಭ್ರಮರ ಝಂಕಾರದಂತೆ ಮಧುರವಾಗಿಯೂ, ಶತ್ರುನಾಶವಾಗಿಯೂ, ಶ್ರೇಯಸ್ಕರವಾಗಿಯೂ ಇರುವ ಸಾಮಗಾನವನ್ನು ಕೇಳಿ ಹರ್ಷಗೊಂಡರು. ಮತ್ತು ವಿಸ್ತಾರವಾಗಿ ನಡೆಸಲ್ಪಡುತ್ತಿರುವ ವೈದಿಕ ಕರ್ಮಕಲಾಪಗಳಲ್ಲಿ ಬಹ್ವೃಚ ಶಾಖಿಗಳಿಂದ ಹೇಳಲ್ಪಡುತ್ತಿರುವ, ಕ್ರಮ, ಪದ ಮೊದಲಾದ ವಿಸ್ತಾರದಿಂದ ಕೂಡಿರುವ ಋಕ್ಕುಗಳನ್ನು ಕೇಳಿ ಆ ದೇವತೆಗಳು ಬಹಳ ಸಂತುಷ್ಟರಾದರು.

೨೨-೨೪. ಯಾಜ್ಞಿಕಪ್ರಯೋಗ ಮತ್ತು ವೇದ, ಪದ, ಕ್ರಮ ಮೊದಲಾದವುಗಳಲ್ಲಿ ಪಂಡಿತರಾಗಿರುವವರ ಮತ್ತು ಋಷಿಗಳ ವೇದಸ್ವರದಿಂದ ಆ ಸಭೆಯು ಶಬ್ದದಿಂದ ಕೂಡಿ ವಿರಾಜಿಸುತ್ತಿತ್ತು. ಹಾಗೆಯೇ ಯಜ್ಞದಲ್ಲಿ ಸ್ತೋತ್ರಮಾಡುತ್ತಿರುವ, ಮತ್ತು ಶಿಕ್ಷಾಪಾಠವನ್ನು ನಡೆಸುತ್ತಿರುವ, ಮತ್ತು ಛಂದಶ್ಶಾಸ್ತ್ರಾಭಿಜ್ಞರ, ಮತ್ತು ಸರ್ವ

ಜಪಹೋಮಪರಾನ್ಮುಖ್ಯಾನ್ದದೃಶುಃ ಕಾಶ್ಯಪಾತ್ಮಜಾಃ ।
ತಸ್ಯಾಂ ಸಭಾಯಾಮಾಸ್ತೇ ಸ ಬ್ರಹ್ಮಾ ಲೋಕಪಿತಾಮಹಃ ॥ ೨೫ ॥

ಚರಾಚರಗುರುಃ ಶ್ರೀಮಾನ್ವಿದ್ಯಯಾ ವೇದಮಾಯಯಾ ।
ಉಪಾಸತೇ ಯಂ ತತ್ರೈವ ಪ್ರಜಾನಾಂ ಪತಯೋ ವಿಭುಂ ॥ ೨೬ ॥

ದಕ್ಷಃ ಪ್ರಚೇತಾ ಪುಲಹೋ ಮರೀಚಿಶ್ಚ ದ್ವಿಜೋತ್ತಮಾಃ ।
ಭೃಗುರತ್ರಿರ್ವಸಿಷ್ಠಶ್ಚ ಗೌತಮೋ ನಾರದ ಸ್ತಥಾ ॥ ೨೭ ॥

ವಿದ್ಯಾಸ್ತಥಾಂತರಿಕ್ಷಂ ಚ ವಾಯುಸ್ತೇಜೋ ಜಲಂ ಮಹೀ ।
ಶಬ್ದಃ ಸ್ಪರ್ಶಶ್ಚರೂಪಂ ಚ ರಸೋ ಗಂಧಸ್ತಥೈವ ಚ ॥ ೨೮ ॥

ಪ್ರಕೃತಿಶ್ಚ ವಿಕಾರಾಶ್ಚ ಯಚ್ಚಾನ್ಯತ್ಕಾರಣಂ ಮಹತ್ ।
ಸಾಂಗೋಪಾಂಗಾಶ್ಚ ಚತ್ವಾರೋ ವೇದಾಃ ಲೋಕಪತಿಸ್ತಥಾ ॥ ೨೯ ॥

ತಪಾಂಸಿ ಕ್ರತವಶ್ಚೈವ ಸಂಕಲ್ಪಃ ಪ್ರಾಣ ಏವ ಚ ।
ಏತೇ ಚಾನ್ಯೇ ಚ ಬಹವಃ ಸ್ವಯಂಭುವಮುಪಾಸತೇ ॥ ೩೦ ॥

---

ವಿದ್ಯೆಯಲ್ಲೂ ನಿಷ್ಣಾತರಾದವರ, ಮತ್ತು ಲೋಕಾಯತ ಮತಾ (ಚಾರ್ವಾಕ)ನುಯಾಯಿಗಳ ಆಯಾಯ ವಿದ್ಯೆಗೆ ಉಚಿತವಾದ ಸ್ವರಗಳನ್ನೂ ಕೇಳಿದರು. ಮತ್ತು ಅಲ್ಲಲ್ಲಿ ನೆಲಸಿರುವ ವ್ರತನಿಯಮಶಾಲಿಗಳಾದ ಮತ್ತು

೨೫. ಜಪಹೋಮತತ್ಪರರಾದ ಬ್ರಾಹ್ಮಣೋತ್ತಮರನ್ನೂ ಆ ದೇವತೆಗಳು ನೋಡಿದರು. ಅಂತಹ ಮಹಾಸಭೆಯಲ್ಲಿ ವೇದವಿದ್ಯೆಯಿಂದ ಪ್ರಕಾಶಮಾನನಾದ ಚರಾಚರ ಜಗತ್ಕಾರಣನಾದ ಪಿತಾಮಹನೆಂದು ಪ್ರಖ್ಯಾತನಾದ ಚತುರ್ಮುಖನು ನೆಲಸಿರುವನು.

೨೬-೩೦. ಆ ಚತುರ್ಮುಖನನ್ನು ದಕ್ಷ, ಪ್ರಚೇತ, ಪುಲಹ, ಮರೀಚಿ, ಮೊದಲಾದ ಬ್ರಾಹ್ಮಣೋತ್ತಮರೂ, ವಿದ್ಯಾ ಅಂತರಿಕ್ಷ, ವಾಯು, ತೇಜಸ್ಸು, ಜಲ, ಭೂಮಿ, ಇವುಗಳ ಮತ್ತು ಶಬ್ದಸ್ಪರ್ಶರೂಪ ರಸಗಂಧಗಳ ಅಭಿಮಾನದೇವತೆಗಳೂ, ಪ್ರಕೃತಿ, ಪ್ರಕೃತಿವಿಕಾರವಾದ ಮಹತ್ತತ್ವಾದಿಗಳು, ಸಾಂಗವಾದ ನಾಲ್ಕು ವೇದಗಳು, ದಿಕ್ಪಾಲಕರು, ತಪಸ್ಸು, ಯಜ್ಞ, ಸಂಕಲ್ಪ, ಪ್ರಾಣ ಇವುಗಳ ಅಭಿಮಾನ ದೇವತೆಗಳೂ ಸಹ ಅಲ್ಲಿಯೇ ಇದ್ದುಕೊಂಡು ಸೇವಿಸುತ್ತಿರುವರು.

ಧರ್ಮೋಽಹ್ಯರ್ಥಶ್ಚ ಕಾಮಶ್ಚ ಕ್ರೋಧೋ ಹರ್ಷಶ್ಚ ನಿತ್ಯಶಃ ॥ ೩೧ ॥
ಶುಕ್ರೋ ಬೃಹಸ್ಪತಿಶ್ಚೈವ ಸಂವರ್ತೋಽಥ ಬುಧಸ್ತಥಾ ।

ಶನೈಶ್ಚರಶ್ಚ ರಾಹುಶ್ಚ ಗ್ರಹಾಸ್ಸರ್ವೇ ವ್ಯವಸ್ಥಿತಾಃ ॥
ಮರುತೋ ವಿಶ್ವಕರ್ಮಾಚ ವಸವಶ್ಚ ದ್ವಿಜೋತ್ತಮಾಃ ॥ ೩೨ ॥

ದಿವಾಕರಶ್ಚ ಸೋಮಶ್ಚ ದಿನಂ ರಾತ್ರಿಸ್ತಥೈವ ಚ ।
ಅರ್ಧಮಾಸಾಶ್ಚ ಮಾಸಾಶ್ಚ ಋತವಃ ಷಟ್ ಚ ಸಂಸ್ಥಿತಾಃ ॥ ೩೩ ॥

ತಾಂ ಪ್ರವಿಶ್ಯ ಸಭಾಂ ದಿವ್ಯಾಂ ಬ್ರಹ್ಮಣಸ್ಸರ್ವಕಾಮದಾಂ ।
ಕಶ್ಯಪಃ ತ್ರಿದಶೇಶಶ್ಚ ಪುತ್ರೋ ಧರ್ಮಭೃತಾಂ ವರಃ ॥ ೩೪ ॥

ಸರ್ವತೇಜೋಮಯೀಂ ದಿವ್ಯಾಂ ಬ್ರಹ್ಮರ್ಷಿಗಣಸೇವಿತಾಂ ।
ಬ್ರಾಹ್ಮ್ಯಾ ಶ್ರಿಯಾ ಸೇವ್ಯಮಾನಾಮಚಿಂತ್ಯಾಂ ವಿಗತಕ್ಲಮಾಂ ॥ ೩೫ ॥

ಬ್ರಹ್ಮಾಣಂ ಪ್ರೇಕ್ಷ್ಯ ತೇ ಸರ್ವೇ ಪರಮಾಸನಮಾಸ್ಥಿತಂ ।
ಶಿರೋಭಿಃ ಪ್ರಣತಾ ದೇವಂ ದೇವಾ ಬ್ರಹ್ಮರ್ಷಿಭಿ ಸ್ಸಹ ॥ ೩೬ ॥

---

೩೧-೩೩. ಮತ್ತು ಧರ್ಮಾರ್ಥಕಾಮಗಳೂ ಕ್ರೋಧಹರ್ಷಗಳೂ ಶುಕ್ರ, ಗುರು, ಬುಧ, ಶನಿ, ರಾಹು ಮೊದಲಾದ ಗ್ರಹಗಳು, ಪ್ರಳಯ, ಇವುಗಳೆಲ್ಲವೂ ತಮ್ಮ ತಮ್ಮ ಕಾರ್ಯದಲ್ಲಿ ನಿಯಮಿತವಾಗಿ ಅವನನ್ನು ಸೇವಿಸುತ್ತಿವೆ. ಮತ್ತು ಮರುತ್ತೆಂಬ ದೇವತೆಗಳು, ವಿಶ್ವಕರ್ಮನೂ, ಅಷ್ಟವಸುಗಳು, ಸೂರ್ಯಚಂದ್ರರು, ಅಹೋರಾತ್ರಿಗಳೂ, ಅರ್ಧಮಾಸ(ಪಕ್ಷ) ಮಾಸ, ಋತುಗಳು ಎಲ್ಲರೂ ಅವನ ಆಜ್ಞೆಗೆ ಅಧೀನರಾಗಿ ಅಲ್ಲಿಯೇ ನೆಲಸಿರುವರು. (ಇಲ್ಲಿ ಹೇಳಿರುವ ಕೆಲವು ಅಚೇತನ ವಸ್ತುಗಳು ತತ್ತದಭಿಮಾನಿ ದೇವತಾ ಪರವೆಂದು ಭಾವಿಸಬೇಕು.)

೩೪-೩೬. ಅಪ್ರಾಕೃತವಾಗಿಯೂ ಸಕಲಾಭೀಷ್ಟಪ್ರದವಾಗಿಯೂ, ಬ್ರಹ್ಮರ್ಷಿಗಳಿಂದ ಸೇವಿಸಲ್ಪಟ್ಟು, ತೇಜಸ್ಸಿನಿಂದ ಜ್ವಲಿಸುತ್ತಲೂ, ಬ್ರಹ್ಮತೇಜಸ್ಸಿನಿಂದ ಪ್ರಕಾಶಮಾನವಾಗಿಯೂ, ಸರ್ವದುಃಖವನ್ನು ಹೋಗಲಾಡಿಸಿ ಶಾಂತಿಪ್ರದವಾಗಿಯೂ ಇರುವ ಆ ಮಹಾಸಭೆಯನ್ನು ಸೇರಿ ಕಶ್ಯಪರೂ ಅವರ ಪುತ್ರನಾಗಿ ಧಾರ್ಮಿಕಾಗ್ರೇಸರನಾಗಿರುವ ಇಂದ್ರನೂ ಸಹ ಅಲ್ಲಿರುವ ಶ್ರೇಷ್ಠವಾದ ಆಸನದಲ್ಲಿ ಕುಳಿತಿರುವ ಚತುರ್ಮುಖನನ್ನು ನೋಡಿ ಸಂತುಷ್ಟರಾದರು. ಅನಂತರ ಬ್ರಹ್ಮರ್ಷಿಗಳೊಡನೆ ಚತುರ್ಮುಖನ ಪಾದಗಳನ್ನು ಮುಟ್ಟಿ ಸಾಷ್ಟಾಂಗಪ್ರಣಾಮಮಾಡಿ ಭಯಭಕ್ತಿಯೊಡನೆ ನಿಂತರು.

ತತಸ್ಸಂಸ್ಪೃಶ್ಯ ಚರಣೌ ನಿಯುತಾಃ ಪರಮಾತ್ಮನಃ ।
ವಿಮುಕ್ತಾಸ್ಸರ್ವಪಾಪೇಭ್ಯಃ ಸರ್ವೇ ವಿಗತಕಲ್ಮಷಾಃ ॥ ೩೭ ॥

ದೃಷ್ಟ್ವಾ ತು ತಾನ್ ಸುರಾನ್ ಸರ್ವಾನ್ ಕಾಶ್ಯಪೇನ ಸಹಾಗತಾನ್ ।
ಆಹ ಬ್ರಹ್ಮಾ ಮಹಾತೇಜಾಃ ದೇವಾನಾಂ ಪ್ರಭುರೀಶ್ವರಃ ॥ ೩೮ ॥

ಇತಿ ಶ್ರೀ ವಾಮನಪುರಾಣೇ ಸರೋಮಾಹಾತ್ಮ್ಯೇ
ಚತುರ್ವಿಂಶೋಽಧ್ಯಾಯಃ

---

೩೭-೩೮. ಎಲ್ಲರೂ ಚತುರ್ಮುಖನ ಸೇವೆಯಿಂದ ಸರ್ವಪಾಪ ನಿವೃತ್ತಿಯನ್ನು ಹೊಂದಿ ಪರಿಶುದ್ಧರಾದರು. ಕಾಶ್ಯಪರೊಡನೆ ಬಂದಿರುವ ಎಲ್ಲಾ ದೇವತೆಗಳನ್ನೂ ನೋಡಿ ತೇಜಸ್ವಿಯಾಗಿಯೂ ಜಗತ್ತಿಗೆ ಪ್ರಭುವಾಗಿಯೂ ಇರುವ ಬ್ರಹ್ಮನು ಅವರನ್ನು ಕುರಿತು ಹೀಗೆ ಹೇಳುತ್ತಾನೆ.

ಇಲ್ಲಿಗೆ ಶ್ರೀ ವಾಮನ ಪುರಾಣದಲ್ಲಿ ಸರೋಮಾಹಾತ್ಮ್ಯವೆಂಬ
ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದಿದೆ.

## ಅಧ್ಯಾಯಾರ್ಥ ಸಂಗ್ರಹ

ಈ ಅಧ್ಯಾಯದಲ್ಲಿ ಧರ್ಮಿಷ್ಠನಾಗಿರುವ ಬಲಿಯನ್ನು ಜಯಿಸಲು ಉಪಾಯವನ್ನರಿಯದ ದೇವತೆಗಳು ಇಂದ್ರನ ಮೂಲಕ ಅದಿತಿಯಲ್ಲಿ ಶರಣಾಗತರಾಗಿ ತಮ್ಮ ಪರಾಜಯವನ್ನು ಹೇಳಿಕೊಂಡರೆಂತಲೂ, ಅವಳ ಅಪ್ಪಣೆಯಂತೆ ಕಶ್ಯಪರಲ್ಲಿಯೂ ವಿಜ್ಞಾಪಿಸಿ ಅವರೊಡನೆ ಚತುರ್ಮುಖಲೋಕಕ್ಕೆ ಹೊರಟರೆಂತಲೂ ಹೇಳಿ, ಚತುರ್ಮುಖನ ಸಭೆಯನ್ನು ವರ್ಣಿಸಿ ಅಲ್ಲಿ ಅವನ ದರ್ಶನವನ್ನು ಪಡೆದು ನಮಸ್ಕರಿಸಿ ನಿಂತ ಈ ದೇವತೆಗಳನ್ನೂ ಕಶ್ಯಪರನ್ನೂ ಕುರಿತು ಬ್ರಹ್ಮದೇವರು ಮಾತನ್ನು ಹೇಳಲುಪಕ್ರಮಿಸುತ್ತಾರೆ. ಎಂದು ಹೇಳಲಾಯಿತು.

॥ ಶ್ರೀಃ ॥

# ಶ್ರೀವಾಮನಪುರಾಣಂ

## ಪಂಚವಿಂಶೋಽಧ್ಯಾಯಃ

### ಬ್ರಹ್ಮೋವಾಚ

**ಯದರ್ಥಮಿಹ ಸಂಪ್ರಾಪ್ತಾ ಭವಂತಃ ಸರ್ವ ಏವ ಹಿ ।**
**ಚಿಂತಯಾಮ್ಯಹ ಮವ್ಯಗ್ರಮೇತದರ್ಥಂ ಮಹಾಬಲಾಃ ॥ ೧ ॥**

**ಭವಿಷ್ಯತಿ ಚ ವ ಸ್ಸರ್ವಂ ಕಾಂಕ್ಷಿತಂ ಯತ್ಸುರೋತ್ತಮಾಃ ।**
**ಬಲೇರ್ದಾನವಮುಖ್ಯಸ್ಯ ಯೋಽಸ್ಯ ಜೇತಾ ಭವಿಷ್ಯತಿ ॥ ೨ ॥**

**ನ ಕೇವಲಂ ಸುರಾರೀಣಾಂ ಗತಿರ್ಮಮ ಸ ವಿಶ್ವಕೃತ್ ।**
**ತ್ರೈಲೋಕ್ಯಸ್ಯಾಪಿ ನೇತಾ ಚ ದೇವಾನಾಮಪಿ ಸ ಪ್ರಭುಃ ॥ ೩ ॥**

---

### ಇಪ್ಪತ್ತೈದನೆಯ ಅಧ್ಯಾಯವು

೧-೪. ಚತುರ್ಮುಖನು ಹೇಳುತ್ತಾನೆ. ಎಲೈ, ಮಹಾಸತ್ವರೇ, ನೀವುಗಳು ಇಲ್ಲಿಗೆ ಯಾವ ಕಾರ್ಯಕ್ಕಾಗಿ ಬಂದಿರುವಿರೋ ಅದನ್ನು ನಾನು ಏಕಾಗ್ರತೆಯಿಂದ ಆಲೋಚಿಸುತ್ತಿರುವೆನು. ಎಲೈ, ಸುರೋತ್ತಮರೇ, ನಿಮ್ಮ ಇಷ್ಟವೆಲ್ಲವೂ ಸಿದ್ಧಿಸುತ್ತದೆ. ಸಂದೇಹಪಡಬೇಡಿರಿ. ದಾನವಶ್ರೇಷ್ಠನಾದ ಬಲಿಯನ್ನೂ ಜಯಿಸುವ ಮಹಾಪುರುಷನು ಅವತರಿಸುತ್ತಾನೆ. ಜಗತ್ತಿಗೆಲ್ಲಾ ಕಾರಣನಾಗಿರುವ ಪರಮಾತ್ಮನು ದಾನವರಿಗೆ ಮಾತ್ರವಲ್ಲ ನನಗೂ ನಿಮಗೂ ಮತ್ತು ಮೂರು ಲೋಕಗಳಿಗೂ ಒಡೆಯನಾಗಿರುತ್ತಾನೆ. ಅವನೇ ಕಾರ್ಯರೂಪಿಯಾಗಿ ಜಗನ್ಮಯನಾಗಿರುವನು ಶಾಶ್ವತವಾದ ಪುರಾಣಪುರುಷನೂ ಆಗಿರುವನು. (ಅನಾದಿಯಾಗಿಯೂ ನಿತ್ಯನಾಗಿಯೂ ಇರುವ ಪರಮಾತ್ಮನು ಪ್ರಳಯಕಾಲದಲ್ಲಿ ಸೂಕ್ಷ್ಮವಾಗಿರುವ ಚಿದಚಿತ್ಪದಾರ್ಥಗಳೊಡಗೂಡಿ ಅವ್ಯಕ್ತವೆಂಬ ಹೆಸರಿನಿಂದ ಕಾರಣಾವಸ್ಥೆಯಲ್ಲಿರುತ್ತಾನೆಂದೂ ಅವನೇ ತನ್ನ ಲೀಲಾರ್ಥವಾಗಿ ಜಗತ್ಸೃಷ್ಟಿಯನ್ನು ಸಂಕಲ್ಪಿಸಿ ತನ್ನಲ್ಲಿ ವಿಶೇಷಣರೂಪದಿಂದಿರುವ

ಯಃ ಪ್ರಭು ಸ್ಸರ್ವಲೋಕಾನಾಂ ವಿಶ್ವಂ ಯಶ್ಚ ಸನಾತನಂ ।
ಪೂರ್ವಜಂ ಯಂ ಮಮ ಪ್ರಾಹುರಾದಿದೇವಂ ಸನಾತನಂ ॥ ೪ ॥

ತಂ ದೇವಾಶ್ಚ ಮಹಾತ್ಮಾನಂ ನ ವಿದುಃ ಕೋಽಸ್ಯಸಾವಿತಿ ।
ದೇವಾನಸ್ಮಾಂಶ್ಚ ವಿಶ್ವಂ ಚ ಸ ವೇತ್ತಿ ಪುರುಷೋತ್ತಮಃ ॥ ೫ ॥

ತಸ್ಯೈವ ತು ಪ್ರಸಾದೇನ ಪ್ರವಕ್ಷ್ಯೇ ಪರಮಾಂ ಗತಿಂ ।
ಯದಿ ಯೋಗಂ ಸಮಾಸ್ಥಾಯ ತಪಶ್ಚರತಿ ದುಶ್ಚರಂ ॥ ೬ ॥

ಕ್ಷೀರೋದಸ್ಯೋತ್ತರೇ ಕೂಲ ಉದೀಚ್ಯಾಂ ದಿಶಿ ವಿಶ್ವಕೃತ್ ।
ತತಃ ಶ್ರೋಷ್ಯಥ ಸಂಘುಷ್ಟಾಂ ಮೇಘಗಂಭೀರನಿಸ್ವನಾಂ ॥ ೭ ॥

ರಕ್ತಾಂ ಪುಷ್ಟಾಕ್ಷರಾಂ ರಮ್ಯಾಮಭಯಾಂ ಸರ್ವದಾ ಶಿವಾಂ ।
ವಾಣೀಂ ಪರಮಸಂಸ್ಕಾರಾಂ ವದತಾಂ ಬ್ರಹ್ಮವಾದಿನಾಂ ॥ ೮ ॥

---

ಚಿದಚಿತ್ಪದಾರ್ಥಗಳನ್ನೂ ಸ್ಥೂಲಜಗದ್ರೂಪವನ್ನಾಗಿಮಾಡಿ, ತಾನೂ ಅಂತರ್ಯಾಮಿಯಾಗಿ ನಿರ್ವಿಕಾರನಾಗಿ ನಿಂತು ಕಾರ್ಯವಾಗಿರುವ ಸ್ಥೂಲಜಗದ್ರೂಪದಿಂದ ಇರುತ್ತಾನೆಂದೂ ಸೃಷ್ಟಿವಾಕ್ಯಗಳು ಬೋಧಿಸುತ್ತವೆ.) ಅವನೇ ನನಗೂ ಉತ್ಪಾದಕನಾದುದರಿಂದ ಸರ್ವನಿಯಾಮಕನೆಂದು ಮಹಾತ್ಮರು ಹೇಳುತ್ತಾರೆ.

೫-೮. ಆ ಮಹಾಪುರುಷನು ಯಾರೆಂದು ದೇವತೆಗಳೂ ತಿಳಿಯಲಾರರು. ಆ ಪುರುಷೋತ್ತಮನಾದರೋ ದೇವತೆಗಳನ್ನೂ ನನ್ನನ್ನೂ ಪ್ರಪಂಚವನ್ನೂ ಸಹ ತಿಳಿಯುತ್ತಾನೆ. ಸರ್ವಜ್ಞನೆಂದು ತಾತ್ಪರ್ಯ. ಅವನ ಅನುಗ್ರಹದಿಂದಲೇ ನಿಮ್ಮ ಮುಂದಿನ ಕಾರ್ಯಸಿದ್ಧಿಯೂ ಉಂಟಾಗುತ್ತದೆ. ಎಂದು ನಾನು ಹೇಳುತ್ತೇನೆ ಆ ಮಹಾಪುರುಷನು ಯೋಗದಿಂದ ಅಂತರ್ಮುಖನಾಗಿ ಅಸಾಧಾರಣ ಸಂಕಲ್ಪದಲ್ಲಿ ನಿರತನಾಗಿದ್ದ ಪಕ್ಷದಲ್ಲಿ ಕ್ಷೀರಸಮುದ್ರದ ಆಚೆದಡದ ಉತ್ತರದಿಕ್ಕಿನಲ್ಲಿ ಮೇಘಧ್ವನಿಯಂತೆ ಗಂಭೀರವಾಗಿಯೂ, ದೂರಕ್ಕೆ ಕೇಳಿಸುವಂಥಾದ್ದಾಗಿಯೂ, ಸ್ಪಷ್ಟವಾದ ಅಕ್ಷರದಿಂದ ರಮ್ಯವಾಗಿಯೂ ಮಂಗಲಪ್ರದವಾಗಿಯೂ ಇರುವ ಬ್ರಹ್ಮವಾದಿಗಳಿಂದ ಹೇಳಲ್ಪಡುವ ಸಂಸ್ಕೃತವಾದ ವಾಣಿಯನ್ನು ಕೇಳುತ್ತೀರಿ.

ದಿವ್ಯಾಂ ಸತ್ಯಾಕರಾಂ ಸತ್ಯಾಂ ಸರ್ವಕಲ್ಮಷನಾಶಿನೀಂ ।
ಸರ್ವದೇವಾಧಿದೇವಶ್ಚ ತತೋಽಸೌ ಭವಿತಾತ್ಮನಾ ॥೯॥

ತದ್ವ್ರತಸ್ಯ ಸಮಾಪ್ತ್ಯಾಂ ತು ಯೋಗವ್ರತವಿಸರ್ಜನೇ ।
ಅಮೋಘಂ ತಸ್ಯ ದೇವಸ್ಯ ವಿಶ್ವತೇಜೋ ಮಹಾತ್ಮನಃ ॥೧೦॥

ಕಶ್ಯಪಾಯ ವರಂ ದೇವಾ ದದಾಮಿ ವರದಸ್ಥಿತಾಃ ।
ಸ್ವಾಗತಂ ಚ ಸುರಶ್ರೇಷ್ಠಾ ಮತ್ಸಮೀಪಮುಪಾಗತಾಃ ॥೧೧॥

ತತೋದಿತಿಃ ಕಶ್ಯಪಶ್ಚ ಗೃಹ್ಣೀಯಾತಾಂ ವರಂ ತದಾ ।
ಪ್ರಣಮ್ಯ ಶಿರಸಾ ಪಾದೌ ತಸ್ಮೈ ದೇವಾಯ ಧೀಮತೇ ॥
ಭಗವಾನೇವ ನಃ ಪುತ್ರೋ ಭವತ್ವಿತಿ ಪ್ರಸೀದ ನಃ ॥೧೨॥

ಉಕ್ತಶ್ಚ ಪರಯಾ ವಾಚಾ ತಥಾಸ್ತ್ವಿತಿ ಸ ವಕ್ಷ್ಯತಿ ।
ದೇವಾ ಬ್ರುವಂತು ತೇ ಸರ್ವೇ ಕಶ್ಯಪೋಽದಿತಿರೇವ ಚ ॥೧೩॥

ತಥಾಸ್ತ್ವಿತಿ ಸ ಚ ಶ್ರೀಮಾನ್ವಕ್ಷ್ಯತೇ ಸರ್ವಲೋಕಕೃತ್ ।
ತಸ್ಮಾದ್ದೇವಾದ್ಗೃಹೀತ್ವೈವಂ ವರಂ ತ್ರಿದಶಸತ್ತಮಾಃ ॥೧೪॥

---

೯-೧೨. ಆ ಪ್ರಕಾರವಾದ ಸರ್ವಪಾಪನಾಶಕವಾದ ಸತ್ಯವಾದ ವಾಣಿಯು ಕೇಳಿ ಬಂದಲ್ಲಿ ಆಗ ದೇವಾಧಿದೇವನಾದ ಪರಮಾತ್ಮನು ಅಲ್ಲಿರುವನೆಂದು ತಿಳಿಯಿರಿ. ಅವನ ಆ ಸಂಕಲ್ಪಾತ್ಮಕವಾದ ವ್ರತವು ಮುಗಿದೊಡನೆಯೇ ಆ ಮಹಾತ್ಮನಿಗೆ ಅಮೋಘವಾದ ಒಂದು ತೇಜಸ್ಸು ಉಂಟಾಗುತ್ತದೆ. ಎಲೈ, ದೇವತೋತ್ತಮರೇ. ನೀವು ನನ್ನ ಸಮೀಪಕ್ಕೆ ಬಂದದ್ದಕ್ಕಾಗಿ ನಿಮಗೆ ಸ್ವಾಗತವನ್ನು ಬಯಸುತ್ತೇನೆ. ಕಶ್ಯಪರನ್ನು ಆಶ್ರಯಿಸಿಕೊಂಡು ಬಂದ ನಿಮಗೆ ಮಹಾ ಪುರುಷನಿಂದ ವರವು ದೊರೆಯುತ್ತೆಂದು ದೃಢವಾಗಿ ಹೇಳುತ್ತೇನೆ. ಆ ಸಮಯದಲ್ಲಿ ಕಶ್ಯಪನೂ ಅದಿತಿಯೂ ಆ ಮಹಾತ್ಮನಿಗೆ ಶಿರಃಪ್ರಣಾಮಮಾಡಿ ಭಗವಂತನೇ ನಮ್ಮಲ್ಲಿ ಪುತ್ರನಾಗಿ ಜನಿಸ ಬೇಕು, ಎಂದು ಪ್ರಸನ್ನನಾದ ಪರಮಾತ್ಮನಲ್ಲಿ ವರವನ್ನು ಬೇಡಲಿ.

೧೩-೧೪. ಹೀಗೆ ಹೇಳಲ್ಪಟ್ಟ ಪರಮಾತ್ಮನು ಹಾಗೇ ಆಗಲೆಂದು ತಾನೂ ಹೇಳುತ್ತಾನೆ. ದೇವತೆಗಳೂ ಕಶ್ಯಪರೂ ಅದಿತಿಯೂ ಅದನ್ನು ಅಂಗೀಕರಿಸಿ ತಥಾಸ್ತು ಎಂದು ಒಪ್ಪಿಕೊಳ್ಳಲಿ. ಪರಮಾತ್ಮನೂ ಇವರ ಕೋರಿಕೆಯಂತೆ ತಥಾಸ್ತು ಎಂದು ಹೇಳುತ್ತಾನೆ. ಈ ಪ್ರಕಾರ ಅವನಿಂದ ವರವನ್ನು ಪಡೆದುಕೊಂಡು ಕೃತಕೃತ್ಯರಾಗಿ ನಿಮ್ಮ ನಿಮ್ಮ ಮನೆಗೆ ಹೊರಡಿರಿ.

ಕೃತಕೃತ್ಯಾ ಸ್ತತ ಸ್ಸರ್ವೇ ಗಚ್ಛಧ್ವಂ ಸ್ವಂಸ್ವಮಾಲಯಂ ।
ತಥಾಸ್ತ್ವಿತಿ ಸುರಾಸ್ಸರ್ವೇ ಪ್ರಣಮ್ಯ ಶಿರಸಾ ಪ್ರಭುಂ ॥ ೧೫ ॥

ಶ್ವೇತದ್ವೀಪಂ ಸಮುದ್ದಿಶ್ಯ ಗತಾಃ ಸೌಮ್ಯಾಂ ದಿಶಂ ಪ್ರತಿ ।
ತೇಽಚಿರೇಣೈವ ಸಂಪ್ರಾಪ್ತಾಃ ಕ್ಷೀರೋದಂ ಸರಿತಾಂ ಪತಿಂ ॥ ೧೬ ॥

ಯಥಾದಿಷ್ಟಂ ಭಗವತಾ ಬ್ರಹ್ಮಣಾ ಸತ್ಯವಾದಿನಾ ।
ತೇ ಕ್ರಾಂತ್ವಾ ಸಾಗರಾನ್ಸರ್ವಾನ್ಪರ್ವತಾಂಶ್ಚ ಸಕಾನನಾನ್ ॥ ೧೭ ॥

ನದೀಶ್ಚ ವಿವಿಧಾಃ ಪುಣ್ಯಾಃ ಪೃಥಿವ್ಯಾಂ ತೇ ಸುರೋತ್ತಮಾಃ ।
ಅಪಶ್ಯಂತ ತಮೋ ಘೋರಂ ಸರ್ವಸತ್ವವಿವರ್ಜಿತಂ ॥ ೧೮ ॥

ಅಭಾಸ್ಕರಮಮರ್ಯಾದಂ ತಮಸಾ ಸರ್ವತೋವೃತಂ ।
ಅಮೃತಂ ಸ್ಥಾನಮಾಸಾದ್ಯ ಕಶ್ಯಪೇನ ಮಹಾತ್ಮನಾ ॥ ೧೯ ॥

ದೀಕ್ಷಿತ್ವಾ ಕಶ್ಯಪೋ ದಿವ್ಯಂ ವ್ರತಂ ವರ್ಷಸಹಸ್ರಕಂ ।
ಪ್ರಸಾದಾರ್ಥಂ ಸುರೇಶಾಯ ತಸ್ಮೈ ಯೋಗಾಯ ಧೀಮತೇ ॥ ೨೦ ॥

---

೧೫ ೧೮. ಹಾಗೆಯೇ ಆಗಲೆಂದು ದೇವತೆಗಳೆಲ್ಲರೂ ಒಪ್ಪಿ ಚತುರ್ಮುಖನಿಗೆ ನಮಸ್ಕರಿಸಿ ಅವನು ಹೇಳಿದಂತೆಯೇ ಕಾರ್ಯಮಾರ್ಗವನ್ನು ನಿಶ್ಚಯಿಸಿ ಶ್ವೇತ ದ್ವೀಪಕ್ಕೆ ಹೊರಡಲು ಉತ್ತರದಿಕ್ಕಿಗೆ ಪ್ರಯಾಣಮಾಡಿದರು. ಅವರೆಲ್ಲರೂ ಜಾಗ್ರತೆ ಯಾಗಿ ಕ್ಷೀರಸಮುದ್ರಕ್ಕೆ ಹೋಗಿ ಸೇರಿದರು. ಅಲ್ಲಿಂದಲೂ ಮುಂದೆ ಅನೇಕ ಸಮುದ್ರಗಳನ್ನೂ ವಿಶಾಲವಾದ ಕಾಡುಗಳಿಂದ ಕೂಡಿದ ಪರ್ವತಗಳನ್ನೂ. ಅನೇಕ ಪುಣ್ಯ ತೀರ್ಥಗಳುಳ್ಳ ನದಿಗಳನ್ನೂ ದಾಟಿ ಭೂಮಿಯ ಕೊನೆಯಲ್ಲಿ ಯಾವ ಪ್ರಾಣಿ ಗಳೂ ಇಲ್ಲದಿರುವ ಭಯಂಕರವಾದ ಅಂಧಕಾರದಿಂದ ಕೂಡಿರುವ ಪ್ರದೇಶವನ್ನು ನೋಡಿದರು.

೧೯-೨೨. ಸೂರ್ಯಚಂದ್ರರ ಪ್ರಕಾಶವೇ ಇಲ್ಲದಿರುವ ಅಪಾರವಾದ ಅಂಧಕಾರ ಮಯವಾದ ಆ ಅಮೃತ ಸ್ಥಾನವನ್ನು ದೇವತೆಗಳೆಲ್ಲರೂ ಕಶ್ಯಪರೊಡನೆ ಹೊಂದಿದರು. ಅಲ್ಲಿ ಕಶ್ಯಪರು ಸುರಾಧಿಪನಾಗಿಯೂ ಜಗತ್ತಿನ ಪರಮೈಶ್ವರ್ಯ ರೂಪನಾಗಿಯೂ, ಸಹಸ್ರ ನೇತ್ರನಾಗಿಯೂ (ಸರ್ವಜ್ಞನೆಂದು ತಾತ್ಪರ್ಯ) ಇರುವ ನಾರಾಯಣನನ್ನು ಸಾಕ್ಷಾ ತ್ಕರಿಸಲು ಸಾಧಕವಾದ ಯೋಗಾನುಷ್ಠಾನವನ್ನು ಹೊಂದಲು ದೀಕ್ಷಾಬದ್ಧರಾಗಿ ಬ್ರಹ್ಮ

ನಾರಾಯಣಾಯ ದೇವಾಯ ಸಹಸ್ರಾಕ್ಷಾಯ ಭೂತಯೇ ।
ಬ್ರಹ್ಮಚರ್ಯೇಣ ಮೌನೇನ ಸ್ಥಾನವೀರಾಸನೇನ ಚ ॥ ೨೧ ॥

ಕ್ರಮೇಣ ಚ ಸುರಾಸ್ಸರ್ವೇ ತಪೋಯೋಗಂ ಸಮಾಸ್ಥಿತಾಃ ।
ಕಶ್ಯಪಸ್ತತ್ರಭಗವಾನ್ ಪ್ರಸಾದಾರ್ಥಂ ಮಹಾತ್ಮನಃ ॥ ೨೨ ॥

ಇತಿ ಶ್ರೀ ವಾಮನಪುರಾಣೇ ಸರೋಮಾಹಾತ್ಮ್ಯೇ
ಪಂಚವಿಂಶೋಽಧ್ಯಾಯಃ

ಚರ್ಯ ವ್ರತದಿಂದಲೂ, ಮೌನದಿಂದಲೂ, ಯೋಗ ಯೋಗ್ಯವಾದ ವೀರಾಸನದಿಂದಲೂ ನಿಯಮಪರರಾದರು. ಅವರನ್ನು ಅನುಸರಿಸಿ ಎಲ್ಲಾ ದೇವತೆಗಳೂ ತಪಸ್ಸಿನಲ್ಲಿ ನಿರತರಾದರು. ಆ ರೀತಿ ಮಹಾಯೋಗಸಾಧಕವಾದ ತಪಸ್ಸಿನಲ್ಲಿ ಕುಳಿತಿರುವ ಮಹಾತ್ಮರಾದ ಕಶ್ಯಪರು, ಪರಮಾತ್ಮನ ಅನುಗ್ರಹವನ್ನು ಸಂಪಾದಿಸಲು ವೇದಪ್ರತಿಪಾದ್ಯವಾದ ಸ್ತುತಿಯನ್ನು ಈ ರೀತಿ ಮಾಡತೊಡಗಿದರು.

ಇಲ್ಲಿಗೆ ಶ್ರೀ ವಾಮನ ಪುರಾಣದಲ್ಲಿ ಸರೋಮಾಹಾತ್ಮ್ಯವೆಂಬ ಇಪ್ಪತ್ತೈದನೆಯ
ಅಧ್ಯಾಯವು ಮುಗಿದಿದೆ.

## ಅಧ್ಯಾಯಾರ್ಥ ಸಂಗ್ರಹ

ಈ ಅಧ್ಯಾಯದಲ್ಲಿ ಚತುರ್ಮುಖ ಲೋಕಕ್ಕೆ ಹೋಗಿ ಸೇರಿದ ದೇವತೆಗಳನ್ನು ನೋಡಿ ಅಲ್ಲಿದ್ದ ಬ್ರಹ್ಮನು ಯೋಗದೃಷ್ಟಿಯಿಂದ ಇವರ ಅಭಿಪ್ರಾಯವನ್ನು ತಿಳಿದು, ನಿಮ್ಮ ಕಾರ್ಯ ಸಿದ್ಧಿಯು ನೆರವೇರುತ್ತದೆ ಎಂದು ದೇವತೆಗಳನ್ನೂ ಕಶ್ಯಪರನ್ನೂ ಸಮಾಧಾನಪಡಿಸಿ ಕಾರ್ಯ ಮಾರ್ಗವನ್ನು ಉಪದೇಶಿಸಿ ಸ್ವಾಗತಾಭಿನಂದನೆಯಿಂದ ಶ್ವೇತ ದ್ವೀಪದಲ್ಲಿರುವ ಪರಮಾತ್ಮನನ್ನು ನೋಡಬೇಕೆಂದೂ ಅವನಲ್ಲಿ ಈ ರೀತಿ ವರವನ್ನು ಬೇಡಬೇಕೆಂದೂ ಹೇಳಿಕಳುಹಿಸಿದನು. ಅದರಂತೆ ದೇವತೆಗಳು ಕಶ್ಯಪರೊಡನೆ ಕ್ಷೀರಸಮುದ್ರದ ಪ್ರಾಂತ ಭಾಗವನ್ನು ಸೇರಿ ಅಮಾನುಷ ಪ್ರದೇಶದಲ್ಲಿ ಯೋಗಾನುಷ್ಠಾನ ನಿರತರಾದರು. ಕಶ್ಯಪರು ಪರಮಾತ್ಮನ ಅನುಗ್ರಹಕ್ಕಾಗಿ ಸ್ತೋತ್ರ ಮಾಡಲುಪಕ್ರಮಿಸಿದರೆಂದೂ ಪ್ರತಿಪಾದಿಸಲಾಯಿತು.

॥ ಶ್ರೀಃ ॥

# ಶ್ರೀ ವಾ ಮ ನ ಪು ರಾ ಣಂ

## ಷಡ್ವಿಂಶೋಽಧ್ಯಾಯಃ

**ಕಾಶ್ಯಪ ಉವಾಚ**

**ಓಂ ನಮೋ ಭಗವತೇ ವಾಸುದೇವಾಯ**

---

## ಇಪ್ಪತ್ತಾರನೆಯ ಅಧ್ಯಾಯವು

ಈ ಅಧ್ಯಾಯವೆಲ್ಲವೂ ಕ್ಷೀರಸಮುದ್ರಶಾಯಿಯಾದ ನಾರಾಯಣನ ಸ್ತುತಿ ರೂಪವಾಗಿದೆ. ಇಲ್ಲಿ ಭಗವದನುಗ್ರಹವನ್ನು ಅಪೇಕ್ಷಿಸುವ ದೇವತೆಗಳಿಗೋಸ್ಕರ ಆಚಾರ್ಯಸ್ಥಾನದಲ್ಲಿ ನಿಂತಿರುವ ಕಶ್ಯಪರು ಶಿಷ್ಯರೂ ಪುತ್ರರೂ ಆಗಿರುವ ದೇವತೆಗಳ ಹಿತಕ್ಕಾಗಿ ಸಾಂಗಪ್ರಪತ್ತ್ಯನುಷ್ಠಾನವನ್ನು ಭಗವಂತನಲ್ಲಿ ಮಾಡಿರುತ್ತಾರೆಂಬುದು ರಹಸ್ಯ ಶಾಸ್ತ್ರಗಳಿಗನುಬಂಧಿಸುವ ಪ್ರಮೇಯಸರಣಿ, ಪ್ರಪತ್ತ್ಯಂಗವಾದ ಮಹಾ ವಿಶ್ವಾಸಕ್ಕೆ ಉಪಪಾದಕವಾದ, "ಆತ್ಮದಾಸ್ಯಂ ಹರೇಸ್ಸ್ವಾಮ್ಯಂ, ಎಂಬ ವಚನಾನು ಸಾರವಾಗಿ ಸರ್ವೇಶ್ವರನ ನಿರುಪಾಧಿಕ ಉತ್ಕರ್ಷವನ್ನೂ ತನ್ನ ದಾಸ್ಯಭಾವವನ್ನೂ ಪ್ರಕಾಶಪಡಿಸಲು ಮೊದಲು ಓಂ ನಮಃ ಎಂಬ ವಾಸುದೇವ ದ್ವಾದಶಾಕ್ಷರ ಮಂತ್ರದಿಂದ ಪ್ರಪತ್ತ್ಯನುಷ್ಠಾನವನ್ನು ಪ್ರಾರಂಭಿಸುತ್ತಾರೆ. ಈ ಮಂತ್ರಕ್ಕೆ ಸಂಕ್ಷೇಪವಾಗಿ ಈ ರೀತಿ ಅರ್ಥವನ್ನು ಪ್ರತಿಪಾದಿಸಬಹುದು. ಓಂ ಎಂಬ ಪ್ರಣವದಿಂದ ಚೇತನಾ ಚೇತನ ಶರೀರಕನಾಗಿರುವವನೆಂದು ಅರ್ಥವಾಗುತ್ತದೆ (ಪ್ರಣವವು ಅಕ್ಷರತ್ರಯಾತ್ಮಕವಾಗಿರು ವದ್ದರಿಂದ) ಭಗವತೇ ವಾಸುದೇವಾಯ ಎಂಬ ಶಬ್ದದಿಂದ "ಭಗವಾನಿತಿ ಶಬ್ದೋಽಯಂ ತಥಾ ಪುರುಷ ಇತ್ಯಪಿ, ನಿರುಪಾಧೀಚವರ್ತೇತೆ ವಾಸುದೇವೆ ಸನಾತನೆ" ಎಂಬ ನಿರ್ವಚನಾನುಸಾರವಾಗಿ ನಿರುಪಾಧಿಕ ಐಶ್ವರ್ಯಶಾಲಿಯಾದ ಪುರುಷೋತ್ತಮನೆಂದು ಅರ್ಥವಾಗುತ್ತದೆ. ಚತುರ್ಥೀವಿಭಕ್ತಿಯಿಂದ ಅವನಿಗೋಸ್ಕರ ಎಂಬ ಅರ್ಥಕ್ಕೆ ಪ್ರಕಾಶಕವಾದ ಶೇಷಿಭಾವವು ತೋರುತ್ತದೆ. ಅದರಿಂದ ಯಾವ ಪರಮಾತ್ಮನು

**ಗದ್ಯ॥ ಏಕಶೃಂಗ ವೃಷಸಿಂಧೋ ವೃಷಾಕಪೇ ಸುರವೃಷಅನಾದಿ ಸಂಭವ ರುದ್ರ ಕಪಿಲ ವಿಶ್ವಕ್ಸೇನ ಸರ್ವಭೂತಪತೇ ಧ್ರುವ ಧರ್ಮ ವೈಕುಂಠ ವೃಷಾವರ್ತ ಅನಾದಿಮಧ್ಯನಿಧನ ಧನಂಜಯ ಶುಚಿಶ್ರವ ಪೃಶ್ನಿತೇಜಃ ನಿಜಜಯ ಅಮೃತಶಯ**

ಚೇತನಾಚೇತನ ಶರೀರಿಯಾಗಿ ನಿರುಪಾಧಿಕ ಐಶ್ವರ್ಯವುಳ್ಳವನಾಗಿರುವನೋ ಅಂತಹ ವಾಸುದೇವನಿಗೆ ನಾನು ಶೇಷಭೂತನು (ದಾಸನು) ಅವನಿಗೆ ನಮಸ್ಕಾರವೆಂದು ಸಾಮಾನ್ಯಾರ್ಥವಾಗುತ್ತದೆ. ನಮಃ ಎಂಬುದರಲ್ಲಿ ಅವಯವಾರ್ಥವಿಶೇಷದಿಂದ ನಾನೂ ನನಗೋಸ್ಕರವಲ್ಲ ಪರಮಾತ್ಮನಿಗೋಸ್ಕರ ಎಂಬ ಆತ್ಮಸಮರ್ಪಣವು ತೋರಿಬರುತ್ತದೆ. (ಇದು ಬಹಳ ಸಂಕ್ಷಿಪ್ತವಾದ ಅರ್ಥ.) ಈ ರೀತಿ ಸರ್ವಶೇಷಿಯಾದ ಪರಮಾತ್ಮ ಸ್ವರೂಪವನ್ನೂ ತನ್ನ ಶೇಷಭಾವವನ್ನೂ ಪ್ರಕಾಶಪಡಿಸಿ ಅವನ ಅನುಗ್ರಹಕ್ಕಾಗಿ ಸ್ತೋತ್ರಮಾಡುತ್ತಾರೆ. ಸಹಸ್ರನಾಮದಲ್ಲಿರುವಂತೆ ಇಲ್ಲಿರುವ ಶಬ್ದಗಳೆಲ್ಲಾ ಪರಮಾತ್ಮ ಪರವಾಗಿರುತ್ತವೆ. ಅಂದರೆ ಈ ಶಬ್ದಗಳಿಗೆ ಪರಮಾತ್ಮನೇ ಮುಖ್ಯವಾದ ಅರ್ಥ. ಇತರರಲ್ಲಿ ಪ್ರಯೋಗವಿದ್ದಲ್ಲಿ ಗೌಣವೆಂದೇ ತಾತ್ಪರ್ಯ.

ಏಕಶೃಂಗ, ಸರ್ವೋನ್ನತನಾದವನೇ, ವೃಷಸಿಂಧೋ, ಸುಕೃತಗಳಿಗೆಲ್ಲಾ ಸಮುದ್ರದಂತೆ ಆಶ್ರಯನಾಗಿ ನಿಂತಿರುವವನೇ, ವೃಷಾಕಪೆ, *ಧರ್ಮವರಾಹರೂಪನೇ ಸುರವೃಷ ಸುರಶ್ರೇಷ್ಠನೇ, ಅಥವಾ ಸುರರೆಲ್ಲರಿಗೂ ಅಗ್ರೇಸರನೇ. ಅನಾದಿಸಂಭವ, ಶಾಶ್ವತನೇ, ರುದ್ರ, ಜಗನ್ನಿಗ್ರಹಕ್ಕೆ ತಕ್ಕ ಉಗ್ರತೆಯುಳ್ಳವನೇ ಅಥವಾ ನಿಗ್ರಹಾಧಿಕಾರವುಳ್ಳ ರುದ್ರನಿಗೂ ಅಂತರ್ಯಾಮಿಯಾಗಿರುವವನೇ, ಕಪಿಲ, ಶ್ಯಾಮಮೂರ್ತಿಯೇ ಅಥವಾ ಯೋಗನಿಷ್ಠನಾದ ಕಪಿಲರೂಪಿಯೇ, ವಿಷ್ವಕ್ಸೇನ, ದಾನವರ ಸೈನ್ಯವನ್ನು ನಾನಾಮುಖವಾಗಿ ಓಡಿಸುವವನೇ, ಅಥವಾ ಎಲ್ಲಾ ಕಡೆಯಲ್ಲಿಯೂ ವಿಸ್ತಾರಹೊಂದಿರುವ ಅಧಿಕಾರಿವರ್ಗವುಳ್ಳವನೇ, ಸರ್ವಭೂತಪತೇ, ಸರ್ವಪ್ರಾಣಿಗಳಿಗೂ ರಕ್ಷಕನಾಗಿರುವವನೇ, ಧ್ರುವ, ನಿತ್ಯನೇ ಧರ್ಮ ಜಗದ್ಧಾರಕನೇ, ವೈಕುಂಠ ತಡೆಯಿಲ್ಲದ ವ್ಯಾಪಾರವುಳ್ಳವನೇ, ವೃಷಾವರ್ತ ಸುಳಿಗಳಂತೆ ಅಪರಿಮಿತವಾಗಿರುವ ಪುಣ್ಯರಾಶಿಗೆ ಆಶ್ರಯದಾತನೇ.

ಅನಾದಿಮಧ್ಯನಿಧನ, ಆದಿಮಧ್ಯಾಂತರಹಿತನೇ (ಅಂದರೆ ಕಾಲಪರಿಚ್ಛೇದವಿಲ್ಲದವನೆಂದರ್ಥ) ಧನಂಜಯ, ಅರ್ಥತೃಷ್ಣೆಯನ್ನು ಜಯಿಸಿರುವವನೇ. (ಅಂದರೆ ಸಮಸ್ತವಾದ ಇಷ್ಟಾರ್ಥಗಳ ಪರಿಪೂರ್ತಿಯುಳ್ಳವನೆಂದರ್ಥ.) ಶುಚಿಶ್ರವ, ಪರಿಶುದ್ಧವಾದ ಕೀರ್ತಿಯುಳ್ಳವನೇ ಪೃಶ್ನಿತೇಜಃ ಪೃಶ್ನಿಯ ಗರ್ಭದಲ್ಲಿ ಜನಿಸಿ ಮಹಾತೇಜಸ್ಸುಳ್ಳವನೇ, ನಿಜಜಯ, ಸ್ವಾಧೀನವಾದ ಜಗದ್ವಿಜಯಶಾಲಿಯೇ, ಅಮೃತಶಯ, ಭಾವವಿಕಾರವಿಲ್ಲದ ಅಪ್ರಾಕೃತನಿತ್ಯ ವಿಭೂತಿವಾಸಿಯೇ,

* ಕಪಿರ್ವರಾಹ ಶ್ರೇಷ್ಠಶ್ಚ ಧರ್ಮಶ್ಚ ವೃಷ ಉಚ್ಯತೆ। ತಸ್ಮಾದ್ವೃಷಾಕಪಿಂ ಪ್ರಾಹ ಕಾಶ್ಯಪೋ ಮಾಂ ಪ್ರಜಾಪತಿಃ। ಎಂದು ಮಹಾಭಾರತದ ಶಾಂತಿಪರ್ವದ ವಚನವಿದೆ.

**ಸನಾತನ ತ್ರಿಧಾಮ‌ನ್ ತುಷಿತ ಮಹಾತತ್ವ ಲೋಕನಾಥ ಪದ್ಮನಾಭ ವಿರಿಂಚೇ ಬಹುರೂಪ ಅಕ್ಷಯ ಅಕ್ಷರ ಹವ್ಯಭುಕ್ ಖಂಡಪರಶೋ ಶಕ್ರ ಮುಂಜಕೇಶ ಹಂಸ ಮಹಾದಕ್ಷಿಣ ಹೃಷೀಕೇಶ ಸೂಕ್ಷ್ಮ ಮಹಾನಿಯಮಧರ ವಿರಜಃ ಲೋಕಪ್ರತಿಷ್ಠ ಅರೂಪ ಅಗ್ರಜ ಧರ್ಮಜ ಧರ್ಮನಾಭ ಹವ್ಯಭುಕ್ ಗಭಸ್ತಿನಾಥ ಶತಕ್ರತುನಾಥ ಚಂದ್ರರಥ ಸೂರ್ಯತೇಜಃ ಸಮುದ್ರವಾಸಃ ಅಜ ಸಹಸ್ರಶಿರಃ ಸಹಸ್ರಪಾದ**

ಸನಾತನ, ಶಾಶ್ವತಮೂರ್ತಿಯೇ, ತ್ರಿಧಾಮನ್, ಕ್ಷೀರಸಮುದ್ರ, ಪರಮಪದ, ಸೂರ್ಯಮಂಡಲವೆಂಬ ಮೂರು ವಾಸಸ್ಥಾನವುಳ್ಳವನೇ, ತುಷಿತ, ಸದಾ ಸಂತುಷ್ಟ ಮೂರ್ತಿಯೇ, ಮಹಾತತ್ವ, ಮಹಾಸ್ವರೂಪನೇ, ಅಥವಾ ಪ್ರಮೇಯವಸ್ತುಗಳಲ್ಲೆಲ್ಲಾ ಉತ್ಕೃಷ್ಟನೇ, ಅಥವಾ ಮಹತ್ತಾದ ತತ್ವಗಳನ್ನೊಳಗೊಂಡಿರುವ ಸರ್ವವ್ಯಾಪಕ ಮೂರ್ತಿಯೇ, ಲೋಕನಾಥ, ಸರ್ವಲೋಕರಕ್ಷಕನೇ, ಪದ್ಮನಾಭ ಲೋಕಪಿತೃವಾದ ಬ್ರಹ್ಮನಿಗೂ ಉತ್ಪತ್ತಿಸ್ಥಾನವಾದ ನಾಭಿಪದ್ಮವುಳ್ಳವನೇ ವಿರಿಂಚೆ, ಚತುರ್ಮುಖಾಂತರ್ಯಾಮಿಯೇ, ಬಹುರೂಪ, ವಿಶ್ವರೂಪಿಯೇ,

ಅಕ್ಷಯ, ನಾಶರಹಿತನೇ, ಅಕ್ಷರ, ಕುಂದಿಲ್ಲದ ಸ್ವಭಾವವುಳ್ಳವನೇ, ಹವ್ಯಭುಕ್ ದೇವತೋದ್ದೇಶ್ಯಕದ್ರವ್ಯದಿಂದ ಪ್ರೀತಿಹೊಂದುವವನೇ, ಖಂಡಪರಶೋ, ತೀಕ್ಷ್ಣವಾದ ಆಯುಧವುಳ್ಳವನೇ, ಅಥವಾ ತ್ರಿನೇತ್ರಾಂತರ್ಯಾಮಿಯೇ, ಶಕ್ರ, ಸಮರ್ಥನೇ, ಮುಂಜಕೇಶ, ಮೃದುವಾದ ಕೇಶವುಳ್ಳವನೇ, ಅಥವಾ ಅಜ್ಞಾನನಾಶಕನೇ, ಹಂಸ, ಸರ್ವವ್ಯಾಪಕನೇ, ಮಹಾದಕ್ಷಿಣ, ಸರಳಸ್ವಭಾವನೇ, ಹೃಷಿಕೇಶ, ಸರ್ವೇಂದ್ರಿಯಗಳಿಗೂ ನಿಯಾಮಕನೇ, ಸೂಕ್ಷ್ಮ, ಸರ್ವಪದಾರ್ಥಗಳಲ್ಲೂ ಅಂತರ್ಯಾಮಿಯಾಗಿರುವವನೇ, ಮಹಾನಿಯಮಧರ, ತಪಶ್ಶಾಲಿಯೇ, ವಿರಜಃ, ರಜೋಗುಣರಹಿತನೇ, ಲೋಕಪ್ರತಿಷ್ಠ, ಲೋಕಸ್ಥಿತಿಗೆ ಆಧಾರನಾಗಿರುವವನೇ, ಅರೂಪ, ಪ್ರಾಕೃತರೂಪರಹಿತನೇ, ಅಗ್ರಜ, ಸರ್ವಜ್ಯೇಷ್ಠನೇ, ಧರ್ಮಜ, ಧರ್ಮಾಧೀನವಾದ ಆವಿರ್ಭಾವವುಳ್ಳವನೇ, ಧರ್ಮನಾಭ, ಧರ್ಮದ ಪ್ರಚಾರಕ್ಕೆ ಆಶ್ರಯದಾತನೇ, ಗಭಸ್ತಿನಾಥ, ಅಪ್ರಾಕೃತ ದಿವ್ಯರಶ್ಮಿಗಳಿಗೆ ನಿಯಾಮಕನೇ, ಶತಕತುನಾಥ, ಇಂದ್ರನಿಗೂ ಸ್ವಾಮಿಯಾಗಿರುವವನೇ,

ಚಂದ್ರರಥ, ಚಂದ್ರನೆಂಬ ಚಕ್ರವುಳ್ಳ ಜಗದ್ರಥಶಾಲಿಯೇ, ಸೂರ್ಯತೇಜಃ ಸೂರ್ಯರೂಪವಾದ ತೇಜಸ್ಸುಳ್ಳವನೇ, ಅಥವಾ ಸರ್ವ ಪ್ರೇರಕವಾದ ತೇಜಸ್ಸುಳ್ಳವನೇ ಸಮುದ್ರವಾಸಃ, ಜಗತ್ತೆಂಬ ಶರೀರದಲ್ಲಿ ಸಮುದ್ರವೆಂಬ ವಸ್ತ್ರವನ್ನು ಹೊಂದಿರುವವನೇ ಅಜ, ಉತ್ಪತ್ತಿ ಇಲ್ಲದವನೇ, ಸಹಸ್ರಶಿರಃ ಸಹಸ್ರಪಾದ, ವಿಶ್ವರೂಪಿಯಾಗಿರುವವನೇ,

**ಅಯೋಮುಖ ಮಹಾಪುರುಷ ಪುರುಷೋತ್ತಮ ಸಹಸ್ರ ಬಾಹೋ ಸಹಸ್ರಮೂರ್ತೆ ಸಹಸ್ರಾಸ್ಯ ಸಹಸ್ರಸಂಭವ ವಿಶ್ವಂ ತ್ವಾ ಮಾಹುಃ ಪುಷ್ಪಹಾಸ ಚರಮ ತ್ವಮೇವ ವೌಷಟ್ ವಷಟ್ಕಾರಂ ತ್ವಾ ಮಾಹುಃ ಅಗ್ನ್ಯಮುಖೇಷು ಪ್ರಾಶಿತಾರಂ ಶತಧಾರಂ ಸಹಸ್ರಧಾರಂ ಬಭೂವ ಭೂವಂದ್ಯ ಭೂನಾಥ ಭೃಗುಪುತ್ರ ವೇದವೇದ್ಯ ಬ್ರಹ್ಮಶಯ ಬ್ರಾಹ್ಮಣಪ್ರಿಯ ತ್ವಮೇವ ದ್ಯೌರಸಿ ಮಾತರಿಶ್ವಾಸಿ ಧರ್ಮೋಽಸಿ ಹೋತಾ ಪೋತಾ ಹಂತಾ ಮಂತಾ ನೇತಾ ಹೋಮಹೇತುಸ್ತ್ವಮೇವ ಅಗ್ನ್ಯಶ್ಚಧಾಮ್ನಾ ತ್ವಮೇವ**

ಅಯೋಮುಖ, ತೀಕ್ಷ್ಣಸ್ವಭಾವವುಳ್ಳವನೇ, ಮಹಾ ಪುರುಷ, ಪುರುಷೋತ್ತಮ, ಸರ್ವಾನ್ತರ್ಯಾಮಿಯಾದ ಪುರುಷಾಗ್ರಗಣ್ಯನೇ, ಸಹಸ್ರಬಾಹೊ ಸಹಸ್ರಮೂರ್ತೆ. ಸಹಸ್ರಾಸ್ಯ, ಸಹಸ್ರಸಮ್ಭವ, ವಿರಾಟ್ ಪುರುಷನಾಗಿಯೂ ಸರ್ವವ್ಯಾಪಿಯಾಗಿಯೂ, ಅನೇಕಾವತಾರಶಾಲಿಯಾಗಿಯೂ ಇರುವವನೇ, ವಿಶ್ವಂ ತ್ವಾ ಮಾಹುಃ, ನಿನ್ನನ್ನೇ ಪ್ರಪ್ರಂಚರೂಪಿಯನ್ನಾಗಿ ಹೇಳುವರು. ಪುಷ್ಪಹಾಸ, ಚರಮ. ತ್ವಮೇವವೌಷಟ್. ಕುಸುಮದಂತೆ ಕೋಮಲವಾದ ಹಾಸವುಳ್ಳವನೇ, ಕೊನೆಯಲ್ಲಿ ನಿಲ್ಲುವವನೇ ನೀನೇ ವೌಷಟ್ ಎಂಬ ಹೋಮ ಸಾಧನವಾದ ಮಂತ್ರರೂಪವಾಗಿರುತ್ತೀಯೆ, (ಇಲ್ಲಿ ಮಂತ್ರ ಪೂರ್ವಕವಾದ ಹೋಮದಿಂದ ಪ್ರಸನ್ನನಾಗುವ ಪರಮಾತ್ಮನಲ್ಲಿ ಮಂತ್ರರೂಪತ್ವವು ಉಪಚಾರದಿಂದ) ವಷಟ್ಕಾರಂತ್ವಾ ಮಾಹುಃ ನೀನೇ ವಷಟ್ಕಾರರೂಪನಾಗಿರುವೆ ಎಂದು ವೇದಗಳು ಹೇಳುತ್ತಿವೆ. ಅಗ್ನ್ಯಮುಖೇಷುಪ್ರಾಶಿತಾರಂ, ಶತಧಾರಂ ಸಹಸ್ರಧಾರಂ ಬಭೂವ, ಯಜ್ಞದಲ್ಲಿ ಆಹುತಿಯನ್ನು ಸ್ವೀಕರಿಸುವ ವಿಶ್ವರೂಪಿಯು ನೀನೇ ಆಗಿದ್ದೀಯೆ.

ಭೂವಂದ್ಯ, ಭೂದೇವಿಯಿಂದ ಪೂಜಿಸಲ್ಪಡತಕ್ಕವನೇ, ಭೂನಾಥ, ಭೂಮಿಗೆ ವೊಡೆಯನೇ, ಭೃಗುಪುತ್ರ, ಭಾರ್ಗವರೂಪಿಯೇ ವೇದವೇದ್ಯ, ವೇದಪ್ರಮಾಣ ಗೋಚರನೇ, ಬ್ರಹ್ಮಶಯ ಜಗತ್ಸೃಷ್ಟಿಗಾಗಿ ಬೃಹದಾಕಾರವುಳ್ಳ ಪ್ರಕೃತಿಯನ್ನು ಅಧಿಷ್ಠಾನಮಾಡಿಕೊಂಡಿರುವವನೇ, ಬ್ರಾಹ್ಮಣಪ್ರಿಯನೇ ನೀನೇ ದ್ಯುಲೋಕವಾಗಿ ತೋರುತ್ತಿದ್ದೀಯೆ, ಮಾತರಿಶ್ವಾಸಿ, ಧರ್ಮೋಽಸಿ, ವಾಯುವಿಗೂ, ಯಮನಿಗೂ, ಅಧಿಷ್ಠಾನ ದೇವತೆಯಾಗಿದ್ದುಕೊಂಡು ಅವರ ವ್ಯಾಪಾರಕ್ಕೂ ನಿಯಾಮಕನಾಗಿದ್ದೀಯೆ. ಹೊತಾ, ಪೋತಾ, ಹಂತಾ, ಮಂತಾ, ನೇತಾ, ಹೋಮಹೇತು ಸ್ತ್ವಮೇವ, ಹೋತಾ, ಪೋತಾ ಎಂಬ ಋತ್ವಿಕ್ ಸ್ವರೂಪನಾಗಿಯೂ, ಹೋಮಕಾರಣ ಸ್ವರೂಪನಾಗಿಯೂ ನೀನೇ ಇದ್ದೀಯೆ, (ಇಲ್ಲಿ ಬ್ರಹ್ಮಾರ್ಪಣಂ ಬ್ರಹ್ಮಹವಿಃ ಎಂಬ ಗೀತಾ ವಚನದಂತೆ ಎಲ್ಲವೂ ಬ್ರಹ್ಮಾತ್ಮಕವೆಂದೂ, ಅಬ್ರಹ್ಮಾತ್ಮಕವಸ್ತುವೇ ಇಲ್ಲವೆಂದೂ ತಾತ್ಪರ್ಯ.) ಅಗ್ನ್ಯಶ್ಚಧಾಮ್ನಾ ತ್ವಮೇವ,

**ಋಗ್ಭಿಃಸುಭಾಂಡ ಇಜ್ಯೋಽಸಿ ಸುಮೇಧೋಽಸಿ ಸಮಿಧಃ ತ್ವಮೇವ ಪತಿರ್ಗತಿರ್ದಾತಾತ್ವಮಸಿಮೋಕ್ಷೋಽಸಿ ಯೋಗೋಽಸಿ ಸೃಜಸಿ ಧಾತಾ ಪರಮಯಜ್ಞೋಽಸಿ ಸೋಮೋಽಸಿ ದೀಕ್ಷಿತೋಽಸಿ ದಕ್ಷಿಣಾಸಿ ವಿಶ್ವಮಸಿ ಸ್ಥವಿರ ಹಿರಣ್ಯಗರ್ಭ ನಾರಾಯಣ ತ್ರಿನಯನ ಆದಿವರ್ಣ ಆದಿತ್ಯತೇಜಃ ಮಹಾಪುರುಷ ಪುರುಷೋತ್ತಮ ಆದಿದೇವ ಭೂಮಿಕ್ರಮ ತ್ರಿವಿಕ್ರಮ ಪ್ರಭಾಕರ ಶಂಭೋ ಸ್ವಯಂಭೋಃ ಭೂತಾದಿಮಹಾಭೂತೋಽಸಿ**

ಯಜ್ಞದಲ್ಲಿರುವ ಮಹಾತೇಜಸ್ವಿಯಾದ ಅಗ್ನಿಸ್ವರೂಪನೂ ನೀನೇ ಆಗಿರುತ್ತೀಯೆ. "ಋಗ್ಭಿ ಸುಭಾಂಡ, ಇಜ್ಯೋಽಸಿ ಸುಮೇಧೋಽಸಿ ಸಮಿಧಃ ತ್ವಮೇವ" ಋಕ್ಕುಗಳೆಂಬ ಆಭರಣಗಳಿಂದ ತುಂಬಿದ ಪಾತ್ರರೂಪಿಯಾದ ನೀನೇ (ವೇದಮಂತ್ರಮಯನೆಂದು ತಾತ್ಪರ್ಯ.) ಯಾಗವೆಂಬ ಪೂಜೆಗೆ ಉದ್ದೇಶ್ಯನಾಗಿರುತ್ತೀಯೆ, ಅಪ್ರಹತಿಹತ ಪ್ರತಿಭಾಶಾಲಿಯಾದ ನೀನೇ ಸಮಿತ್ಸ್ವರೂಪನೂ ಆಗಿದ್ದೀಯೆ.

ಪತಿಃ, ರಕ್ಷಕನೂ, ಗತಿಃ ಪ್ರಾಪ್ಯನೂ, ದಾತಾ, ಪುರುಷಾರ್ಥಪ್ರದನೂ ನೀನೇ ಆಗಿದ್ದೀಯೆ. ಮೋಕ್ಷಪ್ರದನಾದುದರಿಂದ ಮೋಕ್ಷವೆಂಬ ಪುರುಷಾರ್ಥಸ್ವರೂಪನೂ ಅದಕ್ಕೆ ಸಾಧಕವಾದ ಯೋಗಸ್ವರೂಪನೂ ನೀನೇ ಆಗಿದ್ದೀಯೆ. ಸೃಜಸಿ, ಸೃಷ್ಟಿಸುತ್ತೀಯೆ, ಧಾತಾ, ಸ್ರಷ್ಟವಾದ ಜಗತ್ತಿಗೆ ಧಾರಕನಾಗಿಯೂ ಇರುತ್ತೀಯೆ, ಯಜ್ಞದ ಸ್ವರೂಪವೂ, ಸೋಮಸ್ವರೂಪವೂ, ದೀಕ್ಷಿತನೂ, ದಕ್ಷಿಣೆಯೂ, ಹಾಗೂ ಸಮಸ್ತ ಪ್ರಪಂಚವೂ ನೀನೇ ಆಗಿದ್ದೀಯೆ. ಸ್ಥವಿರ, ಸರ್ವಜ್ಯೇಷ್ಠನೇ (ವೃದ್ಧನೇ) ಹಿರಣ್ಯಗರ್ಭ ಹಿರಣ್ಯಗರ್ಭಾಂತರ್ಯಾಮಿಯೇ, ಅಥವಾ ಭೂಮ್ಯಂತರ್ಯಾಮಿಯೇ, ನಾರಾಯಣ, ಎಲ್ಲಾ ಚೇತನಾಚೇತನವರ್ಗಕ್ಕೂ ಗಂತವ್ಯಸ್ಥಾನನೇ, ಅಥವಾ ಪ್ರೇರಕನೇ, ತ್ರಿನಯನ, ರುದ್ರಾಂತರ್ಯಾಮಿಯೇ, ಅಥವಾ ನೃಸಿಂಹಾವತಾರಶಾಲಿಯೇ, ಆದಿವರ್ಣ, ಅಕ್ಷರಗಳಲ್ಲಿ ಮೊದಲನೆಯದಾದ ಅಕಾರಸ್ವರೂಪನೇ (ಅಕ್ಷರಾಣಾಮಕಾರೋಸ್ಮಿ ಎಂದು ಗೀತಾವಚನವಿದೆ.)

ಆದಿತ್ಯತೇಜಃ ಅನೇಕ ಸೂರ್ಯಪ್ರಕಾಶನೇ, ಮಹಾಪುರುಷ, ಪುರುಷೋತ್ತಮ, ಆದಿದೇವ, ಭೂಮಿಕ್ರಮ, ಮಹಾಪುರುಷನಾಗಿಯೂ, ಜಗತ್ಕಾರಣನಾಗಿಯೂ, ಭೂಮಿಯೆಲ್ಲವನ್ನೂ ಪಾದದಿಂದ ಆಕ್ರಮಿಸಿದ ಪರಮಾತ್ಮನೇ,

ತ್ರಿವಿಕ್ರಮ ಮೂರು ವಿಧವಾದ ಪಾದನ್ಯಾಸವುಳ್ಳವನೇ, ಪ್ರಭಾಕರ, ಅಪ್ರಾಕೃತವಾದ ಕಾಂತಿಗೆ ಆಶ್ರಯನೇ, ಶಂಭೋ, ಸುಖವನ್ನು ಕೊಡುವವನೇ, ಸ್ವಯಂಭೋಃ, (ಕರ್ಮಸಂಬಂಧವಿಲ್ಲದೆ) ಸ್ವಸಂಕಲ್ಪದಿಂದ ಆವಿರ್ಭಾವ ಹೊಂದಿದವನೇ, ಭೂತಾದಿಮಹಾಭೂತೋಽಸಿ, ಪಂಚತನ್ಮಾತ್ರೆಗಳು ಮಹಾಭೂತಗಳೂ ನೀನೇ ಆಗಿದ್ದೀಯೆ,

**ವಿಶ್ವಭೂತ ವಿಶ್ವಂತ್ವಮೇವ ವಿಶ್ವಗೋಪ್ತಾಸಿ ಪವಿತ್ರಮಸಿ**
**ವಿಶ್ವಭವ ಊರ್ಧ್ವ್ವ ಕರ್ಮನ್ ಅಮೃತ ದಿವಸ್ಪತೆ ವಾಚಸ್ಪತೆ**
**ಘೃತಾರ್ಚಿಃ ಅನಂತ ಕರ್ಮವಂಶ ಪ್ರಾಗ್ವಂಶಧೀಃ ತ್ವಮಶ್ವ**
**ಮೇಧಃ ವರಾರ್ಥಿನಾಂವರದೋಸಿತ್ವಂ**

ವಿಶ್ವಭೂತ,-ವಿಶ್ವಂ ತ್ವ ಮೇವ ವಿಶ್ವವೆಲ್ಲವೂ ನಿನ್ನ ಆಕಾರವೇ ಆಗಿದೆ. (ಕಾರ್ಯ ಕಾರಣಗಳ ಅಭೇದದಿಂದ ಈ ರೀತಿ ವ್ಯವಹಾರ) ವಿಶ್ವಗೋಪ್ತಾಸಿ, ವಿಶ್ವರಕ್ಷಕನೂ ನೀನೇ ಆಗಿದ್ದೀಯೆ, ಪವಿತ್ರಮಸಿ, ಪರಿಶುದ್ಧನಾಗಿದ್ದೀಯೆ, (ಇಲ್ಲಿ ಕಾರಣಾವಸ್ಥೆಯಲ್ಲಿದ್ದ ಪರಮಾತ್ಮನು ಸಂಕಲ್ಪ ಮಾತ್ರದಿಂದ ಜಗದ್ರೂಪವಾದ ಕಾರ್ಯಾವಸ್ಥೆಯನ್ನು ಹೊಂದಿದ ಮೇಲೆ, ಅಂತರ್ಯಾಮಿ ರೂಪದಿಂದ ಸರ್ವಚೇತನರಿಗೂ ನಿಯಾಮಕನಾಗಿ ನಿಂತು, ಮತ್ತಸ್ಮೃತಿ ರ್ಜ್ಞಾನಮಪೋಹನಂ ಚ ಎಂಬ ಗೀತಾವಚಾನಾನುಸಾರವಾಗಿ ರಕ್ಷಕನಾಗಿಯೂ ಇರುತ್ತೀಯೆ ಎಂದು ಹೇಳಿದಂತಾಯಿತು. ಹೀಗೆ ಹೇಳಿದಲ್ಲಿ ಜೀವಾಂತರ್ಯಾಮಿಯಾಗಿರುವ ಪರಮಾತ್ಮಸ್ವರೂಪಕ್ಕೆ ಕರ್ಮಸಂಬಂಧದಿಂದ ಜೀವ ನಿಗೆ ಇರುವಂತೆ ಕರ್ಮವಾಸನಾಸಂಬಂಧದಿಂದುಂಟಾದ ಅಪವಿತ್ರತೆಯನ್ನು ಆಶಂಕಿಸಿ ಅದಕ್ಕೆ ಉತ್ತರವಾಗಿ ಪವಿತ್ರಮಸಿ ಎಂದು ಹೇಳಿದಂತಾಯಿತು.) ವಿಶ್ವಭವ, ವಿಶ್ವೋತ್ಪತ್ತಿ ಕಾರಣನೇ, ಉರ್ಧ್ವಕರ್ಮನ್ ಸರ್ವೋತ್ತರವಾದ ವ್ಯಾಪಾರವುಳ್ಳವನೇ. ಅಥವಾ ಕರ್ಮಸಂಬಂಧದಿಂದ ಬೇರೆಯಾಗಿರುವವನೇ ಅಮೃತ ಮರಣಸ್ವಭಾವವಿಲ್ಲದವನೇ, ದಿವಸ್ಪತೆ, ಸ್ವರ್ಗಲೋಕಕ್ಕೂ ಅಧಿಪತಿಯಾಗಿರುವವನೇ, ವಾಚಸ್ಪತೆ, ವಾಕ್ಕಿಗೂ ಅಧಿದೇವತೆಯಾಗಿರುವವನೇ, ಘೃತಾರ್ಚಿಃ, ಉಜ್ಜ್ವಲವಾದ ತೇಜಸ್ಸುಳ್ಳವನೇ, ಅನಂತಕರ್ಮವಂಶ, ಅಪರಿಮಿತವಾದ ಕರ್ಮಪ್ರವಾಹದಿಂದುಂಟಾದ ಜಗದ್ವಂಶ ಉಳ್ಳವನೇ, ಪ್ರಾಗ್ವಂಶಧೀಃ, ಪುರಾತನವಾದ ಸರ್ವವಂಶಗಳನ್ನೂ ತಿಳಿದಿರುವವನೇ ತ್ವಮಶ್ವಮೇಧಃ ಅಶ್ವಮೇಧವೆಂಬ ಮಹಾಯಜ್ಞವೂ ನೀನೇ ಆಗಿದ್ದೀಯೆ, (ಯಜ್ಞಾದಿ ಗಳಿಂದ ಹೊಂದುವ ಫಲವೂ ನಿನ್ನ ಸಂಕಲ್ಪದಿಂದಲೇ ಎಂದು ತಾತ್ಪರ್ಯ.) ವರಾರ್ಥಿನಾಂ ವರದೋಸಿ ತ್ವಮ್ ವರವನ್ನು ಅಪೇಕ್ಷಿಸುವವರಿಗೆ ನೀನೇ ವರಪ್ರದನೂ ಆಗಿದ್ದೀಯೆ.

**ಚತುರ್ಭಿಶ್ಚ ಚತುರ್ಭಿಶ್ಚ ದ್ವಾಭ್ಯಾಂ ಪಂಚಭಿರೇವ ಚ ।
ಹೂಯತೇ ಚ ಪುನರ್ದ್ವಾಭ್ಯಾಂ ತುಭ್ಯಂ ಹೋತ್ರಾತ್ಮನೇ ನಮಃ**

**ಇತಿ ಶ್ರೀ ವಾಮನಪುರಾಣೇ ಸರೋಮಾಹಾತ್ಮ್ಯೇ
ಷಡ್ವಿಂಶೋಽಧ್ಯಾಯಃ**

---

ಈ ಶ್ಲೋಕದಿಂದ ಯಜಮಾನಸ್ವರೂಪನೂ ನೀನೇ ಆಗಿದ್ದೀಯೆ ಎಂಬುದನ್ನು ಶ್ರೌತ ಶಾಸ್ತ್ರಪ್ರಕ್ರಿಯೆಯಿಂದಲೂ ನಿರೂಪಿಸುತ್ತಾರೆ. ಯಜ್ಞದಲ್ಲಿ ಹೋಮಕ್ಕೆ ಸಾಧನವಾದ ಕೆಲವು ಮಂತ್ರಗಳು ಒಟ್ಟಾಗಿ ಹದಿನೇಳು ಅಕ್ಷರಗಳಾಗುತ್ತವೆ. ಈ ಅಕ್ಷರಗಳು ಐದು ಮಂತ್ರಗಳೆಂದು ಮೀಮಾಂಸಾಶಾಸ್ತ್ರದಲ್ಲಿ ಪರಿಗಣಿಸಲ್ಪಟ್ಟಿವೆ. ಈ ಮಂತ್ರಗಳಿಂದ ಯಜಮಾನನು ಹೋಮಮಾಡಬೇಕು. ಯಜ್ಞದಲ್ಲಿ ಅಧ್ವರ್ಯುವೇ ಹೋಮಮಾಡುತ್ತಾನೆ. ಆದರೂ ನ ಮಮ ಎಂಬ ಸಾತ್ವಿಕತ್ಯಾಗದಿಂದ ಯಜಮಾನನೇ ಫಲಕ್ಕೆ ಸ್ವಾಮಿಯಾಗುತ್ತಾನಾದ್ದರಿಂದ ಅವನೇ ಕರ್ತೃವೆಂದು ಶಾಸ್ತ್ರಮರ್ಯಾದೆ. ಈ ಮಂತ್ರಗಳು ಕ್ರಮವಾಗಿ ನಾಲ್ಕು, ನಾಲ್ಕು, ಎರಡು, ಐದು, ಎರಡು, ಈ ರೀತಿ ಅಕ್ಷರಸಂಖ್ಯೆಯಲ್ಲಿರುತ್ತವೆ. ಆ ಮಂತ್ರಗಳು, ಆಶ್ರಾವಯ, ಅಸ್ತು ಶ್ರೌಷಟ್, ಯಜ, ಯೇಯಜಾಮಹೆ, ಶ್ರೌಷಟ್, ಎಂಬ ಆನುಪೂರ್ವಿಯುಳ್ಳವುಗಳು, ಇವುಗಳಲ್ಲಿ ಅರ್ಧಾಕ್ಷರನಾದ ಟಕಾರವನ್ನು ಬಿಟ್ಟರೆ ಮೇಲ್ಕಂಡ ಅಕ್ಷರ ಸಂಖ್ಯೆಯು ಲಭಿಸುತ್ತದೆ. ಈ ಮಂತ್ರಗಳಿಂದ ಹೋಮಮಾಡುವ ಯಜಮಾನ ಸ್ವರೂಪನೂ ನೀನೇ ಆಗಿದ್ದೀಯೆ ಎಂದು ಅರ್ಥ. ಇಲ್ಲಿ ಹೋತ್ರಾತ್ಮನೇ ಎಂಬಲ್ಲಿ ಹೋತೃಶಬ್ದವು ಹೋತೃಗಣದಲ್ಲಿ ಮುಖ್ಯನಾದ ಯಜಮಾನನನ್ನು ಬೋಧಿಸುತ್ತದೆ. ಹೀಗೆ ಸರ್ವವೂ ಬ್ರಹ್ಮಾತ್ಮಕವೆಂಬ ಶ್ರುತಿಯಿಂದ ಜಗತ್ತೆಲ್ಲವೂ ಪರಮಾತ್ಮನ ಶರೀರವೆಂದೂ ಅವನೇ ನಿಯಾಮಕನೆಂದೂ ನಿರೂಪಿಸಿದಂತಾಯಿತು.

ಇಲ್ಲಿಗೆ ಶ್ರೀ ವಾಮನಪುರಾಣದಲ್ಲಿ ಸರೋಮಾಹಾತ್ಮ್ಯವೆಂಬ
ಇಪ್ಪತ್ತಾರನೆಯ ಅಧ್ಯಾಯವು ಮುಗಿದಿದೆ.

(ಈ ಪ್ರಕರಣದ ಸಂಗ್ರಹಾರ್ಥವನ್ನು ಅಧ್ಯಾಯದ ಮೊದಲಿನಲ್ಲಿಯೇ
ಪೀಠಿಕಾರೂಪದಿಂದ ಸೇರಿಸಲಾಗಿದೆ.)

॥ ಶ್ರೀಃ ॥

---

# ಶ್ರೀವಾಮನಪುರಾಣಂ

## ಸಪ್ತವಿಂಶೋಽಧ್ಯಾಯಃ

---

### ಲೋಮಹರ್ಷಣ ಉವಾಚ

ನಾರಾಯಣಸ್ತು ಭಗವಾನ್ ಶ್ರುತ್ವೈವಂ ಪರಮಂ ಸ್ತವಂ ।
ಬ್ರಹ್ಮಜೇನ ದ್ವಿಜೇಂದ್ರೇಣ ಕಾಶ್ಯಪೇನ ಸಮೀರಿತಂ ॥ ೧ ॥

ಉವಾಚ ವಚನಂ ಸಮ್ಯಕ್ತುಷ್ಟಃ ಪುಷ್ಟಪದಾಕ್ಷರಂ ।
ಶ್ರೀಮಾನ್ಪ್ರೀತಮನಾ ದೇವೋ ಯದ್ವದೇತ್ಪ್ರಭುರೀಶ್ವರಃ ॥ ೨ ॥

---

### ಇಪ್ಪತ್ತೇಳನೆಯ ಅಧ್ಯಾಯವು

೧-೨. ಈ ಪ್ರಕಾರ ಬ್ರಹ್ಮಜರಾಗಿಯೂ ಬ್ರಾಹ್ಮಣೋತ್ತಮರಾಗಿಯೂ ಇರುವ ಕಾಶ್ಯಪರು ಮಾಡಿದ ಉತ್ತಮೋತ್ತಮ ಸ್ತುತಿಯನ್ನು ಕೇಳಿ, ಸಂತುಷ್ಟನಾದ ಸರ್ವೇಶ್ವರನಾದ ನಾರಾಯಣನು, ಪೂರ್ಣೈಶ್ವರನಾಗಿಯೂ, ಸರ್ವನಿಯಾಮಕನಾಗಿಯೂ ನಿಗ್ರಹಾನುಗ್ರಹಸಮರ್ಥನಾಗಿಯೂ ಇರುವ ಸಂತುಷ್ಟನಾದ ಮಹಾಪುರುಷನು ಯಾವ ಉತ್ತರವನ್ನು ಹೇಳಬಹುದೋ ಅಂತಹ ಉತ್ತರವನ್ನು ಸ್ಪಷ್ಟಾಕ್ಷರಗಳುಳ್ಳ ಮಾತಿನಿಂದ ಹೇಳಲುಪಕ್ರಮಿಸಿ, ಎಲೈ ಸುರಶ್ರೇಷ್ಠರೇ, ನಿಮಗೆ ಮಂಗಳವಾಗಲಿ, ಈ ನಿಮ್ಮ ಸ್ತುತಿಯಿಂದ ನಾನು ವರಪ್ರದನಾಗಿದ್ದೇನೆ. ನಿಮಗೆ ಬೇಕಾದ ವರವನ್ನು ಕೇಳಿರಿ, ಎಂದನು.

ವರಂ ವೃಣುಧ್ವಂ ಭದ್ರಂವೋ ವರದೋಽಸ್ಮಿ ಸುರೋತ್ತಮಾಃ ।

ಕಾಶ್ಯಪ ಉವಾಚ

ಸುಪ್ರೀತೋಽಸಿ ಸುರಶ್ರೇಷ್ಠ ಸರ್ವೇಷಾಮೇವ ನಿಶ್ಚಯಾತ್ ॥ ೩ ॥

ವಾಸವಸ್ಯಾನುಜೋ ಭ್ರಾತಾ ಜ್ಞಾತೀನಾಂ ನಂದವರ್ಧನಃ ।
ಅದಿತ್ಯಾ ಅಪಿ ಚ ಶ್ರೀಮಾನ್ ಭಗವಾನಸ್ತು ವೈ ಸುತಃ ॥ ೪ ॥

ಅದಿತಿರ್ದೇವಮಾತಾ ಚ ಏತಮೇವಾರ್ಥಮುತ್ತಮಂ ।
ಪುತ್ರಾರ್ಥಂ ವರದಂ ಪ್ರಾಹ ಭಗವಂತಂ ವರಾರ್ಥಿನೀ ॥ ೫ ॥

ದೇವಾ ಊಚುಃ

ನಿಃಶ್ರೇಯಸಾರ್ಥಂ ಸರ್ವೇಷಾಂ ದೇವತಾನಾಂ ಮಹೇಶ್ವರಃ ।
ತ್ರಾತಾ ಭರ್ತಾ ಚ ದಾತಾ ಚ ಶರಣಂ ಭವ ನಃ ಸದಾ ॥ ೬ ॥

ಲೋಮಹರ್ಷಣ ಉವಾಚ

ತತಸ್ತಾನಬ್ರವೀದ್ವಿಷ್ಣುಃ ದೇವಾಂಸ್ತಾನ್ಸ್ವಯಮೇವ ಚ ।
ಸರ್ವೇಷಾಮೇವ ಯುಷ್ಮಾಕಂ ಯೇ ಭವಿಷ್ಯಂತಿ ಶತ್ರವಃ ।
ಮುಹೂರ್ತಮಪಿ ತೇ ಸರ್ವೇ ನ ಸ್ಥಾಸ್ಯಂತಿ ಮಮಾಗ್ರತಃ ॥ ೭ ॥

---

೩-೫. ಕಾಶ್ಯಪರು ಹೇಳುತ್ತಾರೆ. ಎಲೈ, ಸುರೋತ್ತಮನೇ ನೀನು ಸಂತುಷ್ಟನಾಗಿ ವರಪ್ರದನಾಗಿ ಅನುಗ್ರಹಿಸುವ ಪಕ್ಷದಲ್ಲಿ ಎಲ್ಲಾ ದೇವತೆಗಳ ಮನೋನಿಶ್ಚಯವನ್ನನುಸರಿಸಿ ಈ ವರವನ್ನು ಅನುಗ್ರಹಿಸು, ಇಂದ್ರನಿಗೆ ಕನಿಷ್ಠಭ್ರಾತೃವಾಗಿಯೂ, ಜ್ಞಾತಿಗಳಾದ ದೇವತೆಗಳಿಗೆ ಸಂತೋಷಪ್ರದನಾಗಿ ಅದಿತಿಯಲ್ಲಿ ನೀನು ಪುತ್ರನಾಗಿ ಅವತರಿಸಬೇಕು. ಎಂದರು. ದೇವತೆಗಳ ತಾಯಿಯಾದ ಅದಿತಿಯೂ ಕೂಡ ವರಪ್ರದನಾದ ಭಗವಂತನನ್ನು ಕುರಿತು ಪುತ್ರಾರ್ಥಿನಿಯಾಗಿ ಈ ವರವನ್ನೇ ಬೇಡಿದಳು.

೬-೭. ದೇವತೆಗಳೂ ಹೇಳುತ್ತಾರೆ. ಎಲೈ, ಮಹಾಪ್ರಭುವೇ ಎಲ್ಲಾ ದೇವತೆಗಳಿಗೂ ಶ್ರೇಯಸ್ಸನ್ನು ಉಂಟುಮಾಡುವುದಕ್ಕಾಗಿ ಪ್ರಭುವಾದ ನೀನೇ ರಕ್ಷಕನಾಗಿಯೂ ಧಾರಕನಾಗಿಯೂ ದಾತೃವಾಗಿಯೂ ಆಗಿ ಶರಣಾಗತರಾದ ನಮ್ಮನ್ನು ಸ್ವೀಕರಿಸು, ಅನಂತರ ವಿಷ್ಣುವಿನ ಪ್ರತ್ಯುತ್ತರವನ್ನು ಲೋಮಹರ್ಷಣರು ಹೇಳುತ್ತಾರೆ. ಅಂತಹ ದೇವತೆಗಳನ್ನು ಕುರಿತು ವಿಷ್ಣುವು ನಿಮ್ಮೆಲ್ಲರಿಗೂ ಯಾರು ಶತ್ರುಗಳಾಗಿರುವರೋ ಅವರು ನನ್ನ ಎದುರಿಗೆ ಮುಹೂರ್ತ ಮಾತ್ರವೂ ಬದುಕಿರಲಾರರು, ಮತ್ತು

ಹತ್ವಾಸುರಗಣಾನ್ಸರ್ವಾನ್ಯಜ್ಞಭಾಗಾಗ್ರಭೋಜಿನಃ ।
ಹವ್ಯಾದಾಂಶ್ಚ ಸುರಾನ್ ಸ್ಸರ್ವಾನ್ ನ್ಕವ್ಯಾದಾಂಶ್ಚ ಪಿತೃನಪಿ ॥ ೮ ॥

ಕರಿಷ್ಯೇ ವಿಬುಧಶ್ರೇಷ್ಠಾ ಪಾರಮೇಷ್ಠ್ಯೇನ ಕರ್ಮಣಾ ।
ಯಥಾಯಾತೇನ ಮಾರ್ಗೇಣ ನಿವರ್ತಧ್ವಂ ಸುರೋತ್ತಮಾಃ ॥ ೯ ॥

ಏವಮುಕ್ತೇ ತು ದೇವೇನ ವಿಷ್ಣುನಾ ಪ್ರಭವಿಷ್ಣುನಾ ।
ತತಃ ಪ್ರಹೃಷ್ಟಮನಸಃ ಪೂಜಯಂತಿ ಸ್ಮ ತಂ ಪ್ರಭುಂ ॥ ೧೦ ॥

ವಿಶ್ವೇದೇವಾ ಮಹಾತ್ಮಾನಃ ಕಶ್ಯಪೋಽದಿತಿರೇವ ಚ ।
ನಮಸ್ಕೃತ್ಯ ಸುರೇಶಾಯ ತಸ್ಮೈ ದೇವಾಯ ರಂಹಸಾ ॥ ೧೧ ॥

ಪ್ರಯಾತಾಃ ಪ್ರಾಗ್ದಿಶಂ ಸರ್ವೇ ವಿಪುಲಂ ಕಶ್ಯಪಾಶ್ರಮಂ ।
ತೇ ಕಶ್ಯಪಾಶ್ರಮಂ ಗತ್ವಾ ಕುರುಕ್ಷೇತ್ರವನಂ ಮಹತ್ ॥ ೧೨ ॥

ಸಂಪ್ರಸಾದ್ಯಾದಿತಿಂ ತತ್ರ ತಪಸೇ ತಾಂ ನ್ಯಯೋಜಯನ್ ।
ಸಾ ಚಚಾರ ತಪೋ ಘೋರಂ ವರ್ಷಾಣಾಮಯುತಂ ತದಾ ॥ ೧೩ ॥

---

೮-೯. ಯಾರು ಹವ್ಯಭಾಗಿಗಳಾದ ದೇವತೆಗಳನ್ನೂ ಕವ್ಯಭಾಗಿಗಳಾದ ಪಿತೃಗಳನ್ನೂ ನಾಶಪಡಿಸಿ ಯಜ್ಞಭಾಗಗಳನ್ನು ತಾವೇ ಸ್ವೀಕರಿಸುತ್ತಿರುವರೋ ಅಂತಹ ನಿಮ್ಮ ಶತ್ರುಗಳಿಗೆ ನನ್ನ ಪ್ರಭುತ್ವಕ್ಕೆ ತಕ್ಕ ವ್ಯಾಪಾರದಿಂದ ಪ್ರತೀಕಾರವನ್ನು ಮಾಡುತ್ತೇನೆ. ಎಲೈ, ಸುರೋತ್ತಮರೇ ಇನ್ನು ಈ ಚಿಂತೆಯನ್ನು ಬಿಟ್ಟು ನೀವು ಬಂದ ಮಾರ್ಗದಿಂದ ನಿಮ್ಮ ನಿಮ್ಮ ಸ್ಥಾನಕ್ಕೆ ಹಿಂತಿರುಗಿ ಎಂದನು.

೧೦-೧೩. ಪ್ರಭುವಾದ ವಿಷ್ಣುವಿನಿಂದ ಹೀಗೆ ಹೇಳಲ್ಪಟ್ಟ ದೇವತೆಗಳು ಸಂತುಷ್ಟರಾಗಿ ಭಗವಂತನನ್ನು ಬಹಳ ಕೊಂಡಾಡಿದರು. ಪೂಜ್ಯರಾದ ಎಲ್ಲಾ ದೇವತೆಗಳೂ ಕಶ್ಯಪರೂ ಅದಿತಿಯೂ ಕೂಡ ಪರಮಾತ್ಮನನ್ನು ನಮಸ್ಕರಿಸಿ ಅಲ್ಲಿಂದ ಪೂರ್ವದಿಕ್ಕಿಗೆ ಪ್ರಯಾಣ ಹೊರಟು ವೇಗದಿಂದ ಕಶ್ಯಪಾಶ್ರಮಕ್ಕೆ ಅಭಿಮುಖರಾಗಿ ಬಂದರು. ಅವರೆಲ್ಲರೂ ಕುರುಕ್ಷೇತ್ರ ಮಹಾವನದಲ್ಲಿರುವ ಕಶ್ಯಪರ ಆಶ್ರಮಕ್ಕೆ ಬಂದುಸೇರಿ, ಅಲ್ಲಿ ಅದಿತಿಯನ್ನು ಸಂತೋಷಪಡಿಸಿ ಅವಳನ್ನು ತಪಸ್ಸುಮಾಡಲು ಪ್ರೇರಿಸಿದರು. ಆ ಅದಿತಿಯು ಹತ್ತುಸಾವಿರವರ್ಷ ಪರ್ಯಂತರವೂ ಅಲ್ಲಿ ಘೋರವಾದ ತಪಸ್ಸನ್ನಾಚರಿಸಿದಳು.

**ತಸ್ಯಾ ನಾಮ್ನಾ ವನಂ ದಿವ್ಯಂ ಸರ್ವಕಾಮಪ್ರದಂ ಶುಭಂ ।**
**ಆರಾಧನಾಯ ಕೃಷ್ಣಸ್ಯ ವಾಗ್ಯತಾ ವಾಯುಭೋಜನಾಃ ॥ ೧೪ ॥**
**ದೈತ್ಯೈರ್ನಿರಾಕೃತಾನ್ದೃಷ್ಟ್ವಾ ಸಭಯಾನೃಷಿಸತ್ತಮಾ್ ।**

**ವೃಥಾಪುತ್ರಾಹಮಿತಿ ಸಾ ನಿರ್ವೇದಾತ್ಪ್ರಣತಾ ಹರಿಂ ॥**
**ತುಷ್ಟಾವ ವಾಗ್ಭಿರಿಷ್ಟಾಭಿಃ ಸ್ತುತಿಭಿ ಸ್ತಾತಪೋಧನಾ ॥ ೧೫ ॥**

**ಶರಣ್ಯಂ ಶರಣಂ ವಿಷ್ಣುಂ ಪ್ರಣತಾ ಭಕ್ತವತ್ಸಲಂ ।**
**ದೇವದೈತ್ಯಮಯಂ ಚಾದಿಮಧ್ಯಮಾಂತಸ್ವರೂಪಿಣಂ ॥ ೧೬ ॥**

---

೧೪-೧೫. ಅವಳ ಹೆಸರಿನಿಂದಲೇ ಪ್ರಸಿದ್ಧಿಹೊಂದಿರುವ ಈ ವನವು ಎಲ್ಲರಿಗೂ ಇಷ್ಟಾರ್ಥಪ್ರದವಾಗಿಯೂ ಸೇವ್ಯವಾಗಿಯೂ ಆಗಿರುತ್ತದೆ. ಅಲ್ಲಿ ಪರಮಾತ್ಮನಾದ ಕೃಷ್ಣನನ್ನು ಆರಾಧಿಸಲು ಮೌನವ್ರತದಿಂದ ವಾಯುಭಕ್ಷರಾಗಿ ಅನೇಕ ಋಷಿಗಳು ತಪಸ್ಸುಮಾಡುತ್ತಿದ್ದು ದೈತ್ಯರಿಂದ ಹಿಂಸಿಸಲ್ಪಟ್ಟರು. ಆಗ ದೈತ್ಯರಿಗೆ ಹೆದರಿ ಭಯ ದಿಂದ ದುಃಖಪಡುತ್ತಿರುವ ಆ ಋಷಿಗಳನ್ನು ನೋಡಿ ಅದಿತಿಯು ನಾನು ಇಂದ್ರನನ್ನು ಪುತ್ರನನ್ನಾಗಿ ಹೊಂದಿದ್ದರೂ ಅದು ವ್ಯರ್ಥವಾಯಿತು. (ದೈತ್ಯರನ್ನು ನಾಶಮಾಡಿ ಋಷಿಗಳನ್ನು ಕಾಪಾಡುವ ಸಾಮರ್ಥ್ಯವು ಇಂದ್ರನಲ್ಲಿಯೂ ಇಲ್ಲದುದರಿಂದ ಎಂದು ತಾತ್ಪರ್ಯ.) ಎಂದು ಬಹಳ ನಿರ್ವೇದಹೊಂದಿ ಶರಣಾಗತರಾದ ಆ ಋಷಿಗಳನ್ನು ರಕ್ಷಿಸುವ ಸಲುವಾಗಿ ಭಗವಂತನಾದ ಹರಿಯಲ್ಲಿ ತಾನೂ ಶರಣಾಗತಳಾಗಿ ಅವನನ್ನು ಭಕ್ತಿಯಿಂದ ನಮಸ್ಕರಿಸಿ ತನಗೆ ಅಭಿಮತವಾದ ಸ್ತುತಿಗಳಿಂದ ಅವನನ್ನು ಸ್ತೋತ್ರ ಮಾಡಿದಳು.

೧೬. ಸರ್ವರಕ್ಷಣ ಸಮರ್ಥನಾಗಿಯೂ ಭಕ್ತವತ್ಸಲನಾಗಿಯೂ ಇರುವ ಮಹಾ ವಿಷ್ಣುವಿನಲ್ಲಿ ಶರಣಾಗತಳಾಗಿ ನಮಸ್ಕರಿಸಿ, ದೇವತೆಗಳಲ್ಲಿಯೂ ದೈತ್ಯರಲ್ಲಿಯೂ ಅಂತರ್ಯಾಮಿಸ್ವರೂಪದಿಂದ ವ್ಯಾಪಕನಾಗಿ ನೆಲಸಿರುವ, ಮತ್ತು ಜಗತ್ತಿನ ಸೃಷ್ಟಿ ಸ್ಥಿತಿ ನಾಶಗಳಿಗೆ ಕಾರಣನಾಗಿ ದೇವತಾಸ್ವರೂಪನೂ ಆಗಿರುವ ಆ ಪರಮಾತ್ಮನನ್ನು ಈ ರೀತಿ ಅದಿತಿಯು ಸ್ತೋತ್ರಮಾಡುತ್ತಾಳೆ.

**ಅದಿತಿರುವಾಚ**

**ನಮಃ ಕೃತ್ಯಾರ್ತಿನಾಶಾಯ ನಮಃ ಪುಷ್ಕರಮಾಲಿನೇ ।**
**ನಮಃ ಪರಮಕಲ್ಯಾಣಕಲ್ಯಾಣಾಯಾದಿವೇಧಸೇ ॥ ೧೭ ॥**

**ನಮಃ ಪಂಕಜನೇತ್ರಾಯ ನಮಃ ಪಂಕಜನಾಭಯೇ ।**
**ನಮಃ ಪಂಕಜಸಂಭೂತಿಸಂಭವಾಯಾತ್ಮಯೋನಯೇ ॥ ೧೮ ॥**

**ಶ್ರಿಯಃ ಕಾಂತಾಯ ದಾಂತಾಯ ದಾಂತದೃಶ್ಯಾಯ ಚಕ್ರಿಣೇ ।**
**ನಮಃ ಪದ್ಮಾದಿಹಸ್ತಾಯ ನಮಃ ಕನಕವಾಸಸೇ ॥ ೧೯ ॥**

**ತಥಾತ್ಮಜ್ಞಾನಯಜ್ಞಾಯ ಯೋಗಿಚಿಂತ್ಯಾಯ ಯೋಗಿನೇ ।**
**ನಿರ್ಗುಣಾಯ ವಿಶೇಷಾಯ ಹರಯೆ ಬ್ರಹ್ಮರೂಪಿಣೇ ॥ ೨೦ ॥**

---

೧೭-೧೯. ಮಾಟಕೂಟವೇ ಮೊದಲಾದ ಆಭಿಚಾರಕ ವ್ಯಾಪಾರದಿಂದ ಉಂಟಾದ ಪೀಡೆಗೆ ನಾಶಕನಾಗಿಯೂ ಕಮಲಮಾಲಿಕೆಯಿಂದ ಅಲಂಕೃತನಾಗಿಯೂ ಇರುವ ನಿನಗೆ ನಮಸ್ಕಾರವು, ಉತ್ಕೃಷ್ಟಮಂಗಳಗಳಿಗೂ ಮಂಗಳಪ್ರದನಾದ ಮತ್ತು ಆದಿಚತುರ್ಮುಖನೂ ಆಗಿರುವ ನಿನಗೆ ನಮಸ್ಕಾರವು. ಕಮಲದಂತೆ ವಿಶಾಲವಾಗಿಯೂ ರಮಣೀಯವಾಗಿಯೂ ಇರುವ ನೇತ್ರಗಳುಳ್ಳ ಮತ್ತು ಚತುರ್ಮುಖನಿಗೂ ಉತ್ಪಾದಕವಾದ ಕಮಲವನ್ನು ನಾಭಿಪ್ರದೇಶದಲ್ಲಿ ಹೊಂದಿರುವ ನಿನಗೆ ಅನೇಕ ನಮಸ್ಕಾರಗಳು, ಕಮಲೋದ್ಭವನಾದ ಚತುರ್ಮುಖನಿಗೂ ಉತ್ಪತ್ತಿಸ್ಥಾನವಾಗಿಯೂ ಇತರ ಕಾರಣ ಸಂಬಂಧವಿಲ್ಲದೆ ಸ್ವಸಂಕಲ್ಪಮಾತ್ರದಿಂದ ಉತ್ಪನ್ನನೂ ಆಗಿರುವ ನಿನಗೆ ಅನೇಕ ವಂದನೆಗಳು. ಲಕ್ಷ್ಮೀಪತಿಯಾಗಿಯೂ ಜಿತೇಂದ್ರಿಯನಾಗಿಯೂ ಜಿತೇಂದ್ರಿಯರಿಂದ ಸಾಕ್ಷಾತ್ಕರಿಸಲು ಅರ್ಹನಾಗಿಯೂ ದಿವ್ಯಾಯುಧಧಾರಿಯಾಗಿಯೂ ಇರುವ ನಿನಗೆ ನಮಸ್ಕಾರಗಳು, ಪದ್ಮವೇ ಮೊದಲಾದುವುಗಳನ್ನು ಧರಿಸಿ ಪೀತಾಂಬರಧಾರಿಯಾಗಿರುವ ನಿನಗೆ ನಮಸ್ಕಾರಗಳು.

೨೦-೨೨. ಜ್ಞಾನಿಯಾದ ಭಕ್ತನ ಆತ್ಮಜ್ಞಾನವನ್ನೇ ಯಜ್ಞವೆಂದು ಭಾವಿಸಿರುವ(ಜ್ಞಾನಯಜ್ಞಾ ಎಂಬ ಭಗವದ್ಗೀತೆಯ ಅರ್ಥವು ಇಲ್ಲಿ ನೆನಪಿಗೆ ತರಲ್ಪಡುತ್ತಿದೆ.) ಸಮಾಧಿ ದಶೆಯಲ್ಲಿರುವ ಯೋಗಿಗಳಿಗೆ ಗೋಚರನಾಗಿರುವ, ತಾನೂ ಯೋಗನಿಷ್ಠನಾಗಿರುವ, ಪ್ರಾಕೃತಗುಣಸಂಬಂಧವಿಲ್ಲದಿರುವ ಎಲ್ಲಾ ವಸ್ತುವಿಗೂ ಉತ್ಕೃಷ್ಟನಾಗಿ

ಜಗತ್ಸಂತಿಷ್ಠತೇ ಯತ್ರ ಜಗತೋ ಯೋ ನದೃಶ್ಯತೇ ।
ನಮಃ ಸ್ಥೂಲಾತಿಸೂಕ್ಷ್ಮಾಯ ತಸ್ಮೈ ದೇವಾಯ ಶಾರ್ಙ್ಗಿಣೇ ॥ ೨೦ ॥

ಯಂ ನಪಶ್ಯಂತಿ ಪಶ್ಯನ್ತೋ ಜಗದಪ್ಯಖಿಲಂ ನರಾಃ ।
ಅಪಶ್ಯದ್ಭಿರ್ಜಗದ್ಯಶ್ಚ ದೃಶ್ಯತೇ ಹೃದಿ ಸಂಸ್ಥಿತಃ ॥ ೨೧ ॥

ಬಹಿರ್ಜ್ಯೋತಿರಲಕ್ಷ್ಯೋಯೋ ಲಕ್ಷ್ಯತೇ ಜ್ಯೋತಿಷಃ ಪರಃ ।
ಯಸ್ಮಿನ್ನೇವ ಯತಶ್ಚೈವ ಯಸ್ಯೈತದಖಿಲಂ ಜಗತ್ ॥ ೨೩ ॥

---

ವ್ಯಾಪಕರೂಪದಿಂದಿರುವ ಸ್ಮರಣಮಾತ್ರದಿಂದ ಸರ್ವಪಾಪಹಾರಕನಾದ ನಿನಗೆ ನಮಸ್ಕಾರಗಳು. ಯಾವ ನಿನ್ನಲ್ಲಿ ಜಗತ್ತೆಲ್ಲವೂ ನಿಂತಿರುವುದೋ, ಹೀಗಿದ್ದರೂ ಜಗತ್ತಿನಿಂದ ನೋಡಲ್ಪಡುವುದಿಲ್ಲವೋ ಅಂತಹ ಜಗತ್ತಿಗಿಂತ ಸ್ಥೂಲರೂಪಿಯಾಗಿಯೂ ಅದೃಶ್ಯಸೂಕ್ಷ್ಮರೂಪಿಯಾಗಿಯೂ ಇರುವ ಶಾರ್ಙ್ಗಧಾರಿಯಾದ ದೀಪ್ತಿಶಾಲಿಯಾದ ನಿನಗೆ ನಮಸ್ಕಾರಗಳು. ಜಗತ್ತೆಲ್ಲವನ್ನೂ ನೋಡಿ ಬಾಹ್ಯಜ್ಞಾನಹೊಂದಿರುವ ಮನುಷ್ಯರೂ ಯಾವ ನಿನ್ನನ್ನು ನೋಡಲಾರರೋ, ಅವರಿಂದಲೇ ಅಂತರ್ಮುಖತೆಯಿಂದ ಅಂತರ್ಯಾಮಿರೂಪಿಯಾಗಿ ಹೃದಯದಲ್ಲಿರುವ ನೀನು ನೋಡಲ್ಪಡುತ್ತೀಯೋ ಅಂತಹ ನಿನಗೆ ನಮಸ್ಕಾರಗಳು.

೨೩. ಸೂರ್ಯನೇ ಮೊದಲಾದ ಬಾಹ್ಯತೇಜಸ್ಸುಗಳಿಂದ ಯಾವ ನೀನು ಕಾಣಲ್ಪಡುವುದಿಲ್ಲವೋ ಇಂತಹ ಬಾಹ್ಯತೇಜಸ್ಸುಗಳಿಗಿಂತಲೂ ಬೇರೆಯಾಗಿ ಅದಕ್ಕೂ ಪ್ರಕಾಶಕನಾಗಿ ನೀನು ತೋರುತ್ತೀಯೋ ಅಂತಹ ನಿನಗೆ ನಮಸ್ಕಾರಗಳು. ಮತ್ತು ಈ ಜಗತ್ತೆಲ್ಲವೂ ಯಾವ ನಿನ್ನಲ್ಲೇ ಪ್ರಳಯಕಾಲದಲ್ಲಿ ಸೂಕ್ಷ್ಮರೂಪದಿಂದ ಅಡಗಿರುವುದೋ, ನಿನ್ನಿಂದಲೇ ಆವಿರ್ಭಾವಹೊಂದುವುದೋ (ಸೃಷ್ಟಿಕಾಲದಲ್ಲಿ ಎಂದು ತಾತ್ಪರ್ಯ) ನಿನ್ನ ಸಂಬಂಧವನ್ನು ಬಿಟ್ಟು ಬೇರೆ ಇರುವುದಿಲ್ಲವೋ, ಸರ್ವಶೇಷಿಯಾದ ನಿನಗೋಸ್ಕರವೇ, ಏರ್ಪಟ್ಟಿದೆಯೋ ಅಂತಹ ಜಗದ್ಧಾರಕನೂ, ಪೋಷಕನೂ, ಅವಿನಾಭೂತನೂ, ಶೇಷಿಯೂ ಆಗಿರುವ ನಿನಗೆ ನಮಸ್ಕಾರಗಳು. (ಇಲ್ಲಿ ಪ್ರಳಯಕಾಲದಲ್ಲೂ, ಸೃಷ್ಟಿಕಾಲದಲ್ಲೂ, ಸ್ಥಿತಿಕಾಲದಲ್ಲೂ ಕಾರ್ಯರೂಪವಾದ ಜಗತ್ತಿಗೆ ಕಾರಣರೂಪನಾದ ಪರಮಾತ್ಮನೊಡನೆ ನಿಯತವಾದ ಸಂಬಂಧವನ್ನೂ ತನ್ಮೂಲಕವಾದ ಶೇಷಶೇಷಿಭಾವವನ್ನೂ ಹೇಳಿದಂತಾಗುತ್ತದೆ.)

**ತಸ್ಮೈ ಸಮಸ್ತಜಗತಾಂ ಸುನಾಥಾಯ ನಮೋನಮಃ ।**
**ಆದ್ಯಃ ಪ್ರಜಾಪತಿರ್ಯಸ್ತು ಪಿತೄಣಾಂ ಯಃ ಪರಃಪತಿಃ ॥**
**ಪತಿಃ ಸುರಾಣಾಂ ಯಃ ತಸ್ಮೈ ನಮಃ ಕೃಷ್ಣಾಯ ವೇಧಸೇ ॥ ೨೪ ॥**

**ಯಃ ಪ್ರವೃತ್ತೈರ್ನಿವೃತ್ತೈಶ್ಚ ಕರ್ಮಭಿಸ್ತುವಿರಜ್ಯತೇ ।**
**ಸ್ವರ್ಗಾಪವರ್ಗಫಲದೋ ನಮಸ್ತಸ್ಮೈ ಗದಾಭೃತೇ ॥ ೨೫ ॥**

**ಯಶ್ಚಿಂತ್ಯಮಾನೋ ಮನಸಾ ಸದ್ಯಃ ಪಾಪಂ ವ್ಯಪೋಹತಿ ।**
**ನಮಸ್ತಸ್ಮೈ ವಿಶುದ್ಧಾಯ ಪರಸ್ಮೈ ಹರಿಮೇಧಸೇ ॥ ೨೬ ॥**

---

೨೪-೨೫. ಯಾವ ನೀನು ಮೊದಲನೇ ಸೃಷ್ಟಿಕರ್ತನಾಗಿರುತ್ತೀಯೋ (ಚತುರ್ಮುಖನಿಗೂ ತಂದೆ ಎಂದು ತಾತ್ಪರ್ಯ) ಪಿತೃದೇವತೆಗಳಿಗೂ ಇತರ ಎಲ್ಲಾ ದೇವತೆಗಳಿಗೂ ಒಡೆಯನಾಗಿರುತ್ತೀಯೋ ಅಂತಹ ಕೃಷ್ಣರೂಪಿಯಾಗಿ ಸರ್ವಕರ್ತನಾಗಿರುವ ನಿನಗೆ ನಮಸ್ಕಾರಗಳು. ಯಾವ ನೀನು ಪ್ರವೃತ್ತಿನಿವೃತ್ತಿಕರ್ಮಗಳಿಂದ ಬಿಡಲ್ಪಟ್ಟು ರಾಗಾದಿದೋಷರಹಿತನಾಗಿ ಅಸಂಸಾರಿಸ್ವಭಾವದಿಂದ ನಿತ್ಯಶುದ್ಧನಾಗಿರುವೆಯೋ (ಶಾಸ್ತ್ರೀಯವಾದ ಇಹಲೋಕದ ಸುಖಕ್ಕೆ ಕಾರಣವಾದ ಕರ್ಮಗಳು ಪ್ರವೃತ್ತಿಕರ್ಮಗಳೆಂದೂ, ಪರಲೋಕದ ಸುಖಕ್ಕೆ ಕಾರಣವಾದ ಶಾಸ್ತ್ರೀಯಕರ್ಮಗಳಿಗೆ ನಿವೃತ್ತಿಕರ್ಮಗಳೆಂದೂ ವೇದಾಂತಶಾಸ್ತ್ರದ ಸಂಕೇತ) ಹೀಗಿದ್ದರೂ ಆಶ್ರಯಿಸತಕ್ಕವರಿಗೆ ಸ್ವರ್ಗಮೋಕ್ಷಾದಿಸಕಲಫಲಗಳನ್ನೂ ಕೊಡತಕ್ಕವನಾಗಿರುತ್ತೀಯೋ ಅಂತಹ ದಿವ್ಯಾಯುಧಧಾರಿಯಾದ ನಿನಗೆ ನಮಸ್ಕಾರಗಳು.

೨೬-೨೮. ಯಾವ ನೀನು ಸ್ಮರಣಮಾತ್ರದಿಂದ ಸಮಸ್ತಪಾಪಗಳಿಗೂ ನಾಶಕನಾಗಿರುವೆಯೋ ಅಂತಹ ವಿಶುದ್ಧಜ್ಞಾನರೂಪಿಯಾಗಿಯೂ, ಹರಿಯಾಗಿಯೂ ಇರುವ ನಿನಗೆ ನಮಸ್ಕಾರಗಳು. (ಇಲ್ಲಿ ಸರ್ವಪಾಪಾಹರಣಸಮರ್ಥನೆಂಬ ಹರಿಶಬ್ದಾರ್ಥವನ್ನು ಪೂರ್ವಾರ್ಧದಿಂದ ವ್ಯುತ್ಪತ್ತಿಯಮೂಲಕ ನಿದರ್ಶಿಸಿದಂತಾಯಿತು) ಯಾವ ನಿನ್ನನ್ನು ವೇದಾಂತದೃಷ್ಟಿಯಿಂದ ಎಲ್ಲಾ ಪ್ರಪಂಚಕ್ಕೂ ಆಧಾರನೆಂದೂ, ಪ್ರಭುವೆಂದೂ, ಶಾಶ್ವತನೆಂದೂ ತಿಳಿದು ಮಹಾತ್ಮರು ಜನ್ಮಮರಣ ಭಯದಿಂದ ದೂರರಾಗಿ ಮುಕ್ತರಾಗುವರೋ ಅಂತಹ ಸರ್ವವಂದ್ಯನಾದ ನಿನಗೆ ನಮಸ್ಕಾರಗಳು. ಯಾವ ನೀನು ಯಜ್ಞಗಳಲ್ಲಿ ಯಜ್ಞಾಧಿದೇವತೆಯಾಗಿ ಸಾನ್ನಿಧ್ಯಹೊಂದಿ ಯಜನವೇ ಮೊದಲಾದ ಶಾಸ್ತ್ರೀಯಕರ್ಮಗಳಿಂದ ಪೂಜಿಸಲ್ಪಡುತ್ತೀಯೋ ಅಂತಹ ಯಜ್ಞಪುರುಷರೂಪಿ

ಯಂ ಪಶ್ಯಂತ್ಯಖಿಲಾಧಾರಮೀಶಾನ ಮಜಮವ್ಯಯಂ ।
ನ ಪುನರ್ಜನ್ಮಮರಣಂ ಪ್ರಾಪ್ನುವಂತಿ ನಮಾಮಿ ತಂ ॥ ೨೭ ॥

ಯೋ ಯಜ್ಞೈರ್ಯಜ್ಞಪುರುಷ ಇಜ್ಯತೇ ಯಜ್ಞಮಾಸ್ಥಿತಃ ।
ತಂ ಯಜ್ಞಪುರುಷಂ ವಿಷ್ಣುಂ ನಮಾಮಿ ಪ್ರಭುಮೀಶ್ವರಂ ॥ ೨೮ ॥

ಗೀಯತೇ ಸರ್ವವೇದೇಷು ವೇದವಿದ್ಭಿಃ ವಿದಾಂಗತಿಃ ।
ಯಸ್ತಸ್ಮೈ ವೇದವೇದ್ಯಾಯ ವಿಷ್ಣವೇ ಜಿಷ್ಣವೇ ನಮಃ ॥ ೨೯ ॥

ಯತೋ ವಿಶ್ವಂ ಸಮುದ್ಭೂತಂ ಯಸ್ಮಿನ್ಪ್ರಲಯಮೇಷ್ಯತಿ ।
ವಿಶ್ವೋದ್ಭವಪ್ರತಿಷ್ಠಾಯ ನಮಸ್ತಸ್ಮೈ ಮಹಾತ್ಮನೇ ॥ ೩೦ ॥

---

ಯಾಗಿಯೂ, ಸರ್ವವ್ಯಾಪಕನಾಗಿಯೂ, ಪ್ರಭುವಾಗಿಯೂ ಇರುವ ನಿನಗೆ ನಮಸ್ಕಾರಗಳು. (ಇಲ್ಲಿ ಇಂದ್ರಾದಿದೇವತೆಗಳಿಗೆ ಯಜ್ಞದಲ್ಲಿ ಪ್ರವೇಶವಿದ್ದರೂ ಅವರು ಮುಖ್ಯೋದ್ದೇಶ್ಯನಾದ ಪರಮಾತ್ಮನ ಆರಾಧನಕ್ಕಾಗಿ ನಡೆಯುವ ಯಜ್ಞದಲ್ಲಿ ದ್ವಾರಭೂತರೇ ಹೊರತು ಮುಖ್ಯೋದ್ದೇಶ್ಯರಲ್ಲ. ಪರಮಾತ್ಮನೇ ಮುಖ್ಯೋದ್ದೇಶ್ಯನಾದುದರಿಂದ ಅವನೇ ಯಜ್ಞಾಧಿದೇವತೆಯಾಗಿಯೂ, ದ್ವಾರಭೂತರಾದ ಇಂದ್ರಾದಿಗಳಲ್ಲಿ ಅಂತರ್ಯಾಮಿಯಾಗಿಯೂ ನಿಂತು ಯಜ್ಞವೆಂಬ ದೇವತಾರಾಧನಕರ್ಮವನ್ನು ಸ್ವಪರ್ಯಂತವಾಗಿ ಮಾಡಿಕೊಳ್ಳುತ್ತಾನೆಂದು ತಾತ್ಪರ್ಯ. ಇದಕ್ಕೆ ಇಲ್ಲಿರುವ ವ್ಯಾಪಕಾರ್ಥಕವಾದ ವಿಷ್ಣುಶಬ್ದವು ಸೂಚಕವಾಗುತ್ತದೆ. ಯಜದೇವಪೂಜಾಯಾಂ ಎಂಬ ಧಾತುವಿನಿಂದ ಯಜ್ಞಶಬ್ದವು ನಿಷ್ಪನ್ನವಾಗುತ್ತದೆ. ಈ ವಿಷಯದಲ್ಲಿ ಶ್ರಾದ್ಧನಿಮಂತ್ರಿತನಾದ ಬ್ರಾಹ್ಮಣನ ನ್ಯಾಯವನ್ನು ಉದಹರಿಸುತ್ತಾರೆ. ಅಲ್ಲೂ ಕೂಡ ನಿಮಂತ್ರಿತ ಬ್ರಾಹ್ಮಣರ ತೃಪ್ತಿಯು ದ್ವಾರಭೂತವೇ ಹೊರತು ಮುಖ್ಯವಲ್ಲ. ಭಾಗವತರನ್ನು ತೃಪ್ತಿಪಡಿಸೋಣವು ಭಗವತ್ಪ್ರೀತಿಗೆ ದ್ವಾರವೇ ಆಗಿರುತ್ತೆ ಈ ತಾತ್ಪರ್ಯದಿಂದಲೇ ಯಜ್ಞಪುರುಷಃ ಇಜ್ಯತೆ ಎಂದು ಹೇಳಿದ್ದಾರೆ)

೨೯-೩೦. ಜ್ಞಾನಿಗಳಿಗೆ ಗಮ್ಯಸ್ಥಾನವಾಗಿರುವ ಯಾವ ಪರಮಾತ್ಮನು ವೇದಜ್ಞರಿಂದ ಎಲ್ಲಾ ವೇದಗಳಲ್ಲೂ ಹೊಗಳಲ್ಪಡುತ್ತಿರುವನೋ ಅಂತಹ ವೇದವೇದ್ಯನಾದ ಜಗಜ್ಜಯಿಯಾದ ವಿಷ್ಣುವಿಗೆ ನಮಸ್ಕಾರಗಳು. (ಇಲ್ಲಿ ವೇದೈಶ್ಚಸರ್ವೈರಹಮೇವ ವೇದ್ಯಃ ಎಂಬ ಗೀತಾವಚನವು ಅರ್ಥತಃ ಅನುವದಿಸಲ್ಪಟ್ಟಿದೆ) ಯಾವನಿಂದ ಈ ಜಗತ್ತು ಆವಿರ್ಭಾವಹೊಂದಿತೋ ಹಾಗೆಯೇ ಯಾವನಲ್ಲಿ ಪ್ರಳಯವನ್ನೂ ಹೊಂದುವುದೋ ಅಂತಹ ಜಗದುತ್ಪತ್ತಿಸ್ಥಿತಿಗೆ ಕಾರಣನಾದ ಮಹಾಪುರುಷನಿಗೆ ನಮ

ಬ್ರಹ್ಮಾದಿಸ್ತಂಬಪರ್ಯಂತಂ ವ್ಯಾಪ್ತಂ ಯೇನ ಚರಾಚರಂ ।
ಮಾಯಾಜಾಲಂ ಸಮುನ್ನದ್ಧಂ ತಮುಪೇಂದ್ರಂ ನಮಾಮ್ಯಹಂ ॥ ೩೧ ॥

ಯ ಸ್ತೃತೀಯಸ್ವರೂಪಸ್ಥೋ ಬಿಭರ್ತ್ಯಖಿಲ ಮೀಶ್ವರಃ ।
ವಿಶ್ವಂ ವಿಶ್ವಪತಿಂ ವಿಷ್ಣುಂ ತಂ ನಮಾಮಿ ಪ್ರಜಾಪತಿಂ ॥ ೩೨ ॥

ಮೂರ್ತಂ ತಮೋಽಸುರಮಯಂ ತದ್ವಿನಾ ವಿನಿಹಂತಿ ಯಃ ।
ರಾತ್ರಿಜಂ ಸೂರ್ಯರೂಪೀ ಚ ತಮುಪೇಂದ್ರಂ ನಮಾಮ್ಯಹಂ ॥ ೩೩ ॥

ಯಸ್ಯಾಕ್ಷಿಣೀ ಚಂದ್ರಸೂರ್ಯೌ ಸರ್ವಲೋಕೇ ಶುಭಾಶುಭಂ ।
ಪಶ್ಯತಃ ಕರ್ಮ ಸತತಂ ತಮುಪೇಂದ್ರಂ ನಮಾಮ್ಯಹಂ ॥ ೩೪ ॥

ಯಸ್ಮಿನ್ಸರ್ವೇಶ್ವರೇ ನಿತ್ಯಂ ಸತ್ಯಮೇತನ್ಮಯೋದಿತಂ ।
ನಾನೃತಂ ತಮಹಂ ವಿಷ್ಣುಂ ನಮಾಮಿ ಪ್ರಭುಮವ್ಯಯಂ ॥ ೩೫ ॥

---

ಸ್ಕಾರಗಳು. (ಇಲ್ಲಿ ಶ್ರುತಿಯಲ್ಲಿರುವ ಸೃಷ್ಟಿವಾಕ್ಯದ ಅರ್ಥವು ಸಂಗ್ರಹಿಸಲ್ಪಟ್ಟಿದೆ) ಯಾವ ಪುರುಷೋತ್ತಮನಿಂದ ಚತುರ್ಮುಖನು ಮೊದಲುಗೊಂಡು ಹುಲ್ಲಿನಲ್ಲಿರುವ ಹುಳುವಿನ ಪರ್ಯಂತರವೂ ಚರಾಚರವಸ್ತುಗಳೆಲ್ಲವೂ ವ್ಯಾಪಿಸಲ್ಪಟ್ಟಿವೆಯೋ ಇಂತಹ ಜಗದ್ಧಾರಣಾದಿಗಳಿಗೆ ಉಪಯುಕ್ತವಾದ ಅನೇಕ ಶಕ್ತಿಗಳೂ ತುಂಬಿರುವವೋ ಅಂತಹ ಉಪೇಂದ್ರಮೂರ್ತಿಯನ್ನು ನಮಸ್ಕರಿಸುತ್ತೇನೆ

೩೨-೩೪. ಯಾವ ಪರಮಾತ್ಮನು ತನ್ನ ಮೂರನೆಯ ಸ್ವರೂಪದಲ್ಲಿದ್ದು ಕೊಂಡು ಎಲ್ಲವನ್ನೂ ಧರಿಸಿರುವನೋ ಅಂತಹ ವಿಷ್ಣುರೂಪಿಯಾದ ವಿಶ್ವಪತಿಯನ್ನು ನಮಸ್ಕರಿಸುತ್ತೇನೆ. ಯಾವ ಪರಮಾತ್ಮನು ರಾಕ್ಷಸರೆಂಬ ಅಂಧಕಾರವನ್ನು ಬೇರೆ ರೂಪದಿಂದ ನಾಶಪಡಿಸುತ್ತಾನೆಯೋ ರಾತ್ರಿಯ ಕತ್ತಲೆಯನ್ನು ಹಗಲಿನಲ್ಲಿ ಸೂರ್ಯ ರೂಪಿಯಾಗಿ ನಾಶಪಡಿಸುತ್ತಾನೆಯೋ ಅಂತಹ ಉಪೇಂದ್ರಮೂರ್ತಿಯನ್ನು ನಮಸ್ಕರಿ ಸುತ್ತೇನೆ. ಚಂದ್ರಸೂರ್ಯರೆಂಬ ಯಾವ ಮಹಾಪುರುಷನ ನೇತ್ರಗಳು ಸರ್ವಲೋಕದ ಶುಭಾಶುಭಕರ್ಮಗಳಿಗೆ ಸಾಕ್ಷಿಗಳಾಗಿ ನೋಡುತ್ತಲೇ ಇರುವುವೋ ಅಂತಹ ಮೂರ್ತಿ ಯನ್ನು ನಮಸ್ಕರಿಸುತ್ತೇನೆ.

೩೫-೩೬. ಯಾವ ಸರ್ವೇಶ್ವರನಲ್ಲಿ ಇದುವರೆಗೆ ನಾನು ಮಾಡಿದ ಸ್ತೋತ್ರವು ಯಥಾರ್ಥವಾಗಿರುವದೋ ಸುಳ್ಳಾಗಿರುವದಿಲ್ಲವೋ ಅಂತಹ ಪ್ರಭುವಾದ ವಿಷ್ಣುವಿಗೆ ನಮಸ್ಕಾರಗಳು. (ಸ್ತೋತ್ರವೆಂದರೆ ಗುಣಾತಿಶಯದಿಂದ ಹೊಗಳುವುದು. ಅಂತಹ

**ಯದೇತತ್ ಸತ್ಯಮುಕ್ತಂ ಮೇ ಭೂಯಾಶ್ಚಾತೋ ಜನಾರ್ಧನ**
**ಸತ್ಯೇನ ತೇನ ಸಕಲಾಃ ಪೂರ್ಯಂತಾಂ ಮೇ ಮನೋರಥಾಃ ॥ ೩೬ ॥**

**ಇತಿ ಶ್ರಿ ವಾಮನಪುರಾಣೇ ಸರೋಮಹಾತ್ಮ್ಯೇ**
**ಸಪ್ತವಿಂಶೋಽಧ್ಯಾಯಃ**

ಗುಣಾತಿಶಯಗಳು ಸಾಧಾರಣ ಪುರುಷರ ವಿಷಯದಲ್ಲಿ ಅನೃತವಾಗಿದ್ದರೂ ಅವನ ಸಂತೋಷಕ್ಕಾಗಿ ಆರೋಪಿಸಲ್ಪಟ್ಟ ಗುಣಗಳಿಂದಲೇ ಸ್ತೋತ್ರಮಾಡಬೇಕಾಗಿರುತ್ತದೆ. ಸರ್ವಗುಣಪರಿಪೂರ್ಣನಾದ ಪರಮಾತ್ಮನಲ್ಲಿ ಈ ಗುಣಗಳೆಲ್ಲವೂ ಸತ್ಯವಾದುದರಿಂದ ಅನೃತವಾಗಲಾರವು ಮತ್ತು ಆರೋಪಕ್ಕೂ ಅವಕಾಶವೇ ಇಲ್ಲ. ಆರೋಪವೆಂದರೆ ಇಲ್ಲದ ಗುಣಗಳನ್ನು ಕಲ್ಪಿಸಿ ಹೇಳುವುದು. ಸರ್ವಗುಣನಿಧಿಯಾದ ಪರಮಾತ್ಮನಲ್ಲಿ ಎಲ್ಲ ಗುಣಗಳೂ ಇರುತ್ತವೆಯಾದುದರಿಂದ ಅಲ್ಲಿ ಅವಕಾಶವನ್ನು ಪಡೆಯದಿರುವ ಗುಣಗಳೇ ಇಲ್ಲ. ಆದುದರಿಂದ ಯಾವ ಯಾವ ಗುಣಗಳನ್ನು ವರ್ಣಿಸಿದರೂ ಅವು ಸತ್ಯವಾಗುವುವೇ ಹೊರತು ಆರೋಪಿತವಾಗಿಯೂ, ಅನೃತವಾಗಿಯೂ ಆಗುವ ಸಂಭವವೇ ಇಲ್ಲವೆಂದು ಪರಮಾತ್ಮನ ಅಸಾಧಾರಣ್ಯವನ್ನು ಇಲ್ಲಿ ನಿರೂಪಿಸಿದಂತಾಯಿತು.) ಎಲೈ ಜನಾರ್ದನನೇ, ನಾನು ಪುನಃ ಪುನಃ ನಿನ್ನ ವಿಷಯದಲ್ಲಿ ಮಾಡಿದ ಈ ಸ್ತೋತ್ರವು ಸತ್ಯವಾಗಿರುವ ಪಕ್ಷದಲ್ಲಿ ಅಂತಹ ನನ್ನ ಸತ್ಯದಿಂದ ಮೆಚ್ಚಿದ ನೀನು ನನ್ನ ಸಕಲ ಮನೋರಥಗಳನ್ನೂ ಪೂರ್ತಿಗೊಳಿಸು.

ಇಲ್ಲಿಗೆ ಶ್ರೀ ವಾಮನಪುರಾಣದಲ್ಲಿ ಸರೋವರಮಾಹಾತ್ಮ್ಯವೆಂಬ
ಇಪ್ಪತ್ತೇಳನೆಯ ಅಧ್ಯಾಯವು ಮುಗಿದಿದೆ.

## ಅಧ್ಯಾಯಾರ್ಥ ಸಂಗ್ರಹ

ಈ ಅಧ್ಯಾಯದಲ್ಲಿ ಪರಮಾತ್ಮನಿಂದ ಅಭಯದಾನವನ್ನು ಹೊಂದಿ ದೇವತೆಗಳೂ ಅದಿತಿಕಶ್ಯಪರೂ ಸಂತೋಷದಿಂದ ಹಿಂತಿರುಗಿ ಕಶ್ಯಪರ ಆಶ್ರಮಕ್ಕೆ ಬಂದರೆಂದೂ ಅಲ್ಲಿ ಅದಿತಿಯನ್ನು ಮುಂದಿನ ಅಭ್ಯುದಯಕ್ಕಾಗಿ ತಪಸ್ಸುಮಾಡಲು ಪ್ರೇರಿಸಿದರೆಂದೂ ಹೇಳಲಾಯಿತು. ದೇವತೆಗಳ ಮನೋರಥಕ್ಕಾಗಿ ತಪಸ್ಸಿನಲ್ಲಿ ನಿರತಳಾಗಿದ್ದ ಅದಿತಿಯು ಅಲ್ಲಿದ್ದ ತಾಪಸರಿಗೆ ದಾನವರಿಂದುಂಟಾದ ಭಯವನ್ನು ಹೋಗಲಾಡಿಸಲು ಪರಮಾತ್ಮನಲ್ಲಿ ಶರಣಾಗತಳಾಗಿ ನಾರಾಯಣನನ್ನು ಕುರಿತು ಯಥಾರ್ಥವಾದ ಸ್ತೋತ್ರಮಾಡಿದಳೆಂದೂ ನಿರೂಪಿಸಲಾಯಿತು.

॥ ಶ್ರೀಃ ॥

# ಶ್ರೀವಾಮನಪುರಾಣಂ

## ಅಷ್ಟಾವಿಂಶತಿತಮೋಽಧ್ಯಾಯಃ

### ಲೋಮಹರ್ಷಣ ಉವಾಚ

ಏವಂ ಸ್ತುತೋಽಥ ಭಗವಾನ್ವಾಸುದೇವ ಉವಾಚ ತಾಂ ।
ಅದೃಶ್ಯಸ್ಸರ್ವಭೂತಾನಾಂ ತಸ್ಯಾಸ್ಸಂದರ್ಶನೇ ಸ್ಥಿತಃ ॥ ೧ ॥

### ಶ್ರೀ ಭಗವಾನುವಾಚ

ಮನೋರಥಾಂಸ್ತ್ವಮದಿತೇ ಯಾನಿಚ್ಛಸ್ಯಭಿವಾಂಛಿತಾನ್ ।
ತಾಂಸ್ತ್ವಂ ಪ್ರಾಪ್ಸ್ಯಸಿ ಧರ್ಮಜ್ಞೇ ಮತ್ಪ್ರಸಾದಾನ್ನಸಂಶಯಃ ॥ ೨ ॥

ಶೃಣು ತ್ವಂ ಚ ಮಹಾಭಾಗೇ ವರೋ ಯಸ್ತೇ ಹೃದಿ ಸ್ಥಿತಃ ।
ಮದ್ದರ್ಶನಂ ಹಿ ವಿಫಲಂ ನ ಕದಾಚಿದ್ಭವಿಷ್ಯತಿ ॥ ೩ ॥

---

### ಇಪ್ಪತ್ತೆಂಟನೆಯ ಅಧ್ಯಾಯವು

೧-೩. ಲೋಮಹರ್ಷಣರು ಮುಂದಿನ ವೃತ್ತಾಂತವನ್ನು ಹೇಳುತ್ತಾರೆ. ಈ ಪ್ರಕಾರ ಅದಿತಿಯಿಂದ ಸ್ತೋತ್ರಮಾಡಲ್ಪಟ್ಟ ನಾರಾಯಣನು ಸರ್ವಪ್ರಾಣಿಗಳಿಗೆ ಅದೃಶ್ಯನಾಗಿದ್ದರೂ ಅದಿತಿಗೆ ದೃಶ್ಯನಾಗಿ ನಿಂತು ಅವಳಿಗೆ ಈರೀತಿ ಪ್ರತ್ಯುತ್ತರವನ್ನು ಹೇಳಿದನು. ಎಲೈ ಧರ್ಮಜ್ಞೆಯಾದ ಅದಿತಿಯೇ, ನಿನಗೆ ಯಾವ ಯಾವ ಮನೋರಥಗಳು ಬೇಕಾಗಿವೆಯೋ ಅವೆಲ್ಲವನ್ನೂ ನನ್ನ ಅನುಗ್ರಹದಿಂದ ಹೊಂದುವೆ. ಯಾವ ವರನ್ನು ನೀನು ಮನಸ್ಸಿನಲ್ಲಿ ಆಶಿಸುತ್ತಿರುವೆಯೋ ಅದು ನಿನಗೇ ನಿಸ್ಸಂಶಯವಾಗಿ ಲಭಿಸುತ್ತದೆ, ನನ್ನ ದರ್ಶನವು ಯಾವಾಗಲೂ ವ್ಯರ್ಥವಾಗುವುದಿಲ್ಲ ಮತ್ತು

ಯಶ್ಚೇಹ ಮದ್ವನೇ ಸ್ಥಿತ್ವಾ ತ್ರಿರಾತ್ರಂ ವೈ ಕರಿಷ್ಯತಿ ।
ಸರ್ವೇ ಕಾಮಾಃ ಸಮೃದ್ಧ್ಯಂತೇ ಮನಸಾ ಯಾನಿಹೇಚ್ಛತಿ ॥ ೪ ॥

ದೂರಸ್ಥೋಽಪಿ ವನಂ ಯಸ್ತು ಹ್ಯದಿತೇ ಸ್ಮರತೇ ನರಃ ।
ಸೋಽಪಿ ಯಾತಿ ಪರಂ ಸ್ಥಾನಂ ಕಿಂ ಪುನರ್ನಿವಸನ್ನರಃ ॥ ೫ ॥

ಯಶ್ಚೇಹ ಬ್ರಾಹ್ಮಣಾನ್ಪಂಚ ತ್ರೀನ್ವಾ ದ್ವಾವೇಕಮೇವ ವಾ ।
ಭೋಜಯೇಚ್ಛ್ರದ್ಧಯಾ ಯುಕ್ತಃ ಸ ಯಾತಿ ಪರಮಾಂ ಗತಿಂ ॥ ೬ ॥

ಅದಿತಿರುವಾಚ

ಯದಿ ದೇವಃ ಪ್ರಸನ್ನಸ್ತ್ವಂ ಭಕ್ತ್ಯಾ ಮೇ ಭಕ್ತವತ್ಸಲ ।
ತ್ರೈಲೋಕ್ಯಾಧಿಪತಿಃ ಪುತ್ರಸ್ತದಸ್ತು ಮಮ ವಾಸವಃ ॥ ೭ ॥

ಹೃತಂ ರಾಜ್ಯಂ ಹೃತಶ್ಚಾಸ್ಯ ಯಜ್ಞಭಾಗ ಇಹಾಸುರೈಃ ।
ತ್ವಯಿ ಪ್ರಸನ್ನೇ ವರದ ತತ್ಪ್ರಾಪ್ನೋತು ಸುತೋ ಮಮ ॥ ೮ ॥

---

೪-೬. ಯಾರು ಈ ನನ್ನ ವನದಲ್ಲಿ ಮೂರು ರಾತ್ರಿ ವಾಸಮಾಡುತ್ತಾರೋ ಅವರು ಮನಸ್ಸಿನಲ್ಲಿ ಅಪೇಕ್ಷಿಸಿರುವ ಎಲ್ಲಾ ಮನೋರಥಗಳೂ ಸಿದ್ಧಿಸುತ್ತವೆ. ಪರೋಕ್ಷದಲ್ಲಿರುವವರೂ ಈ ವನವನ್ನು ಸ್ಮರಿಸಿದ ಮಾತ್ರದಿಂದ ಉತ್ತಮಗತಿಯನ್ನು ಹೊಂದುವ ಸಂಭವವಿರುವಾಗ ಇಲ್ಲಿಯೇ ವಾಸಮಾಡಿಕ್ಕೊಂಡಿರುವವನ ವಿಷಯದಲ್ಲಿ ಹೇಳತಕ್ಕದ್ದೇನಿದೆ. ಯಾರು ಈ ವನದಲ್ಲಿ ಭಕ್ತಿವಿಶ್ವಾಸಗಳೊಡನೆ ಯಥಾಶಕ್ತಿ ಐದು ಅಥವಾ ಮೂರು ಅಥವಾ ಎರಡು ಕೊನೆಗೆ ಒಬ್ಬನನ್ನಾದರೂ ಬ್ರಾಹ್ಮಣರನ್ನು ಭೋಜನಮಾಡಿಸುವರೋ ಅಂತಹವರಿಗೆ ಉತ್ತಮವಾದ ಗತಿಯೂ ಉಂಟಾಗುತ್ತದೆ ಎಂದು ಅದಿತಿಯನ್ನು ಕುರಿತು ಭಗವಂತನು ಅಪ್ಪಣೆಕೊಟ್ಟನು. (ಈ ಸಂದರ್ಭವೆಲ್ಲವೂ ಸಾಕ್ಷಾತ್ತಾಗಿಯೂ ಪರಂಪರೆಯಾಗಿಯೂ ಪೃಥೂದಕ ಸರೋವರದ ಮಾಹಾತ್ಮ್ಯಕ್ಕೆ ಅನುಬಂಧಿಸಿರುತ್ತದೆ.)

೭-೮. ಅದಿತಿಯು ಪ್ರಾರ್ಥಿಸುತ್ತಾಳೆ: ಎಲೈ ಭಕ್ತವತ್ಸಲನೇ, ಭಕ್ತಿಪೂರ್ವಕವಾದ ಈ ನನ್ನ ಸೇವೆಯಿಂದ ನೀನು ಪ್ರಸನ್ನನಾಗಿದ್ದಲ್ಲಿ ನನಗೆ ಈ ವರವನ್ನು ಅನುಗ್ರಹಿಸು. ನನ್ನ ಮಗನಾದ ಇಂದ್ರನು ಮೊದಲಿನಂತೆ ಮೂರುಲೋಕಗಳಿಗೂ ಅಧಿಪತಿಯಾಗಿರಲಿ, ಇವನ ರಾಜ್ಯವೂ ಮತ್ತು ನಿಯಮಿತವಾದ ಯಜ್ಞಭಾಗವೂ ಸಹ ಅಸುರರಿಂದ ಅಪಹರಿಸಲ್ಪಟ್ಟಿದೆ. ವರಪ್ರದನಾದ ನೀನು ಪ್ರಸನ್ನನಾಗಿ ನನ್ನ

**ಹೃತಂ ರಾಜ್ಯಂ ನ ದುಃಖಾಯ ಮಮ ಪುತ್ರಸ್ಯ ಕೇಶವ ।**
**ಪ್ರಪನ್ನದಾಯವಿಭ್ರಂಶಃ ಪೀಡಾಂ ಮೇ ಕುರುತೇ ಹೃದಿ ॥೯॥**

**ಭಗವಾನುವಾಚ**

**ಕೃತಃ ಪ್ರಸಾದೋ ಹಿ ಮಯಾ ತವ ದೇವಿ ಯಥೇಪ್ಸಿತಂ ।**
**ಸ್ವಾಂಶೇನ ಚೈವ ತೇ ಗರ್ಭೇ ಸಂಭವಿಷ್ಯಾಮಿ ಕಶ್ಯಪಾತ್ ॥೧೦॥**
**ತವ ಗರ್ಭಸಮುದ್ಭೂತಸ್ತತಸ್ತೇ ಯೇ ಸುರಾರಯಃ ।**
**ತಾನಹಂ ನಿಹನಿಷ್ಯಾಮಿ ನಿರ್ವೃತಾ ಭವ ನಂದಿನಿ ॥೧೧॥**

**ಅದಿತಿರುವಾಚ**

**ಪ್ರಸೀದ ದೇವದೇವೇಶ ನಮಸ್ತೇ ವಿಶ್ವಭಾವನ ।**
**ನಾಹಂ ತ್ವಾಮುದರೇ ವೋಢುಮೀಶ ಶಕ್ಷ್ಯಾಮಿ ಕೇಶವ ॥**
**ಯಸ್ಮಿನ್ ಪ್ರತಿಷ್ಠಿತಂ ಸರ್ವಂ ವಿಶ್ವಯೋನಿಸ್ತ್ವಮೀಶ್ವರಃ ॥೧೨॥**

---

ಮಗನಾದ ಇಂದ್ರನಿಗೆ ಇವು ಉಂಟಾಗುವಂತೆ ನೀನು ಅನುಗ್ರಹಿಸು. ಎಲೈ ಕೇಶವನೇ, ನನ್ನ ಮಗನಿಗೆ ಉಂಟಾದ ರಾಜ್ಯಾಪಹಾರವೂ ನನಗೆ ಅಷ್ಟು ದುಃಖಕರವಾಗಿಲ್ಲ. ದಾಯಭಾಗದಂತೆ ಸಿದ್ಧವಾಗಿದ್ದ ಯಜ್ಞಭಾಗಾಪಹಾರವು ನನ್ನ ಮನಸ್ಸಿನಲ್ಲಿ ಬಹಳ ವ್ಯಥೆಯನ್ನುಂಟುಮಾಡುತ್ತಿದೆ.

೧೦-೧೧ ಭಗವಂತನು ಈ ಮಾತನ್ನು ಕೇಳಿ ಅದಿತಿಯನ್ನು ಕುರಿತು ಎಲೈ ದೇವಿಯೇ, ನಿನ್ನ ಇಷ್ಟ ಸಿದ್ಧಿಗೆ ತಕ್ಕಂತೆ ನಾನು ಅನುಗ್ರಹಿಸಿದ್ದೇನೆ. ನಿನ್ನ ಮನೋರಥಪೂರ್ತಿಗಾಗಿ ನಾನೇ ನನ್ನ ಅಂಶದಿಂದ ಕಶ್ಯಪರ ಪುತ್ರನಾಗಿ ನಿನ್ನ ಗರ್ಭದಲ್ಲಿ ಅವತರಿಸುತ್ತೇನೆ. ನಿನ್ನ ಗರ್ಭದಲ್ಲಿ ಹುಟ್ಟಿದ ನಾನು ಶತ್ರುಗಳಾದ ದಾನವರನ್ನು ನಾಶಪಡಿಸುವೆನು. ನೀನು ಸಂತೋಷದಿಂದಿರು ಎಂದು ಸಂತೈಸಿದನು.

೧೨. ಭಗವಂತನ ಅನುಗ್ರಹಕ್ಕೆ ಪಾತ್ರಳಾದ ಅದಿತಿಯು ಪುನಃ ಪ್ರಾರ್ಥಿಸುತ್ತಾಳೆ. ಎಲೈ ದೇವಾಧಿದೇವನೇ, ಜಗದುತ್ಪತ್ತಿಕಾರಣನೇ ಪ್ರಸನ್ನನಾಗು. ನಿನ್ನ ಅಪ್ಪಣೆಯಂತೆ ನಾನು ನಿನ್ನನ್ನು ಗರ್ಭದಲ್ಲಿ ಧರಿಸಲು ಸಮರ್ಥಳಾಗಿಲ್ಲ. ಯಾವ ನಿನ್ನಲ್ಲಿ ಪ್ರಪಂಚವೆಲ್ಲವೂ ನಿರ್ಬಾಧವಾಗಿ ಇಡಲ್ಪಟ್ಟಿದೆಯೋ ಅಂತಹ ವಿಶ್ವೋತ್ಪಾದಕನಾದ ನಿನ್ನ ಮಹಾರೂಪವನ್ನು ನಾನು ಗರ್ಭದಲ್ಲಿ ಹೇಗೆ ಧರಿಸಲಿ. ಈ ವಿಷಯದಲ್ಲಿಯೂ ಕಾರ್ಯವು ಸುಖಪರ್ಯವಸಾಯಿಯಾಗುವಂತೆ ನೀನೇ ಅನುಗ್ರಹಿಸಬೇಕೆಂದು ತಾತ್ಪರ್ಯ.

ಶ್ರೀ ಭಗವಾನುವಾಚ

ಅಹಂ ಚ ತ್ವಾಂ ವಹಿಷ್ಯಾಮಿ ಸ್ವಾತ್ಮಾನಂ ಚೈವ ನಂದಿನಿ ।
ನ ಚ ಪೀಡಾಂ ಕರಿಷ್ಯಾಮಿ ಸ್ವಸ್ತಿತೇಽಸ್ತು ವ್ರಜಾಮ್ಯಹಂ ॥ ೧೩ ॥

ಲೋಮಹರ್ಷಣ ಉವಾಚ

ಇತ್ಯುಕ್ತ್ವಾಽಂತರ್ಹಿತೇ ದೇವೇ ದಿತಿರ್ಗರ್ಭಂ ಸಮಾದಧೇ ॥ ೧೪ ॥

ಗರ್ಭಸ್ಥಿತೇ ತತಃ ಕೃಷ್ಣೇ ಚಚಾಲ ಸಕಲಾ ಕ್ಷಿತಿಃ ।
ಚಕಂಪಿರೇ ಮಹಾಶೈಲಾಃ ಜಗ್ಮುಃ ಕ್ಷೋಭಂ ಮಹಾಬ್ಧಯಃ ॥ ೧೫ ॥

ಯತೋ ಯತೋ ದಿತಿರ್ಯಾತಿ ದದಾತಿ ಪದಮುತ್ತಮಂ ।
ತತಸ್ತತಃ ಕ್ಷಿತಿಃ ಖೇದಾನ್ನನಾಮ ದ್ವಿಜಪುಂಗವಾಃ ॥ ೧೬ ॥

---

೧೩. ಅದಿತಿಯ ಈ ಪ್ರಾರ್ಥನೆಯನ್ನು ಲಾಲಿಸಿ ದಯಾಮಯನಾದ ಪುರುಷೋತ್ತಮನು ಎಲೈ ದೇವಿಯೇ, ಈ ವಿಷಯದಲ್ಲಿಯೂ ನೀನು ಕಾತರಪಡಬೇಡ. ನಿನ್ನ ಗರ್ಭವನ್ನು ಆಶ್ರಯಿಸುವ ನಾನು ನಿನಗೆ ಯಾವ ತೊಂದರೆಯನ್ನೂ ಉಂಟುಮಾಡುವುದಿಲ್ಲ. ನನಗೆ ಆಶ್ರಯಳಾಗುವ ನಿನ್ನನ್ನೂ ರಕ್ಷಿಸಿಕೊಂಡು ನಾನು ನನ್ನ ಸ್ವರೂಪವನ್ನು ಕಾಪಾಡಿಕೊಳ್ಳುತ್ತೇನೆ. (ಅಂದರೆ ನಾನು ಗರ್ಭದಲ್ಲಿ ಜನಿಸಿದನಂತರ ನಿನ್ನನ್ನೂ ರಕ್ಷಿಸಿಕೊಂಡು ನನ್ನ ಸಂಕಲ್ಪವನ್ನು ನೆರವೇರಿಸುವ ಭಾರವು ನನಗೇ ಸೇರಿದ್ದು ಎಂದು ತಾತ್ಪರ್ಯ) ನಿನಗೆ ಮಂಗಳವಾಗಲಿ ನಾನು ಇನ್ನು ಹೊರಡುತ್ತೇನೆ ಎಂದು ಅದಿತಿಯನ್ನು ಸಮಾಧಾನಪಡಿಸಿದನು.

೧೪-೧೬. ಲೋಮಹರ್ಷಣರು ಮುಂದಿನ ವೃತ್ತಾಂತವನ್ನು ಹೇಳುತ್ತಾರೆ: ಎಲೈ ಬ್ರಾಹ್ಮಣೋತ್ತಮರೇ, ಈರೀತಿ ಅದಿತಿಯನ್ನು ಸಂತೈಸಿ ಭಗವಂತನು ಅಂತರ್ಧಾನಹೊಂದಿದನು. ಒಡನೆಯೇ ದಿತಿಯು ಗರ್ಭವನ್ನು ಧರಿಸಿದಳು. ನಾರಾಯಣನು ಗರ್ಭದಲ್ಲಿ ಅವತರಿಸಿದೊಡನೆಯೇ ಅವನ ತೇಜಸ್ಸಿನಿಂದಲೂ ಮಹತ್ವದಿಂದಲೂ ಭೂಮಿಯೆಲ್ಲವೂ ನಡುಗಿತು. ಮಹಾಪರ್ವತಗಳೂ ಅಲ್ಲಾಡಿದವು. ಮಹಾಸಮುದ್ರಗಳೂ ಕ್ಷೋಭೆಗೊಂಡವು. ಗರ್ಭಿಣಿಯಾದ ಅದಿತಿಯು ಎಲ್ಲಿ ಎಲ್ಲಿ ಸಂಚಾರದಿಂದ ಕಾಲಿಡುತ್ತಾಳೆಯೋ ಅಲ್ಲಲ್ಲಿ ಭೂಮಿಯೂ ಭಾರದಿಂದ ಕುಗ್ಗಿತು. ಮಧುನಾಶಕನಾದ

ದೈತ್ಯಾನಾಮಪಿ ಸರ್ವೇಷಾಂ ಗರ್ಭಸ್ಥೇ ಮಧುಸೂದನೇ ।
ಬಭೂವ ತೇಜಸೋಹಾನಿ ರ್ಯಥೋಕ್ತಂ ಪರಮಾತ್ಮನಾ ॥ ೧೭ ॥

ಇತಿ ಶ್ರೀ ವಾಮನಪುರಾಣೇ ಸರೋಮಾಹಾತ್ಮ್ಯೇ
ಅಷ್ಟಾವಿಂಶತಿತಮೋಽಧ್ಯಾಯಃ

---

ಪರಮಾತ್ಮನು ಅದಿತಿಯ ಗರ್ಭಗತನಾಗಲಾಗಿ ಹಿಂದೆ ಪರಮಾತ್ಮನು ಹೇಳಿದ್ದಂತೆ ದೈತ್ಯರಿಗೆ ಬಹಳ ತೇಜೋಹಾನಿಯುಂಟಾಯಿತು.

ಇಲ್ಲಿಗೆ ಶ್ರೀ ವಾಮನಪುರಾಣದಲ್ಲಿ ಸರೋವರಮಾಹಾತ್ಮ್ಯವೆಂಬ
ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದಿದೆ.

## ಅಧ್ಯಾಯಾರ್ಥ ಸಂಗ್ರಹ

ಈ ಅಧ್ಯಾಯದಲ್ಲಿ ಅದಿತಿಯ ಸ್ತೋತ್ರದಿಂದ ಪ್ರಸನ್ನನಾದ ಪರಮಾತ್ಮನು ಅವಳ ಇಷ್ಟದಂತೆ ತಾನೇ ಅವಳ ಗರ್ಭದಲ್ಲಿ ಅವತರಿಸಿ ದೈತ್ಯರನ್ನು ನಾಶಪಡಿಸುವೆನೆಂದು ವರವನ್ನು ಅನುಗ್ರಹಿಸಿ ಅದರಂತೆ ಗರ್ಭದಲ್ಲಿ ಅವತರಿಸಿದನೆಂದೂ ಅವನ ಗರ್ಭಸ್ಥದೆಶೆಯಲ್ಲಿಯೇ ದೈತ್ಯರಿಗೆ ಅವನತಿಯು ಪ್ರಾರಂಭವಾಯಿತೆಂದೂ ನಿರೂಪಿಸಲಾಯಿತು.

॥ ಶ್ರೀಃ ॥

# ಶ್ರೀವಾಮನಪುರಾಣಂ

## ಏಕೋನತ್ರಿಂಶೋಽಧ್ಯಾಯಃ

ಲೋಮಹರ್ಷಣ ಉವಾಚ

ನಿಸ್ತೇಜಸೋಽಸುರಾನ್ ದೃಷ್ಟ್ವಾ ಸಮಸ್ತಾನಸುರೇಶ್ವರಃ ।
ಪ್ರಹ್ಲಾದಮಥ ಪಪ್ರಚ್ಛ ಬಲಿರಾತ್ಮಪಿತಾಮಹಂ ॥ ೧ ॥

ಬಲಿರುವಾಚ

ತಾತ ನಿಸ್ತೇಜಸೋ ದೈತ್ಯಾ ನಿರ್ದಗ್ಧಾ ಇವ ವಹ್ನಿನಾ ।
ಕಿಮೇತೇ ಸಹಸೈವಾದ್ಯ ಬ್ರಹ್ಮದಂಡಹತಾ ಇವ ॥ ೨ ॥

ದುರಿಷ್ಟಂ ಕಿಂ ನು ದೈತ್ಯಾನಾಂ ಕಿಂ ಕೃತ್ಯಾ ಸುರನಿರ್ಮಿತಾ ।
ನಾಶಾಯೈಷಾ ಸಮುದ್ಭೂತಾ ಯೇನ ನಿಸ್ತೇಜಸೋಽಸುರಾಃ ॥ ೩ ॥

---

## ಇಪ್ಪತ್ತೊಂಭತ್ತನೆಯ ಅಧ್ಯಾಯವು

೧-೩. ಲೋಮಹರ್ಷಣರು ಮುಂದಿನ ವೃತ್ತಾಂತವನ್ನು ಹೇಳುತ್ತಾರೆ. ಅನಂತರ ದಾನವರಾಜನಾದ ಬಲಿಯು ರಾಕ್ಷಸರೆಲ್ಲರೂ ಹಠಾತ್ತಾಗಿ ತೇಜೋಹೀನರಾದುದನ್ನು ನೋಡಿ ಪ್ರಬಲವಾದ ಏನೋ ಕಾರಣವಿರಬಹುದೆಂದು ಊಹಿಸಿ ಇದನ್ನು ತಿಳಿಯಲು ತನ್ನ ತಾತನಾದ ಪ್ರಹ್ಲಾದನನ್ನು ಪ್ರಶ್ನೆ ಮಾಡಿದನು. ಎಲೈ ತಾತನೇ, ಈ ದೈತ್ಯರೆಲ್ಲರೂ ಏಕಕಾಲದಲ್ಲಿ ಬೆಂಕಿಯಿಂದ ಸುಡಲ್ಪಟ್ಟವರಂತೆಯೂ, ಬ್ರಹ್ಮದಂಡದಿಂದ ಆಕ್ರಮಿಸಲ್ಪಟ್ಟವರಂತೆಯೂ ಏತಕ್ಕೆ ತೇಜೋಹೀನರಾಗಿರುವರು. ಇದು ಆಕಸ್ಮಿಕವಾದ ದೈತ್ಯರ ದುರದೃಷ್ಟಮೂಲಕವೋ? ಅಥವಾ ವಿರೋಧಿಗಳಾದ ದೇವತೆಗಳಿಂದ ನಡೆಸಲ್ಪಟ್ಟ ಅಭಿಚಾರಿಕವ್ಯಾಪಾರಮೂಲಕವೋ? ತಿಳಿಯಲಿಲ್ಲ. ಅಂತು ಆಕಸ್ಮಿಕವಾದ ಈ ತೇಜೋಹಾನಿಯು ದೈತ್ಯರ ನಾಶಕ್ಕಾಗಿಯೇ ಎಂದು ತೋರುತ್ತಿದೆ.

ಲೋಮಹರ್ಷಣ ಉವಾಚ

ಇತ್ಥಂ ದೈತ್ಯವರಸ್ತೇನ ಪೃಷ್ಟಃ ಪೌತ್ರೇಣ ಬ್ರಾಹ್ಮಣಾಃ ।
ಚಿರಂ ಧ್ಯಾತ್ವಾ ಜಗಾದೈವಮಸುರಂ ತಂ ತದಾ ಬಲಿಂ ॥ ೪ ॥

ಪ್ರಹ್ಲಾದ ಉವಾಚ

ಚಲಂತಿ ಗಿರಯೋ ಭೂಮಿರ್ಜಹಾತಿ ಸಹಜಾಂ ಸ್ಥಿತಿಂ ।
ನದ್ಯಃ ಸಮುದ್ರಾಃ ಕ್ಷುಭಿತಾಃ ದೈತ್ಯಾ ನಿಸ್ತೇಜಸಃ ಕೃತಾಃ ॥ ೫ ॥

ಸೂರ್ಯೋದಯೇ ಯಥಾಪೂರ್ವಂ ತಥಾ ಗಚ್ಛಂತಿ ನ ಗ್ರಹಾಃ ।
ದೇವತಾನಾಂ ಪರಾ ಲಕ್ಷ್ಮೀಃ ಕಾರಣೇನಾನುಮೀಯತೇ ॥ ೬ ॥

ಮಹದೇತನ್ಮಹಾಬಾಹೋ ಕಾರಣಂ ದಾನವೇಶ್ವರ ।
ನಹ್ಯಲ್ಪಮಿತಿ ಮಂತವ್ಯಂ ಕ್ರಿಯಾ ಕಾರ್ಯಾ ಕಥಂ ಚನ ॥ ೭ ॥

ಲೋಮಹರ್ಷಣ ಉವಾಚ

ಇತ್ಯುಕ್ತ್ವಾ ದಾನವಪತಿಂ ಪ್ರಹ್ಲಾದಃ ಸೋಽಸುರೋತ್ತಮಃ ।
ಅತ್ಯರ್ಥಭಕ್ತೋ ದೇವೇಶಂ ಜಗಾಮ ಮನಸಾ ಹರಿಂ ॥ ೮ ॥

---

೪-೭. ಲೋಮಹರ್ಷಣರು ಹೇಳುತ್ತಾರೆ. ಎಲೈ, ಬ್ರಾಹ್ಮಣೋತ್ತಮರೇ ಈ ಪ್ರಕಾರ ಬಲಿಯಿಂದ ಪ್ರಶ್ನೆಮಾಡಲ್ಪಟ್ಟ ಆ ಪ್ರಹ್ಲಾದನು ಬಹಳ ಹೊತ್ತು ಧ್ಯಾನ ದೃಷ್ಟಿಯಿಂದ ವಿಚಾರಮಾಡಿ ಬಲಿಯನ್ನು ಕುರಿತು ಹೇಳುತ್ತಾನೆ. ಎಲೈ, ದಾನವ ರಾಜನೇ, ಪರ್ವತಗಳು ಚಲಿಸುತ್ತಿವೆ. ಭೂಮಿಯೂ ಸಹ ಸ್ಥೈರ್ಯವನ್ನು ಬಿಟ್ಟು ನಡುಗುತ್ತಿದೆ. ನದಿಗಳೂ ಸಮುದ್ರಗಳೂ ಕ್ಷೋಭೆಗೊಂಡಿವೆ. ದೈತ್ಯರೂ ನಿಸ್ತೇಜಸ್ಕ ರಾಗಿದ್ದಾರೆ. ಸೂರ್ಯೋದಯ ಕಾಲದಲ್ಲಿ ಗ್ರಹಗಳೂ ಹಿಂದಿನಂತೆ ಋಜುಮಾರ್ಗದಲ್ಲಿ ಸಂಚರಿಸುತ್ತಿಲ್ಲ. ಎಲ್ಲವನ್ನೂ ವಿಚಾರಮಾಡಿದಲ್ಲಿ ದೇವತೆಗಳಿಗೆ ಬಹಳ ಮಟ್ಟಿನ ಐಶ್ವರ್ಯವು ಸನ್ನಿಹಿತವಾಗಿದೆ ಎಂದು ಊಹೆಯಿಂದ ತಿಳಿಯಲು ಅವಕಾಶವಿದೆ. ಎಲೈ, ದೊರೆಯೇ ಇದು ಸಾಮಾನ್ಯವಾದ ಕಾರಣದಿಂದುಂಟಾಗಿಲ್ಲ. ಪ್ರಬಲವಾದ ಕಾರಣವೇ ಇರಬೇಕು. ಎಂದು ತಿಳಿ. ಯಥಾಶಕ್ತಿ ಪ್ರತಿಕ್ರಿಯೆಯನ್ನೂ ನಡೆಸು ವುದು ಉಚಿತ ಎಂದನು.

೮-೧೦. ಲೋಮಹರ್ಷಣರು ಹೇಳುತ್ತಾರೆ. ಅಸುರಶ್ರೇಷ್ಠನಾದ ಪ್ರಹ್ಲಾದನು ಬಲಿಯನ್ನು ಕುರಿತು ಊಹಾಪೋಹ ದೃಷ್ಟಿಯಿಂದ ಹೀಗೆ ಹೇಳಿ ತತ್ವವನ್ನು ತಿಳಿಯಲು

ಸ ಧ್ಯಾನಂ ಪ್ರಥಮಂ ಕೃತ್ವಾ ಪ್ರಹ್ಲಾದಸ್ತು ತತೋಽಸುರಃ ।
ವಿಚಾರಯಾಮಾಸ ತತೋ ಯಥಾದೇವಂ ಜನಾರ್ಧನಂ ॥೯॥

ಸ ದದರ್ಶೋದರೇ ತಸ್ಯಾಃ ಪ್ರಹ್ಲಾದೋ ವಾಮನಾಕೃತಿಂ ।
ತದಂತಶ್ಚ ವಸೂನ್ರುದ್ರಾನಶ್ವಿನೌ ಮರುತಸ್ತಥಾ ॥೧೦॥

ಸಾಧ್ಯಾನ್ವಿಶ್ವಾಂಸ್ತಥಾ ದೇವಾನ್ಗಂಧರ್ವೋರಗರಾಕ್ಷಸಾನ್ ।
ವಿರೋಚನಂ ಚ ತನಯಂ ಬಲಿಂ ಚಾಸುರನಾಯಕಂ ॥೧೧॥

ಜಂಭಂ ಕುಜಂಭಂ ನರಕಂ ಬಾಣಮನ್ಯಾಂಸ್ತಥಾಸುರಾನ್ ।
ಆತ್ಮಾನಂ ಗಗನಂ ವಾಯುಂ ಮನಸ್ತೋಯಂ ಹುತಾಶನಂ ॥೧೨॥

ಸಮುದ್ರಾದ್ರಿದ್ರುಮದ್ವೀಪಾನ್ಸರಾಂಸಿ ಚ ಪಶೂನ್ಮಹೀಂ ।
ವಯೋಮನುಷ್ಯಾನಖಿಲಾಂಸ್ತಥೈವ ಚ ಸರೀಸೃಪಾನ್ ॥೧೩॥

ಅತ್ಯಂತ ಭಕ್ತಿಯಿಂದ ಮನಸ್ಸಿನಲ್ಲೇ ಹರಿಯನ್ನು ಧ್ಯಾನಿಸತೊಡಗಿದನು ನಂತರ ಧ್ಯಾನದಿಂದ ಚಿತ್ತಶುದ್ಧಿಹೊಂದಿದ ಆ ಪ್ರಹ್ಲಾದನು ಪರಮಾತ್ಮನ ಯಥಾವಸ್ಥಿತ ಸ್ವರೂಪವನ್ನು ವಿಚಾರಮಾಡಿದನು. ಈ ರೀತಿ ವಿಚಾರದಿಂದ ಸಾಕ್ಷಾತ್ಕಾರಹೊಂದಿದ ಆ ಪ್ರಹ್ಲಾದನು ಅದಿತಿಯ ಉದರದಲ್ಲಿರುವ ವಾಮನಾಕೃತಿಯುಳ್ಳ ಪರಮಾತ್ಮನನ್ನು ಯೋಗದೃಷ್ಟಿಯಿಂದ ನೋಡಿದನು. ಸರ್ವಶರೀರಿಯಾದ ಆ ಮಹಾಪುರುಷನ ದೇಹದಲ್ಲಿಯೇ ವಸುಗಳನ್ನೂ, ಏಕಾದಶರುದ್ರರು, ಅಶ್ವಿನೀದೇವತೆಗಳು, ಮರುತ್ತೆಂಬ ದೇವತೆಗಳು, ಇವರನ್ನೂ ಹಾಗೆಯೇ.

೧೧-೧೩. ಸಾಧ್ಯರನ್ನೂ ವಿಶ್ವೇದೇವತೆಗಳನ್ನೂ ಗಂಧರ್ವ, ಸರ್ಪ ರಾಕ್ಷಸರನ್ನೂ, ತನ್ನ ಮಗನಾದ ವಿರೋಚನನನ್ನೂ, ಅಸುರರಾಜನಾಗಿರುವ ಬಲಿಯನ್ನೂ, ಜಂಭ, ಕುಜಂಭ, ನರಕ, ಬಾಣ ಮುಂತಾದ ರಾಕ್ಷಸರನ್ನೂ, ತನ್ನನ್ನೂ ಆಕಾಶ, ವಾಯು, ಮನಸ್ಸು, ಜಲ, ಅಗ್ನಿ, ಸಮುದ್ರ, ದ್ವೀಪ, ಪರ್ವತ, ಸರೋವರ, ಪಶುಪಕ್ಷಿ ಮೃಗಾದಿಗಳು, ಎಲ್ಲವನ್ನೂ ಮತ್ತು,

**ಸಮಸ್ತಲೋಕಸ್ರಷ್ಟಾರಂ ಬ್ರಹ್ಮಾಣಂ ಭವಮೇವ ಚ ।**
**ಗ್ರಹನಕ್ಷತ್ರತಾರಾದ್ಯಾನೃಷೀಂಶ್ಚೈವ ಪ್ರಜಾಪತಿಂ ॥ ೧೪ ॥**

**ಸಂಪಶ್ಯನ್ವಿಸ್ಮಯಾವಿಷ್ಟಃ ಪ್ರಕೃತಿಸ್ಥಃ ಕ್ಷಣಾತ್ಪುನಃ ।**
**ಪ್ರಹ್ಲಾದಃ ಪ್ರಾಹದೈತ್ಯೇಂದ್ರಂ ಬಲಿಂ ವೈರೋಚನಂ ತದಾ ॥ ೧೫ ॥**

**ವತ್ಸ ಜ್ಞಾತಂ ಮಯಾ ಸರ್ವಂ ಯದರ್ಥಂ ಭವತಾಮಿಯಂ ।**
**ತೇಜಸೋ ಹಾನಿರುತ್ಪನ್ನಾ ತಚ್ಛೃಣು ತ್ವ ಮಶೇಷತಃ ॥ ೧೬ ॥**

**ದೇವದೇವೋ ಜಗದ್ಯೋನಿ ರ್ಜಗದಾದಿರಜಃ ಪ್ರಭುಃ ।**
**ಅನಾದಿರಾದಿರ್ವಿಶ್ವಸ್ಯ ವರೇಣ್ಯೋ ವರದೋ ಹರಿಃ ॥ ೧೭ ॥**

---

೧೪-೧೫. ಎಲ್ಲಾ ಲೋಕಗಳಿಗೂ ಸೃಷ್ಟಿಕರ್ತನಾದ ಚತುರ್ಮುಖನನ್ನೂ ಶಂಕರನನ್ನೂ ಸೂರ್ಯಚಂದ್ರಾದಿಗ್ರಹಗಳನ್ನೂ ನಕ್ಷತ್ರಗಳನ್ನೂ ಋಷಿಗಳನ್ನೂ ದಕ್ಷನೇ ಮೊದಲಾದ ಪ್ರಜಾಪ್ರತಿಗಳನ್ನೂ ನೋಡಿ ಆಶ್ಚರ್ಯಚಕಿತನಾಗಿ (ಯೋಗ ಶಕ್ತಿಯಿಂದ ವಿಶ್ವಶರೀರಿಯಾದ ಪರಮಾತ್ಮನನ್ನು ಆಯಾಯ ಶರೀರದೊಡನೆ ಸಾಕ್ಷಾತ್ಕರಿಸಿ ಭಗವದ್ಗೀತೆಯಲ್ಲಿ ವಿಶ್ವರೂಪವನ್ನು ನೋಡಿ ಆಶ್ಚರ್ಯಗೊಂಡ ಅರ್ಜುನನಂತೆ, ಆಶ್ಚರ್ಯಾವೇಶದಿಂದ ಪರವಶನಾದನೆಂದು ತಾತ್ಪರ್ಯ.) ಗೀತೆಯಲ್ಲಿ "ದಿವ್ಯಂ ದದಾಮಿ ತೆ ಚಕ್ಷುಃ" ಎಂಬ ಭಗವದ್ವಚನದಂತೆ, ಸಾಕ್ಷಾತ್ಕಾರಕ್ಕೆ ಸಾಧನವಾದ ದಿವ್ಯ ದೃಷ್ಟಿಯು ಭಗವಂತನಿಂದಲೇ ಕೊಡಲ್ಪಟ್ಟಿತೆಂದೂ, ಇಲ್ಲಿ ಮಾತ್ರ ಭಕ್ತನಾದ ಪ್ರಹ್ಲಾದನಿಗೆ ಧ್ಯಾನಮಾಹಾತ್ಮ್ಯದಿಂದ ಉಂಟಾದ ಯೋಗಶಕ್ತಿಯೇ ಸಾಕ್ಷಾತ್ಕಾರಕ್ಕೆ ಸಾಧನವೆಂದೂ ತಿಳಿಯಬಹುದಾಗಿದೆ. ಒಡನೆಯೇ ಉತ್ತರಕ್ಷಣದಲ್ಲೇ ತನ್ನ ಪೂರ್ವಾವಸ್ಥೆಯನ್ನು ಹೊಂದಿ, ದೈತ್ಯರಾಜನಾದ ಬಲಿಯನ್ನು ಕುರಿತು ತನಗೆ ಉಂಟಾದ ತತ್ವಾನುಭವವನ್ನು ಹೇಳುತ್ತಾನೆ.

೧೬-೧೮. ಎಲೈ, ಮಗುವೇ, ಈ ವಿಚಾರವೆಲ್ಲವೂ ನನಗೆ ಈಗ ತಿಳಿಯಬಂದಿದೆ. ನಿಮಗೆ ಈ ರೀತಿಯಾದ ತೇಜೋಹಾನಿಗೆ ಕಾರಣವೇನೆಂಬುದನ್ನು ಈಗ ವಿಶದವಾಗಿ ಹೇಳುತ್ತೇನೆ, ಕೇಳು, ಎಲ್ಲಾ ದೇವತೆಗಳಿಗೂ ಪ್ರಭುವಾಗಿಯೂ, ಜಗದುತ್ಪತ್ತಿಕಾರಣನಾಗಿಯೂ, ಜಗತ್ತಿಗೆ ಆದಿಪುರುಷನಾಗಿಯೂ, ಉತ್ಪತ್ತಿರಹಿತನಾಗಿಯೂ, ಸರ್ವನಿಯಾಮಕನಾಗಿಯೂ, ವರಪ್ರದನಾಗಿಯೂ ಉತ್ಕರ್ಷಾಪಕರ್ಷ ತಾರತಮ್ಯವುಳ್ಳ, ಎಲ್ಲಾ ಪ್ರಪಂಚಕ್ಕೂ ಮೇಲ್ಪಟ್ಟವನಾಗಿಯೂ ಪರಾವರವಿದ್ಯೆಯಿಂದ ಉಪಾಸನೆ

ಪರಾವರಾಣಾಂ ಪರಮಃ ಪರಾಪರವತಾಂ ಗತಿಃ ।
ಪ್ರಭುಃ ಪ್ರಮಾಣಂ ಮಾನಾನಾಂ ಸಪ್ತಲೋಕಗುರೋರ್ಗುರುಃ ॥
ಸ್ಥಿತಿಂ ಕರ್ತುಂ ಜಗನ್ನಾಥೋಽಹ್ಯದಿತ್ಯಾ ಗರ್ಭಗಃ ಪ್ರಭುಃ ॥ ೧೮ ॥

ಪ್ರಭುಃ ಪ್ರಭೂಣಾಂ ಪರಮಃ ಪರಾಣಾಂ
ಅನಾದಿಮಧ್ಯೋ ಭಗವಾನನಂತಃ ।
ತ್ರೈಲೋಕ್ಯಮಂಶೇನ ಸನಾಥಮೇಕಃ
ಕರ್ತುಂ ಮಹಾತ್ಮಾ ದಿತಿಜೋಽವತೀರ್ಣಃ ॥ ೧೯ ॥

ನ ಯಸ್ಯ ರುದ್ರೋ ನ ಚ ಪದ್ಮಯೋನಿಃ
ನೇಂದ್ರೋ ನ ಸೂರ್ಯೇಂದುಮರೀಚಿಮಿಶ್ರಾಃ ।
ಜಾನಂತಿ ದೈತ್ಯಾಧಿಪತೇ ಸ್ವರೂಪಂ
ಸ ವಾಸುದೇವಃ ಕಲಯಾವತೀರ್ಣಃ ॥ ೨೦ ॥

---

ಹೊಂದಿರುವವರಿಗೆಲ್ಲಾ ಪ್ರಾಪ್ಯನಾಗಿಯೂ, ಸರ್ವಪ್ರಮಾಣಗಳಿಗೂ ನಿಯಾಮಕನಾಗಿಯೂ, ಸಪ್ತಲೋಕಕರ್ತೃವಾದ ಚತುರ್ಮುಖನಿಗೂ ಗುರುವಾಗಿಯೂ, ಇರುವ ಜಗನ್ನಾಥನು ಜಗತ್ತಿನ ಸ್ಥಿತಿಯನ್ನು ಸಮೀಕರಣಮಾಡುವ ಉದ್ದೇಶದಿಂದ ಅದಿತಿ ದೇವಿಯ ಗರ್ಭದಲ್ಲಿ ನೆಲಸಿರುವನು.

೧೯-೨೦. ಪ್ರಭುಗಳಿಗೂ ಪ್ರಭುತ್ವಶಕ್ತಿಗೆ ಕಾರಣಭೂತನಾಗಿಯೂ, ಉತ್ಕೃಷ್ಟ ವಸ್ತುಗಳಿಗೆ ಉತ್ಕರ್ಷ ದಾತನಾಗಿಯೂ ಇರುವ ಆದಿಮಧ್ಯಾಂತರಹಿತನಾದ ಪರಮಾತ್ಮನು ತನ್ನ ಅಂಶದಿಂದ ಒಬ್ಬನೇ ಮೂರು ಲೋಕಗಳನ್ನೂ ಸನಾಥೀಕರಿಸಲು ಅದಿತಿಯ ಗರ್ಭದಲ್ಲಿ ಅವತರಿಸಿರುವನು. ಎಲೈ, ದೈತ್ಯಾಧಿಪತಿಯೇ, ಯಾವ ಪರಮಾತ್ಮನ ಸ್ವರೂಪವನ್ನು ಸರ್ವಜ್ಞನಾದ ರುದ್ರನೂ ತಿಳಿಯಲಾರನೋ ಹಾಗೆಯೇ ಚತುರ್ಮುಖನೂ ಇಂದ್ರನೂ, ಸೂರ್ಯಚಂದ್ರರೂ, ಮರೀಚಿಯೇ ಮೊದಲಾದ ಮಹರ್ಷಿಗಳೂ ತಿಳಿಯಲಾರರೋ ಅಂತಹ ವಾಸುದೇವನು ಸಕಲ ಜನಗಳಿಗೂ ಗೋಚರನಾಗುವಂತೆ ತನ್ನ ಅಂಶದಿಂದ ಅವತರಿಸಿರುತ್ತಾನೆ.

ಯಮಕ್ಷರಂ ವೇದವಿದೋ ವದಂತಿ
ವಿಶಂತಿ ಯತ್ರೈವ ವಿಧೂತಪಾಪಾಃ ।
ಯಸ್ಮಿನ್ಪ್ರತಿಷ್ಠಾ ನ ಪುನರ್ಭವಂತಿ
ತಂ ವಾಸುದೇವಂ ಪ್ರಣಮಾಮಿ ಚಾದ್ಯಂ ॥ ೨೧ ॥

ಭೂತಾನ್ಯಶೇಷಾಣಿ ಯತೋ ಭವಂತಿ
ಯಥೋರ್ಮಯಸ್ತೋಯನಿಧೇರಜಸ್ರಂ ।
ಲಯಂ ಚ ಯಸ್ಮಿನ್ ಪ್ರಲಯೇ ಪ್ರಯಾಂತಿ
ತಂ ವಾಸುದೇವಂ ಪ್ರಣತೋಽಸ್ಮ್ಯಚಿಂತ್ಯಂ ॥ ೨೨ ॥

ರೂಪಂ ಚ ಚಕ್ಷುರ್ಗ್ರಹಣೇ ತ್ವಗೇಷಾ
ಸ್ಪರ್ಶಗ್ರಹೇತ್ರೀ ರಸನಾ ರಸಸ್ಯ
ಘ್ರಾಣಂ ಚ ಗಂಧಗ್ರಹಣೇ ನಿಯುಕ್ತಂ
ತ್ವಗ್ಘ್ರಾಣಚಕ್ಷೂಂಷಿ ನ ತಾನಿ ಯಸ್ಯ ॥ ೨೩ ॥

---

೨೧-೨೨. (ಈ ಪ್ರಕಾರ ಸರ್ವೇಶ್ವರನ ಅವತಾರವನ್ನು ಕೊಂಡಾಡಿ ಅವನ ದಿವ್ಯಗುಣಾನುಸ್ಮರಣದಿಂದ ಸ್ವಾಭಾವಿಕವಾದ ರೂಪವನ್ನು ಅನುಸಂಧಾನಮಾಡುತ್ತಾ ನಮಸ್ಕಾರಾದಿ ವ್ಯಾಪಾರಗಳಿಂದ ತನ್ನ ಕೃತಕೃತ್ಯತೆಯನ್ನು ಪ್ರಹ್ಲಾದನು ಪ್ರಕಾಶಗೊಳಿಸುತ್ತಾನೆ.) ವೇದಾರ್ಥತತ್ವಜ್ಞರು ಯಾವ ಪರಮಾತ್ಮನನ್ನು ಅಕ್ಷರಸ್ವರೂಪ (ನಾಶವಿಲ್ಲದ ಸ್ವರೂಪ)ನೆಂದು ಹೇಳುತ್ತಾರೆಯೋ. ಸರ್ವಪಾಪಗಳಿಂದಲೂ ಬೇರೆಯಾಗಿ ಯಾವ ಪರಮಾತ್ಮನಲ್ಲಿಯೇ ಮುಕ್ತರಾಗಿ ಹೋಗಿ ಸೇರುವರೋ, ಮತ್ತು ಯಾವ ಪರಮಾತ್ಮನನ್ನೇ ಆಶ್ರಯಿಸಿದವರಿಗೆ ಪುನರ್ಜನ್ಮವುಂಟಾಗುವುದಿಲ್ಲವೋ ಅಂತಹ ಆದಿಪುರುಷನಾದ ವಾಸುದೇವನನ್ನು ನಮಸ್ಕರಿಸುತ್ತೇನೆ. ಮತ್ತು ಮಹಾಸಮುದ್ರದಿಂದ ಅಲೆಗಳು ಪರಂಪರೆಯಾಗಿ ಆವಿರ್ಭವಿಸುವಂತೆ, ಎಲ್ಲಾ ಭೂತಗಳೂ ಯಾವನಿಂದ ಅಭಿವ್ಯಕ್ತಿಹೊಂದುವವೋ ಹಾಗೆಯೇ ಪ್ರಳಯಕಾಲದಲ್ಲಿ ಲಯವನ್ನೂ ಹೊಂದುವವೋ ಅಂತಹ ಅಚಿಂತ್ಯಸ್ವರೂಪನಾದ ವಾಸುದೇವನನ್ನು ನಮಸ್ಕರಿಸುತ್ತೇನೆ.

೨೩-೨೪ ಯಾವ ಸರ್ವೇಶ್ವರನಿಗೆ ತ್ವಗಿಂದ್ರಿಯ, ಘ್ರಾಣೇಂದ್ರಿಯ, ಚಕ್ಷುರಿಂದ್ರಿಯ ಇವು ಇಲ್ಲದಿದ್ದರೂ (ಅವನ ಜ್ಞಾನವೂ ಭೋಗವೂ ಪ್ರಾಕೃತೇಂದ್ರಿಯಗಳಿಗೆ ಅಧೀನವಲ್ಲವೆಂದು ತಾತ್ಪರ್ಯ.) ಅವನಿಂದಲೇ ನಮ್ಮ ಚಕ್ಷುರಿಂದ್ರಿಯವು ರೂಪಗ್ರಹಣದಲ್ಲಿಯೂ, ತ್ವಗಿಂದ್ರಿಯವು ಸ್ಪರ್ಶದಲ್ಲಿಯೂ, ರಸನೇಂದ್ರಿಯವು ರಸಗ್ರಹಣ

ಸರ್ವೇಶ್ವರೋವೇದಿತವ್ಯಃ ಸ ಯುಕ್ತ್ಯಾ
ಹ್ಯನಾದಿಮಧ್ಯಂ ತ್ವನಘಂ ಚ ದೇವಂ ।
ನಮಾಮ್ಯಹಂ ತಂ ಹರಿಮೀಶಿತಾರಂ
ಲೋಕೈಕನಾಥಂ ಭವಭೀತಿನಾಶನಂ ॥ ೨೪ ॥

ಯೇನೈಕದಂಷ್ಟ್ರೇಣ ಸಮುದ್ಧೃತೇಯಂ
ಧರಾಚಲಾ ಧಾರಯತೀಹ ವಿಶ್ವಂ ।
ಇದಂ ಚ ಹರ್ತಾ ಸಕಲಂ ಜಗದ್ಯ
ಸ್ತಮೀಶಮೀಡ್ಯಂ ಪ್ರಣತೋಸ್ಮಿ ವಿಷ್ಣುಂ ॥ ೨೫ ॥

ಅಂಶಾವತೀರ್ಣೇನ ಚ ಯೇನ ಗರ್ಭೇ
ಹೃತಾನಿ ತೇಜಾಂಸಿ ಮಹಾಸುರಾಣಾಂ ।
ನಮಾಮಿ ತಂ ದೇವಮನಂತಮೀಶಂ
ಅಶೇಷಸಂಸಾರತರೋಃ ಕುಠಾರಂ ॥ ೨೬ ॥

---

ದಲ್ಲಿಯೂ ನಿಯೋಗಿಸಲ್ಪಟ್ಟಿದೆಯೋ, (ನಮ್ಮ ಇಂದ್ರಿಯಗಳಿಗೆ ಆಯಾಯ ಪದಾರ್ಥ ಗ್ರಹಣಶಕ್ತಿಯು ಪರಮಾತ್ಮನ ಸಂಕಲ್ಪಾಧೀನವೆಂದು ತಾತ್ಪರ್ಯ.) ಅಂತಹ ಸರ್ವೇಶ್ವರನನ್ನು ಆದಿಮಧ್ಯಾಂತರಹಿತನನ್ನಾಗಿ ವೇದಶಾಸ್ತ್ರಾನುಸಾರಿಯಾದ ಯುಕ್ತಿಗಳಿಂದ ತಿಳಿಯಬೇಕು. (ಅವನು ಪ್ರಮಾಣಾಂತರವೇದ್ಯನಲ್ಲವೆಂದು ತಾತ್ಪರ್ಯ.) ಅಂತಹ ಸಾಂಸಾರಿಕ ದುಃಖನಾಶಕನಾದ ಲೋಕನಾಥನಾದ ಹರಿಯನ್ನು ನಮಸ್ಕರಿಸುತ್ತೇನೆ.

೨೫-೨೬. ಯಾವ ಸರ್ವೇಶ್ವರನಾದ ವಿಷ್ಣುವಿನಿಂದ ವರಹಾವತಾರದಲ್ಲಿ ಕೋರೆದಾಡೆಯಿಂದ ಎತ್ತಲ್ಪಟ್ಟ ಈ ಭೂಮಿಯು ಅಚಲವಾಗಿ ವಿಶ್ವವೆಲ್ಲವನ್ನೂ ಧರಿಸಿದೆಯೋ ಯಾವ ಆ ವಿಷ್ಣುವೇ ಈ ವಿಶ್ವವೆಲ್ಲವನ್ನೂ ಪ್ರಳಯಕಾಲದಲ್ಲಿ ಸ್ಥೂಲರೂಪವನ್ನು ನಾಶಪಡಿಸಿ, ಸೂಕ್ಷ್ಮರೂಪವನ್ನು ತನ್ನಲ್ಲೇ ಅಡಗಿಸಿಕೊಳ್ಳಲು ಸಮರ್ಥನಾಗಿರುವನೋ ಅಂತಹ ಜಗದ್ವಂದ್ಯನಾದ ವಿಷ್ಣುವನ್ನು ನಮಸ್ಕರಿಸುತ್ತೇನೆ. ಯಾವ ಮಹಾವಿಷ್ಣುವು ಅಂಶರೂಪದಿಂದ ಅದಿತಿಯ ಗರ್ಭದಲ್ಲಿ ಅವತರಿಸಿದೊಡನೆಯೇ ಮಹಾಸುರರ ತೇಜಸ್ಸೆಲ್ಲವೂ ಒಂದೇ ಕಾಲದಲ್ಲಿ ಅಪಹರಿಸಲ್ಪಟ್ಟಿದೆಯೋ, ಅಂತಹ ಸಂಸಾರವೃಕ್ಷಕ್ಕೆ ನಾಶಕನಾದ ಅನಂತನಾದ ಸರ್ವೇಶ್ವರನನ್ನು ನಮಸ್ಕರಿಸುತ್ತೇನೆ.

ದೇವೋ ಜಗದ್ಯೋನಿರಯಂ ಮಹಾತ್ಮಾ
ಸ ಷೋಡಶಾಂಶೇನ ಮಹಾಸುರೇಂದ್ರ ।
ಸುರೇಂದ್ರಮಾತುರ್ಜಠರಂ ಪ್ರವಿಷ್ಟೋ
ಹೃತಾನಿ ವ ಸ್ತೇನ ಬಲಂ ವಪೂಂಷಿ ॥ ೨೭ ॥

ಬಲಿರುವಾಚ

ತಾತ ಕೋಽಯಂ ಹರಿರ್ನಾಮ ಯತೋ ನೋ ಭಯಮಾಗತಂ ।
ಸಂತಿ ಮೇ ಶತಶೋ ದೈತ್ಯಾ ವಾಸುದೇವಬಲಾಧಿಕಾಃ ॥ ೨೮ ॥

ವಿಪ್ರಚಿತ್ತಿಃ ಶಿಬಿಃ ಶಂಭುರ್ಜಂಭಃ ಕುಂಭ ಸ್ತಥೈವ ಚ ।
ಹಯಶಿರಾ ಅಶ್ವಶಿರಾ ಭಂಗಕಾರೋ ಮಹಾಹನುಃ ॥ ೨೯ ॥

ವಾತಾಪಿಃ ಪ್ರವಶಃ ಶುಂಭಃ ಕುಕುರಾಕ್ಷಶ್ಚ ದುರ್ಜಯಃ ।
ಏತೇ ಚಾನ್ಯೇ ಚ ಮೇ ಸಂತಿ ದೈತೇಯಾ ದಾನವಾಸ್ತಥಾ ॥ ೩೦ ॥

ಮಹಾಬಲಾ ಮಹಾವೀರ್ಯಾ ಭೂಭಾರಧರಣಕ್ಷಮಾಃ ।
ಏಷಾಮೇಕೈಕಶಃ ಕೃಷ್ಣೋ ನ ವೀರ್ಯಬಲಸಂಮಿತಃ ॥ ೩೧ ॥

---

೨೭. ಅಂತಹ ಜಗತ್ಕಾರಣನಾದ ಮಹಾವಿಷ್ಣುವು ತನ್ನ ಹದಿನಾರು ಕಲೆಗಳಲ್ಲಿ ಒಂದು ಅಂಶದಿಂದ ಇಂದ್ರನ ತಾಯಿಯಾದ ಅದಿತೀದೇವಿಯ ಗರ್ಭವನ್ನು ಪ್ರವೇಶಿಸಿದ್ದಾನೆ. ಎಲೈ, ಅಸುರೇಂದ್ರನೇ, ಆ ಮಹಾಪುರುಷನ ಈ ರೀತಿಯಾದ ಲೀಲೆಯಿಂದಲೇ ನಿಮ್ಮ ಬಲವೂ, ಶರೀರವೂ ಸಹ ಅಪಹೃತವಾಗಿವೆ, (ನಿಸ್ತೇಜಸ್ಕವಾಗಿವೆ.)

೨೮-೩೧. ತತ್ವಜ್ಞನಾದ ಪ್ರಹ್ಲಾದನಿಂದ ಹೇಳಲ್ಪಟ್ಟ ಮಹಾವಿಷ್ಣುವಿನ ಮಾಹಾತ್ಮ್ಯವನ್ನು ಕೇಳಿ ತಾಮಸಪ್ರಕೃತಿಯಾದ ಬಲಿಯು ಹರಿಯ ಸರ್ವೋತ್ಕರ್ಷದಲ್ಲಿ ಸಂಶಯಿತನಾಗಿ ಪ್ರಶ್ನೆಮಾಡುತ್ತಾನೆ. ಎಲೈ, ತಾತನೇ, ನಮಗೂ ಇಷ್ಟು ಭಯವನ್ನುಂಟುಮಾಡುತ್ತಿರುವ ಹರಿ ಎಂಬುವವನಾರು, ಆ ವಾಸುದೇವನಿಗಿಂತಲೂ ಅಧಿಕ ಬಲಶಾಲಿಗಳಾದ ವಿಪ್ರಚಿತ್ತಿ, ಶಿಬಿ, ಶಂಭು, ಜಂಭ, ಕುಂಭ, ಹಯಶಿರ, ಅಶ್ವಶಿರ, ಭಂಗಕಾರ, ಮಹಾಹನು, ವಾತಾಪಿ, ಪ್ರವಶ, ಶುಂಭ, ಕುಕುರಾಕ್ಷ, ದುರ್ಜಯ ಇವರ ಮಧ್ಯದಲ್ಲಿ ಆ ಹರಿಯು ಒಬ್ಬೊಬ್ಬನ ಬಲಕ್ಕೂ ಸಮನಾಗಲಾರನು.

## ಲೋಮಹರ್ಷಣ ಉವಾಚ

ಪೌತ್ರಸ್ಯೈತದ್ವಚಃ ಶ್ರುತ್ವಾ ಪ್ರಹ್ಲಾದೋ ದೈತ್ಯಪುಂಗವಃ ।
ಸಕ್ರೋಧಶ್ಚ ಬಲಿಂ ಪ್ರಾಹ ವೈಕುಂಠಾಕ್ಷೇಪವಾದಿನಂ ॥ ೩೨ ॥

ವಿನಾಶಮುಪಯಾಸ್ಯಂತಿ ದೈತ್ಯಾಸ್ತೇ ಚಾಪಿದಾನವಾಃ ।
ಯೇಷಾಂ ತ್ವಮೀದೃಶೋ ರಾಜಾ ದುರ್ಬುದ್ಧಿರವಿವೇಕವಾನ್ ॥ ೩೩ ॥

ದೇವದೇವಂ ಮಹಾಭಾಗಂ ವಾಸುದೇವಮಜಂ ವಿಭುಂ ।
ತ್ವಾಮೃತೇ ಪಾಪಸಂಕಲ್ಪಃ ಕೋನ್ಯಏವಂ ವದಿಷ್ಯತಿ ॥ ೩೪ ॥

ಯ ಏತೆ ಭವತಾ ಪ್ರೋಕ್ತಾಃ ಸಮಸ್ತಾ ದೈತ್ಯದಾನವಾಃ ।
ಸಬ್ರಹ್ಮಕಾ ಸ್ತಥಾ ದೇವಾಃ ಸ್ಥಾವರಾಂತಾಶ್ಚ ಜಾತಯಃ ॥ ೩೫ ॥

ತ್ವಂ ಚಾಹಂ ಚ ಜಗಚ್ಚೇದಂ ಸಾದ್ರಿದ್ರುಮನದೀವನಂ ।
ಸಮುದ್ರದ್ವೀಪಲೋಕಾಶ್ಚ ಯಚ್ಚೇಂಗತಿ ಚ ನೇಂಗತಿ ॥ ೩೬ ॥

---

೩೨-೩೪. ಲೋಮಹರ್ಷಣರು ಹೇಳುತ್ತಾರೆ. ಮೊಮ್ಮಗನಾದ ಬಲಿಯ ಈ ಮಾತನ್ನು ಕೇಳಿ ಬಹಳ ಕೋಪಾಕ್ರಾಂತನಾದ ಪ್ರಹ್ಲಾದನು ಹರಿಯನ್ನೂ ಆಕ್ಷೇಪಿಸುತ್ತಿರುವ ಇವನನ್ನು ಕುರಿತು ಹೇಳುತ್ತಾನೆ. ಯಾವ ದೈತ್ಯದಾನವರಿಗೆ ದುರ್ಬುದ್ಧಿಯಾಗಿಯೂ ಅವಿವೇಕಿಯಾಗಿಯೂ ಇರುವ ನೀನು ರಾಜನಾಗಿರುವೆಯೋ ಅಂತಹ ದೈತ್ಯದಾನವರು ನಾಶಹೊಂದುವುದು ನಿಜ. ದೇವಾಧಿದೇವನಾಗಿಯೂ ಮಹಾಭಾಗ್ಯಶಾಲಿಯಾಗಿಯೂ ಶಾಶ್ವತನಾಗಿಯೂ ಇರುವ ಪ್ರಭುವಾದ ವಾಸುದೇವ ನನ್ನು ಹೀಗೆ ಆಕ್ಷೇಪಿಸುವವನು ಪಾಪಿಯಾದ ನೀನಲ್ಲದೆ ಮತ್ತಾರಿರುವರು (ಪಾಪಿ ಯಾದ ನಿನ್ನನ್ನು ಬಿಟ್ಟರೆ ಮತ್ತಾರೂ ಹೀಗೆ ನಿಂದಿಸಲಾರರೆಂದು ತಾತ್ಪರ್ಯ.)

೩೫-೩೬. ನಿನ್ನಿಂದ ಈಗ ಉದಾಹರಿಸಲ್ಪಟ್ಟ ಎಲ್ಲಾ ದೈತ್ಯದಾನವರೂ, ಚತುರ್ಮುಖನೊಡಗೂಡಿದ ಎಲ್ಲಾ ದೇವತೆಗಳೂ, ಎಲ್ಲಾ ಅಚೇತನ ಜಾತಿಗಳೂ, ನೀನೂ, ನಾನೂ ಪರ್ವತ, ಮರ, ನದಿ, ಕಾಡು ಮೊದಲಾದುವುಗಳಿಂದ ಕೂಡಿರುವ ಸಕಲ ಜಗತ್ತು ಸಮುದ್ರಗಳು, ಅವುಗಳಲ್ಲಿರುವ ದ್ವೀಪಗಳು ಎಲ್ಲಾ ಲೋಕಗಳೂ ಸ್ಥಾವರಜಂಗಮಾತ್ಮಕವಾದ ಎಲ್ಲಾ ವಸ್ತುಗಳೂ ಎಲ್ಲರಿಂದಲೂ ಅಭಿವಾದನಪೂರ್ವಕ ವಂದಿಸಲ್ಪಡುವ ಆ ವ್ಯಾಪಕನಾದ ಪರಮಾತ್ಮನ ಒಂದೊಂದಂಶದ ಏಕದೇಶವಾದ

ಯಸ್ಯಾಭಿವಾದ್ಯ ವಂದ್ಯಸ್ಯ ವ್ಯಾಪಿನಃ ಪರಮಾತ್ಮನಃ ।
ಏಕೈಕಾಂಶಕಲಾ ಜನ್ಮ ಕಸ್ತಮೇವಂ ವದಿಷ್ಯತಿ ॥ ೩೭ ॥

ಖಲತೇ ವಿನಾಶಾಭಿಮುಖಂ ತ್ವಾಮೇಕಮವಿವೇಕಿನಂ ।
ದುರ್ಬುದ್ಧಿಮಜಿತಾತ್ಮಾನಂ ವೃದ್ಧಾನಾಂ ಶಾಸನಾತಿಗಂ ॥ ೩೮ ॥

ಶೋಚ್ಯೋಽಹಂ ಯಸ್ಯ ಮೇ ಗೇಹೇ ಜಾತಸ್ತವ ಪಿತಾಧಮಃ ।
ಯಸ್ಯ ತ್ವಮೀದೃಶಃ ಪುತ್ರೋ ದೇವದೇವಾವಮಾನಕಃ ॥ ೩೯ ॥

ತಿಷ್ಠತ್ಯನೇಕಸಂಸಾರಸಂಘಾಘೌಘವಿನಾಶಿನೀ ।
ಕೃಷ್ಣೇ ಭಕ್ತಿರಹಂ ತಾವದವೇಕ್ಷ್ಯೋ ಭವತಾ ನ ಕಿಂ ॥ ೪೦ ॥

ನ ಮೆ ಪ್ರಿಯತರಂ ಕೃಷ್ಣಾದಪಿ ದೇಹಂ ಮಹಾತ್ಮನಃ ।
ಇತಿ ಜಾನಾತ್ಯಯಂ ಲೋಕೋ ಭವಾಂಶ್ಚ ದಿತಿಜಾಧಮಃ ॥ ೪೧ ॥

---

ಕಲೆಗಳಿಂದ ಉಂಟಾಗಿರುವುವೋ ಅಂತಹ ಪರಮಾತ್ಮನನ್ನು ಯಾರು ತಾನೆ ಹೀಗೆ ಹೇಳುವರು.

೩೮-೪೦. ದುರ್ಬುದ್ಧಿಯೂ, ಇಂದ್ರಿಯಪರಾಯಣನೂ, ವೃದ್ಧರ ಆಜ್ಞಾತಿಲಂಘಿಯೂ ಅವಿವೇಕಿಯೂ, ವಿನಾಶೋನ್ಮುಖನೂ ಆಗಿರುವ ನಿನ್ನೊಬ್ಬನನ್ನು ಬಿಟ್ಟರೆ ಮತ್ತಾರೂ ಆ ಪರಮಾತ್ಮನನ್ನು ಹೀಗೆ ನಿಂದಿಸಲಾರರು. ದೇವದೇವನನ್ನೂ ನಿಂದಿಸುವ ನಿನ್ನನ್ನು ಪುತ್ರನನ್ನಾಗಿ ಪಡೆದ ಆ ಅಧಮನಾದ ನಿನ್ನ ತಂದೆಯು ನನ್ನ ಮನೆಯಲ್ಲಿ ಹುಟ್ಟಿದುದು ನನ್ನ ದುರದೃಷ್ಟವೇ ಸರಿ. (ಇಂತಹ ಮಗನನ್ನು ಪಡೆದ ನಿನ್ನ ತಂದೆಯನ್ನು ನಾನು ಪಡೆದದ್ದು ನನ್ನ ದುರದೃಷ್ಟಫಲವೆಂದೆಣಿಸುತ್ತೇನೆಂದು ತಾತ್ಪರ್ಯ.) ಹೇಗಾದರೂ ಇರಲಿ, ಸಂಸಾರಕ್ಕೆ ಕಾರಣವಾದ ಪಾಪರಾಶಿಗಳನ್ನೆಲ್ಲಾ ನಾಶಮಾಡುವ ಕೃಷ್ಣಭಕ್ತಿಯು, ಯಾವ ನನ್ನಲ್ಲಿರುವದೋ ಅಂತಹ ನಾನೂ ನಿನಗೆ ಅಲಕ್ಷ್ಯನಾದೆನಲ್ಲವೇ!

೪೧-೪೪. ನನ್ನ ಈ ದೇಹಕ್ಕಿಂತಲೂ ಕೃಷ್ಣಪರಮಾತ್ಮನೇ ನನಗೆ ಅತ್ಯಂತ ಪ್ರಿಯನೆಂಬುದನ್ನು ಲೋಕವೆಲ್ಲವೂ ತಿಳಿದಿದೆ. ದಾನವಾಧಮನಾದ ನೀನೂ ಸಹ

ಜಾನನ್ನಪಿ ಪ್ರಿಯತರಂ ಪ್ರಾಣೇಭ್ಯೋಽಪಿ ಹರಿಂ ಮಮ ।
ನಿನ್ದಾಂ ಕರೋಷಿ ತಸ್ಯ ತ್ವಂ ಅಕುರ್ವನ್ ಗೌರವಂ ಮಮ ॥ ೪೨ ॥

ವಿರೋಚನಸ್ತವ ಗುರುಃ ಗುರುಸ್ತಸ್ಯಾಪ್ಯಹಂ ಬಲೇ ।
ಮಮಾಪಿ ಸರ್ವಜಗತಾಂ ಗುರುರ್ನಾರಾಯಣೋ ಹರಿಃ । ॥ ೪೩ ॥

ನಿಂದಾಂ ಕರೋಷಿ ತಸ್ಮಿಂಸ್ತ್ವಂ ಕೃಷ್ಣೇ ಗುರುಗುರೋರ್ಗುರೌ ।
ಯಸ್ಮಾತ್ತಸ್ಮಾದಿಹೈಶ್ವರ್ಯಾದಚಿರಾದ್ಭ್ರಂಶಮೇಷ್ಯಸಿ ॥ ೪೪ ॥

ಸ ದೇವೋ ಜಗತಾಂ ನಾಥೋ ಬಲೇ ಮಮ ಜನಾರ್ದನಃ ।
ನತ್ವಹಂ ಪ್ರತ್ಯವೇಕ್ಷ್ಯಸ್ತೇ ಪಿತು ರ್ಮಾನ್ಯೋತ್ರ ಯೋ ಗುರುಃ ॥ ೪೫ ॥

ಏತಾವನ್ಮಾತ್ರಮಪ್ಯತ್ರ ನಿಂದತಾ ಜಗತೋ ಗುರುಂ ।
ನಾಪೇಕ್ಷಿತಂ ತ್ವಯಾ ಯಸ್ಮಾತ್ತಸ್ಮಾಚ್ಛಾಪಂ ದದಾಮಿ ತೇ ॥ ೪೬ ॥

ಯಥಾ ಮೇ ಶಿರಸಶ್ಛೇದಾದಿದಂ ಗುರುತರಂ ವಚಃ ।
ತ್ವಯೋಕ್ತಮಚ್ಯುತಾಕ್ಷೇಪಿ ರಾಜ್ಯಭ್ರಷ್ಟಸ್ತಥಾ ಪತ ॥ ೪೭ ॥

---

ಇದು ತಿಳಿದಿದ್ದರೂ ನನಗೆ ಅಗೌರವನ್ನುಂಟುಮಾಡಲು ನನಗೆ ಪ್ರಾಣಗಳಿಗಿಂತಲೂ ಅತ್ಯಂತ ಪ್ರಿಯನಾದ ಹರಿಯನ್ನು ನಿಂದಿಸುತ್ತಿದ್ದೀಯೇ. ವಿರೋಚನನು ನಿನಗೆ ತಂದೆಯು, ಅವನಿಗೂ ನಾನು ತಂದೆ, ಇಂತಹ ನನಗೂ ಜಗತ್ತಿಗೂ ಸಹ ಆ ನಾರಾಯಣನು ತಂದೆಯಾಗಿರುವನು, ಆದುದರಿಂದ ತಂದೆಯ ತಂದೆಗೂ ಗುರುವಾಗಿರುವ ಆ ನಾರಾಯಣನನ್ನು ನೀನು ನಿಂದಿಸುತ್ತಿರುವದ್ದರಿಂದ ಇದಕ್ಕೆ ಫಲವಾಗಿ ನಿನ್ನ ಸಕಲೈಶ್ವರ್ಯವೂ ನಾಶವಾಗುವದು ಖಂಡಿತ.

೪೫-೪೬. ಎಲೈ, ಬಲಿಯೇ, ಜಗತ್ಪತಿಯಾದ ಆ ಜನಾರ್ದನನೇ ನನಗೆ ನಾಥನಾಗಿರುವನು. ಇದೂ ಇರಲಿ, ಜಗದ್ಗುರುವಾದ ನಾರಾಯಣನನ್ನೂ ನಿಂದಿಸುತ್ತಿರುವ ನೀನು, ನಿನ್ನ ತಂದೆಗೆ ಗುರುವಾಗಿರುವ ನನಗೆ ಅವಮಾನಮಾಡಬಾರದೆಂಬುದನ್ನಾದರೂ ನೋಡಬಾರದೇ! ಇಷ್ಟು ಮಾತ್ರವನ್ನೂ ಲಕ್ಷಿಸದಿರುವ ನಿನಗೆ ಶಾಪವನ್ನೇ ಕೊಡುತ್ತೇನೆ.

೪೭-೪೮. ನಾರಾಯಣನನ್ನೂ ನಿಂದಿಸುತ್ತಿರುವ ಈ ನಿನ್ನ ಮಾತು ನನಗೆ ಶಿರಚ್ಛೇದನಕ್ಕಿಂತಲೂ ಹೆಚ್ಚಾದ ದುಃಖವನ್ನುಂಟುಮಾಡುತ್ತಿರುವದ್ದರಿಂದ ಇಂತಹ

**ಯಥಾ ನ ಕೃಷ್ಣಾದಪರಃ ಪರಿತ್ರಾಣಂ ಭವಾರ್ಣವೇ ।**
**ತಥಾಚಿರೇಣ ಪಶ್ಯೇಯಂ ಭವಂತಂ ರಾಜ್ಯವಿಚ್ಯುತಂ ॥ ೪೮ ॥**

**ಇತಿ ಶ್ರೀ ವಾಮನಪುರಾಣೇ ಸರೋಮಾಹಾತ್ಮ್ಯೇ**
**ಏಕೋನತ್ರಿಂಶೋಽಧ್ಯಾಯಃ.**

---

ನಿಂದಾವಚನವನ್ನು ಹೇಳಿದ ನೀನು ರಾಜ್ಯಭ್ರಷ್ಟನಾಗಿ ಬೀಳು. ಕೃಷ್ಣನಿಗಿಂತಲೂ ಬೇರೆಯಾದ ಸಂಸಾರತಾರಕನಿಲ್ಲವೆಂದು ನಾನು ಹೇಗೆ ನೋಡುತ್ತಿರುವೆನೋ ಹಾಗೆಯೇ ರಾಜ್ಯದಿಂದ ಪತನಹೊಂದಿದ ನಿನ್ನನ್ನೂ ಜಾಗ್ರತೆಯಾಗಿ ನೋಡುವೆನು.

ಇಲ್ಲಿಗೆ ಶ್ರೀ ವಾಮನಪುರಾಣದಲ್ಲಿ ಸರೋಮಾಹಾತ್ಮ್ಯವೆಂಬ
ಇಪ್ಪತ್ತೊಂಭತ್ತನೇ ಅಧ್ಯಾಯವು ಮುಗಿದಿದೆ.

## ಅಧ್ಯಾಯಾರ್ಥ ಸಂಗ್ರಹ

ಈ ಅಧ್ಯಾಯದಲ್ಲಿ ಅದಿತಿಯ ಗರ್ಭದಲ್ಲಿ ಪರಮಾತ್ಮನ ಅವತಾರವಾದ ಒಡನೆಯೇ ದಾನವರಿಗುಂಟಾದ ತೇಜೋಹಾನಿಯನ್ನು ನೋಡಿ ಬಲಿಯು ಇದಕ್ಕೆ ಕಾರಣವೇನೆಂದು ತಾತನಾದ ಪ್ರಹ್ಲಾದನನ್ನು ಕೇಳಲಾಗಿ ಪ್ರಹ್ಲಾದನು ಮಹಾಭಗವದ್ಭಕ್ತನಾದುದರಿಂದ ಧ್ಯಾನದೃಷ್ಟಿಯಿಂದ ವಿಷಯವನ್ನು ಸಾಕ್ಷಾತ್ಕರಿಸಿ ಹೇಳಿದನೆಂದೂ, ಹರಿಯ ಉತ್ಕರ್ಷವನ್ನು ಸಹಿಸಲಾರದ ಬಲಿಯು ಅಲ್ಪಬಲನೆಂದು ಹರಿಯನ್ನು ನಿಂದಿಸಲಾಗಿ ಕೋಪಗೊಂಡ ಪ್ರಹ್ಲಾದನು, ನಾನಾ ರೂಪದಿಂದ ಇರುವ ಹರಿಯ ಮಾಹಾತ್ಮ್ಯವನ್ನು ಧ್ಯಾನದೃಷ್ಟಿಯಿಂದ ಅನುಭವಿಸಿ ಭಕ್ತಿಪರವಶನಾಗಿ ನಮಸ್ಕರಿಸಿ, ಅಂತಹ ಹರಿಯನ್ನೂ ನಿಂದಿಸುತ್ತಿರುವ ಬಲಿಯ ವಿಷಯದಲ್ಲಿ ಬಹಳ ಆಗ್ರಹಗೊಂಡು ಕೊನೆಗೆ ಮಹಾಪರಾಧಿಯೆಂದು ಭಾವಿಸಿ ಅವನ ಅವಿವೇಕಕ್ಕೂ ಭಗವದ್ವೇಷಕ್ಕೂ ಪ್ರತಿಫಲವಾಗಿ ರಾಜ್ಯಭ್ರಂಶವುಂಟಾಗುವಂತೆ ಶಪಿಸಿದನೆಂದೂ ಹೇಳಲಾಯಿತು.

॥ ಶ್ರೀಃ ॥

# ಶ್ರೀವಾಮನಪುರಾಣಂ

## ತ್ರಿಂಶೋಽಧ್ಯಾಯಃ

ಇತಿ ದೈತ್ಯಪತಿಃ ಶ್ರುತ್ವಾ ಗುರೋರ್ವಚನಮಪ್ರಿಯಂ ।
ಪ್ರಸಾದಯಾಮಾಸ ಗುರುಂ ಪ್ರಣಿಪತ್ಯ ಪುನಃ ಪುನಃ ॥ ೧ ॥

ಬಲಿರುವಾಚ

ಪ್ರಸೀದ ತಾತ ಮಾ ಕೋಪಂ ಕುರು ಮೋಹಹತೇ ಮಯಿ ।
ಬಲಾವಲೇಪಮೂಢೇನ ಮಯೈತದ್ವಾಕ್ಯಮೀರಿತಂ ॥ ೨ ॥

ಮೋಹಾಪಹತವಿಜ್ಞಾನಃ ಪಾಪೋಽಹಂ ದಿತಿಜೋತ್ತಮ ।
ಯಚ್ಛಪ್ತೋಽಸ್ಮಿ ದುರಾಚಾರಸ್ತತ್ಸಾಧು ಭವತಾ ಕೃತಂ ॥ ೩ ॥

ರಾಜ್ಯಭ್ರಂಶಂ ಯಶೋಭ್ರಂಶಂ ಪ್ರಾಪ್ಸ್ಯಾಮೀತಿ ತತಸ್ತ್ವಹಂ ।
ವಿಷಣ್ಣೋಽಸಿ ಯಥಾ ತಾತ ತಥೈವಾವಿನಯಃ ಕೃತಃ ॥ ೪ ॥

---

## ಮೂವತ್ತನೆಯ ಅಧ್ಯಾಯವು

೧-೪. ಲೋಮಹರ್ಷಣರು ಮುಂದಿನ ವೃತ್ತಾಂತವನ್ನು ಹೇಳುತ್ತಾರೆ. ಈ ಪ್ರಕಾರ ಬಹಳ ಅಪ್ರಿಯವಾದ ತಾತನ ಮಾತನ್ನು ಕೇಳಿ ಬಲಿಯು ಕೋಪಗೊಂಡಿರುವ ಪ್ರಹ್ಲಾದನನ್ನು ಪ್ರಸನ್ನಗೊಳಿಸಲು ಅನೇಕಾವರ್ತಿ ನಮಸ್ಕರಿಸಿ ಹೀಗೆ ಹೇಳುತ್ತಾನೆ. ಎಲೈ ತಾತನೇ, ಪ್ರಸನ್ನನಾಗು. ಬಲದರ್ಪದಿಂದ ಕೊಬ್ಬಿದ ನಾನು ಅಜ್ಞಾನದಿಂದ ಈ ಮಾತನ್ನಾಡಿದೆನು. ಕೋಪಮಾಡಬೇಡ. ಎಲೈ ದಾನವ ಶ್ರೇಷ್ಠನೇ, ಪಾಪಿಯಾಗಿಯೂ, ಅಜ್ಞಾನದಿಂದ ವಸ್ತುತತ್ವವನ್ನರಿಯದೆಯೂ, ದುರಾಚಾರಶೀಲನಾಗಿಯೂ ಇರುವ ನಾನು, ನಿನ್ನಿಂದ ಶಪಿಸಲ್ಪಟ್ಟು ರಾಜ್ಯಭ್ರಷ್ಟನಾಗಿಯೂ ಯಶೋಭ್ರಷ್ಟನಾಗಿಯೂ ಆಗುವುದು ನ್ಯಾಯವೇ ಸರಿ. ನೀನು ದುಃಖದಿಂದ ವಿಷಾದಪಡುವಷ್ಟು ಅವಿನಯವನ್ನು ನಾನು ತೋರಿಸಿರುವೆನು.

ತ್ರೈಲೋಕ್ಯೈಶ್ವರ್ಯ ಮನ್ಯದ್ವಾ ಕಿಮಪೀಹ ನ ದುರ್ಲಭಂ ।
ಸಂಸಾರೇ ದುರ್ಲಭಾಸ್ತಾತ ಗುರವೋ ಯೇ ಭವದ್ವಿಧಾಃ ॥ ೫ ॥

ತತ್ಪ್ರಸೀದ ನ ಮೇ ಕೋಪಂ ಕರ್ತುಮರ್ಹಸಿ ದೈತ್ಯಪ ।
ತ್ವತ್ಕೋಪಪರಿದಗ್ಧೋಽಹಂ ಪರಿತಪ್ಯೇ ದಿವಾನಿಶಂ ॥ ೬ ॥

ಪ್ರಹ್ಲಾದ ಉವಾಚ

ವತ್ಸ ಕೋಪೇನ ಮೇ ಮೋಹೋ ಜನಿತಸ್ತೇನ ತೇ ಮಯಾ ।
ದತ್ತ ಶ್ಶಾಪೋ ವಿವೇಕಶ್ಚ ಮೋಹೇನಾಪಹೃತೋ ಮಮ ॥ ೭ ॥

ಯದಿ ಮೋಹೇನ ಮೇ ಜ್ಞಾನಂ ನ ಕ್ಷಿಪ್ತಂ ಸ್ಯಾನ್ಮಹಾಸುರ ।
ತತ್ಕಥಂ ಸರ್ವಗಂ ಜಾನನ್ ಹರಿಂ ಕಂಚಿಚ್ಛಪಾಮ್ಯಹಂ ॥ ೮ ॥

---

೫-೬. ಎಲೈ ದೈತ್ಯನಾಥನೇ, ಮೂರು ಲೋಕದ ಸಾಮ್ರಾಜ್ಯವನ್ನಾಗಲಿ, ಮತ್ತಾವ ಉತ್ತಮ ವಸ್ತುವನ್ನಾಗಲಿ ಪ್ರಯತ್ನದಿಂದ ಹೊಂದಬಹುದು. ಸಂಸಾರದಲ್ಲಿ ನಿಮ್ಮಂತಹ ತತ್ವೋಪದೇಶಕರಾದ ಗುರುಗಳನ್ನು ಹೊಂದುವದು ಕಷ್ಟ. ನಿನ್ನ ಕೋಪಾಗ್ನಿಯಿಂದ ದಗ್ಧನಾಗಿ ಹಗಲಿರುಳೂ ಸಂತಾಪಹೊಂದುತ್ತಿರುವೆನು. ಪ್ರಸನ್ನನಾಗು. ಕೋಪಮಾಡಬೇಡ

೭-೮. ಪ್ರಹ್ಲಾದನು ಹೇಳುತ್ತಾನೆ. ಎಲೈ, ಮಗುವೇ, ಮಿತಿಮೀರಿದ ಕೋಪದಿಂದ ನಾನೇ ಮೋಹವನ್ನು ಹೊಂದಿ ನಿನಗೆ ಶಾಪಕೊಟ್ಟಂತಾಯಿತು. ನನಗೆ ಸ್ವಾಭಾವಿಕವಾಗಿದ್ದ ವಿವೇಕವೂ ಈ ಕೋಪದಿಂದುಂಟಾದ ಅಜ್ಞಾನದಿಂದ ಅಪಹರಿಸಲ್ಪಟ್ಟಿತು. ಇದೂ ಕೂಡ ಕಾರ್ಯದಿಂದಲೇ ತಿಳಿಯಲು ಅರ್ಹವಾಗಿದೆ. ನನ್ನ ವಿವೇಕಾತ್ಮಕವಾದ ಜ್ಞಾನವು ಮೋಹದಿಂದ (ಅಜ್ಞಾನದಿಂದ) ಅಪಹರಿಸಲ್ಪಡದೇ ಇದ್ದಲ್ಲಿ (ನಾನು ವಿವೇಕವನ್ನುಳಿಸಿಕೊಂಡಿದ್ದಲ್ಲಿ ಎಂದು ತಾತ್ಪರ್ಯ ) ಹರಿಯು ಸರ್ವವ್ಯಾಪಕನೆಂದು ತಿಳಿದಿರುವ ನಾನು ಅಂತಹ ಹರಿಯ ವ್ಯಾಪ್ತಿಯುಳ್ಳ ಯಾರನ್ನು ತಾನೆ ಶಪಿಸುತ್ತಿದ್ದೆನು. ಒಟ್ಟಿನಲ್ಲಿ ಪ್ರಪಂಚವೆಲ್ಲವೂ ಹರಿಯ ವ್ಯಾಪ್ತಿಯಿಂದ ಕೂಡಿದೆ ಎಂಬ ವಿವೇಕವನ್ನು ಕೋಪಾಂಧನಾಗಿ ಮೋಹಪರವಶನಾದ ನಾನು ಕಳೆದುಕೊಂಡು ನಿನ್ನನ್ನೂ ಶಾಪಕ್ಕೆ ಗುರಿಮಾಡಿದಂತಾಯಿತು. ಆದರೆ ಇದೂ ಕೂಡ ಭವಿತವ್ಯತೆಗೆ (ಅದೃಷ್ಟಕ್ಕೆ) ತಕ್ಕಂತೆಯೇ ಉಂಟಾಗಿದೆ ಎಂದು ತಿಳಿ. ಅದೃಷ್ಟಕ್ಕೆ ತಕ್ಕಂತೆ ಈ ಶಾಪ

ಯೋಽಯಂ ಶಾಪೋ ಮಯಾ ದತ್ತೋ ಭವತೋ ದೈತ್ಯಪುಂಗವ ।
ಭಾವ್ಯಮೇತೇನ ತೇ ನೂನಂ ತಸ್ಮಾತ್ತ್ವಂ ಮಾ ವಿಷೀದ ವೈ ॥೯॥

ಅದ್ಯ ಪ್ರಭೃತಿ ದೇವೇಶೇ ಭಗವತ್ಯಚ್ಯುತೇ ಹರೌ ।
ಭವೇಸ್ತ್ವಂ ಭಕ್ತಿಮಾನೀಶೇ ಸತೇ ತ್ರಾತಾ ಭವಿಷ್ಯತಿ ॥೧೦॥

ಶಾಪಂ ಪ್ರಾಪ್ಯ ಚ ಮೇ ವೀರ ದೇವೇಶಸ್ಸಂಸ್ಮೃತಸ್ತ್ವಯಾ ।
ತಥಾ ತಥಾ ವಿದಿಷ್ಯಾಮಿ ಶ್ರೇಯಸ್ತ್ವಂ ಪ್ರಾಪ್ಸ್ಯಸೇ ಯಥಾ ॥೧೧॥

ಲೋಮಹರ್ಷಣ ಉವಾಚ

ಅದಿತೇರ್ವರಮಾಸಾದ್ಯ ಸರ್ವಕಾಮಸಮೃದ್ಧಿದಂ ।
ಕ್ರಮೇಣೈವ ಹರಿರ್ವೃದ್ಧಿಂ ದೇವಃ ಪ್ರಾಪ್ತೋ ಮಹಾಯಶಾಃ ॥೧೨॥

---

ಫಲವು ನಿನಗೆ ಅನಿವಾರ್ಯವಾದದ್ದು ಮೋಹಾಂಧನಾದ ನನ್ನ ಶಾಪವು ಮಾತ್ರ ನಿಮಿತ್ತವಾಗಿ ಪರಿಣಮಿಸಿತು. ಇದಕ್ಕಾಗಿ ದುಃಖಪಡಬೇಡ. (ಭವಿತವ್ಯತೆಯು ಅನಿವಾರ್ಯವಾದುದರಿಂದ ಅದಕ್ಕೆ ತಕ್ಕಂತೆ ನಾನೂ ಮೋಹಾವಿಷ್ಟನಾಗಿ ಶಾಪಕೊಡಬೇಕಾಗಿ ಬಂದಿತು. ನನ್ನನ್ನೂ ಮೋಹಗೊಳಿಸಿ ಅಜ್ಞಾನಕ್ಕೆ ತಳ್ಳಿ ಶಾಪವು ಉಂಟಾಗಬೇಕಾದರೆ ಇದು ಅವಶ್ಯಾನುಭವನೀಯವಾದ ದುಃಖಕ್ಕೆ ಸೂಚಕವೆಂದು ತಿಳಿ ಎಂದು ತಾತ್ಪರ್ಯ.)

೧೦-೧೧. ಇದು ಮೊದಲು ನೀನು ಸರ್ವೇಶ್ವರನಾಗಿಯೂ ಶಾಶ್ವತನಾಗಿಯೂ ಇರುವ ಹರಿಯಲ್ಲಿ ಭಕ್ತಿಯಿಂದ ವರ್ತಿಸು, ಭಕ್ತಪರಾಧೀನನಾದ ಆ ಹರಿಯೇ ನಿನಗೆ ರಕ್ಷಕನಾಗುವನು. ಈ ಶಾಪವೇ ನಿನಗೆ ಸರ್ವೇಶ್ವರನ ಸ್ಮೃತಿಯನ್ನುಂಟುಮಾಡಲು ಸಹಾಯಮಾಡಿದಂತಾಗಿದೆ ಈ ವ್ಯಾಜದಿಂದ ನೀನು ಹೇಗೆ ಹೇಗೆ ಹರಿಯ ಸ್ಮೃತಿಯಿಂದ ಧ್ಯಾನದಿಂದ ಮಾಹಾತ್ಮ್ಯಜ್ಞಾನದಿಂದ ಭಕ್ತನಾಗುವೆಯೋ ಹಾಗೆ ಹಾಗೆ ನಿನಗೆ ಸರ್ವತೋಮುಖವಾದ ಶ್ರೇಯಸ್ಸೂ ಉಂಟಾಗುವುದೆಂದು ನಾನು ತಿಳಿಯುತ್ತೇನೆ.

೧೨-೧೪. ಲೋಮಹರ್ಷಣರು ಹೇಳುತ್ತಾರೆ. ಸಕಲ ಮನೋರಥಪೂರಕವಾದ ಅದಿತಿಯ ವರವನ್ನೇ ವ್ಯಾಜವನ್ನಾಗಿ ಸ್ವೀಕರಿಸಿ ಹರಿಯು ಗರ್ಭದಲ್ಲೇ ಯಶಸ್ವಿಯಾಗಿ ವೃದ್ಧಿಹೊಂದಿದನು. ಅನಂತರ ಅದಿತಿದೇವಿಗೆ ಹತ್ತನೇ ತಿಂಗಳಲ್ಲಿ

**ತತೋ ಮಾಸೇ ಚ ದಶಮೇ ಕಾಲೇ ಪ್ರಸವ ಆಗತೇ ।**
**ಅಜಾಯತ ಸ ಗೋವಿಂದೋ ಭಗವಾನ್ ವಾಮನಾಕೃತಿಃ ॥ ೧೩ ॥**

**ಅವತೀರ್ಣೇ ಜಗನ್ನಾಥೇ ತಸ್ಮಿನ್ಸರ್ವಾಮರೇಶ್ವರೇ ।**
**ದೇವಾಶ್ಚ ಮುಮುಚುರ್ದುಃಖಂ ದೇವಮಾತಾಽದಿತಿಸ್ತಥಾ ॥ ೧೪ ॥**

**ವವುರ್ವಾತಾಃ ಸುಖಸ್ಪರ್ಶಾಃ ನಿರಜಸ್ಕಮಭೂನ್ನಭಃ ।**
**ಧರ್ಮೇ ಚ ಸರ್ವಭೂತಾನಾಂ ತದಾ ಮತಿರಜಾಯತ ॥ ೧೫ ॥**

**ನೋದ್ವೇಗಶ್ಚಾಪ್ಯಭೂದ್ದೇಹೇ ಮಾನವಾನಾಂ ದ್ವಿಜೋತ್ತಮಾಃ ।**
**ತದಾ ಹಿ ಸರ್ವಭೂತಾನಾಂ ಧರ್ಮೇ ಮತಿರಜಾಯತ ॥ ೧೬ ॥**

**ತಂ ಜಾತಮಾತ್ರಂ ಭಗವಾನ್ ಬ್ರಹ್ಮಾ ಲೋಕಪಿತಾಮಹಃ ।**
**ಜಾತಕರ್ಮಾದಿಕಾಂ ಕೃತ್ವಾ ಕ್ರಿಯಾಂ ತುಷ್ಟಾವ ಚ ಪ್ರಭುಃ ॥ ೧೭ ॥**

---

ಪ್ರಸವಕಾಲವು ಸನ್ನಿಹಿತವಾಗಲು ಪರಮಾತ್ಮನಾದ ನಾರಾಯಣನು ವಾಮನಾಕಾರದಿಂದ ಅವತರಿಸಿದನು. ಲೋಕೇಶ್ವರನೂ, ಸಕಲ ದೇವತಾನಿಯಾಮಕನೂ ಆದ ಜಗತ್ಪತಿಯು ಅವತರಿಸಿದನಂತರ, ಮನೋರಥಫಲವನ್ನು ನಿರೀಕ್ಷಿಸುತ್ತಿದ್ದ ದೇವತೆಗಳೂ ಹಾಗೂ ದೇವಮಾತೆಯಾದ ಅದಿತಿಯೂ ದುಃಖವನ್ನು ಬಿಟ್ಟು ಸಂತೋಷಹೊಂದಿದರು.

೧೫-೧೭ ಒಡನೆಯೇ ಸುಖಕರವಾದ ಮಂದಮಾರುತವು ಸುಳಿಯಿತು. ಆಕಾಶವೆಲ್ಲವೂ ನಿರ್ಮಲವಾಗಿ ತೋರಿತು. ಎಲ್ಲಾ ಪ್ರಾಣಿಗಳಿಗೂ ಸತ್ವಗುಣಾಧಿಕ್ಯದಿಂದ ಧಾರ್ಮಿಕಬುದ್ಧಿಯುಂಟಾಯಿತು. ಮನುಷ್ಯರೆಲ್ಲರಿಗೂ ದುಃಖಶಾಂತಿಯುಂಟಾಗಿ ಸುಖಮಯವಾದ ವಾತಾವರಣವು ಉಂಟಾಯಿತು. ಈ ರೀತಿ ಭಗವಂತನ ಅವತಾರವಾದೊಡನೆಯೇ ಲೋಕನಾಯಕನಾದ ಚತುರ್ಮುಖನು ಜಾತಕರ್ಮವೇ ಮೊದಲಾದ ವೈದಿಕಕ್ರಿಯೆಗಳನ್ನು ನಡೆಸಿ ಪ್ರಭುವಾದ ಆ ಪರಮಾತ್ಮನನ್ನು ಸ್ತೋತ್ರಮಾಡಲುಪಕ್ರಮಿಸಿದನು.

## ಬ್ರಹ್ಮೋವಾಚ

ಜಯಾಧೀಶ ಜಯಾಜೇಯ ಜಯ ಸರ್ವಗುರೋ ಹರೇ।
ಜನ್ಮಮೃತ್ಯುಜರಾತೀತ ಜಯಾನಂತ ಜಯಾಚ್ಯುತ ॥ ೧೮ ॥

ಜಯಾಜಿತ ಜಯಾಶೇಷ ಜಯಾವ್ಯಕ್ತಸ್ಥಿತೇ ಜಯ ।
ಪರಮಾರ್ಥಾರ್ಥ ಸರ್ವಜ್ಞ ಜ್ಞಾನಜ್ಞೇಯಾರ್ಥನಿಶ್ಚಿತ ॥ ೧೯ ॥

ಜಯಾಶೇಷಜಗತ್ಸಾಕ್ಷಿನ್ ಜಗತ್ಕರ್ತರ್ಜಗದ್ಗುರೋ ।
ಜಗತೋಽಜಗತಶ್ಚೇಶ ಸ್ಥಿತೌ ಪಾಲಯಸೇ ಜಯ ॥ ೨೦ ॥

ಜಯಾಖಿಲ ಜಯಾಶೇಷ ಜಯ ಸರ್ವಹೃದಿ ಸ್ಥಿತ ।
ಜಯಾದಿಮಧ್ಯಾಂತಮಯ ಸರ್ವಜ್ಞಾನಮಯೋತ್ತಮ ॥ ೨೧ ॥

---

೧೮-೨೦. ಬ್ರಹ್ಮನು ಸ್ತೋತ್ರಮಾಡುತ್ತಾನೆ. ಎಲೈ, ಸರ್ವೇಶ್ವರನೇ ನಿನಗೆ ಜಯವಾಗಲಿ, ಎಲೈ ಅಜೇಯನೇ (ಇತರರಿಂದ ಜಯಿಸಲು ಶಕ್ಯನಾಗದಿರುವವನೇ) ನಿನಗೆ ಜಯವಾಗಲಿ, ಎಲೈ ಸರ್ವಲೋಕಗುರುವೇ ನಿನಗೆ ಜಯವಾಗಲಿ, ಜನ್ಮಮರಣ ಜರಾರೂಪವಾದ ಸಾಂಸಾರಿಕ ದುಃಖವನ್ನು ಅತಿಕ್ರಮಿಸಿರುವವನೇ ಎಲೈ, ಅನಂತನೇ, ಅಚ್ಯುತನೇ ನಿನಗೆ ಜಯವಾಗಲಿ, ಎಲೈ, ಅಜಿತಮೂರ್ತಿಯೇ, ಅನಂತಜಗದ್ರೂಪಿಯೇ, ಅವ್ಯಕ್ತವಾದ ಸ್ಥಿತಿಯುಳ್ಳವನೇ ಸರ್ವಜ್ಞನೇ, ಎಲ್ಲಾ ಜ್ಞೇಯವಸ್ತುಗಳ ನಿಶ್ಚಯವುಳ್ಳವನೇ ನಿನಗೆ ಜಯವಾಗಲಿ, ಎಲೈ, ಜಗತ್ಸಾಕ್ಷಿಯೇ ಜಗತ್ಕರ್ತನೇ ಜಗದ್ಗುರುವೇ ನಿನಗೆ ಜಯವಾಗಲಿ, ಜಗತ್ತೆಂಬ ಲೀಲಾವಿಭೂತಿಗೂ ಅಜಗತ್ತೆಂಬ ನಿತ್ಯವಿಭೂತಿಗೂ ಪ್ರಭುವೇ, ಇದರ ಸ್ಥಿತಿಗೂ ರಕ್ಷಣೆಗೂ ಕಾರಣನಾಗಿರುವವನೇ ನಿನಗೆ ಜಯವಾಗಲಿ.

೨೧-೨೩. ಎಲೈ, ನಿಖಿಲಜಗದ್ರೂಪಿಯೇ, ಅಶೇಷವಸ್ತುರೂಪಿಯೇ, ಅಂತರ್ಯಾಮಿರೂಪದಿಂದ ಎಲ್ಲರ ಹೃದಯದಲ್ಲೂ ಇರುವವನೇ, ನಿನಗೆ ಜಯವಾಗಲಿ. ಎಲೈ, ಆದಿಮಧ್ಯಾಂತಮೂರ್ತಿಯೇ, (ಇಲ್ಲಿ ಜಗತ್ತಿಗೆ ಉಂಟಾಗುವ ಆದಿಮಧ್ಯಾಂತಾವಸ್ಥೆಗಳು, ಅವಿನಾಭಾವದಿಂದ ಕಾರಣರೂಪಿಯಾಗಿರುವ ಪರಮಾತ್ಮನಲ್ಲಿ ಉಪಚರಿತ, ಅಥವಾ ವಿಶಿಷ್ಟ ಬ್ರಹ್ಮಸ್ವರೂಪದಲ್ಲಿ ಅವಸ್ಥಾಂತರಗಳಿರಬಹುದು. ಇದು ನಿರ್ವಿಕಾರ

**ಮುಮುಕ್ಷುಭಿರನಿರ್ದೇಶ್ಯ ನಿತ್ಯಹೃಷ್ಟ ಜಯೇಶ್ವರ ।**
**ಯೋಗಿಭಿರ್ಮುಕ್ತಿಕಾಮೈಸ್ತು ದಮಾದಿಗುಣಭೂಷಣ ॥ ೨೨ ॥**

**ಜಯಾತಿಸೂಕ್ಷ್ಮ ದುರ್ಜ್ಞೇಯ ಜಗನ್ಮೂಲ ಜಗನ್ಮಯ ।**
**ಜಯ ಸೂಕ್ಷ್ಮಾತಿಸೂಕ್ಷ್ಮತ್ವಂ ಜಯ ಯೋಗಿನ್ನತೀಂದ್ರಿಯ ॥ ೨೩ ॥**

**ಜಯ ಸ್ವಮಾಯಾಯೋಗಸ್ಥ ಶೇಷಭೋಗಶಯಾಕ್ಷರ ।**
**ಜಯೈಕದಂಷ್ಟ್ರಾಗ್ರಾಂತೇನ ಸಮುದ್ಧೃತವಸುಂಧರ ॥ ೨೪ ॥**

**ನೃಕೇಸರಿನ್ ಸುರಾರಾತಿವಕ್ಷಸ್ಥಲವಿದಾರಣ ।**
**ಸಾಂಪ್ರತಂ ಜಯ ವಿಶ್ವಾತ್ಮನ್ ಮಾಯಾವಾಮನ ಕೇಶವ ॥ ೨೫ ॥**

---

ಶ್ರುತಿಗೆ ವಿರುದ್ಧವಲ್ಲ.) ನಿಖಿಲಜ್ಞಾನಮೂರ್ತಿಯೇ, (ಸರ್ವವಸ್ತುವಿಷಯಕ ಅಪರೋಕ್ಷಜ್ಞಾನ ಉಳ್ಳವನೆಂದರ್ಥ.) ಉತ್ತಮ ಸರ್ವೋತ್ತಮನೇ ("ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ" ಎಂಬ ಗೀತಾವಚನವು ಇದರಿಂದ ಸ್ಮರಿಸಲ್ಪಡುತ್ತದೆ.) ನಿನಗೆ ಜಯವಾಗಲಿ. ಮುಮುಕ್ಷುಗಳಿಂದಲೂ, ಮುಕ್ತಿಯನ್ನಪೇಕ್ಷಿಸುವ ಯೋಗಿಗಳಿಂದಲೂ ಇದಂ ಇತ್ಥಂ ಎಂದು ನಿರ್ದೇಶಿಸಲಶಕ್ಯನೇ, ನಿತ್ಯತೃಪ್ತನೇ, ಶಮದಮಾದಿಸಕಲಗುಣಭೂಷಿತನೇ ನಿನಗೆ ಜಯವಾಗಲಿ. ಎಲೈ ಅತಿಸೂಕ್ಷ್ಮನೇ, ಆದುದರಿಂದ ಲೋಕದೃಷ್ಟಿಯಿಂದ ತಿಳಿಯಲಶಕ್ಯನೇ, ಜಗತ್ಕಾರಣನೇ, ಮಹಾಯೋಗಿಯೇ, ಇಂದ್ರಿಯಾತೀತನೇ, ಸೂಕ್ಷ್ಮವಸ್ತುಗಳಲ್ಲೂ ಸೂಕ್ಷ್ಮನಾಗಿರುವವನೇ ನಿನಗೆ ಜಯವಾಗಲಿ.

೨೪-೨೫. ಎಲೈ ಆಶ್ಚರ್ಯಕರವಾದ ವಿಚಿತ್ರಸಂಕಲ್ಪಶಾಲಿಯೇ, ಶೇಷಪರ್ಯಂಕಶಾಯಿಯೇ, ಶಾಶ್ವತಮೂರ್ತಿಯೇ ನಿನಗೆ ಮಂಗಲವಾಗಲಿ. ವರಾಹರೂಪಿಯಾಗಿ ಒಂದೇ ಕೋರೆದಾಡೆಯ ತುದಿಯಿಂದ ಭೂಮಂಡಲವನ್ನೆತ್ತಿದ ಪ್ರಭುವೇ, ನರಸಿಂಹರೂಪಿಯಾಗಿ ಹಿರಣ್ಯಕಶಿಪುವಿನ ವಕ್ಷಸ್ಥಲವನ್ನು ಸೀಳಿದವನೇ, ಈಗ ವಾಮನರೂಪಿಯಾಗಿ ಮಾಯೆಯನ್ನು ತೋರಿಸುತ್ತಿರುವ ವಿಶ್ವರೂಪಿಯೇ ನಿನಗೆ ಜಯವಾಗಲಿ. (ಇಲ್ಲಿ ವರಾಹಾವತಾರದಂತೆಯೂ, ನರಸಿಂಹಾವತಾರದಂತೆಯೂ ಪ್ರಕೃತವಾಮನಾವತಾರವು ದೈತ್ಯಸಂಹಾರಕ್ಕಾಗಿ ನಿನ್ನಿಂದ ಆಶ್ರಯಿಸಲ್ಪಟ್ಟಿದೆ ಎಂಬ ಅರ್ಥತತ್ತ್ವವನ್ನೂ ಸೂಚಿಸುತ್ತಾರೆ.) ನಿನ್ನ ವಿಚಿತ್ರಸಂಕಲ್ಪಜ್ಞಾನದಿಂದ ಜಗತ್ಕಾರಣನಾದ ಚತುರ್ಮುಖ

ಸ್ವಮಾಯಾಪಟಲಚ್ಛನ್ನ ಜಗದ್ಧಾತರ್ಜನಾರ್ದನ ।
ಜಯಾಚಿಂತ್ಯ ಜಯಾನೇಕಸ್ವರೂಪೈಕನಿಧೇ ಪ್ರಭೋ ॥ ೨೬ ॥

ವರ್ಧಸ್ವ ವರ್ಧಿತಾನೇಕವಿಕಾರಪ್ರಕೃತೇ ಹರೇ ।
ತ್ವಯ್ಯೈಷಾ ಜಗತೀ ಶೇಷಸಂಸ್ಥಿತಾ ಧರ್ಮಪದ್ಧತಿಃ ॥ ೨೭ ॥

ನ ತ್ವಾಮಹಂ ನ ಚೇಶಾನೋ ನೇಂದ್ರಾದ್ಯಾಸ್ತ್ರಿದಶಾ ಹರೇ ।
ಜ್ಞಾತುಮೀಶಾ ನ ಋಷಯಃ ಸನಕಾದ್ಯಾ ನ ಯೋಗಿನಃ ॥ ೨೮ ॥

ತ್ವಂ ಮಾಯಾಪಟಸಂವೀತೋ ಜಗತ್ಯತ್ರ ಜಗತ್ಪತೇ ।
ಕಸ್ತ್ವಾಂ ವೇತ್ಸ್ಯತಿ ಸರ್ವೇಶ ತ್ವತ್ಪ್ರಸಾದಂ ವಿನಾ ನರಃ ॥ ೨೯ ॥

ತ್ವಮೇವಾರಾಧಿತೋ ಯೇನ ಪ್ರಸಾದಸುಮುಖ ಪ್ರಭೋ ।
ಸ ಏವ ಕೇವಲಂ ದೇವ ವೇತ್ತಿ ತ್ವಾಂ ನೇತರೋ ಜನಃ ॥ ೩೦ ॥

---

ನನ್ನೂ ಆವರಿಸಿರುವವನೇ, (ಅಧಿಕಾರಿಪುರುಷನಾದ ಚತುರ್ಮುಖನೂ ಸಹ ನಿನ್ನ ಸಂಕಲ್ಪಕ್ಕೆ ಅಧೀನನೆಂದು ತಾತ್ಪರ್ಯ) ಜನಾರ್ದನ, ಜಗತ್ತಿನ ಅನೇಕ ಸ್ವರೂಪಗಳಿಗೆ ಆಶ್ರಯನೇ, ಅಚಿಂತ್ಯಸ್ವರೂಪನೇ ನಿನಗೆ ಜಯವಾಗಲಿ.

೨೭-೨೯. ಸಂಕಲ್ಪಮಾತ್ರದಿಂದ (ಅಥವಾ ಸ್ವಾಧಿಷ್ಠಾನದಿಂದ) ಅನೇಕ ವಿಕಾರಗಳನ್ನುಂಟುಮಾಡಿ ಪ್ರಕೃತಿಯನ್ನೂ ಜಗದ್ರೂಪವಾಗಿ ಅಭಿವೃದ್ಧಿಗೊಳಿಸುವ ಹರಿಯೇ, ನೀನೂ ಸ್ವಸಂಕಲ್ಪದಿಂದ ಅಭಿವೃದ್ಧಿಹೊಂದು. ಆದಿಶೇಷನ ಶಿರಸ್ಸಿನಲ್ಲಿರುವ ಈ ಜಗತ್ತು ನಿನ್ನಿಂದಲೇ ಧರ್ಮಮಾರ್ಗಾವಲಂಬಿಯಾಗಬೇಕು. ನಿನ್ನ ನಿಜವಾದ ಸ್ವರೂಪವನ್ನು ನಾನೇ ಆಗಲಿ, ಶಂಕರನಾಗಲಿ, ಇಂದ್ರಾದಿದೇವತೆಗಳಾಗಲಿ, ಋಷಿಗಳೇ ಆಗಲಿ, ಸನಕಾದಿಯೋಗಿಗಳೇ ಆಗಲಿ ತಿಳಿಯಲು ಸಮರ್ಥರಾಗಿಲ್ಲ. ಈ ಜಗತ್ತಿನಲ್ಲಿ ಆಶ್ಚರ್ಯಕರವಾದ ಅನೇಕ ಶಕ್ತಿಗಳಿಂದ ಆವರಿಸಲ್ಪಟ್ಟಿರುವ ನಿನ್ನ ಸ್ವರೂಪವನ್ನು ನಿನ್ನ ಅನುಗ್ರಹಸಹಾಯವಿಲ್ಲದೆ ಯಾವನು ತಾನೇ ತಿಳಿಯಲುಸಮರ್ಥನಾದಾನು.

೩೦-೩೧. ಎಲೈ ಪ್ರಭುವೇ, ಯಾವನು ನಿನ್ನ ಆರಾಧನದಲ್ಲಿ ತತ್ಪರನಾಗಿ ನಿನ್ನನ್ನು ಒಲಿಸಿಕೊಳ್ಳುವನೋ ಅವನಿಗೇ ನಿನ್ನ ಸ್ವರೂಪವು ಗೋಚರವಾಗುತ್ತದೆಯೇ ಹೊರತು ಇತರ ಪ್ರಾಕೃತನಿಗೆ ಗೋಚರವಾಗುವುದಿಲ್ಲ. ನಂದೀಶ್ವರನಿಗೂ ಅವನಿಗೂ

ನಂದೀಶ್ವರೇಶ್ವರೇಶಾನ ವಿಭೋ ವರ್ಧಸ್ವ ವಾಮನ ।
ಪ್ರಭವಾಯಾಸ್ಯ ವಿಶ್ವಸ್ಯ ವಿಶ್ವಾತ್ಮನ್ ಪೃಥುಲೋಚನ ॥ ೩೧ ॥

ಲೋಮಹರ್ಷಣ ಉವಾಚ

ಏವಂ ಸ್ತುತೋ ಹೃಷೀಕೇಶಃ ಸ ತದಾ ವಾಮನಾಕೃತಿಃ ।
ಪ್ರಹಸ್ಯ ಭಾವಗಂಭೀರಮುವಾಚಾರೂಢಸಂಪದಂ ॥ ೩೨ ॥

ಸ್ತುತೋಽಹಂ ಭವತಾ ಪೂರ್ವಮಿಂದ್ರಾದ್ಯೈಃ ಕಾಶ್ಯಪೇನ ಚ ।
ಮಯಾ ಚಾಸ್ಯ ಪ್ರತಿಜ್ಞಾತಮಿಂದ್ರಸ್ಯ ಭುವನತ್ರಯಂ ॥ ೩೩ ॥

ಭೂಯಶ್ಚಾಹಂ ಸ್ತುತೋಽದಿತ್ಯಾ ತಸ್ಯಾಶ್ಚಾಪಿ ಮಯಾಽಶ್ರುತಂ ।
ಯಥಾ ಶಕ್ರಾಯ ದಾಸ್ಯಾಮಿ ತ್ರೈಲೋಕ್ಯಂ ಹತಕಂಟಕಂ ॥ ೩೪ ॥

---

ಒಡೆಯನಾದ ಶಂಕರನಿಗೂ ಸಹ ನಿಯಾಮಕನಾದ ಪ್ರಭುವೇ, ವಾಮನಮೂರ್ತಿಯೇ ಪದ್ಮಪತ್ರಾಕ್ಷನೇ, ಈ ಜಗತ್ತಿನ ಅಭ್ಯುದಯಕ್ಕಾಗಿ ನೀನು ವಿಶ್ವಾತ್ಮನಾಗಿ ವೃದ್ಧಿ ಹೊಂದು. (ನಿನ್ನ ಅಭಿವೃದ್ಧಿಯು ದಾನವಸಂಹಾರದಿಂದ ಜಗತ್ತಿಗೆ ಅಭ್ಯುದಯ ವನ್ನುಂಟುಮಾಡಲಿ ಎಂದು ತಾತ್ಪರ್ಯ.)

೩೨-೩೪. ಲೋಮಹರ್ಷಣರು ಹೇಳುತ್ತಾರೆ:—ಈ ಪ್ರಕಾರ ಬ್ರಹ್ಮನಿಂದ ಆಗ ಸ್ತೋತ್ರಮಾಡಲ್ಪಟ್ಟ ವಾಮನಾಕೃತಿಯಾದ ಪರಮಾತ್ಮನು ಮಂದಹಾಸದಿಂದ ಕೂಡಿದವನಾಗಿ ಜಗತ್ತಿನ ಅಭ್ಯುದಯಕ್ಕೆ ಸೂಚಕವಾಗಿರುವ ಗಂಭೀರಭಾವವುಳ್ಳ ಈ ಮಾತನ್ನು ಚತುರ್ಮುಖನಿಗೆ ಹೇಳಿದನು. ನೀನೂ, ಕಾಶ್ಯಪರೂ, ಇಂದ್ರಾದಿ ದೇವತೆ ಗಳೂ ಸಹ ಮೊದಲೇ ನನ್ನನ್ನು ಸ್ತೋತ್ರಮಾಡಿದಿರಿ. ಆಗ ಪ್ರಸನ್ನನಾದ ನಾನು ಮೂರು ಲೋಕವನ್ನೂ ಇಂದ್ರನಿಗೆ ಕೊಡುತ್ತೇನೆಂದು ಪ್ರತಿಜ್ಞೆಮಾಡಿದ್ದಾಯಿತು. ಪುನಃ ಅದಿತಿಯೂ ನನ್ನನ್ನು ಸ್ತೋತ್ರಮಾಡಲಾಗಿ ಅವಳೆದುರಿಗೂ ಮೂರು ಲೋಕ ಗಳನ್ನು ನಿಷ್ಕಂಟಕವನ್ನಾಗಿ ಮಾಡಿ ಇಂದ್ರನಿಗೆ ಕೊಡುತ್ತೇನೆಂದು ಪ್ರತಿಜ್ಞೆಮಾಡಿರು ತ್ತೇನೆ.

ಸೋಽಹಂ ತಥಾ ಕರಿಷ್ಯಾಮಿ ಯಥೇಂದ್ರೋ ಜಗತಃ ಪತಿಃ ।
ಭವಿಷ್ಯತಿ ಸಹಸ್ರಾಕ್ಷಃ ಸತ್ಯಮೇತದ್ಬ್ರವೀಮಿ ವಃ ॥ ೩೫ ॥

ತತಃ ಕೃಷ್ಣಾಜಿನಂ ಬ್ರಹ್ಮಾ ಹೃಷೀಕೇಶಾಯ ದತ್ತವಾನ್ ।
ಯಜ್ಞೋಪವೀತಂ ಭಗವಾನ್ ದದೌ ತಸ್ಯ ಬೃಹಸ್ಪತಿಃ ॥ ೩೬ ॥

ಆಷಾಢಮದದಾದ್ದಂಡಂ ಮರೀಚಿಃ ಬ್ರಹ್ಮಣಃ ಸುತಃ ।
ಕಮಂಡಲುಂ ವಸಿಷ್ಠಶ್ಚ ಕುಶಾಂಶ್ಚೀರಮಥಾಂಗಿರಾಃ ॥
ಆಸನಂ ಚೈವ ಪುಲಹಃ ಪುಲಸ್ತ್ಯಃ ಪೀತವಾಸಸೀ ॥ ೩೭ ॥

ಉಪತಸ್ಥುಶ್ಚ ತಂ ವೇದಾಃ ಪ್ರಣವೋಚ್ಚಾರಭೂಷಣಾಃ ।
ಶಾಸ್ತ್ರಾಣ್ಯಶೇಷಾಣಿ ತಥಾ ಸಾಂಖ್ಯಯೋಗೋಕ್ತಯಸ್ತಥಾ ॥ ೩೮ ॥

ಸ ವಾಮನೋ ಜಟೀ ದಂಡೀ ಛತ್ರೀ ಧೃತಕಮಂಡಲುಃ ।
ಸರ್ವವೇದಮಯೋ ದೇವೋ ಬಲೇರಧ್ವರಮಭ್ಯಗಾತ್ ॥ ೩೯ ॥

---

೩೫-೩೭. ಅಂತಹ ನಾನು ನನ್ನ ಪ್ರತಿಜ್ಞೆಯಂತೆ ಸಹಸ್ರಾಕ್ಷನಾದ ಇಂದ್ರನನ್ನು ಜಗತ್ಪತಿಯನ್ನಾಗಿ ಮಾಡುತ್ತೇನೆ. ಇದು ಸತ್ಯವಾದ ಮಾತು. ಹೀಗೆ ಭಗವಂತನಾಡಿದ ಮಾತಿನಿಂದಲೂ ಅವನ ಸತ್ಯಪ್ರತಿಜ್ಞತೆಯಿಂದಲೂ ಸಂತುಷ್ಟನಾದ ಬ್ರಹ್ಮನು ತನ್ನ ಕೃಷ್ಣಾಜಿನವನ್ನು ಭಗವಂತನಿಗೆ ಅರ್ಪಿಸಿದನು. ಬೃಹಸ್ಪತಿಯು ಯಜ್ಞೋಪವೀತವನ್ನೂ ಬ್ರಹ್ಮಪುತ್ರನಾದ ಮರೀಚಿಯು ಪಾಲಾಶದಂಡವನ್ನೂ ವಸಿಷ್ಠನು ಕಮಂಡಲುವನ್ನೂ ಆಂಗೀರಸನು ದರ್ಭೆ ಮತ್ತು ನಾರುಮಡಿಗಳನ್ನೂ ಪುಲಹನು ಆಸನವನ್ನೂ ಪುಲಸ್ತ್ಯನು ಹೊಂಬಣ್ಣದ ವಸ್ತ್ರವನ್ನೂ ಸಹ ಸಮರ್ಪಿಸಿದರು.

೩೮-೪೦. ಪ್ರಣವದೊಡನೆ ಎಲ್ಲಾ ವೇದಗಳೂ ಶಾಸ್ತ್ರಗಳೂ ಸಾಂಖ್ಯಯೋಗಗಳೂ ಸಹ ಆ ವಾಮನಮೂರ್ತಿಯಲ್ಲಿ ಸನ್ನಿಹಿತವಾದವು. ಹೀಗೆ ಸರ್ವವೇದಮಯನಾದ ಆ ವಾಮನನು ಬ್ರಹ್ಮಚರ್ಯಾಶ್ರಮಕ್ಕೆ ತಕ್ಕಂತೆ ಜಟಾಧಾರಿಯಾಗಿಯೂ ದಂಡಕಮಲಗಳನ್ನು ಧರಿಸಿಯೂ ಛತ್ರಧಾರಿಯಾಗಿಯೂ ಬಲಿಯ ಯಜ್ಞಶಾಲೆಗೆ ಹೊರಟುಬಂದನು. ಎಲೈ ಬ್ರಾಹ್ಮಣೋತ್ತಮರೇ, ನೋಡುವವರಿಗೆ ಅವನು ವಾಮನಮೂರ್ತಿಯಾಗಿದ್ದರೂ ಅವನು ನಡೆಯುವಾಗ ಯಾವಯಾವ ಭೂಭಾಗದಲ್ಲಿ

ಯತ್ರ ಯತ್ರ ಪದಂ ವಿಪ್ರಾ ಭೂಭಾಗೇ ವಾಮನೋ ದದೌ ।
ದದಾತಿ ಭೂಮಿರ್ವಿವರಂ ತತ್ರ ತತ್ರಾಭಿಪೀಡಿತಾ ॥ ೪೦ ॥

ಸ ವಾಮನೋ ಜಡಗತಿ ರ್ಮೃದುಗಚ್ಛನ್ ಸಪರ್ವತಾಂ ।
ಸಾದ್ರಿದ್ವೀಪವನಾಂ ಸರ್ವಾಂ ಚಾಲಯಾಮಾಸ ಮೇದಿನೀಂ ॥ ೪೧ ॥

ಬೃಹಸ್ಪತಿಸ್ತು ಶನಕೈ ರ್ಮಾರ್ಗಂ ದರ್ಶಯತೇ *ಶುಭಂ ।
ತಥಾ ಕ್ರೀಡಾವಿನೋದಾರ್ಥೇ ಗತಿರ್ಜಗತಿ ಸಾ ಭವತ್ ॥ ೪೨ ॥

ತತಶ್ಶೇಷೋ ಮಹಾನಾಗೋ ನಿಸ್ಸೃತ್ಯಾಸೌ ರಸಾತಲಾತ್ ।
ಸಾಹಾಯ್ಯಂ ಕಲ್ಪಯಾಮಾಸ ದೇವದೇವಸ್ಯ ಚಕ್ರಿಣಃ ॥ ೪೩ ॥

ತದಸ್ಯಾಪಿ ಚ ವಿಖ್ಯಾತಂ ಮಹಾವಿಪುಲಮುತ್ತಮಂ ।
ತಸ್ಯ ಸಂದರ್ಶನಾದೇವ ನಾಗೇಭ್ಯೋ ನ ಭಯಂ ಭವೇತ್ ॥ ೪೪ ॥

ಇತಿ ಶ್ರೀ ವಾಮನಪುರಾಣೇ ಸರೋಮಾಹಾತ್ಮ್ಯೇ
ತ್ರಿಂಶೋಽಧ್ಯಾಯಃ

---

ಪಾದಗಳನ್ನಿಡುವನೋ ಆಯಾಯ ಭೂಭಾಗವು ಭಾರದಿಂದ ಪೀಡಿತವಾಗಿ ಹಳ್ಳವಾಗುತ್ತಿತ್ತು.

೪೧-೪೪. ಆ ವಾಮನನು ಮಂದಗತಿಯಿಂದ ಮೃದುವಾಗಿ ಸಂಚರಿಸಿದರೂ ಅವನ ಪಾದದ ಭರದಿಂದ ಪರ್ವತ, ನದಿಗಳು, ಕಾಡುಗಳು ಇವುಗಳೊಡನೆ ಸಕಲ ಭೂಮಂಡಲವೂ ಚಲಿಸಿತು. ಬೃಹಸ್ಪತಿಯು ಮೆಲ್ಲಗೆ ಸರಿಯಾದ ಮಾರ್ಗವನ್ನು ತೋರಿಸುತ್ತ ಬಂದನು. ಆ ಮಂದಗತಿಯೇ ಜಗತ್ತಿನಲ್ಲಿ ವಿನೋದಾರ್ಥವಾದ ವಾಮನ ಗತಿಯೆಂದು ಪ್ರಸಿದ್ಧಿಗೆ ಬಂದಿತು. ಆ ಸಮಯದಲ್ಲಿ ಶೇಷವೆಂಬ ಮಹಾಸರ್ಪವು ಪಾತಾಲದಿಂದ ಮೇಲಕ್ಕೆ ಬಂದು ಚಕ್ರಧರನಾದ ಸರ್ವೇಶ್ವರನಿಗೆ ಸಹಾಯಮಾಡಿತು. ಈ ವಿಧವಾದ ಸತ್ಕಾರ್ಯದಿಂದ ಅದೂ ಯಶಸ್ಸಿನಿಂದ ಪ್ರಸಿದ್ಧಿಹೊಂದಿತು. ಅದರ ದರ್ಶನಮಾತ್ರವೂ ಸರ್ಪಗಳಿಂದುಂಟಾಗುವ ಭಯಕ್ಕೆ ನಿವಾರಕವಾಗಿ ಪರಿಣಮಿಸಿತು.

ಇಲ್ಲಿಗೆ ಶ್ರೀ ವಾಮನಪುರಾಣದಲ್ಲಿ ಸರೋಮಾಹಾತ್ಮ್ಯವೆಂಬ
ಮೂವತ್ತನೆಯ ಅಧ್ಯಾಯವು ಮುಗಿದಿದೆ.

* ಇಲ್ಲಿ ಅಶುಭಂ ಎಂದು ಪದವಿಭಾಗಮಾಡಿ ಮುಂದೆ ಉಂಟಾಗುವ ಬಲಿಯ ರಾಜ್ಯಭ್ರಂಶವನ್ನೂ ಸೂಚಿಸಬಹುದು.

# ಅಧ್ಯಾಯಾರ್ಥ ಸಂಗ್ರಹ

ಈ ಅಧ್ಯಾಯದಲ್ಲಿ ಬಲಿಯ ದುರುಕ್ತಿಯಿಂದ ಕೋಪಗೊಂಡ ಪ್ರಹ್ಲಾದನು ಶಾಪವನ್ನು ಕೊಟ್ಟಮೇಲೆ ಈ ಅನರ್ಥಕರವಾದ ಶಾಪದಿಂದ ದುಃಖಿತನಾದ ಬಲಿಯು ಪ್ರಹ್ಲಾದನಿಗೆ ನಮಸ್ಕರಿಸಿ ಕ್ಷಮೆಬೇಡಲಾಗಿ ಆಗ ಕೋಪದಿಂದ ಬಿಡುಗಡೆಹೊಂದಿದ ಪ್ರಹ್ಲಾದನು ಮಗುವೇ ನಾನೂ ಕೋಪಾಂಧನಾಗಿ ನಿನ್ನನ್ನು ಶಪಿಸಿದೆನು. ವಿವೇಕ ದೃಷ್ಟಿಯಿಂದ ವಿಚಾರಮಾಡಿದಲ್ಲಿ ಸರ್ವವೂ ಹರಿಮಯವೆಂದು ಭಾವಿಸಿರುವ ನನಗೆ ಯಾರು ತಾನೇ ದ್ವೇಷಿಗಳು. ಯಾರನ್ನು ತಾನೆ ಶಾಪದಿಂದ ನಿಗ್ರಹಿಸಲು ಅವಕಾಶ ವಿದೆ. ಹೀಗಿದ್ದರೂ ನನಗೂ ವಿವೇಕಭ್ರಂಶವನ್ನುಂಟುಮಾಡಿ ಹೊರಟಿರುವ ಈ ಶಾಪವು ನಿನಗೆ ಮುಂದೆ ಅನಿವಾರ್ಯವಾಗಿ ಉಂಟಾಗುವ ಅಶುಭಕ್ಕೇ ಸೂಚಕವೆಂದು ತೋರುತ್ತದೆ. ಹೇಗಾದರೂ ಆಗಲಿ ನೀನೂ ಇನ್ನುಮುಂದೆ ಈ ಶಾಪವನ್ನೇ ಮಾರ್ಗ ದರ್ಶಿಯನ್ನಾಗಿ ಭಾವಿಸಿ ಹರಿಯಲ್ಲಿ ಭಕ್ತಿಹೊಂದು. ಆ ಭಕ್ತಿಯಿಂದ ಸಂತುಷ್ಟನಾದ ಹರಿಯೇ ನಿನ್ನನ್ನು ರಕ್ಷಿಸುವನೆಂದು ಸಮಾಧಾನಪಡಿಸಿದನೆಂದು ಹೇಳಲಾಯಿತು. ಮತ್ತು ಅದಿತಿಯ ಗರ್ಭದಲ್ಲಿದ್ದ ಪರಮಾತ್ಮನು ಪ್ರಸವಕಾಲವು ಸನ್ನಿಹಿತವಾಗಲು ವಾಮನಮೂರ್ತಿಯಾಗಿ ಅವತರಿಸಿದನೆಂದೂ ಅವನಿಗೆ ಜಾತಕರ್ಮಾದಿಗಳನ್ನುಮಾಡಿ ಚತುರ್ಮುಖನು ಅವನನ್ನು ಸ್ತೋತ್ರಮಾಡಿ ಅಭ್ಯುದಯವನ್ನು ಹಾರೈಸಿದನೆಂದೂ ಪ್ರೀತನಾದ ಭಗವಂತನ ಅಭಯವಚನದಿಂದ ಬ್ರಹ್ಮಾದಿಗಳು ಸಂತುಷ್ಟರಾಗಿ ಅವನ ಆಶ್ರಮಕ್ಕೆ ತಕ್ಕಂತೆ ದಂಡ ಕಮಂಡಲುವೇ ಮೊದಲಾದವುಗಳನ್ನು ಅರ್ಪಿಸಿದರೆಂದೂ ಈ ಸಾಧನಗಳಿಂದ ಬ್ರಹ್ಮಚರ್ಯವ್ರತದಿಂದ ಶೋಭಿಸುವ ವಾಮನಮೂರ್ತಿಯು ಬೃಹಸ್ಪತಿಯ ಮಾರ್ಗದರ್ಶಿತ್ವದಿಂದ ಬಲಿಯ ಯಜ್ಞವಾಟಕ್ಕೆ ಅಭಿಮುಖನಾಗಿ ಹೊರಟನೆಂದೂ ಉಪಪಾದಿಸಲಾಯಿತು.

॥ ಶ್ರೀಃ ॥

---

# ಶ್ರೀವಾಮನಪುರಾಣಂ

## ಏಕತ್ರಿಂಶೋಽಧ್ಯಾಯಃ

---

**ಲೋಮಹರ್ಷಣ ಉವಾಚ**

**ಸಪರ್ವತವನಾಮುರ್ವೀಂ ದೃಷ್ಟ್ವಾ ಸಂಕ್ಷುಭಿತಾಂ ಬಲಿಃ ।**
**ಪಪ್ರಚ್ಛೋಶನಸಂ ಶುಕ್ರಂ ಪ್ರಣಿಪತ್ಯ ಕೃತಾಂಜಲಿಃ ॥ ೧ ॥**

**ಆಚಾರ್ಯ ಕ್ಷೋಭಮಾಯಾತಿ ಸಾಬ್ಧಿಭೂಭೃದ್ವನಾ ಮಹೀ ।**
**ಕಸ್ಮಾಚ್ಚ ನಾಸುರಾನ್ಭಾಗಾನ್ ಪ್ರತಿಗೃಹ್ಣಂತಿ ವಹ್ನಯಃ ॥ ೨ ॥**

**ಇತಿ ಪೃಷ್ಟೋಽಥ ಬಲಿನಾ ಕಾವ್ಯೋ ವೇದವಿದಾಂವರಃ ।**
**ಉವಾಚ ದೈತ್ಯಾಧಿಪತಿಂ ಚಿರಂ ಧ್ಯಾತ್ವಾ ಮಹಾಮತಿಃ ॥ ೩ ॥**

---

**ಮೂವತ್ತೊಂದನೆಯ ಅಧ್ಯಾಯವು**

೧-೩. ಲೋಮಹರ್ಷಣರು ಅತ್ತ ಬಲಿಯ ವೃತ್ತಾಂತವನ್ನು ಹೇಳುತ್ತಾರೆ. ಪರ್ವತಾದಿಗಳೊಡನೆ ಸಕಲ ಭೂಮಂಡಲವೂ ಕಂಪಿತವಾದುದನ್ನು ನೋಡಿ ಬಲಿಯು, ಶುಕ್ರಾಚಾರ್ಯರಲ್ಲಿ ನಮಸ್ಕರಿಸಿ ಭಕ್ತಿಭಾವದಿಂದ ಆಚಾರ್ಯನೇ ವಿಶಿಷ್ಟ ಭೂಮಂಡಲವೂ ಏಕೆ ಹೀಗೆ ಕ್ಷೋಭೆಹೊಂದುತ್ತಿದೆ. ಯಜ್ಞದಲ್ಲಿರುವ ಅಗ್ನಿಗಳು ಆಸುರ ಭಾಗಗಳನ್ನು ಏತಕ್ಕೆ ಸ್ವೀಕರಿಸದೆ ನಿಂತಿವೆ. ಎಂದು ಪ್ರಶ್ನೆಮಾಡಲಾಗಿ ವೇದಜ್ಞರಾಗಿಯೂ ಮಹಾಬುದ್ಧಿಶಾಲಿಯಾಗಿಯೂ ಇರುವ ಆ ಶುಕ್ರಾಚಾರ್ಯರು ಧ್ಯಾನ ದೃಷ್ಟಿಯಿಂದ ನಿರೀಕ್ಷಿಸಿ ದೈತ್ಯಾಧಿಪನಾದ ಬಲಿಯನ್ನು ಕುರಿತು ಹೇಳುತ್ತಾರೆ.

ಅವತೀರ್ಣೋ ಜಗದ್ಯೋನಿಃ ಕಶ್ಯಪಸ್ಯ ಗೃಹೇ ಹರಿಃ ।
ವಾಮನೇನೇಹ ರೂಪೇಣ ಪರಮಾತ್ಮಾ ಸನಾತನಃ ॥ ೪ ॥

ಸ ನೂನಂ ಯಜ್ಞಮಾಯಾತಿ ತವ ದಾನವಪುಂಗವ ।
ಯಸ್ಯ ಪಾದಪ್ರತಿಕ್ಷೇಪಾದಿಯಂ ಪ್ರಚಲಿತಾ ಮಹೀ ॥ ೫ ॥

ಕಂಪಂತೇ ಗಿರಯಶ್ಚೈವ ಸಂಕ್ಷುಬ್ಧಾ ಮಕರಾಲಯಾಃ ।
ನೈನಂ ಭೂತಪತಿಂ ಭೂಮಿಃ ಸಮರ್ಥಾ ವೋಢುಮೀಶ್ವರಂ ॥ ೬ ॥

ಸದೇವಾಸುರಗಂಧರ್ವಯಕ್ಷರಾಕ್ಷಸಪನ್ನಗಾ ।
ಅನೇನೈವ ಧೃತಾ ಭೂಮಿಃ ಆಪೋಽಗ್ನಿಃ ಪವನೋ ನಭಃ ॥ ೭ ॥

ಧಾರಯತ್ಯಖಿಲಾಂದೇವಾನ್ಮನುಷ್ಯಾಂಶ್ಚ ಮಹಾಸುರಾನ್ ।
ಇಯಮಸ್ಯ ಜಗದ್ಧಾತು ರ್ಮಾಯಾ ಕೃಷ್ಣಸ್ಯ ದುಸ್ತ್ಯಜಾ
ಧಾರ್ಯಧಾರಕಭಾವೇನ ಯಥಾ ಸಂಪೀಡಿತಂ ಜಗತ್ ॥ ೮ ॥

ತತ್ಸನ್ನಿಧಾನಾದಧುನಾ ಭಾಗಹಾರಾಃ ಸುರೋತ್ತಮಾಃ ।
ಭುಂಜತೇ ನಾಸುರಾನ್ಭಾಗಾನಪಿ ವೈ ತತ್ತ್ರಯೋಽಗ್ನಯಃ ॥ ೯ ॥

---

೪-೬. ಎಲೈ, ಧೊರೆಯೇ, ಸನಾತನನಾಗಿಯೂ ಜಗತ್ಕಾರಣನಾಗಿಯೂ ಇರುವ ಹರಿಯು ಕಶ್ಯಪರ ಮನೆಯಲ್ಲಿ ವಾಮನರೂಪದಿಂದ ಅವತರಿಸಿರುತ್ತಾನೆ. ಎಲೈ, ದಾನವಶ್ರೇಷ್ಠನೇ ಅವನು ನಿನ್ನ ಈ ಯಜ್ಞಕ್ಕೂ ಬಂದಾನೆಂದು ನಾನು ಊಹಿಸುತ್ತೇನೆ. ಜಗನ್ನಾಯಕನಾದ ಈ ಪರಮಾತ್ಮನನ್ನು ವಹಿಸಲು ಭೂಮಿಯು ಅಸಮರ್ಥವಾಗಿದೆ. ಆದುದರಿಂದಲೇ ಹೀಗೆ ನಡುಗುತ್ತಿದೆ. ಪರ್ವತಗಳೂ ಚಲಿಸುತ್ತಿವೆ. ಸಮುದ್ರಗಳೂ ಕ್ಷೋಭೆಗೊಂಡಿವೆ.

೭-೯. ದೇವತೆಗಳನ್ನೂ ಅಸುರರನ್ನೂ ಗಂಧರ್ವ ಯಕ್ಷಾದಿಗಳನ್ನೂ ಹೊಂದಿರುವ ಈ ಭೂಮಿಯು ಇವನಿಂದಲೇ ಧರಿಸಲ್ಪಟ್ಟಿದೆ. ನೀರು, ಅಗ್ನಿ, ವಾಯು, ಆಕಾಶ, ದೇವತೆಗಳು, ಮನುಷ್ಯರು, ಮಹಾಸುರರು ಇವರೆಲ್ಲರ ಧಾರಣವೂ ಇವನಿಗೇ ಸೇರಿದೆ. ಜಗತ್ಕರ್ತೃವಾದ ಇವನ ಈ ವಿಚಿತ್ರಶಕ್ತಿಯನ್ನು ತಪ್ಪಿಸಿಕೊಳ್ಳಲು ಯಾರಿಂದಲೂ ಸಾಧ್ಯವಿಲ್ಲ. ಇವನ ಈ ವಿಚಿತ್ರಶಕ್ತಿಯಿಂದ ಧರಿಸಲ್ಪಟ್ಟಿರುವ ಜಗತ್ತು ಇದಕ್ಕೆ ಅಧೀನವಾಗಿ ಬಂಧದಲ್ಲಿ ಸಿಕ್ಕಿ ನೆರಳುತ್ತಿದೆ. ದೇವತೆಗಳೆಲ್ಲರೂ ಈಗ ಇವನ ಸಾನ್ನಿಧ್ಯದಲ್ಲಿ ತಮ್ಮ ತಮ್ಮ ಭಾಗಗಳನ್ನು ಹೊಂದಲು ಸಿದ್ಧರಾಗಿದ್ದಾರೆ. ಆದುದರಿಂದಲೇ ಈ ಅಗ್ನಿತ್ರಯಗಳು ಅಸುರಭಾಗಗಳನ್ನು ಸ್ವೀಕರಿಸುತ್ತಿಲ್ಲ.

ಶುಕ್ರಸ್ಯ ವಚನಂ ಶ್ರುತ್ವಾ ಹೃಷ್ಟರೋಮಾ ಬ್ರವೀದ್ಬಲಿಃ ।
ಧನ್ಯೋಽಹಂ ಕೃತಪುಣ್ಯಶ್ಚ ಯತೋ ಯಜ್ಞಪತಿಃ ಸ್ವಯಂ ॥ ೧೦ ॥

ಯಜ್ಞಮಭ್ಯಾಗತೋ ಬ್ರಹ್ಮನ್ ಮತ್ತಃ ಕೋಽನ್ಯೋಽಧಿಕಃ ಪುಮಾನ್ ।
ಯಂ ಯೋಗಿನಃ ಸದೋದ್ಯುಕ್ತಾಃ ಪರಮಾತ್ಮಾನಮವ್ಯಯಂ ॥ ೧೧ ॥

ದ್ರಷ್ಟುಮಿಚ್ಛಂತಿ ದೇವೋಽಸೌ ಮಮಾಧ್ವರಮುಪೇಷ್ಯತಿ ।
ಯನ್ಮಯಾಚಾರ್ಯಕರ್ತವ್ಯಂ ತನ್ಮಮಾದೇಷ್ಟುಮರ್ಹಸಿ ॥ ೧೨ ॥

ಶುಕ್ರ ಉವಾಚ

ಯಜ್ಞಭಾಗಭುಜೋದೇವಾ ವೇದಪ್ರಾಮಾಣ್ಯತೋಽಸುರ ।
ತ್ವಯಾ ತು ದಾನವಾ ದೈತ್ಯ ಯಜ್ಞಭಾಗಭುಜಃ ಕೃತಾಃ ॥ ೧೩ ॥

---

೧೦-೧೨. ಶುಕ್ರಾಚಾರ್ಯರ ಈ ಮಾತನ್ನು ಕೇಳಿ ಸಂತೋಷದಿಂದ ರೋಮಾಂಚಿತನಾದ ಬಲಿಯು ಹೇಳುತ್ತಾನೆ. ಎಲೈ, ಬ್ರಾಹ್ಮಣೋತ್ತಮನೇ ನಾನೇ ಧನ್ಯನು. ನಾನೇ ಪುಣ್ಯಶಾಲಿ. ಯಜ್ಞಪತಿಯಾದ ಪ್ರಭುವು ತಾನಾಗಿಯೇ ನನ್ನ ಈ ಯಜ್ಞಕ್ಕೆ ಸ್ವರೂಪದಿಂದ ಬಂದದ್ದೇ ಆದರೆ ನನಗಿಂತಲೂ ಪುಣ್ಯಶಾಲಿಯಾದವರಾರಿರುವರು. ಯಾವ ಶಾಶ್ವತಸ್ವರೂಪನಾದ ಪರಮಾತ್ಮನನ್ನು ಯೋಗಿಗಳೂ ಸತತ ಯೋಗಾಭ್ಯಾಸದಿಂದ ಸಾಕ್ಷಾತ್ಕರಿಸಲಪೇಕ್ಷಿಸುತ್ತಾರೋ (ಅಪೇಕ್ಷಾಮಾತ್ರವೇ ಹೊರತು ಅವರೂ ಆ ಕಾರ್ಯದಲ್ಲಿ ಯಶಸ್ವಿಗಳಾಗಿಲ್ಲವೆಂದು ಭಾವ.) ಅಂತಹ ಸರ್ವೇಶ್ವರನು ನನ್ನ ಯಜ್ಞಕ್ಕೆ ಬರುತ್ತಾನೆ. (ಆದುದರಿಂದ ನಾನೇ ಸರ್ವಾಧಿಕ ಪುಣ್ಯಶಾಲಿ ಎಂದು ತಾತ್ಪರ್ಯ.) ಎಲೈ, ಆಚಾರ್ಯನೇ ನಾನು ಈ ಸಂದರ್ಭದಲ್ಲಿ ಯಾವ ಯಾವ ಕಾರ್ಯವನ್ನು ಕೈಗೊಳ್ಳಬೇಕೆಂಬುದನ್ನು ನೀನೇ ಆಜ್ಞಾಪಿಸು.

೧೩-೧೫. ಶುಕ್ರಾಚಾರ್ಯರು ಹೇಳುತಾರೆ. ಎಲೈ, ಧೊರೆಯೇ ಯಜ್ಞಭಾಗವನ್ನು ಭುಂಜಿಸುವವರು ದೇವತೆಗಳೇ ಎಂದು ವೇದಗಳ ಪ್ರಮಾಣವಚನದಿಂದ ನಿಶ್ಚಿತವಾಗಿದೆ. ನೀನಾದರೋ ದಾನವರನ್ನೇ ಯಜ್ಞಭಾಗಕ್ಕೆ ಭೋಗಿಗಳನ್ನಾಗಿ ಮಾಡಿದ್ದೀಯೆ. ಈ ಪ್ರಭುವು ಸತ್ವಗುಣಾಧಿಕ್ಯದಿಂದ ಜಗತ್ತಿನ ಸ್ಥಿತಿಯನ್ನು ಉಂಟು ಮಾಡುತ್ತಾನೆ. ಪ್ರಳಯಕಾಲದಲ್ಲಿ ಗುಣಾಂತರವನ್ನು ಪುರಸ್ಕರಿಸಿ ತಾನೇ ಜಗತ್ತನ್ನು

ಅಯಂ ಚ ದೇವಃ ಸತ್ವಸ್ಥಃ ಕರೋತಿ ಸ್ಥಿತಿಪಾಲನಂ ।
ವಿಸೃಷ್ಟಂ ಚ ತಥೈವಾಂತೇ ಸ್ವಯಮತ್ತಿ ಪ್ರಜಾಃ ಪ್ರಭುಃ ॥ ೧೪ ॥

ತ್ವಯಾ ತು ವಂಚಿತಾ ದೇವಾ ನೂನಂ ವಿಷ್ಣುಃ ಸ್ಥಿತೌ ಸ್ಥಿತಃ ।
ವಿದಿತ್ವೈತನ್ಮಹಾರಾಜ ಕುರು ಯತ್ತೇ ಮನೋಗತಂ ॥ ೧೫ ॥

ತ್ವಯಾ ಚ ದೈತ್ಯಾಧಿಪತೇ ಸ್ವಲ್ಪಕೇಽಪಿ ಹಿ ವಸ್ತುನಿ ।
ಪ್ರತಿಜ್ಞಾ ನೈವವೋಢವ್ಯಾ ವಾಚ್ಯಂ ಸಾಮ ತಥಾಫಲಂ ॥ ೧೬ ॥

ಕೃತಕೃತ್ಯಸ್ಯ ದೇವಸ್ಯ ದೇವಾರ್ಥಂ ಚಾಪಿ ಕುರ್ವತಃ ।
ನಾಲಂ ದಾತುಮಹಂ ದೇವ ತ್ವಯಾ ವಾಚ್ಯಂ ತು ಯಾಚತಃ ॥
ಕೃಷ್ಣಸ್ಯ ದೇವಭೂತ್ಯರ್ಥಂ ಪ್ರವೃತ್ತಸ್ಯ ಮಹಾಸುರ ॥ ೧೭ ॥

---

ಭಕ್ಷಿಸುತ್ತಾನೆ. (ಆದುದರಿಂದ ಸ್ಥಿತಿಕಾಲವಾದ ಈಗ ವೇದಪ್ರಾಮಾಣ್ಯಕ್ಕೆ ತಕ್ಕಂತೆ ಅವರವರ ವ್ಯಾಪಾರವನ್ನು ಸಮೀಕರಣ ಮಾಡುವದು ಇವನ ಕರ್ತವ್ಯವೆಂದು ತಾತ್ಪರ್ಯ.) ನೀನು ವೇದವಿರುದ್ಧವಾದ ವರ್ತನೆಯಿಂದ ದೇವತೆಗಳಿಗೆ ಮೋಸ ಮಾಡಿರುವೆ, ಇವನೇನೋ ಜಗತ್ತಿನ ಸ್ಥಿತಿಯನ್ನು ಸರಿಪಡಿಸಲು ಬಂದಿರುವ ವಿಷ್ಣುವೇ ಸರಿ. ಇದೆಲ್ಲವನ್ನೂ ಅರಿತು ಧೊರೆಯಾದ ನೀನು ನಿನ್ನ ಮನಸ್ಸಿಗೆ ಸೂಕ್ತವೆಂದು ತೋರುವ ಕೆಲಸವನ್ನು ನೆರವೇರಿಸಬಹುದು. (ವೇದವೆಂಬ ಈಶ್ವರಾಜ್ಞೆಯನ್ನು ಉಲ್ಲಂಘಿಸಿ ದೇವತೆಗಳಿಗೆ ನ್ಯಾಯದಿಂದ ಲಭಿಸಬಹುದಾದ ಯಜ್ಞಭಾಗವನ್ನು ನೀನು ತಪ್ಪಿಸಿರುವದ್ದರಿಂದ ಇದು ಅಪರಾಧವೇ ಸರಿ. ಈ ವಿಷಯದಲ್ಲಿ ಮುಂದಿನ ಪ್ರಯತ್ನ ವನ್ನು ಆಲೋಚಿಸಬೇಕೆಂದು ತಾತ್ಪರ್ಯ)

೧೬-೧೭. ಎಲೈ, ದೈತ್ಯರಾಜನೇ, ಈ ವಿಷಯದಲ್ಲಿ ನನಗೆ ತಿಳಿದ ಉಪಾಯ ವನ್ನು ಹೇಳುತ್ತೇನೆ ಕೇಳು, ಅತ್ಯಲ್ಪ ವಸ್ತುವಿನ ವಿಷಯದಲ್ಲಿಯೂ ನೀನು ಪ್ರತಿಜ್ಞೆ ಮಾಡಿ ಅದನ್ನು ನಿರ್ವಹಿಸುವ ಭಾರವನ್ನು ಹೊರಬೇಡ. ಪ್ರತಿಜ್ಞೆ ಇಲ್ಲದೆ ಕೇವಲ ಸಾಮೋಕ್ತಿಯಿಂದ ಆ ಬೇಡಿಕೆಯನ್ನು ಪರ್ಯವಸಾನಗೊಳಿಸು. ದೇವತೆಗಳಿಗೆ ಉಪಕಾರಮಾಡುವದಕ್ಕಾಗಿ ಯಾಚನಾವೃತ್ತಿಯನ್ನು ಅವಲಂಬಿಸಿ ಕೃತಕೃತ್ಯತೆಯನ್ನು ನಿರೀಕ್ಷಿಸುತ್ತಿರುವ ಆ ಹರಿಯು ಏನನ್ನು ಕೇಳಿದರೂ ಅದನ್ನು ಕೊಡಲು ನನಗೆ ಸಾಮರ್ಥ್ಯವಿಲ್ಲವೆಂದು ನೀನು ಸಾಮೋಕ್ತಿಯಿಂದ ಹೇಳು. ದೇವತೆಗಳ ಅಭ್ಯುದಯ ಕ್ಕಾಗಿಯೇ ಯಾಚನಾವೃತ್ತಿಯಿಂದ ಬಂದಿರುವ ಇವನು ಕೃಷ್ಣನೆಂದೇ ತಿಳಿ.

## ಬಲಿರುವಾಚ

ಬ್ರಹ್ಮರ್ಕ ಕಥಮಹಂ ಬ್ರೂಯಾಮನ್ಯೇನಾಪಿ ಚ ಯಾಚಿತಃ ।
ನಾಸ್ತೀತಿ ಕಿಮುದೇವೇಶಂ ಸಂಸಾರಾಘೌಘಹಾರಿಣಂ ॥ ೧೮ ॥

ವ್ರತೋಪವಾಸ್ಯೆ ರ್ವಿವಿಧೈಃ ಯಃ ಪ್ರಭುಃ ಗೃಹ್ಯತೇ ಹರಿಃ ।
ಸಚೇದ್ವಕ್ಷ್ಯತಿ ದೇಹೀತಿ ಗೋವಿಂದಃ ಕಿಮತೋಧಿಕಂ ॥ ೧೯ ॥

ಯತ್ಪ್ರೀತಿ ಕರಣಾಯೈವ ಪುಂಭಿಃ ಶೌಚಗುಣಾನ್ವಿತೈಃ ।
ಯಜ್ಞಾಃ ಕ್ರಿಯಂತೇ ದೇವಶ್ಚ ಸಮಾಂ ದೇಹೀತಿ ವಕ್ಷ್ಯತಿ ॥ ೨೦ ॥

ತತ್ಸಾಧು ಸುಕೃತಂ ಕರ್ಮ ತಪಃ ಸುಚರಿತಂ ಚ ನಃ ।
ಯನ್ಮಯಾ ದತ್ತ ಮೀಶಶ್ಚ ಸ್ವಯಮಾದಾಸ್ಯತೇ ಹರಿಃ ॥ ೨೧ ॥

ನಾಸ್ತೀತ್ಯಹಂ ಗುರೋ ವಕ್ಷ್ಯೇ ಕಥಮಾಗತಮೀಶ್ವರಂ ।
ಪ್ರಾಣತ್ಯಾಗಂ ಕರಿಷ್ಯಾಮಿ ನ ನಾಸ್ತೀತಿ ನ ಮೆ ಕ್ವಚಿತ್ ॥ ೨೨ ॥

---

೧೮-೨೦. ಎಲೈ, ಬ್ರಾಹ್ಮಣೋತ್ತಮರೇ, ಉದಾಸೀನರಾದ ಇತರರಿಂದ ಯಾಚಿಸಲ್ಪಟ್ಟರೂ ನಾಸ್ತಿ ಎಂದು ಹೇಳದಿರುವ ನಾನು ಸಂಸಾರನಾಶಕನಾದ ದೇವತಾ ಸಾರ್ವಭೌಮನಲ್ಲಿ ನಾಸ್ತಿ ಎಂದು ಹೇಗೆ ಹೇಳಲಿ. ನಾನಾ ವಿಧಗಳಾದ ವ್ರತ ಗಳಿಂದಲೂ ಉಪವಾಸಾದಿ ಕಾಯಕ್ಲೇಶಕರವಾದ ತಪಸ್ಸಿನಿಂದಲೂ ಯಾವ ಹರಿಯನ್ನು ತಿಳಿಯಲು ಯತ್ನಿಸುವರೋ ಅಂತಹ ಗೋವಿಂದನು ತಾನಾಗಿ ಬಂದು ದೇಹಿ ಎಂದು ಹೇಳಿದ್ದಾದರೆ, ನಾಸ್ತಿ ಎಂಬ ನಿಷೇಧಕ್ಕೆ ವಿಷಯವಾದ ಅವನಿಗಿಂತಲೂ ಅಧಿಕವಾದ ವಸ್ತುವು ಯಾವದಿದೆ. ಯಾವನ ಪ್ರೀತಿಗಾಗಿ ಪುರುಷರು ಶೌಚಾದಿಗಳಿಂದ ಪರಿಶುದ್ಧ ರಾಗಿ ಯಜ್ಞಾದಿಗಳನ್ನು ಮಾಡುತ್ತಾರೆಯೋ ಅಂತಹ ದೇವದೇವನೇ ದೇಹಿ ಎಂದು ನನ್ನನ್ನು ಯಾಚಿಸುವನು.

೨೧-೨೨. ಆದುದರಿಂದ ನಾನು ಕೊಟ್ಟುದುದನ್ನು ಹರಿಯು ತಾನಾಗಿಯೇ ಬಂದು ಸ್ವೀಕರಿಸುವುದಾದರೆ, ಅದೇ ನನ್ನ ಸುಕೃತದಫಲ, ಮತ್ತು ತಪಸ್ಸಿನಫಲ. ಎಲೈ, ಗುರುವೆ, ತಾನಾಗಿ ಬಂದು ಯಾಚಿಸುವ ಈಶ್ವರನಿಗೆ ನಾಸ್ತಿ ಎಂದು ಹೇಗೆ ಹೇಳಲಿ. ಪ್ರಾಣತ್ಯಾಗವನ್ನಾದರೂ ಮಾಡಿಕೊಳ್ಳುವೆನು, ನಾಸ್ತಿ ಎಂಬ ಶಬ್ದವನ್ನು ಎಲ್ಲಿಯೂ ಹೇಳಲಾರೆ. ಈ ಯಜ್ಞದಲ್ಲಿ ಯಜ್ಞಪತಿಯಾದ ಜನಾರ್ದನನೇ ಬಂದು ನನ್ನನ್ನು ಯಾಚಿಸಿದ್ದೇ ಆದರೆ ನನ್ನ ಇಷ್ಟವು ಸಂದೇಹಕ್ಕವಕಾಶವಿಲ್ಲದೆ ಸಿದ್ಧಿಸಿದಂತೆಯೇ

ತದೇತದ್ವಾಂಛಿತಂ ಪ್ರಾಪ್ತಂ ನೂನಂ ಚಾತ್ರ ನ ಸಂಶಯಃ ।
ಯಜ್ಞೇಶ್ಯೆ ಯದಿ ಯಜ್ಞೇಶೋ ಯಾಚತೇ ಮಾಂ ಜನಾರ್ದನಃ ॥ ೨೩ ॥

ನಿಜಮೂರ್ಧಾನಮುಪ್ಯಸ್ಯೈ ದಾಸ್ಯಾಮ್ಯೇವಾವಿಚಾರಿತಂ
ಸಮೇ ವಕ್ಷ್ಯತಿ ದೇಹೀತಿ ಗೋವಿಂದಃ ಕಿಮತೋಧಿಕಂ ॥ ೨೪ ॥

ನಾಸ್ತೀತಿ ಯನ್ಮಯಾ ನೋಕ್ತಮನ್ಯೇಷಾಮಪಿ ಯಾಚತಾಂ ।
ವಕ್ಷ್ಯಾಮಿ ಕಥಮಾಯಾತೇ ತಸ್ಮಿನ್ನಭ್ಯಾಗತೇಽಚ್ಯುತೇ. ॥ ೨೫ ॥

ಶ್ಲಾಘ್ಯ ಏವ ಹಿ ಧೀರಾಣಾಂ ದಾನಾಚ್ಚಾಪತ್ಸಮಾಗಮಃ ।
ನ ಬಾಧಾಕಾರಿ ಯದ್ದಾನಂ ತದಂಗ ಬಲವತ್ಸ್ಮೃತಂ ॥ ೨೬ ॥

ಮದ್ರಾಜ್ಯೇ ನಾಸುಖೀ ಕಶ್ಚಿನ್ನ ದರಿದ್ರೋ ನ ಚಾತುರಃ ।
ನಾಭೂಷಿತೋ ನಚೋದ್ವಿಗ್ನೋ ನ ಪ್ರಸಾದವಿವರ್ಜಿತಃ ॥ ೨೭ ॥

---

ಆಯಿತು. (ನಾನಾಗಿ ಯಾವನನ್ನು ಅಪೇಕ್ಷಿಸುತ್ತಿದ್ದೆನೋ, ಅವನು ತಾನಾಗಿಯೇ ಬಂದುದರಿಂದ ಮತ್ತು ನಾನೇ ಯಾವುದನ್ನು ಕೊಡಬೇಕಾಗಿದ್ದಿತೋ ಅದನ್ನು ಅವನೇ ಯಾಚನೆಮಾಡಿದ್ದರಿಂದಲೂ ಯಜ್ಞಕ್ಕೆ ಮುಖ್ಯಫಲವಾದ ಅವನ ಪ್ರೀತಿ ಲಭಿಸಲು ಸಂದೇಹವಿಲ್ಲವೆಂದು ತಾತ್ಪರ್ಯ.)

೨೪-೨೬. ಆ ಗೋವಿಂದನೇ ಬಂದು ದೇಹಿ ಎಂದು ನನ್ನನ್ನು ಯಾಚಿಸಿದಲ್ಲಿ ನನ್ನ ತಲೆಯನ್ನಾದರೂ ಅವನಿಗೆ ಒಪ್ಪಿಸುವೆನೆಂಬುದರಲ್ಲಿ ಸಂದೇಹವಿಲ್ಲ. ಇದಕ್ಕಿಂತಲೂ ಹೆಚ್ಚಾದದ್ದು ಮತ್ತೇನಿದೆ. ಇತರ ಯಾವ ಯಾಚಕರಿಗೂ ಇದುವರಿಗೆ ನಾಸ್ತಿ ಎಂದು ಹೇಳದಿರುವ ನಾನು ಅಚ್ಯುತನೇ ಅಭ್ಯಾಗತನಾಗಿ ಬಂದಲ್ಲಿ ಹೇಗೆ ತಾನೇ ಆ ಮಾತನ್ನು ಹೇಳಲಿ, ಯಾವ ವಿಧದಲ್ಲಿ ನೋಡಿದರೂ ದಾನವು ಬಲವರ್ಧಕವೇ ಹೊರತು ಬಾಧಕರವಲ್ಲ. ಇದರಿಂದ ವಿಪತ್ತು ಉಂಟಾದರೂ ಕೂಡ ಅದು ಧೀರರಿಗೆ ಶ್ಲಾಘ್ಯವೇ ಆಗಿರುತ್ತದೆ.

೨೭-೨೯. ಈ ನನ್ನ ರಾಜ್ಯದಲ್ಲಿ ಸುಖವಿಲ್ಲದವನು ಯಾವನೂ ಇಲ್ಲ. ಹಾಗೆಯೇ ದರಿದ್ರನೂ ವ್ಯಾಧಿಗ್ರಸ್ತನೂ, ಭೂಷಣಗಳಿಂದ ಅಲಂಕರಿಸಲ್ಪಡದವನೂ, ದುಃಖಿತನೂ ಅಪ್ರಸನ್ನನೂ ಯಾವನೂ ಇಲ್ಲ. ಎಲ್ಲಾ ಜನರೂ ಸಂತುಷ್ಟರಾಗಿಯೂ

ಹೃಷ್ಟಸ್ತುಷ್ಟಃ ಸುಗಂಧೀಚ ತೃಪ್ತಃ ಸರ್ವಗುಣಾನ್ವಿತಃ ।
ಜನಸ್ಸರ್ವೋ ಮಹಾಭಾಗ ಕಿಮುತಾಹಂ ಸದಾಸುಖೀ ॥ ೨೮ ॥

ಏತದ್ವಿಶಿಷ್ಟಮತ್ರಾಪ್ತಂ ದಾನಬೀಜಫಲಂ ಮಯಾ ।
ವಿದಿತಂ ಮುನಿಶಾರ್ದೂಲ ಯಥೈತತ್ತ್ವನ್ಮುಖಾಚ್ಛ್ರುತಂ ॥ ೨೯ ॥

ಏತದ್ಬೀಜವರಂ ದಾನಬೀಜಂ ಪತತಿ ಚೇದ್ಗುರೌ ।
ಜನಾರ್ದನೇ ಮಹಾಪಾತ್ರೇ ಕಿಂ ನ ಪ್ರಾಪ್ತಂ ತತೋಮಯಾ ॥ ೩೦ ॥

ವಿಶಿಷ್ಟಂ ಮಮ ತದ್ದಾನಂ ಪರಿತುಷ್ಟಾಶ್ಚ ದೇವತಾಃ ।
ಉಪಭೋಗಾಚ್ಛತಗುಣಂ ದಾನಂ ಸುಖಕರಂ ಸ್ಮೃತಂ ॥ ೩೧ ॥

ಮತ್ಪ್ರಸಾದಪರೋನೂನಂ ಯಜ್ಞೇನಾರಾಧಿತೋಹರಿಃ ।
ತೇನಾಭ್ಯೇತಿ ನ ಸಂದೇಹೋ ದರ್ಶನಾದುಪಕಾರಕೃತ್ ॥ ೩೨ ॥

---

ಧನಧಾನ್ಯಾದಿಗಳಿಂದ ಪುಷ್ಟರಾಗಿಯೂ, ಚಂದನಾದಿಗಳಿಂದ ಸುಗಂಧಿಗಳಾಗಿಯೂ ತೃಪ್ತರಾಗಿಯೂ, ಸರ್ವಸದ್ಗುಣಶಾಲಿಗಳಾಗಿಯೂ ಇರುವರು. ಹಾಗೆಯೇ ನಾನೂ ಸುಖಿಯಾಗಿರುವೆನು. ಇದೆಲ್ಲವೂ ನಾನು ಮಾಡಿದ ದಾನವೆಂಬ ಬೀಜವ ಉತ್ತಮ ಫಲವಲ್ಲವೇ, ಇಂತಹ ಲೋಕೋತ್ತರವಾದ ಫಲವನ್ನು ನಾನು ದಾನದಿಂದ ಹೊಂದಿದ್ದೇನೆ. ಎಲೈ, ಮುನಿಶ್ರೇಷ್ಠನೇ, ನೀನು ಹೇಳಿದ ಮಾತಿನ ತತ್ವವನ್ನು ನಾನು ತಿಳಿದುಕೊಂಡಿರುವೆನು. ಆದರೆ,

೩೦-೩೨. ಫಲಪ್ರದವಾದ ಈ ಉತ್ಕೃಷ್ಟ ದಾನಬೀಜವನ್ನು ಗುರುವಾಗಿಯೂ ಉತ್ತಮಪಾತ್ರವಾಗಿಯೂ ಇರುವ ಹರಿಯಲ್ಲಿ ನಾವು ಬಿತ್ತದೆ ವ್ಯರ್ಥಪಡಿಸಿದಲ್ಲಿ ಇದಕ್ಕಿಂತಲೂ ನಮಗೆ ಬೇರೆ ನಷ್ಟವಾವುದಿದೆ. ಆದುದರಿಂದ ಆ ಹರಿಗಾಗಿ ನಾನು ಮಾಡುವ ದಾನವು ಬಹಳ ಉತ್ತಮವಾದದ್ದು. ಇದರಿಂದ ದೇವತೆಗಳೂ ಸಂತುಷ್ಟರಾಗುತ್ತಾರೆ. ದಾನಮಾಡುವ ಯಾವ ಪದಾರ್ಥಕ್ಕೆ ಉಪಭೋಗವೇ ಫಲವೆಂದು ನಾವು ಭಾವಿಸಿದ್ದೇವೆಯೋ ಇದಕ್ಕಿಂತಲೂ ನೂರುಪಾಲು ಹೆಚ್ಚಾದ ಸುಖವು ಆ ಪದಾರ್ಥದ ದಾನದಿಂದ ಉಂಟಾಗುತ್ತದೆ. ಈ ಯಜ್ಞದಲ್ಲಿ ಯಾವ ಹರಿಯನ್ನು ನಾನು ಪರೋಕ್ಷದಲ್ಲಿ ಪೂಜಿಸುತ್ತಿರುವೆನೋ ಆ ಹರಿಯೇ ನನ್ನಲ್ಲಿ ಅನುಗ್ರಹದಿಂದ ಪ್ರತ್ಯಕ್ಷವಾಗಿ ನನಗೆ ದರ್ಶನಕೊಟ್ಟು ಉಪಕರಿಸಲು ಇಲ್ಲಿ ಬರುತ್ತಾನೆಂದು ನಾನು ತಿಳಿದಿದ್ದೇನೆ. ಈ ವಿಷಯದಲ್ಲಿ ಸಂದೇಹವಿಲ್ಲ.

**ಅಥ ಕೋಪೇನಚಾಭ್ಯೇತಿ ದೇವಭಾಗೋಪರೋಧಿನಂ ।**
**ಮಾಂ ನಿಹಂತುಂ ತತೋಹಿ ಸ್ಯಾದ್ವಧಃ ಶ್ಲಾಘ್ಯತಮೋಽಚ್ಯುತಾತ್ ॥ ೩೩ ॥**

**ಸಮಾಹಂತುಂ ಹೃಷೀಕೇಶಃ ಕಥಂ ವೈ ಸಮುಪೇಷ್ಯತಿ ॥ ೩೪ ॥**

**ಏತತ್ ಜ್ಞಾತ್ವಾ ಮುನಿಶ್ರೇಷ್ಠ ದಾನವಿಘ್ನಪರೇಣ ನ ।**
**ತ್ವಯಾ ಭಾವ್ಯಂ ಜಗನ್ನಾಥೇ ಗೋವಿಂದೇ ಸಮುಪಸ್ಥಿತೇ ॥ ೩೫ ॥**

**ಲೋಮಹರ್ಷಣ ಉವಾಚ**

**ಇತ್ಯೇವಂ ವದತಸ್ತಸ್ಯ ಯಜ್ಞವಾಟಮುಪಾಗತಃ ।**
**ಸಹೈವಾಮರವೃಂದೈಃ ಸ ಬೃಹಸ್ಪತಿಪುರಸ್ಸರೈಃ ॥ ೩೬ ॥**

**ಬಲಿಃ ಪುನರುವಾಚೇದಂ ಶುಕ್ರಂ ನಿಜಪುರೋಹಿತಂ ।**
**ಮಾಂ ಚ ಯಾಚಿತುಮಭ್ಯೇತಿ ಯತೋ ಗೇಹಾಗತೋ ಹರಿಃ ॥ ೩೭ ॥**

---

೩೩-೩೫ ಒಂದು ವೇಳೆ ದೇವತೆಗಳ ಯಜ್ಞಭಾಗಕ್ಕೆ ತೊಂದರೆಯುಂಟು ಮಾಡುತ್ತಿರುವ ನನ್ನ ಮೇಲೆ ಕೋಪದಿಂದ ನನ್ನನ್ನು ಕೊಲ್ಲಲು ಬಂದದ್ದೇ ಆದರೆ, ಅಂತಹ ಹರಿಯಿಂದ ನಾನು ವಧಹೊಂದುವದೂ ಕೂಡ ಶ್ಲಾಘ್ಯವೇ ಸರಿ! ಅದೂ ನನಗೆ ಇಷ್ಟವೆಂದು ತಾತ್ಪರ್ಯ. ಸರ್ವನಿಯಾಮಕನಾದ ಆ ಹೃಷೀಕೇಶನು ನನ್ನನ್ನು ಕೊಲ್ಲಲು ಹೇಗೆ ತಾನೆ ಬಂದಾನು. ಆದಕಾರಣ ಎಲೈ, ಮುನಿವರ್ಯರೇ, ಅಂತಹ ಜಗನ್ನಿಯಾಮಕನಾದ ಗೋವಿಂದನೇ ಬಂದ ಸಮಯದಲ್ಲಿ ಇದನ್ನೆಲ್ಲವನ್ನೂ ತಿಳಿದು ದಾನಕ್ಕೆ ವಿಘ್ನಮಾಡಲು ತಾವು ಮಧ್ಯೆ ಪ್ರವೇಶಿಸಬಾರದು.

೩೬-೩೮. ಲೋಮಹರ್ಷಣರು ಹೇಳುತ್ತಾರೆ: ಹೀಗೆ ಬಲಿಯು ಹೇಳುತ್ತಿರುವಾಗಲೇ ಬೃಹಸ್ಪತಿ ಪ್ರಮುಖರಾದ ಎಲ್ಲಾ ದೇವತೆಗಳೊಡನೆ ಹರಿಯು ಅದೇ ವಾಮನರೂಪದಲ್ಲಿ ಯಜ್ಞಶಾಲೆಗೆ ಬಂದನು. ಆಗ ಬಲಿಯು ತನ್ನ ಪುರೋಹಿತರಾದ ಶುಕ್ರಾಚಾರ್ಯರನ್ನು ಕುರಿತು ಎಲೈ ಆಚಾರ್ಯನೇ, ಸ್ವೇಚ್ಛೆಯಿಂದಲೇ ಎಲ್ಲ ಪ್ರಪಂಚದ ಸಾಕ್ಷಿರೂಪನಾಗಿಯೂ, ಸರ್ವದೇವಶರೀರಿಯಾಗಿಯೂ, ಊಹಿಸಲಶಕ್ಯನಾಗಿಯೂ ಇರುವ ಕಪಟ ವಾಮನಮೂರ್ತಿಯು ನನ್ನನ್ನೂ ಯಾಚಿಸಲು ಮನೆಗೆ ಬಂದಿದ್ದಾನೆ. (ಸಕಲ ಕಾಮ್ಯವನ್ನೂ ಹೊಂದಿರುವ ಹರಿಗೆ ಯಾಚಿಸಬೇಕಾದ್ದೇನಿದೆ. ಯಾಚ್ಯ ವಸ್ತುವಿನಿಂದ ಅವನಿಗೆ ಆಗಬೇಕಾದ ತೃಪ್ತಿಯು ತಾನೇ ಏನಿದೆ. ಎಲ್ಲರ ಯಾಚನೆ

**ಸ ಯಥಾತ್ಮೇಚ್ಛಯಾ ಸರ್ವಚೇತಸ್ಸಾಕ್ಷೀ ಜನಾರ್ದನಃ ।**
**ಸರ್ವದೇವಮಯೋಽಚಿಂತ್ಯೋ ಮಾಯಾವಾಮನರೂಪಧೃಕ್ ॥ ೩೮ ॥**

**ತಂ ದೃಷ್ಟ್ವಾ ಯಜ್ಞವಾಟಂ ತು ಪ್ರವಿಷ್ಟಮಸುರಾಃ ಪ್ರಭುಂ ।**
**ಜಗ್ಮುಃ ಪ್ರಭಾವತಃ ಕ್ಷೋಭಂ ತೇಜಸಾ ತಸ್ಯ ನಿಷ್ಪ್ರಭಾಃ ॥ ೩೯ ॥**

**ವೇಪುಶ್ಚ ಮುನಯಸ್ತತ್ರ ಯೇ ಸಮೇತಾ ಮಹಾಧ್ವರೇ ।**
**ವಸಿಷ್ಠೋ ಗಾಧಿಜೋಗರ್ಗಸ್ತಥಾನ್ಯೇ ಮುನಿಸತ್ತಮಾಃ ॥ ೪೦ ॥**

**ಬಲಿಶ್ಚೈವಾಖಿಲಂ ಜನ್ಮ ಮೇನೇ ಸಫಲಮಾತ್ಮನಃ ।**
**ತತಃ ಸಂಕ್ಷೋಭಮಾಪನ್ನೋ ನ ಕಶ್ಚಿತ್ಕಿಂಚಿದುಕ್ತವಾನ್ ॥ ೪೧ ॥**

**ಪ್ರತ್ಯೇಕಂ ದೇವದೇವೇಶಂ ಪೂಜಯಾಮಾಸ ತೇಜಸಾ ।**
**ಅಥಾಸುರಪತಿಂ ಪ್ರಹ್ವಂ ದೃಷ್ಟ್ವಾ ಮುನಿವರಾಂಶ್ಚತಾನ್ ॥ ೪೨ ॥**

---

ಯನ್ನೂ ಪೂರ್ತಿಗೊಳಿಸುವ ಆ ದೇವನು ನನ್ನನ್ನೇ ಯಾಚಿಸಲು ಬಂದಿರುವದು ಕಪಟದಿಂದಲೇ ಸರಿ. ನಾನು ಮನಸ್ಸಿನಲ್ಲಿ ಊಹಿಸಿದಂತೆಯೇ ಅವನು ಬಂದಿರುವದನ್ನು ನೋಡಿದರೆ ಎಲ್ಲರ ಮನೋಗತವನ್ನೂ ಸಾಕ್ಷಾತ್ಕರಿಸುವ ಸರ್ವಸಾಕ್ಷಿ ಎಂಬುದರಲ್ಲಿ ಸಂದೇಹವಿಲ್ಲವೆಂದು ಭಾವ)

೩೯-೪೦. ಆರೀತಿ ಯಜ್ಞಶಾಲೆಗೆ ಪ್ರಭುವು ಆಗಮಿಸಿದೊಡನೆಯೇ ಅಲ್ಲಿದ್ದ ರಾಕ್ಷಸರೆಲ್ಲರೂ ತಮ್ಮ ತಮ್ಮ ಪ್ರಭಾವವನ್ನು ಕಳೆದುಕೊಂಡರು. ಆ ಪರಮಾತ್ಮನ ತೇಜಸ್ಸಿನಿಂದ ನಿಸ್ತೇಜಸ್ಕರರಾಗಿ (ಕಳೆಗುಂದಿದವರಾಗಿ) ಪರಿಣಮಿಸಿದರು. ಆ ಮಹಾ ಯಜ್ಞದಲ್ಲಿ ಯಜ್ಞಕಾರ್ಯನಿರ್ವಾಹಕ್ಕಾಗಿ ಸೇರಿದ್ದ ವಸಿಷ್ಠ, ವಿಶ್ವಾಮಿತ್ರ, ಗರ್ಗ ಮೊದಲಾದ ಋಷಿಶ್ರೇಷ್ಠರೆಲ್ಲರೂ ಪರಮಾತ್ಮನ ತೇಜಸ್ಸನ್ನು ನೋಡಿ ನಡುಗಿದರು.

೪೧-೪೨. ಪರಮಾತ್ಮನ ಆಗಮನದಿಂದ ತನ್ನ ಸಕಲ ಜನ್ಮಗಳೂ ಸಫಲವಾದುವೆಂದು ಬಲಿಯು ಸಂತುಷ್ಟನಾದನು. ಕ್ಷೋಭದಿಂದ ತಳಮಳಗುಟ್ಟುತ್ತಿದ್ದ ಇತರ ಜನವು ಏನನ್ನೂ ಹೇಳಲು ಸಾಧ್ಯವಾಗದೆ ಸ್ತಬ್ಧವಾಗಿ ನಿಂತಿತು. ಆದರೆ ಬೇರೆ ಬೇರೆ ತಮ್ಮ ತಮ್ಮ ತೇಜಸ್ಸಿನಿಂದಲೇ ಪರಮಾತ್ಮನನ್ನು ಪೂಜಿಸಿತು. (ಅಂದರೆ ತಮ್ಮ ತೇಜಸ್ಸೆಲ್ಲವನ್ನೂ ಪರಮಾತ್ಮನಲ್ಲಿ ಅರ್ಪಿಸಿ ತೇಜೋಹೀನವಾಗಿ ನಿಂತಿತೆಂದು ತಾತ್ಪರ್ಯ) ಅನಂತರ ಭಕ್ತಿಯಿಂದ ತಲೆಬಾಗಿ ನಿಂತಿರುವ ಬಲಿಯನ್ನೂ ಹಾಗೆಯೇ

ದೇವದೇವಪತಿಃ ಸಾಕ್ಷಾದ್ವಿಷ್ಣುರ್ವಾಮನರೂಪಧೃಕ್ ।
ತುಷ್ಟಾವ ಯಜ್ಞಂ ವಹ್ನಿಂ ಚ ಯಜಮಾನಮಥರ್ತ್ವಿಜಃ ॥ ೪೩ ॥

ಯಜ್ಞಕರ್ಮಾಧಿಕಾರಸ್ಥಾನ್ಸದಸ್ಯಾಂದ್ರವ್ಯಸಂಪದಃ ।
ಸದಸ್ಯಾಃ ಪಾತ್ರಮಖಿಲಂ ವಾಮನಂ ಪ್ರತಿತತ್ಕ್ಷಣಾತ್ ॥
ಯಜ್ಞವಾಟಸ್ಥಿತಾ ವಿಪ್ರಾಃ ಸಾಧುಸಾಧ್ವಿತ್ಯುದೀರಯನ್ ॥ ೪೪ ॥

ಸ ಚಾರ್ಘ್ಯಮಾದಾಯ ಬಲಿಃ ಪ್ರೋದ್ಭೂತಪುಲಕಸ್ತಥಾ ।
ಪೂಜಯಾಮಾಸ ಗೋವಿಂದಂ ಪ್ರಾಹ ಚೇದಂ ಮಹಾಸುರಃ ॥ ೪೫ ॥

ಬಲಿರುವಾಚ

ಸುವರ್ಣರತ್ನಸಂಘಾತಾನ್ಗಜಾಂಶ್ಚ ಮಹಿಷಾಂ ಸ್ತಥಾ ।
ಸ್ತ್ರಿಯೋ ವಸ್ತ್ರಾಣ್ಯಲಂಕಾರಾನ್ಗಾವಃ ಕುಪ್ಯಂ ಚ ಪುಷ್ಕಲಂ ॥ ೪೬ ॥

ಸರ್ವಂ ಚ ಸಕಲಾಂ ಪೃಥ್ವೀಂ ಭವತೋ ವಾ ಯದೀಪ್ಸಿತಂ ।
ತದ್ದದಾಮಿ ಶೃಣು ಶ್ರೇಷ್ಠ ಮಮಾರ್ಥಾಃ ಸಂತಿತೇ ಪ್ರಿಯಾಃ ॥ ೪೭ ॥

---

ಭಕ್ತಿಪರವಶರಾದ ಋಷಿಗಳನ್ನೂ ನೋಡಿ ವಾಮನರೂಪಧಾರಿಯಾದ ಆ ಪರಮಾತ್ಮನು ಯಜ್ಞವನ್ನೂ ಅಲ್ಲಿರುವ ಪವಿತ್ರಗಳಾದ ಅಗ್ನಿಗಳನ್ನೂ, ಯಜಮಾನ ಮತ್ತು ಋತ್ವಿಕ್ಕುಗಳನ್ನೂ, ಅಲ್ಲಿ ನಿಯುಕ್ತರಾದ ಅಧಿಕಾರಿಪುರುಷರನ್ನೂ, ಸದಸ್ಯರನ್ನೂ, ಅಲ್ಲಿರುವ ದ್ರವ್ಯಸಂಪತ್ತನ್ನೂ ನೋಡಿ ಪ್ರಶಂಸಿಸಿ ಸ್ತೋತ್ರಮಾಡಿದನು. ಸದಸ್ಯ ರೆಲ್ಲರೂ ಯಜ್ಞಕರ್ಮಗಳಿಗೆ ಮುಖ್ಯೋದ್ದೇಶ್ಯನಾದ ಪರಮಾತ್ಮನನ್ನುದ್ದೇಶಿಸಿ ಸಾಧುಶಬ್ದದಿಂದ ಮಂಗಲಕರವಾದ ಜಯಘೋಷವನ್ನು ಮಾಡಿದರು.

೪೫-೪೮. ಆಗ ಬಲಿಯು ಪರಮಾತ್ಮನ ಆಗಮನದಿಂದ ಹರ್ಷಗೊಂಡು ರೋಮಾಂಚಿತನಾಗಿ ಅರ್ಘ್ಯವೇ ಮೊದಲಾದ ಪೂಜಾಸಾಮಗ್ರಿಗಳಿಂದ ಅವನನ್ನು ಪೂಜಿಸಿ ಸಂತುಷ್ಟನಾಗಿ ಹೀಗೆ ಹೇಳುತ್ತಾನೆ: ಎಲೈ ಪರಮಪುರುಷನೇ, ನನ್ನ ವಶ ದಲ್ಲಿರುವ ಚಿನ್ನ, ರತ್ನಗಳು, ಆನೆ, ಎಮ್ಮೆ, ಸ್ತ್ರೀಯರು, ವಸ್ತ್ರಗಳು, ಅಲಂಕಾರಗಳು, ಗೋವುಗಳು, ಚಿನ್ನಬೆಳ್ಳಿಯ ಪದಾರ್ಥಗಳು, ಸಕಲಪೃಥ್ವೀಮಂಡಲ ಇವುಗಳಲ್ಲಿ ನಿನಗೆ ಯಾವುದು ಪ್ರಿಯವೋ ಯಾವುದನ್ನು ಅಪೇಕ್ಷಿಸುವೆಯೋ ಅದನ್ನು ನಿನಗೆ ಅರ್ಪಣೆಮಾಡಲು ನಾನು ಸಿದ್ಧನಾಗಿರುತ್ತೇನೆ, ಅಪ್ಪಣೆಯಾಗಬೇಕು ಎಂಬ ಬಲಿಯ

ಇತ್ಯುಕ್ತೋ ದೈತ್ಯಪತಿನಾ ಪ್ರೀತಿಗರ್ಭಮಿದಂ ವಚಃ ।
ಪ್ರಾಹ ಸಸ್ಮಿತಗಂಭೀರಂ ಭಗವಾನ್ ವಾಮನಾಕೃತಿಃ ॥ ೪೮ ॥

ಮಮಾಗ್ನಿಶರಣಾರ್ಥಾಯ ದೇಹಿ ರಾಜನ್ ಪದತ್ರಯಂ ।
ಸುವರ್ಣಗ್ರಾಮರತ್ನಾದಿ ತದರ್ಥಿಭ್ಯಃ ಪ್ರದೀಯತಾಂ ॥ ೪೯ ॥

ಬಲಿರುವಾಚ

ತ್ರಿಭಿಃ ಪ್ರಯೋಜನಂ ಕಿಂ ತೇ ಪದೈಃ ಪದವತಾಂ ವರ ।
ಶತಂ ಶತಸಹಸ್ರಂ ವಾ ಪದಾನಾಂ ಮಾರ್ಗತಾಂ ಭವಾನ್ ॥ ೫೦ ॥

ಶ್ರೀ ವಾಮನ ಉವಾಚ

ಏತೈಃ ಪದೈಃ ದೈತ್ಯಪತೇ ಕೃತಕೃತ್ಯೋಽಸ್ಮಿ ಮಾರ್ಗಣೇ ।
ಅನ್ಯೇಷಾಮರ್ಥಿನಾಂ ವಿತ್ತಮಿಚ್ಛಯಾ ದಾಸ್ಯತೇ ಭವಾನ್ ॥ ೫೧ ॥

---

ಮಾತನ್ನು ಕೇಳಿ ಪರಮಾತ್ಮನು ಪ್ರೀತಿಯಿಂದ ಹಸನ್ಮುಖನಾಗಿ ಮಂದಹಾಸದೊಡನೆ ಗಂಭೀರವಾದ ಮಾತನ್ನು ಈರೀತಿ ಹೇಳುತ್ತಾನೆ.

೪೯-೫೦. ಎಲೈ ಧೊರೆಯೇ, ಅಗ್ನಿಗೃಹಕ್ಕಾಗಿ ನನಗೆ ಮೂರುಪಾದ ಪರಿಮಿತ ಪ್ರದೇಶವು ಬೇಕಾಗಿದೆ. ಅದನ್ನು ನನಗೆ ದಾನವಾಗಿ ಕೊಡು, ಸುವರ್ಣರಾಶಿ, ರತ್ನಾದಿಗಳು ಯಾವ ಯಾವ ಇತರ ಅರ್ಥಿಗಳಿಗೆ ಬೇಕಾಗಿದೆಯೋ ಅದನ್ನು ಅವರವರಿಗೆ ಕೊಡಬಹುದು. (ನನಗೆ ಅದು ಬೇಕಾಗಿಲ್ಲವೆಂದು ತಾತ್ಪರ್ಯ) ಇದಕ್ಕೆ ಬಲಿಯು ಎಲೈ, ಪ್ರಶಸ್ತಸ್ಥಾನ ಉಳ್ಳವರಲ್ಲಿ ಅಗ್ರಗಣ್ಯನಾದ ಪ್ರಭುವೇ, ಮೂರುಪದ ಪರಿಮಾಣದಿಂದ ನಿನಗೇನು ಪ್ರಯೋಜನವಾದೀತು. ನೂರು ಅಥವಾ ಅವರ ಸಹಸ್ರ (ಲಕ್ಷ) ಪರಿಮಾಣವುಳ್ಳ ಪ್ರದೇಶವನ್ನು ನೀನು ಅಪೇಕ್ಷಿಸಬೇಕು. (ಹಾಗಾದಲ್ಲಿ ಸ್ವಲ್ಪ ವಿಶಾಲವಾದ ಪ್ರದೇಶವು ಲಭಿಸಲು ಅವಕಾಶವಿದೆ ಎಂದು ತಾತ್ಪರ್ಯ) ಎಂದನು. ಈ ಮಾತನ್ನು ಕೇಳಿದ ವಾಮನಮೂರ್ತಿಯು ಉತ್ತರ ಹೇಳುತ್ತಾನೆ.

೫೧-೫೨. ಎಲೈ ದೈತ್ಯರಾಜನೇ, ಈ ಮೂರುಪದ ಪರಿಮಿತ ಪ್ರದೇಶವು ಯಾಚನೆಯಿಂದ ಲಭಿಸಿದಲ್ಲಿ ನಾನು ಅಷ್ಟರಲ್ಲೇ ಕೃತಕೃತ್ಯನಾಗುತ್ತೇನೆ. (ನನ್ನ ಇಷ್ಟವು ಅಷ್ಟರಲ್ಲೇ ಪೂರ್ತಿಯಾಗುತ್ತದೆಂದು ತಾತ್ಪರ್ಯ.) ಇತರ ಯಾಚಕರುಗಳಿಗೆ

ಏತಚ್ಛ್ರುತ್ವಾ ತು ಗದಿತಂ ವಾಮನಸ್ಯ ಮಹಾತ್ಮನಃ ।
ದದೌ ತಸ್ಮೈ ಮಹಾಬಾಹುಃ ವಾಮನಾಯ ಪದತ್ರಯಂ ॥ ೫೨ ॥

ಪಾಣೌ ತು ಪತಿತೇ ತೋಯೇ ವಾಮನೋಽಭೂದವಾಮನಃ ।
ಸರ್ವದೇವಮಯಂ ರೂಪಂ ದರ್ಶಯಾಮಾಸ ತತ್ಕ್ಷಣಾತ್ ॥ ೫೩ ॥

ಚಂದ್ರಸೂರ್ಯೌ ತು ನಯನೇ ದ್ಯೌಃ ಶಿರಃ ಚರಣೌ ಕ್ಷಿತಿಃ ।
ಪಾದಾಂಗುಲ್ಯಃ ಪಿಶಾಚಾಸ್ತು ಹಸ್ತಾಂಗುಲ್ಯಸ್ತು ಗುಹ್ಯಕಾಃ ॥ ೫೪ ॥

ವಿಶ್ವೇದೇವಾಶ್ಚ ಜಾನುಸ್ಥಾಃ ಜಂಘೇ ಸಾಧ್ಯಾ ಸ್ಸುರೋತ್ತಮಾಃ ।
ಯಜ್ಞಾಶ್ಚಾಂಗೇಷು ಸಂಭೂತಾ ಲೇಖಾಶ್ಚಾಪ್ಸರಸಸ್ತಥಾ ॥ ೫೫ ॥

ದೃಷ್ಟಿರ್ಋಕ್ಷಾಣ್ಯಶೇಷಾಣಿ ಕೇಶಾಃ ಸೂರ್ಯಾಂಶವಃ ಪ್ರಭೋಃ ।
ತಾರಕಾ ರೋಮಕೂಪಾಣಿ ರೋಮೇಷು ಚ ಮಹರ್ಷಯಃ ॥ ೫೬ ॥

---

ನಿನ್ನ ದಾನವು ಅವರವರ ಇಚ್ಛೆಗೆ ತಕ್ಕಂತೆ ನಡೆಯಲಿ ಎಂದನು. ವಾಮನಪ್ರಭುವಿನ ಈ ಮಾತನ್ನು ಕೇಳಿ ದೈತ್ಯರಾಜನಾದ ಬಲಿಯು ಅವನ ಇಚ್ಛೆಯಂತೆ ಮೂರುಪದ ಪರಿಮಿತ ಪ್ರದೇಶವನ್ನು ದಾನವಾಗಿ ಕೊಟ್ಟನು. ದಾನೋದಕವು ಕೈಯ್ಯಿನಲ್ಲಿ ಬಿದ್ದೊಡನೆಯೇ ಆ ವಾಮನಮೂರ್ತಿಯು ತನ್ನ ವಾಮನಾಕಾರವನ್ನು ಬಿಟ್ಟು ಆಕ್ಷಣದಲ್ಲಿಯೇ ಸರ್ವದೇವತಾಮಯವಾದ ತನ್ನ ಅದ್ಭುತಾಪರಿಮಿತ ದೇಹವನ್ನು ತೋರಿಸಿಕೊಂಡನು.

೫೪-೫೭. ಆ ಪರಮಾತ್ಮನ ವಿಶ್ವವ್ಯಾಪಿಯಾದ ಆ ದಿವ್ಯ ದೇಹವು ಚಂದ್ರ ಸೂರ್ಯರೆಂಬ ಕಣ್ಣುಗಳಿಂದಲೂ, ದ್ಯುಲೋಕವೆಂಬ ತಲೆಯಿಂದಲೂ, ಭೂಮಿಯೆಂಬ ಕಾಲುಗಳಿಂದಲೂ, ಪಾದದ ಬೆರಳುಗಳೆಂಬ ಪಿಶಾಚಗಳಿಂದಲೂ, ಕೈಬೆರಳುಗಳೆಂಬ ಮಧ್ಯಲೋಕದ ಗುಹ್ಯಕರಿಂದಲೂ, ತೊಡೆಯನ್ನು ಆಶ್ರಯಿಸಿರುವ ವಿಶ್ವೇದೇವತೆಗಳಿಂದಲೂ, ಸಾಧ್ಯರು ಮತ್ತು ದೇವತೆಗಳಿಗೆ ಆಶ್ರಯವಾಗಿರುವ ಮೊಣಕಾಲಿನಿಂದಲೂ, ಯಜ್ಞಗಳಿಗೆ ಆಶ್ರಯವಾಗಿರುವ ಕೆಲವು ಅವಯವಗಳಿಂದಲೂ, ದೇವತೆಗಳಿಗೂ ಅಪ್ಸರೆಯರಿಗೂ ಆಶ್ರಯವಾಗಿರುವ ಕೆಲವು ಅವಯವಗಳಿಂದಲೂ, ಇಪ್ಪತ್ತೇಳುನಕ್ಷತ್ರಗಳೆಂಬ ದೃಕ್ಛಕ್ತಿಯಿಂದಲೂ, ಸೂರ್ಯಕಿರಣಗಳೆಂಬ ಕೇಶಪಾಶಗಳಿಂದಲೂ, ಇತರ ತಾರಕೆಗಳೆಂಬ ರೋಮಕೂಪದಿಂದಲೂ, ಮಹರ್ಷಿಗಳೆಂಬ ರೋಮರಾಜಿಯಿಂದಲೂ, ವಿದಿಕ್ಕುಗಳೆಂಬ ತೋಳುಗಳಿಂದಲೂ, ದಿಕ್ಕುಗಳೆಂಬ ಕಿವಿಗಳಿಂದಲೂ, ಅಶ್ವಿನೀದೇವತೆಗಳೆಂಬ ಶ್ರವ

ಕಾಷ್ಠಪ್ರೋ ವಿದಿಶಸ್ತಸ್ಯ ದಿಶಃ ಶ್ರೋತ್ರೇ ಮಹಾತ್ಮನಃ ।
ಅಶ್ವಿನೌ ಶ್ರವಣೇ ತಸ್ಯ ನಾಸಾ ವಾಯುರ್ಮಹಾಬಲಃ ॥ ೫೭ ॥

ಪ್ರಸಾದೇ ಚಂದ್ರಮಾ ದೇವೋ ಮನೋಧರ್ಮಃ ಸಮಾಶ್ರಿತಃ ।
ಸತ್ಯಮಸ್ಯಾ ಭವದ್ವಾಣೀ ಜಿಹ್ವಾ ದೇವೀ ಸರಸ್ವತೀ ॥ ೫೮ ॥

ಗ್ರೀವಾ ದಿತಿರ್ದೇವಮಾತಾ ವಿದ್ಯಾಸ್ತದ್ವಲಯಸ್ತಥಾ ।
ಸ್ವರ್ಗದ್ವಾರಮಭೂನ್ಮೈತ್ರಂ ತ್ವಷ್ಟಾ ಪೂಷಾ ಚ ವೈಭ್ರುವೌ ॥ ೫೯ ॥

ಮುಖೇ ವೈಶ್ವಾನರಶ್ಚಾಸ್ಯ ವೃಷಣೌ ತು ಪ್ರಜಾಪತಿಃ ।
ಹೃದಯಂ ಚ ಪರಂ ಬ್ರಹ್ಮ ಪುಂಸ್ತ್ವಂ ವೈ ಕಶ್ಯಪೋಮುನಿಃ ॥ ೬೦ ॥

ಪೃಷ್ಠೇಸ್ಯ ವಸವೋ ದೇವಾ ಮರುತಃ ಸರ್ವಸಂಧಿಷು ।
ವಕ್ಷಸ್ಥಲೇ ತಥಾ ರುದ್ರಾ ಧೈರ್ಯಂ ಚಾಸ್ಯ ಮಹಾರ್ಣವಾಃ ॥ ೬೧ ॥

---

ಣೇಂದ್ರಿಯದಿಂದಲೂ, ವಾಯುವೆಂಬ ಮೂಗಿನಿಂದಲೂ ಕೂಡಿ ಅದ್ಭುತವಾಗಿ ಜ್ವಲಿಸಿತು. (ಇಲ್ಲಿರುವ ಅವಯ ಮತ್ತು ಇಂದ್ರಿಯಗಳು ಆಯಾಯ ಅಧಿಷ್ಠಾನ ದೇವತಾಪರಗಳೆಂದು ತಿಳಿಯಬೇಕು.)

೫೮-೬೧. ಮತ್ತು ಚಂದ್ರನು ಅನುಗ್ರಹಕ್ಕೆ ಸೂಚಕವಾದ ಮನೋಧರ್ಮವಾಗಿ ಈ ವಿಶ್ವರೂಪಿಯನ್ನು ಆಶ್ರಯಿಸಿದ್ದನು. ಸತ್ಯವೇ ವಾಕ್ಕಾಗಿಯೂ ಮತ್ತು ಸರಸ್ವತಿಯೇ ನಾಲಗೆಯಾಗಿಯೂ ಅದಿತಿದೇವಿಯೇ ಕಂಠವಾಗಿಯೂ ಉದರದವಲಿಗಳೇ ವಿದ್ಯಾರೂಪವಾಗಿಯೂ ಆ ದಿವ್ಯದೇಹವನ್ನು ಆಶ್ರಯಿಸಿದ್ದವು. ಮತ್ತು ಸೂರ್ಯಮಂಡಲದ ರಂಧ್ರವೆಂಬ ಸ್ವರ್ಗದ್ವಾರದಿಂದಲೂ ಮತ್ತು ತ್ವಷ್ಟಾಪೂಷಾ ಎಂಬ ಹುಬ್ಬುಗಳಿಂದಲೂ ಆ ದೇಹವು ಪ್ರಕಾಶಿಸುತ್ತಿತ್ತು. ಅದರ ಮುಖದಲ್ಲಿ ಅಗ್ನಿಯೂ ವೃಷಣದಲ್ಲಿ ಬ್ರಹ್ಮನೂ ಹೃದಯದಲ್ಲಿ ಪರಬ್ರಹ್ಮವೂ ಪುರುಷೇಂದ್ರಿಯದಲ್ಲಿ ಕಶ್ಯಪರೂ ಬೆನ್ನಿನಲ್ಲಿ ಅಷ್ಟವಸುಗಳೂ ದೇಹದ ಸಂಧಿಸ್ಥಾನಗಳಲ್ಲಿ ದೇವತೆಗಳೂ ಮರುತ್ತುಗಳೂ ವಕ್ಷಸ್ಥಲದಲ್ಲಿ ಏಕಾದಶರುದ್ರರೂ ಮತ್ತು ಮಹಾಸಮುದ್ರರೂಪದಿಂದ ಧೈರ್ಯವೂ ನೆಲಸಿದ್ದವು.

ಉದರೇ ಚಾಸ್ಯ ಗಂಧರ್ವಾಃ ಮರುತಶ್ಚ ಮಹಾಬಲಾಃ ।
ಲಕ್ಷ್ಮೀರ್ಮೇಧಾ ಧೃತಿಃ ಕಾಂತಿಃ ಸರ್ವವಿದ್ಯಾಶ್ಚ ವೈ ಕಟಿಃ ॥ ೬೨ ॥

ಸರ್ವಜ್ಯೋತಿರಸೌ ದೇವಸ್ತಪಶ್ಚ ಪರಮಂ ಮಹತ್ ।
ತಸ್ಯ ದೇವಾಧಿದೇವಸ್ಯ ತೇಜಃ ಪ್ರೋದ್ಭೂತಮುತ್ತಮಂ ॥ ೬೩ ॥

ತನೌ ಕುಕ್ಷಿಷು ವೇದಾಶ್ಚ ಜಾನುನೀ ಚ ಮಹಾಮಖಾಃ ।
ಇಷ್ಟಯಃ ಪಶುಬಂಧಾಶ್ಚ ದ್ವಿಜಾನಾಂ ಚೇಷ್ಟಿತಾನಿ ಚ ॥ ೬೪ ॥

ತಸ್ಯ ದೇವಮಯಂ ರೂಪಂ ದೃಷ್ಟ್ವಾ ವಿಷ್ಣೋರ್ಮಹಾಬಲಾಃ ।
ನೋಪಸರ್ಪಂತಿ ತೇ ದೈತ್ಯಾಃ ಪತಂಗಾ ಇವ ಪಾವಕಂ ॥ ೬೫ ॥

ಚಿಕ್ಷುರಸ್ತು ಮಹಾದೈತ್ಯಃ ಪಾದಾಂಗುಷ್ಠಂ ಗೃಹೀತವಾನ್ ।
ದಂತಾಭ್ಯಾಂ ತಸ್ಯ ವೈ ಗ್ರೀವಾಮಂಗುಷ್ಠೇನಾಹನದ್ಧರಿಃ ॥ ೬೬ ॥

---

೬೨-೬೫. ಆ ವಿರಾಡ್ರೂಪದ ಉದರಪ್ರದೇಶದಲ್ಲಿ ಬಲಶಾಲಿಗಳಾದ ಗಂಧರ್ವರೂ ಮರುತ್ತುಗಳೂ (ದೇವತಾವಿಶೇಷ) ಮತ್ತು ಕಟಿ (ಸೊಂಟ) ಪ್ರದೇಶದಲ್ಲಿ ಲಕ್ಷ್ಮಿಯೂ ಮೇಧಾ, ಧೃತಿ, ಕಾಂತಿ, ಸರ್ವವಿದ್ಯಾ ಇವುಗಳ ಅಭಿಮಾನ ದೇವತೆಗಳೂ ನೆಲಸಿದ್ದರು. ಈ ರೀತಿ ಸರ್ವತೇಜೋಮಯನಾಗಿಯೂ, ಮಹಾತಪಃಪ್ರಭಾವವುಳ್ಳವನಾಗಿಯೂ ಇರುವ ಆ ದೇವಾಧಿರಾಜನ ಅದ್ಭುತವಾದ ಉತ್ತಮ ತೇಜಸ್ಸು ಜ್ವಲಿಸಿತು. ಅವನ ಶರೀರದಲ್ಲಿ ಉದರವೆಲ್ಲವೂ ವೇದಮಯವಾಗಿಯೂ, ಮಂಡಿಗಳು ಮಹಾಯಜ್ಞರೂಪವಾಗಿಯೂ ಇಷ್ಟಿಗಳು, ಪಶುಬಂಧರೂಪವಾದ ಯಾಗವಿಶೇಷಗಳು, ಇತರ ವೇದೋಕ್ತವಾದ ಬ್ರಾಹ್ಮಣರ ಕರ್ಮಗಳು ಎಲ್ಲವೂ ಆ ಶರೀರದಲ್ಲಿ ತೋರಿದವು. ಇಂತಹ ಆ ಮಹಾವಿಷ್ಣುವಿನ ಸರ್ವದೇವತಾರೂಪಿಯಾದ ಅದ್ಭುತರೂಪವನ್ನು ನೋಡಿ ಪರಾಕ್ರಮಶಾಲಿಗಳಾದ ದೈತ್ಯರು ಅಗ್ನಿಯಿಂದ ಪತಂಗಗಳು ಭಯಪಡುವಂತೆ ಭಯಪಟ್ಟು ಸಮೀಪಕ್ಕೇ ಹೋಗಲಶಕ್ತರಾದರು.

೬೬-೬೯. ಆಗ ಚಿಕ್ಷುರನೆಂಬ ಮಹಾದೈತ್ಯನು ಆ ವಿರಾಟ್ಪುರುಷನ ಕಾಲಿನ ಅಂಗುಷ್ಠವನ್ನು ಹಿಡಿದೆಳೆದನು. ಹರಿಯೂ ಕೂಡ ತನ್ನ ಅಂಗುಷ್ಠದಿಂದಲೇ ಅವನ ತಲೆಯನ್ನು ಹಲ್ಲುಗಳೊಡನೆ ಮರ್ದಿಸಿ ಅವನನ್ನು ಹಾಗೆಯೇ ನಾಶಪಡಿಸಿದನು.

ಪ್ರಮಥ್ಯ ಸರ್ವಾನಸುರಾನ್ಪಾದಹಸ್ತತಲೈರ್ವಿಭುಃ ।
ಕೃತ್ವಾ ರೂಪಂ ಮಹಾಕಾಯಂ ಸಂಜಹಾರಾಶು ಮೇದಿನೀಂ ॥ ೬೭ ॥

ತಸ್ಯ ವಿಕ್ರಮತೋ ಭೂಮಿಂ ಚಂದ್ರಾದಿತ್ಯೌ ಸ್ತನಾಂತರೇ ।
ನಭೋ ವಿಕ್ರಮಮಾಣಸ್ಯ ಸಕ್ಥಿದೇಶೇ ಸ್ಥಿತಾವುಭೌ ॥ ೬೮ ॥

ಪರಂ ವಿಕ್ರಮಮಾಣಸ್ಯ ಜಾನುಮೂಲೇ ಪ್ರಭಾಕರೌ ।
ವಿಷ್ಣೋರಾಸ್ತಾಂ ಸ್ಥಿತಸ್ಯೈತೌ ದೇವಪಾಲನಕರ್ಮಣಿ ॥ ೬೯ ॥

ಜಿತ್ವಾ ಲೋಕತ್ರಯಂ ಕೃತ್ಸ್ನಂ ಹತ್ವಾ ಚಾ ಸುರಪುಂಗವಾನ್ ।
ಪುರಂದರಾಯ ತ್ರೈಲೋಕ್ಯಂ ದದೌ ವಿಷ್ಣುರುರುಕ್ರಮಃ ॥ ೭೦ ॥

ಸುತಲಂ ನಾಮ ಪಾತಾಲಮಧಸ್ತಾದ್ವಸುಧಾತಲಾತ್ ।
ಬಲೇರ್ದತ್ತಂ ಭಗವತಾ ವಿಷ್ಣುನಾ ಪ್ರಭುವಿಷ್ಣುನಾ ॥ ೭೧ ॥

ಅಥ ದೈತ್ಯೇಶ್ವರಂ ಪ್ರಾಹ ವಿಷ್ಣುಃ ಸರ್ವೇಶ್ವರೇಶ್ವರಃ ।
ಯತ್ತ್ವಯಾ ಸಲಿಲಂ ದತ್ತಂ ಗೃಹೀತಂ ಪಾಣಿನಾ ಮಯಾ ॥ ೭೨ ॥

---

ಹೀಗೆಯೇ ವಿರುದ್ಧರಾಗಿ ಬಂದ ಅಸುರರನ್ನೆಲ್ಲಾ ಪಾದ ಮತ್ತು ಹಸ್ತಾಘಾತಗಳಿಂದ ನಾಶಪಡಿಸಿ ತನ್ನ ಮಹಾರೂಪದಿಂದ ಭೂಮಿಯನ್ನೆಲ್ಲಾ ಆವರಿಸಿದನು. ದೇವತೆಗಳನ್ನು ರಕ್ಷಿಸುವ ಮಹಾಕಾರ್ಯದಲ್ಲಿ ತೊಡಗಿರುವ ಆ ಮಹಾವಿಷ್ಣುವು ಭೂಮಿಯನ್ನು ಅಳೆಯುವ ಕಾಲದಲ್ಲಿ ಚಂದ್ರಸೂರ್ಯರು ಅವನ ದೇಹದ ಸ್ತನಪ್ರದೇಶದಲ್ಲಿ ತೋರಿದರು. ಇನ್ನೂ ಮೇಲಿನ ಲೋಕವನ್ನು ಅಳೆಯುವ ಕಾಲದಲ್ಲಿ ತೊಡೆಯ ಸ್ಥಲದಲ್ಲಿ ತೋರಿದರು. ಇನ್ನೂ ಮೇಲಿನ ಲೋಕವನ್ನು ಅಳೆಯುವ ಕಾಲದಲ್ಲಿ ಅವನ ಮಂಡಿಯ ಕೆಳಭಾಗದಲ್ಲಿ ನಿಂತರು.

೭೦-೭೩. ಈ ಪ್ರಕಾರ ತ್ರಿವಿಕ್ರಮಾವತಾರದಿಂದ ಮೂರು ಲೋಕಗಳನ್ನೂ ಜಯಿಸಿ ವಿರುದ್ಧರಾದ ಅಸುರರನ್ನೆಲ್ಲಾ ನಾಶಪಡಿಸಿ ಜಯಿಸಿದ ಲೋಕತ್ರಯವನ್ನೂ ಇಂದ್ರನಿಗೆ ಕೊಟ್ಟನು. ಭೂಮಂಡಲದಿಂದ ಕೆಳಭಾಗದಲ್ಲಿರುವ ಸುತಲವೆಂಬ ಪಾತಾಲ ಲೋಕವನ್ನು ಬಲಿಚಕ್ರವರ್ತಿಗಾಗಿ ಪರಮಾತ್ಮನು ಅನುಗ್ರಹಿಸಿದನು. ಈ ರೀತಿ ಅವನಿಗೂ ಒಂದು ಸ್ಥಾನವನ್ನೇರ್ಪಡಿಸಿ ಆ ದೈತ್ಯೇಶ್ವರನನ್ನು ಕುರಿತು ಎಲೈ ದೈತ್ಯರಾಜನೇ, ನೀನು ದಾನೋದಕವನ್ನು ನನ್ನ ಕೈಯ್ಯಿನಲ್ಲಿ ಕೊಟ್ಟದ್ದರಿಂದಲೂ ನಾನು

ಕಲ್ಪಪ್ರಮಾಣಂ ತಸ್ಮಾತ್ತೇ ಭವಿಷ್ಯತ್ಯಾಯುರುತ್ತಮಂ ।
ವೈವಸ್ವತೇ ತಥಾತೀತೇ ಕಾಲೇ ಮನ್ವಂತರೇ ತಥಾ ॥ ೭೩ ॥

ಸಾವರ್ಣಿಕೇತು ಸಂಪ್ರಾಪ್ತೇ ಭವಾನಿಂದ್ರೋ ಭವಿಷ್ಯತಿ ।
ಇದಾನೀಂ ಭುವನಂ ದತ್ತಂ ಸರ್ವಂ ಶಕ್ರಾಯ ವೈ ತವ ॥ ೭೪ ॥

ಚತುರ್ಯುಗವ್ಯವಸ್ಥಾ ಚ ಸಾಧಿಕಾತ್ವೇಕಸಪ್ತತಿಃ ।
ನಿಯಂತವ್ಯಾ ಮಯಾ ಸರ್ವೇ ಯೇ ತಸ್ಯ ಪರಿಪಂಥಿನಃ ॥ ೭೫ ॥

ತೇನಾಹಂ ಪರಯಾ ಭಕ್ತ್ಯಾ ಪೂರ್ವಮಾರಾಧಿತೋ ಬಲೇ ।
ಸುತಲಂ ನಾಮ ಪಾತಾಲಂ ಸಮಾದಾಯ ವಚೋ ಮಮ ॥ ೭೬ ॥

ವಸಾಸುರ ಮಮಾದೇಶಂ ಯಥಾವತ್ಪರಿಪಾಲಯ್ಯ ।
ತತ್ರ ದೇವಾಸುರೋಪೇತೇ ಪ್ರಾಸಾದಶತಸಂಕುಲೇ ॥ ೭೭ ॥

---

ಅದನ್ನು ಸ್ವೀಕರಿಸಿದ್ದರಿಂದಲೂ ಈ ಮಹಾದಾನಕ್ಕೆ ಫಲವಾಗಿ ಪ್ರಲಯಪರ್ಯಂತವೂ ನೀನು ಉತ್ತಮವಾದ ಆಯುಸ್ಸನ್ನು ಹೊಂದಿರುವೆ. ವೈವಸ್ವತಮನ್ವಂತರವು ಕಳೆದು ಹೋದ ತರುವಾಯ

೭೪-೭೬. ಸಾವರ್ಣಿಕಮನ್ವಂತರವು ಬಂದ ತರುವಾಯ ನೀನೇ ಇಂದ್ರನಾಗಿ ಆಗುತ್ತೀಯೆ. ಈಗ ನಿನಗಿದ್ದ ರಾಜ್ಯವನ್ನು ಇಂದ್ರನಿಗೆ ಕೊಡಲಾಗಿದೆ. ಎಪ್ಪತ್ತೊಂದು ಚತುರ್ಯುಗಕಾಲ ಪರ್ಯಂತವೂ ಯುಗವ್ಯವಸ್ಥೆಗೆ ತಕ್ಕಂತೆ ಇಂದ್ರನಿಗೇ ರಾಜ್ಯಾಧಿ ಕಾರವನ್ನು ಕೊಡಬೇಕಾಗಿದೆ. ಇದೂ ಕೂಡ ಆ ಇಂದ್ರನು ಮೊದಲು ನನ್ನನ್ನು ಆರಾಧಿಸಿದುದರ ಫಲವಾಗಿರುವದ್ದರಿಂದ ಅನಿವಾರ್ಯವಾಗಿದೆ. ಆದಕಾರಣ ಹಿಂದೆ ಅವನಿಗೆ ಕೊಟ್ಟಿರುವ ರಾಜ್ಯಾಧಿಕಾರದ ಅವಧಿಯಲ್ಲಿ ಅವನ ವಿರೋಧಿಗಳನ್ನು ನಾಶ ಪಡಿಸುವುದು ನನ್ನ ಕರ್ತವ್ಯ. ಆದುದರಿಂದ ಈಗ ನಿನ್ನ ರಾಜ್ಯವನ್ನು ಇಂದ್ರನಿಗೆ ಕೊಡಬೇಕಾದುದು ನ್ಯಾಯಬದ್ಧವಾದುದು. ಈ ನನ್ನ ಮಾತಿನ ಪ್ರಕಾರ ನನ್ನ ಆಜ್ಞೆಯನ್ನು ಅನುಸರಿಸಿ ಸುತಲವೆಂಬ ಪಾತಾಲಲೋಕದಲ್ಲಿ ಸುಖದಿಂದ ವಾಸಿಸುತ್ತಿರು.

೭೭ ೭೯. ಅನೇಕ ದೇವಾಸುರರಿಂದ ಪೂರ್ಣವಾಗಿಯೂ, ಪ್ರಾಸಾದಪರಂಪರೆ ಯಿಂದ ನಿಬಿಡವಾಗಿಯೂ, ಅರಳಿರುವ ಕಮಲಗಳುಳ್ಳ ಸರೋವರಗಳಿಂದಲೂ, ಮರ

ಪ್ರೋತ್ಫುಲ್ಲಪಂಕಜಸರೋದ್ರುಮಶುದ್ಧಸರಿದ್ವರೇ ।
ಸುಗಂಧೀ ರೂಪಸಂಪನ್ನೋ ಹೇಮಾಭರಣಭೂಷಿತಃ ॥ ೭೮ ॥

ಸ್ರಕ್ಚಂದನಾದಿದಿಗ್ಧಾಂಗೋ ನೃತ್ಯಗೀತಮನೋಹರಃ ।
ಉಪಭುಂಕ್ಷ್ವ ಮಹಾಭೋಗಾನ್ವಿಪುಲಾರ್ದಾನವೇಶ್ವರ ॥ ೭೯ ॥

ಮಮಾಜ್ಞಯಾ ಬಲೇ ತತ್ರ ತಿಷ್ಠ ಸ್ತ್ರೀಶತಸಂವೃತಃ ।
ಯಾವತ್‌ಸುರೈಶ್ಚ ವಿಪ್ರೈಶ್ಚ ವಿರೋಧಂ ತ್ವಂ ಕರಿಷ್ಯಸಿ ॥ ೮೦ ॥

ತಾವತ್ತ್ವಂ ಭುಂಕ್ಷ್ವ ಸಂಭೋಗಾನ್ಸರ್ವಕಾಮಸಮನ್ವಿತಾನ್ ।
ಯದಾ ಸುರೈಶ್ಚ ವಿಪ್ರೈಶ್ಚ ವಿರೋಧಂ ತ್ವಂ ಕರಿಷ್ಯಸಿ
ಬಂಧಕೃಚ್ಚ ತದಾ ಪಾಶೋ ದಾರುಣೋ ಘೋರದರ್ಶನಃ ॥ ೮೧ ॥

ಬಲಿರುವಾಚ

ತತ್ರಾಶನಂ ಮೇ ಪಾತಾಲೇ ಭಗವನ್ ಭವದಾಜ್ಞಯಾ ।
ಕಿಂ ಭವಿಷ್ಯತ್ಯುಪಾದಾನ ಮುಪಭೋಗೋ ಪಪಾದಕಂ ॥
ಆಪ್ಯಾಯಿತೋಽತೋ ದೇವೇಶ ಸ್ಮರೇಯಂ ತ್ವಾಮಹಂ ಸದಾ ॥ ೮೨ ॥

---

ಗಳಿಂದಲೂ, ಪರಿಶುದ್ಧವಾದ ಮಹಾನದಿಗಳಿಂದಲೂ, ರಮ್ಯವಾಗಿರುವ ಆ ಪಾತಾಲ ಲೋಕದಲ್ಲಿ ನೀನು ಭೋಗಿಗಳ ಭೋಗಸಾಧನವಾದ ಸ್ರಕ್ಚಂದನಾದಿಗಳಿಂದಲೂ, ಸುವರ್ಣಾಭರಣಗಳಿಂದಲೂ ಅಲಂಕೃತನಾಗಿ ನೃತ್ಯಗೀತಾದಿಗಳಿಂದ ಸುಖಿಯಾಗಿ ಅನೇಕ ಭೋಗಗಳನ್ನು ಅನುಭವಿಸು.

೮೦-೮೧. ಎಲೈ ಬಲಿಯೇ, ಈ ನನ್ನ ಆಜ್ಞೆಯ ಪ್ರಕಾರ ನೀನು ದೇವತೆಗಳೊಡನೆಯೂ, ಬ್ರಾಹ್ಮಣರೊಡನೆಯೂ ವಿರೋಧಹೊಂದದೆ ಇದ್ದಲ್ಲಿ ಆ ಪಾತಾಲದಲ್ಲಿ ಅನೇಕ ಸ್ತ್ರೀಗಳೊಡನೆ ರಾಜಭೋಗದಿಂದ ಸುಖವಾಗಿರಬಹುದು. ಸರ್ವ ಪುರುಷಾರ್ಥಗಳನ್ನೂ ಅನುಭವಿಸಬಹುದು. ಹಾಗಿಲ್ಲದೆ ದೇವತೆಗಳೊಡನೆಯೂ, ಬ್ರಾಹ್ಮಣರೊಡನೆಯೂ ಕಲಹದಿಂದ ವಿರೋಧವನ್ನು ಹೊಂದಿದ್ದೇ ಆದರೆ ಅದೇ ನಿನಗೆ ದಾರುಣವಾದ ಬಂಧವಾಗಿ ಪರಿಣಮಿಸಿ ನಿನಗೇ ಪಾಶವಾದೀತು ಇದು ಜ್ಞಾಪಕವಿರಲಿ.

೮೨. ಬಲಿಯು ಕೇಳುತ್ತಾನೆ: ಎಲೈ ಪರಮಾತ್ಮನೇ, ನಾನು ಅಲ್ಲಿ ವಾಸಿಸುತ್ತ ನಿನ್ನನ್ನು ಸ್ಮರಿಸುತ್ತಿರಬೇಕಾದರೆ ನನಗೆ ಆಪ್ಯಾಯಕವಾದ ಉಪಭೋಗಸಾಧನವು ಅಲ್ಲೇನಿದೆ. ಯಾವ ಅಶನದಿಂದ ಬದುಕಿಕೊಂಡು ನಿನ್ನನ್ನು ಸ್ಮರಿಸಲಿ ಎಂದು ತಾತ್ಪರ್ಯ.

## ಶ್ರೀ ಭಗವಾನುವಾಚ

ದಾನಾನ್ಯವಿಧಿದತ್ತಾನಿ ಶ್ರಾದ್ಧಾನ್ಯಶ್ರೋತ್ರಿಯಾಣಿ ಚ ।
ಹುತಾನ್ಯಶ್ರದ್ಧಯಾ ಯಾನಿ ತಾನಿ ದಾಸ್ಯಂತಿ ತೇ ಫಲಂ ॥ ೮೩ ॥

ಅದಕ್ಷಿಣಾಸ್ತಥಾ ಯಜ್ಞಾಃ ಕ್ರಿಯಾಶ್ಚಾವಿಧಿನಾ ಕೃತಾಃ ।
ಫಲಾನಿ ತವ ದಾಸ್ಯಂತಿ ಅಧೀತಾನ್ಯವ್ರತಾನಿ ಚ ॥ ೮೪ ॥

ಉದಕೇನ ವಿನಾ ಪೂಜಾ ವಿನಾ ದರ್ಭೇಣ ಯಾಃ ಕ್ರಿಯಾಃ ।
ಆಜ್ಯೇನ ಚ ವಿನಾ ಹೋಮಃ ಫಲಂ ದಾಸ್ಯಂತಿ ತೇ ಬಲೇ ॥ ೮೫ ॥

ಯಶ್ಚೇದಂ ಸ್ಥಾನಮಾಶ್ರಿತ್ಯ ಕ್ರಿಯಾಃ ಕಾಶ್ಚಿತ್ಕರಿಷ್ಯತಿ ।
ನ ತತ್ರ ಚಾಸುರೋ ಭಾಗೋ ಭವಿಷ್ಯತಿ ಕದಾಚನ ॥ ೮೬ ॥

ಜ್ಯೇಷ್ಠಾಶ್ರಮಂ ಮಹಾಪುಣ್ಯಂ ತಥಾ ವಿಷ್ಣುಪದಂ ಹ್ರದಂ ।
ಯೇ ಚ ಶ್ರಾದ್ಧಾನಿ ಕುರ್ವಂತಿ ವ್ರತಂ ನಿಯಮಮೇವ ಚ ॥ ೮೭ ॥

---

೮೩-೮೫. ಭಗವಂತನು ಬಲಿಗೆ ಉತ್ತರಹೇಳುತ್ತಾನೆ: ವಿಧಿಯನ್ನು ಅತಿಕ್ರಮಿಸಿ ಯಾರು ದಾನಮಾಡುತ್ತಾರೆಯೋ, ಶ್ರೋತ್ರಿಯರನ್ನು ಬಿಟ್ಟು ಯಾರು ಶ್ರಾದ್ಧ ಮಾಡುತ್ತಾರೆಯೋ, ಶ್ರದ್ಧೆ ಇಲ್ಲದೆ ಯಾರು ಹೋಮಮಾಡುತ್ತಾರೆಯೋ ಅಂತಹ ಕರ್ಮಗಳ ಫಲವೆಲ್ಲವೂ ಆಸುರವಾದ್ದರಿಂದ ಆ ಫಲವು ನಿನ್ನನ್ನು ಸೇರುತ್ತದೆ. ಹಾಗೆಯೇ ದಕ್ಷಿಣೆಯಿಲ್ಲದ ಯಜ್ಞಗಳ ಮತ್ತು ವಿಧಿರಹಿತವಾದ ಕ್ರಿಯೆಗಳ ವ್ರತ ನಿಯಮವಿಲ್ಲದ ಅಧ್ಯಯನದ ಫಲವೂ ನಿನಗೇ ಸೇರುತ್ತದೆ. ಹಾಗೆಯೇ ಉದಕವಿಲ್ಲದೆ ಮಾಡಿದ ಪೂಜೆಯೂ, ದರ್ಭೆ ಇಲ್ಲದೆ ನಡೆಸಿದ ಕ್ರಿಯೆಗಳೂ, ತುಪ್ಪವಿಲ್ಲದೆ ಮಾಡಿದ ಹೋಮವೂ ನಿನಗೇ ಫಲದಾಯಕವಾಗುತ್ತದೆ. (ಇಂತಹ ಕರ್ಮಫಲಗಳೇ ನಿನ್ನ ಭೋಗಕ್ಕೆ ಸಾಧನವೆಂದು ತಾತ್ಪರ್ಯ.)

೮೬-೯೦. ಮತ್ತು ಯಾರು ಈ ಸ್ಥಾನವನ್ನು (ಬಲಿಗೆ ವರಪ್ರದಾನವಾದ ಸ್ಥಾನವನ್ನು) ಆಶ್ರಯಿಸಿ ಯಜ್ಞಯಾಗಾದಿ ಕ್ರಿಯೆಗಳನ್ನು ನಡೆಸುತ್ತಾರೆಯೋ ಅಂತಹ ಕ್ರಿಯೆಗಳಲ್ಲಿ ಆಸುರಭಾಗವಿರುವುದಿಲ್ಲ. ಮಹಾಪುಣ್ಯಕರವಾದ ಜ್ಯೇಷ್ಠಾಶ್ರಮವನ್ನೂ ವಿಷ್ಣುಪದಸರೋವರವನ್ನೂ ಹೊಂದಿ ಯಾರು ಶ್ರಾದ್ಧಗಳನ್ನು ಮಾಡು

**ಕ್ರಿಯಾ ಕೃತಾ ಚ ಯಾ ಕಾಚಿದ್ವಿಧಿನಾ ಚ ಮಹಾತ್ಮನಾ ।**
**ಸರ್ವಂ ತದಕ್ಷಯಂ ತಸ್ಯ ಭವಿಷ್ಯತಿ ನ ಸಂಶಯಃ ॥ ೮೮ ॥**

**ಜ್ಯೇಷ್ಠಮಾಸೇ ಸಿತೇ ಪಕ್ಷೇ ಏಕಾದಶ್ಯಾಮುಪೋಷಿತಃ ॥ ೮೯ ॥**

**ದ್ವಾದಶ್ಯಾಂ ವಾಮನಂ ದೃಷ್ಟ್ವಾ ಸ್ನಾತ್ವಾ ವಿಷ್ಣುಪದೇ ತಥಾ ।**
**ದತ್ವಾ ದಾನಂ ಯಥಾಶಕ್ತಿ ಪ್ರಾಪ್ನೋತಿ ಪರಮಂ ಪದಂ ॥ ೯೦ ॥**

**ಲೋಮಹರ್ಷಣ ಉವಾಚ**

**ಬಲಯೇಽಮುಂ ವರಂ ದತ್ವಾ ಶಕ್ರಾಯಾಪಿ ತ್ರಿವಿಷ್ಟಪಂ ।**
**ವ್ಯಾಪಿನಾ ತೇನ ರೂಪೇಣ ಜಗಾಮಾದರ್ಶನಂ ಹರಿಃ ॥ ೯೧ ॥**

**ಶಶಾಸ ಚ ಯಥಾಪೂರ್ವಮಿಂದ್ರಸ್ತ್ರೈಲೋಕ್ಯಪೂಜಿತಃ ।**
**ಅವಸಚ್ಚ ಯಥಾಸ್ಥಾನಂ ಬಲಿಃ ಪಾತಾಲಮಾಶ್ರಿತಃ ॥ ೯೨ ॥**

---

ತ್ತಾರೆಯೋ ವ್ರತನಿಯಮವನ್ನು ಆಚರಿಸುತ್ತಾರೆಯೋ ವಿಧಿಪೂರ್ವಕವಾದ ಯಾವ ಕ್ರಿಯೆಗಳನ್ನು ಮಾಡಿದರೂ ಅದು ಅವರವರಿಗೆ ಅಕ್ಷಯ್ಯಫಲವಾಗುವುದರಲ್ಲಿ ಸಂದೇಹವಿಲ್ಲ. ಜ್ಯೇಷ್ಠಮಾಸದ ಶುಕ್ಲಪಕ್ಷದ ಏಕಾದಶಿಯ ದಿನ ಉಪವಾಸಮಾಡಿ ದ್ವಾದಶಿಯಲ್ಲಿ ವಾಮನಮೂರ್ತಿಯನ್ನು ದರ್ಶನಮಾಡಿ ವಿಷ್ಣುಪದಸರೋವರದಲ್ಲಿ ಸ್ನಾನಮಾಡಿ ಅಲ್ಲಿ ಯಥಾಶಕ್ತಿ ದಾನಾದಿಗಳನ್ನು ನಡೆಸಿದಲ್ಲಿ ಅಂತಹವನಿಗೆ ಪರಮಪದವೇ ಉಂಟಾಗುತ್ತದೆ. (ಇದೆಲ್ಲವೂ ಆ ತೀರ್ಥದ ಮಾಹಾತ್ಮ್ಯಪ್ರಶಂಸೆ.)

೯೧-೯೩. ಲೋಮಹರ್ಷಣರು ಹೇಳುತ್ತಾರೆ:—ಈ ಪ್ರಕಾರ ಹರಿಯು ಬಲಿಗೆ ವರವನ್ನು ಕೊಟ್ಟು ಮೂರು ಲೋಕದ ಸಾಮ್ರಾಜ್ಯವನ್ನು ಇಂದ್ರನಿಗೂ ಕೊಟ್ಟು ಸರ್ವಲೋಕವ್ಯಾಪಿಯಾದ ಆ ತ್ರಿವಿಕ್ರಮಾವತಾರದೊಡನೇ ತಾನೂ ಅಂತರ್ಧಾನಹೊಂದಿದನು. ಇಂದ್ರನು ಮೊದಲಿನಂತೆಯೇ ತ್ರೈಲೋಕ್ಯವನ್ನು ಹೊಂದಿ ಪೂಜ್ಯನಾದನು. ಬಲಿಯೂ ಸಹ ನಿರ್ದಿಷ್ಟವಾದ ಪಾತಾಲಲೋಕವನ್ನು ಹೊಂದಿ ಸುಖಿಯಾದನು ಹೀಗೆ ಹೇಳಲ್ಪಟ್ಟಿರುವ ವಾಮನಾವತಾರಶಾಲಿಯಾದ ಮಹಾವಿಷ್ಣುವಿನ ಮಾಹಾತ್ಮ್ಯವನ್ನು ಯಾರು ಕೇಳುತ್ತಾರೆಯೋ ಅವರು ಭಗವದ್ಭಕ್ತಿಗೆ ವಿರೋಧಿಯಾದ ಸರ್ವಪಾಪಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾರೆ. (ಭಕ್ತಿ

ಇತ್ಯೇತತ್ ಕಥಿತಂ ತಸ್ಯ ವಿಷ್ಣೋಃ ಮಾಹಾತ್ಮ್ಯಮುತ್ತಮಂ ।
ಶೃಣುಯಾದ್ಯೋ ವಾಮನಸ್ಯ ಸರ್ವಪಾಪೈಃ ಪ್ರಮುಚ್ಯತೇ ॥೯೩॥

ಬಲಿಪ್ರಹ್ಲಾದಸಂವಾದಂ ಮಂತ್ರಿತಂ ಬಲಿಶುಕ್ರಯೋಃ ।
ಬಲೇರ್ವಿಷ್ಣೋಶ್ಚ ಕಥಿತಂ ಯೇ ಸ್ಮರಿಷ್ಯಂತಿ ಮಾನವಾಃ ॥೯೪॥

ನಾಧಯೋ ವ್ಯಾಧಯಸ್ತೇಷಾಂ ನ ಚ ಮೋಹಾಕುಲಂ ಮನಃ ।
ಭವಿಷ್ಯತಿ ದ್ವಿಜಶ್ರೇಷ್ಠಾಃ ಪಾಪಂ ತಸ್ಯ ಕದಾಚನ ॥೯೫॥

ಚ್ಯುತರಾಜ್ಯೋ ನಿಜಂ ರಾಜ್ಯಮಿಷ್ಟಪ್ರಾಪ್ತಿಂ ವಿಯೋಗವಾನ್ ।
ಸಮಾಪ್ನೋತಿ ಮಹಾಭಾಗ ನರಃ ಶ್ರುತ್ವಾ ಕಥಾಮಿಮಾಂ ॥೯೬॥

---

ವಿರೋಧಿಗಳಾದ ಎಲ್ಲಾ ಪಾಪಗಳನ್ನೂ ಹೋಗಲಾಡಿಸಿ ಭಕ್ತಿಯ ಉತ್ಪತ್ತಿ ಮತ್ತು ಅಭಿವೃದ್ಧಿಗೆ ಭಗವದವತಾರರಹಸ್ಯಜ್ಞಾನವು ಕಾರಣವಾಗುತ್ತದೆಂದು ಗೀತಾದಿಗಳಲ್ಲಿ ಪ್ರತಿಪಾದಿಸಲ್ಪಟ್ಟಿದೆ.)

೯೪-೯೭. ಬಲಿ ಮತ್ತು ಪ್ರಹ್ಲಾದ ಇವರ ಸಂವಾದವನ್ನೂ ಬಲಿ ಮತ್ತು ಶುಕ್ರಾಚಾರ್ಯ ಇವರ ಮಂತ್ರಾಲೋಚನೆಯನ್ನೂ ಬಲಿಯು ಮತ್ತು ವಿಷ್ಣುವಿನ ಪರಸ್ಪರ ಉಕ್ತಿಪ್ರತ್ಯುಕ್ತಿಗಳನ್ನೂ ಯಾರು ಅನುಸಂಧಾನಮಾಡುತ್ತಾರೆಯೋ ಸ್ಮರಿಸುತ್ತಾರೆಯೋ ಅವರಿಗೆ ಆಧಿವ್ಯಾಧಿಗಳೂ (ಆಧಿ ಎಂದರೆ ಮಾನಸಿಕವಾದ ವ್ಯಥೆ) ಮಾನಸಿಕವಾದ ಅಜ್ಞಾನ ಅಥವಾ ಭ್ರಾಂತಿ ಇವು ಎಂದಿಗೂ ಬರುವುದಿಲ್ಲ. ಪಾಪಸಂಘಟನೆಯೂ ಉಂಟಾಗುವುದಿಲ್ಲ. ಈ ಸ್ಮರಣೆಯಿಂದ ಮತ್ತು ಈ ಕಥೆಯನ್ನು ಕೇಳುವುದರಿಂದ ರಾಜ್ಯಭ್ರಷ್ಟನಾದವನು ಪುನಃ ತನ್ನ ರಾಜ್ಯವನ್ನೂ ವಿಯೋಗಿಯಾದವನು ಇಷ್ಟವಸ್ತುವನ್ನೂ ಹೊಂದುತ್ತಾನೆ. ಅಲೌಕಿಕ ಸರ್ವಪಾಪನಿವರ್ತಕವಾದ ಈ ವಾಮನಮಾಹಾತ್ಮ್ಯವನ್ನು ಕೇಳುವ ಬ್ರಾಹ್ಮಣನು ತನಗೆ ಇಷ್ಟವಾದ ವೇದವನ್ನು ಹೊಂದುತ್ತಾನೆ. ಹಾಗೆಯೇ ಕ್ಷತ್ರಿಯನು ಭೂಮಿಯನ್ನು ಜಯಿಸುತ್ತಾನೆ. ಮತ್ತು ವೈಶ್ಯನು ಧನ

**ಬ್ರಾಹ್ಮಣೋ ವೇದಮಾಪ್ನೋತಿ ಜಯತಿ ಕ್ಷತ್ರಿಯೋ ಮಹೀಂ ।**
**ವೈಶ್ಯೋ ಧನಸಮೃದ್ಧಿಂ ಚ ಶೂದ್ರಸ್ಸುಖಮವಾಪ್ನುಯಾತ್ ॥**
**ವಾಮನಸ್ಯ ಚ ಮಾಹಾತ್ಮ್ಯಂ ಶೃಣ್ವನ್ ಪಾಪೈಃ ಪ್ರಮುಚ್ಯತೇ ॥೯೭॥**

**ಇತಿ ಶ್ರೀ ವಾಮನಪುರಾಣೇ ಸರೋಮಹಾತ್ಮ್ಯೇ ವಾಮನಬಲಿ ಚರಿತಂ ನಾಮ ಏಕತ್ರಿಂಶೋಽಧ್ಯಾಯಃ**

---

ಸಮೃದ್ಧಿಯನ್ನು ಹೊಂದುತ್ತಾನೆ. ಶೂದ್ರನು ಸುಖಿಯಾಗುತ್ತಾನೆ (ಈ ಲೋಕದಲ್ಲಿ ಅನುಭವಿಸಬಹುದಾದ ದೃಷ್ಟಫಲಗಳನ್ನೂ ಹೊಂದುತ್ತಾರೆಂದು ತಾತ್ಪರ್ಯ. ಇದು ಫಲಪ್ರಶಂಸಾಭಾಗ).

ಇಲ್ಲಿಗೆ ಶ್ರೀ ವಾಮನಪುರಾಣದ ಸರೋಮಾಹಾತ್ಮ್ಯದಲ್ಲಿ ವಾಮನಚರಿತವೆಂಬ ಮೂವತ್ತೊಂದನೆಯ ಅಧ್ಯಾಯವು ಮುಗಿದಿದೆ.

## ಅಧ್ಯಾಯಾರ್ಥ ಸಂಗ್ರಹ

ಈ ಅಧ್ಯಾಯದಲ್ಲಿ ಭಗವಂತನು ಅದಿತಿಯ ಗರ್ಭದಲ್ಲಿ ಅವತರಿಸಿದ ಮಾತ್ರದಿಂದಲೇ ಉಂಟಾದ ಭೂಮಂಡಲದ ಕ್ಷೋಭವನ್ನು ನೋಡಿ ಬಲಿಚಕ್ರವರ್ತಿಯು ತನ್ನ ಆಚಾರ್ಯನಾದ ಶುಕ್ರನನ್ನು ಇದಕ್ಕೆ ಕಾರಣವೇನೆಂದು ಕೇಳಲಾಗಿ ಬುದ್ಧಿಶಾಲಿಯಾದ ಶುಕ್ರಾಚಾರ್ಯನು ಧ್ಯಾನದಿಂದ ವಿಚಾರವನ್ನು ತಿಳಿದು ವಾಮನನ ಅವತಾರವೇ ಇದಕ್ಕೆ ಕಾರಣವೆಂದೂ ಆ ವಾಮನನೇ ಮಹಾವಿಷ್ಣುವಿನ ಅಂಶವೆಂದೂ ಅವನು ಈ ಯಜ್ಞಶಾಲೆಗೂ ಬರಬಹುದೆಂದೂ ಹೇಳಿ, ಯಜ್ಞದಲ್ಲಿ ದೇವತೆಗಳಿಗಿರುವ ಭಾಗವನ್ನೆಲ್ಲಾ ನೀನು ತಪ್ಪಿಸಿರುವದ್ದರಿಂದ ಅಪರಾಧಿಯಾದ ನೀನು ಆತ್ಮಹಿತಕ್ಕೆ ತಕ್ಕಂತೆ ಆಲೋಚಿಸಿ ನಡೆದುಕೊಳ್ಳಬೇಕು ಎಂದು ಹೇಳಿದನೆಂದೂ, ಮತ್ತು ಈ ಸಂದರ್ಭದಲ್ಲಿ ಆ ವಾಮನನು ಯಾವುದನ್ನು ಅಪೇಕ್ಷಿಸಿದರೂ ನೀನು ಪ್ರತಿಜ್ಞೆಯಿಂದ ಅದನ್ನು ಕೊಡಲು ಒಪ್ಪಿಕೊಳ್ಳಕೂಡದು, ಮೃದುವಾದ ಮಾತಿನಿಂದ ನಿನಗೆ ಕೊಡಲು ನನ್ನಿಂದ ಸಾಧ್ಯವಿಲ್ಲವೆಂದು ತಪ್ಪಿಸಿಕೊಳ್ಳಬೇಕು. ಈ ವಾಮನನು ನಿನ್ನನ್ನು

ನಿಗ್ರಹಿಸಿ ದೇವತೆಗಳ ಅಭ್ಯುದಯದಲ್ಲಿ ಪ್ರಯತ್ನಿಸಿರುವನು ಎಂಬ ಶುಕ್ರಾಚಾರ್ಯರ ಉಪಾಯೋಕ್ತಿಯನ್ನು ಕೇಳಿ ಸಂತಾಪಗೊಂಡ ಬಲಿಯು ದಾನದ ಉತ್ಕರ್ಷವನ್ನು ಹೇಳಿ ಸಾಮಾನ್ಯ ಯಾಚಕರಲ್ಲೀ ನಾಸ್ತಿ ಎಂದು ಹೇಳದಿರುವ ನಾನು ಸರ್ವೇಶ್ವರನಲ್ಲಿ ಆ ಶಬ್ದವನ್ನು ಹೇಗೆ ಹೇಳಲಿ. ಯೋಗಿಗಳಿಂದಲೂ ಜ್ಞಾನಿಗಳಿಂದಲೂ ಕರ್ಮಠ ರಿಂದಲೂ ತಿಳಿಯಲಶಕ್ಯನಾದ ಆ ಸರ್ವೇಶ್ವರನು ದೇಹಿ ಎಂದು ಬಂದಿರುವದೇ ನನ್ನ ಪುಣ್ಯ. ಅವನನ್ನು ಸಾಕ್ಷಾತ್ಕರಿಸಿ ಅವನಿಗೆ ಬೇಕಾದ ವಸ್ತುವು ನನ್ನ ತಲೆಯಾದರೂ ಸರಿ ಕೊಡಲು ನಾನು ಸಿದ್ಧನಾಗಿದ್ದೇನೆಂದು ಹೇಳುವ ಸಮಯಕ್ಕೆ ಸರಿಯಾಗಿ ವಾಮನನೂ ಸಕಲ ದೇವತೆಗಳೊಡನೆ ಯಜ್ಞಭೂಮಿಗೆ ಬಂದನೆಂದೂ ಅನಂತರ ವಿನೀತನಾದ ಬಲಿಯು ಪೂಜಾದಿಗಳಿಂದ ವಾಮನನನ್ನು ಸತ್ಕರಿಸಿ ಸರ್ವಸ್ವವನ್ನೂ ಅವನಿಗೆ ಸಮರ್ಪಣೆ ಮಾಡಿ ನಿನಗೆ ಇಷ್ಟವಾದುದನ್ನು ಸ್ವೀಕರಿಸಬಹುದೆಂದು ಹೇಳಲಾಗಿ ಪರಮಾತ್ಮನು ಮೂರು ಪದಪ್ರಮಾಣದ ಪ್ರದೇಶವನ್ನು ಮಾತ್ರ ಯಾಚಿಸಿದುದರಿಂದ ಬಲಿಯು ದಾನೋದಕಪೂರ್ವಕವಾಗಿ ಅದನ್ನು ಪ್ರದಾನಮಾಡಿದನೆಂದೂ ಒಡನೆಯೇ ತ್ರಿವಿಕ್ರಮ ರೂಪದಿಂದ ಹರಿಯು ಮೂರು ಲೋಕಗಳನ್ನೂ ಆಕ್ರಮಿಸಲಾಗಿ ದೈತ್ಯರೆಲ್ಲರೂ ಭಯಭ್ರಾಂತರಾಗಿ ದೂರ ಸರಿದರು. ಕೆಲವರು ವಿರೋಧಿಗಳಾಗಿ ಹರಿಯಿಂದ ನಾಶಹೊಂದಿದರು. ಅನಂತರ ಹರಿಯು ವಿನೀತನಾದ ಬಲಿಯನ್ನು ಕುರಿತು ಹಿಂದೆ ಮಾಡಿರುವ ನನ್ನ ಆಜ್ಞೆಯಂತೆ ಈ ಮನ್ವಂತರ ಪೂರ್ತಿಯಾಗಿ ಲೋಕತ್ರಯವೂ ಇಂದ್ರನಿಗೆ ಸೇರತಕ್ಕದ್ದಾಗಿದೆ. ನೀನು ಸುತಲವೆಂಬ ಪಾತಾಲಲೋಕದಲ್ಲಿ ಸುಖವಾಗಿ ವಾಸಮಾಡಿಕೊಂಡಿದ್ದು ನನ್ನ ಆಜ್ಞೆಯಿಂದ ಮುಂದಿನ ಮನ್ವಂತರದಲ್ಲಿ ಇಂದ್ರ ನಾಗುವೆ. ನಿನ್ನ ಈ ರಾಜ್ಯವನ್ನು ಇಂದ್ರನಿಗೆ ಕೊಡಲಾಗಿದೆ. ನಿನ್ನ ಈ ಭಕ್ತಿಯಿಂದ ನಾನು ಸಂತೋಷಗೊಂಡಿದ್ದೇನೆ. ನನ್ನ ಆಜ್ಞೆಯ ಪ್ರಕಾರ ನಡೆದುಕೋ ಎಂದು ಹೇಳಿ ಆ ಬಲಿಯ ಕೋರಿಕೆಯಂತೆ ಪಾತಾಲಲೋಕದಲ್ಲಿಯೂ ಅವನ ಉಪಭೋಗ ಸಾಧನವನ್ನೂ ಅನುಗ್ರಹಿಸಿ ಅಂತರ್ಧಾನಹೊಂದಿದನೆಂದೂ ಪ್ರತಿಪಾದಿಸಲಾಯಿತು. ಅನಂತರ ಕಥಾಶ್ರವಣಫಲದೊಡನೆ ವಿಷ್ಣುಪದವೆಂಬ ಆ ಸರೋವರದ ಮಾಹಾತ್ಮ್ಯ ವನ್ನೂ ಹೇಳಿ ಉಪಸಂಹರಿಸಲಾಯಿತು ಇದರಲ್ಲಿ ಬಲಿಯ ಅಪರಿಮಿತವಾದ ವಿಷ್ಣು ಭಕ್ತಿಯೂ ಔದಾರ್ಯವೂ ಚನ್ನಾಗಿ ಪ್ರತಿಪಾದಿಸಲ್ಪಟ್ಟಿದೆ.

---

॥ ಶ್ರೀಃ ॥

# ಶ್ರೀವಾಮನಪುರಾಣಂ

## ದ್ವಾತ್ರಿಂಶೋಽಧ್ಯಾಯಃ

**ಋಷಯ ಊಚುಃ**

**ಕಥಮೇಷಾ ಸಮುತ್ಪನ್ನಾ ನದೀನಾಮುತ್ತಮಾ ನದೀ ।**
**ಸರಸ್ವತೀ ಮಹಾಭಾಗಾ ಕುರುಕ್ಷೇತ್ರಾನುಯಾಯಿನೀ ॥ ೧ ॥**

**ಕಥಂ ಚ ಸರಆಸಾದ್ಯ ಕೃತ್ವಾ ತೀರ್ಥಾನಿ ಪಾರ್ಶ್ವತಃ ।**
**ಪ್ರಯಾತಾ ಪಶ್ಚಿಮಾಮಾಶಾಂ ದೃಶ್ಯಾದೃಶ್ಯಗತಿಃ ಶುಭಾ ॥ ೨ ॥**

---

## ಮೂವತ್ತೆರಡನೆಯ ಅಧ್ಯಾಯವು

೧-೨. (ಇಲ್ಲಿಯವರೆಗೆ ವಿಷ್ಣುಪದ ಸರೋವರದ ಮಾಹಾತ್ಮ್ಯವನ್ನು ಹೇಳಿದ್ದಾಯಿತು. ಉಪಕ್ರಮದ ಪ್ರಶ್ನೆಗೆ ಅನುಗುಣವಾಗಿ ತೀರ್ಥಗಳ ಮಾಹಾತ್ಮ್ಯವನ್ನು ಪ್ರಾರಂಭಿಸುವ ಪ್ರಸಂಗದಲ್ಲಿ ಕುರುಕ್ಷೇತ್ರದಲ್ಲಿರುವ ಸರಸ್ವತೀನದಿಯ ವಿಚಾರವನ್ನು ತಿಳಿಸಲು ಈ ಅಧ್ಯಾಯವು ಪ್ರಾರಂಭಿಸಲ್ಪಟ್ಟಿದೆ.) ಋಷಿಗಳು ಲೋಮಹರ್ಷಣರನ್ನು ಪುನಃ ಪ್ರಶ್ನೆಮಾಡುತ್ತಾರೆ. ಎಲೈ, ಬ್ರಹ್ಮವಿದಗ್ರೇಸರನೇ ಕುರುಕ್ಷೇತ್ರದಲ್ಲಿ ಹರಿದು ಬರುತ್ತಿರುವ ನದಿಗಳಲ್ಲೆಲ್ಲಾ ಅತ್ಯುತ್ತಮವಾದ ಸರಸ್ವತೀನದಿಯು ಹೇಗೆ ಉದ್ಭವಿಸಿತು. ಮತ್ತು ಈ ನದಿಯು ಪೃಥೂದಕ ಸರೋವರವನ್ನು ಹೊಂದಿ ತನ್ನ ಎರಡು ಪಾರ್ಶ್ವಗಳಲ್ಲೂ ಉತ್ತಮವಾದ ತೀರ್ಥಗಳನ್ನು ಉಂಟುಮಾಡಿ ಮುಂದೆ ದೃಶ್ಯಾದೃಶ್ಯ ಗತಿಯಿಂದ ಪಶ್ಚಿಮದಿಕ್ಕಿಗೆ ಹೇಗೆ ಪ್ರವಹಿಸಿತು. ಈ ತೀರ್ಥದ ವಿಷಯವನ್ನು ದಯವಿಟ್ಟು ವಿಸ್ತಾರವಾಗಿ ಹೇಳಬೇಕು.

ಏತದ್ವಿಸ್ತರತೋ ಬ್ರೂಹಿ ತೀರ್ಥಂ ಬ್ರಹ್ಮವಿದಾಂ ವರ

ಲೋಮಹರ್ಷಣ ಉವಾಚ

ಪ್ಲಕ್ಷವೃಕ್ಷಾತ್ಸಮುದ್ಭೂತಾ ಸರಿಚ್ಛ್ರೇಷ್ಠಾ ಸನಾತನೀ ।
ಸರ್ವಪಾಪಕ್ಷಯಕರೀ ಸ್ಮರಣಾದಪಿ ನಿತ್ಯಶಃ ॥ ೩ ॥

ಸೈಷಾ ಶೈಲಸಹಸ್ರಾಣಿ ವಿದಾರ್ಯ ಚ ಮಹಾನದೀ ।
ಪ್ರವಿಷ್ಟಾ ಪುಣ್ಯತೋಯೈಷಾ ವನಂ ದ್ವೈತಮಿತಿ ಶ್ರುತಂ ॥ ೪ ॥

ತಸ್ಮಿನ್ ಪ್ಲಕ್ಷೇ ಸ್ಥಿತಾಂ ದೃಷ್ಟ್ವಾ ಮಾರ್ಕಂಡೇಯೋ ಮಹಾಮುನಿಃ ।
ಪ್ರಣಿಪತ್ಯ ತದಾ ಮೂರ್ಧ್ನಾ ತುಷ್ಟಾವಾಥ ಸರಸ್ವತೀಂ ॥ ೫ ॥

ತ್ವಂ ದೇವಿ ಸರ್ವಭೂತಾನಾಂ ಮಾತಾ ವೇದಾರಣಿಃ ಶುಭಾ ।
ಸದಸದ್ದೇವಿ ಯತ್ಕಿಂಚಿನ್ಮೋಕ್ಷಬೋಧಾಯ ಯತ್ಪದಂ ॥ ೬ ॥

---

೩-೫. ಲೋಮಹರ್ಷಣರು ಹೇಳುತ್ತಾರೆ: ಪ್ಲಕ್ಷವೃಕ್ಷ (ಆಲದಮರ) ದಿಂದ ಉದ್ಭವಿಸಿದ ಈ ಮಹಾನದಿಯು ಸ್ಮರಣಮಾತ್ರದಿಂದಲೂ ಸರ್ವಪಾಪನಾಶಕವಾಗಿ ಅನೇಕ ಪರ್ವತಗಳನ್ನೂ ಕೊರೆದುಕೊಂಡು ಪುಣ್ಯಕರವಾದ ತನ್ನ ಪ್ರವಾಹದಿಂದ ದ್ವೈತವೆಂದು ಪ್ರಸಿದ್ಧವಾದ ಮಹಾವನವನ್ನು ಪ್ರವೇಶಿಸಿತು. ಈ ಮಹಾನದಿಯು ಪ್ಲಕ್ಷವೃಕ್ಷದಲ್ಲಿ ಉದ್ಭವಿಸುವಾಗ ಮಾರ್ಕಂಡೇಯನೆಂಬ ಮಹಾಮುನಿಯು ಇದನ್ನು ನೋಡಿ ಸರಸ್ವತಿಯ ಅಪರಾವತಾರವೆಂದು ಭಾವಿಸಿ ಸಾಷ್ಟಾಂಗ ಪ್ರಣಾಮಮಾಡಿ ಈ ಮಹಾನದಿಯನ್ನು ಸ್ತೋತ್ರಮಾಡಿದನು.

೬-೮. ಎಲೈ, ದೇವಿಯೇ, ನೀನು ಸರ್ವಪ್ರಾಣಿಗಳಿಗೂ ತಾಯಿಯಾಗಿದ್ದೀಯೆ. ವೇದಗಳಿಗೂ ಉತ್ಪತ್ತಿಸ್ಥಾನವಾದ ಅರಣಿಯಾಗಿ ಶುಭಕರಳಾಗಿದ್ದೀಯೆ,(ಅರಣಿ ಎಂದರೆ ಯಜ್ಞದಲ್ಲಿ ಅಗ್ನಿಯನ್ನು ಕಡೆದು, ತೆಗೆಯಲು ಉಪಯೋಗಿಸುವ ಕಗ್ಗಲಿಮರದ ತುಂಡು) (ಸರ್ವಪ್ರಾಣಿಗಳ ಹಿತಾಹಿತ ಸಾಧಕವಾದ ವ್ಯವಹಾರಗಳು ವಾಕ್ಪೂರ್ವಕ ವಾದುದರಿಂದ ಅಂತಹ ವಾಕ್ಕಿಗೆ ಸರಸ್ವತಿಯೇ ಅಧಿದೇವತೆಯಾಗಿರುವದ್ದರಿಂದ ಆ ಸರಸ್ವತಿಯೇ ತಾಯಿಯಂತೆ ಸರ್ವಪ್ರಾಣಿಪೋಷಕಳೆಂದು ತಾತ್ಪರ್ಯ. ಪುರು

**ಯಥಾ ಜಲಂ ಸಾಗರೇ ಹಿ ತಥಾ ತತ್ತ್ವಯಿ ಸಂಸ್ಥಿತಂ।**
**ಅಕ್ಷರಂ ಪರಮಂ ಬ್ರಹ್ಮ ವಿಶ್ವಂ ಚೈತತ್ಕ್ಷರಾತ್ಮಕಂ. ॥ ೭ ॥**

**ದಾರುಣ್ಯವಸ್ಥಿತೋ ವಹ್ನಿರ್ಭೂಮೌ ಗಂಧೋಯಥಾ ಧ್ರುವಂ।**
**ತಥಾ ತ್ವಯಿ ಸ್ಥಿತಂ ಬ್ರಹ್ಮ ಜಗಚ್ಚೈತದಶೇಷತಃ ॥ ೮॥**

**ಓಂಕಾರಾಕ್ಷರಸಂಸ್ಥಾನಂ ಯತ್ರ ದೇವಿ ಸ್ಥಿರಾಸ್ಥಿರಂ।**
**ತತ್ರ ಮಾತ್ರಾತ್ರಯಂ ಸರ್ವಮಸ್ತಿ ಯದ್ದೇವಿ ನಾಸ್ತಿ ಚ ॥ ೯ ॥**

---

ಷಾರ್ಥಸಾಧಕವಾದ ವೇದಗಳೆಲ್ಲವೂ ವಾಙ್ಮಯವಾಗಿರುವದ್ದರಿಂದ ಯಜ್ಞಾಗ್ನಿಗೆ ಅರಣಿಯಂತೆ ಈ ದೇವಿಯೂ ವೇದಗಳಿಗೆ ಉತ್ಪತ್ತಿಸ್ಥಾನಳೆಂದೂ ತಾತ್ಪರ್ಯ.) ಮತ್ತು ಸದಸತ್ಪದಾರ್ಥಗಳಿಗೂ ಮೋಕ್ಷವೆಂಬ ಪುರುಷಾರ್ಥಕ್ಕೂ ಬೋಧಕವಾದ ಯಾವ ಯಾವ ಪದಗಳಿವೆಯೋ ಅವೆಲ್ಲವೂ ಸಮುದ್ರದಲ್ಲಿ ನೀರು ಅಂತರ್ಗತವಾಗಿರುವಂತೆ ನಿನ್ನಲ್ಲಿ ಅಂತರ್ಗತವಾಗಿವೆ. ಮತ್ತು ಅವಿನಾಶಿಯಾದ ಯಾವ ಪರಬ್ರಹ್ಮವುಂಟೋ ಮತ್ತು ವಿನಾಶಿಯಾದ ಯಾವ ಈ ವಿಶ್ವವುಂಟೋ ಇವೆರಡೂ ಕೂಡ ಮರದ ತುಂಡಿನಲ್ಲಿ ಬೆಂಕಿಯಂತೆಯೂ, ಭೂಮಿಯಲ್ಲಿ ಗಂಧದಂತೆಯೂ ನಿನ್ನಲ್ಲಿ ಎಲ್ಲವೂ ಅಂತರ್ಗತವಾಗಿದೆ. (ಇಲ್ಲಿಯೂ ವೇದಗಳಲ್ಲಿರುವ ಪರಬ್ರಹ್ಮ ಬೋಧಕಪದಗಳೂ ಮತ್ತು ಕಾರ್ಯಭೂತ ಜಗದ್ವಾಚಕವಾದ ಪದಗಳೂ ವಾಗ್ರೂಪವಾದುದರಿಂದ ಸರಸ್ವತಿಯ ಅಂಶವಾದ ವಾಕ್ಕಿನಲ್ಲಿ ನಿತ್ಯಾನಿತ್ಯರೂಪವಾದ ಈ ಅರ್ಥಪ್ರಪಂಚವು ಅಡಗಿದೆ ಎಂದು ತಾತ್ಪರ್ಯವನ್ನು ಊಹಿಸಬೇಕು. ಈ ಸ್ಥಲದಲ್ಲಿ ಶಬ್ದಾರ್ಥಗಳಿಗೆ ತಾದಾತ್ಮ್ಯವನ್ನು ಹೇಳುವ ವೈಯಾಕರಣಸಿದ್ಧಾಂತವು ಬಹಳ ಅನುಗುಣವಾಗುತ್ತದೆ.)

೯-೧೧. ಎಲೈ, ದೇವಿಯೇ, ಚರಾಚರರೂಪವಾಗಿರುವ ಸಕಲಪದಾರ್ಥಗಳೂ, ಯಾವ ಓಂಕಾರ (ಪ್ರಣವ) ಎಂಬ ಅಕ್ಷರದಲ್ಲಿ ಅಡಗಿವೆಯೋ (ಓಂಕಾರವು ಪರಬ್ರಹ್ಮವಾಚಕವೆಂದು ಶಾಸ್ತ್ರಗಳ ಅಭಿಪ್ರಾಯವಿದೆ. "ತಸ್ಯವಾಚಕಃ ಪ್ರಣವಃ" ಎಂದು ಯೋಗಸೂತ್ರವಿದೆ. ಪರಬ್ರಹ್ಮವು ಚೇತನಾಚೇತನ ಶರೀರಕವಾದುದರಿಂದ ಅಂತಹ ಪರಬ್ರಹ್ಮವಾಚಕವಾದ ಪ್ರಣವವೂ ತನ್ನ ಮಾತ್ರಾತ್ರಯದಿಂದ ಅರ್ಥರೂಪವಾದ ಚೇತನಾಚೇತನರೂಪವಾದ ಸಕಲ ಪದಾರ್ಥವನ್ನೂ ಹೊಂದಿದೆ ಎಂದು ತಾತ್ಪರ್ಯ.) ಆ ಪ್ರಣವದಲ್ಲಿರುವ ಮೂರು ಮಾತ್ರೆಗಳಲ್ಲಿ ಸದಸತ್ಪದಾರ್ಥಗಳೆಲ್ಲವೂ ಅಡಗಿದೆಯೋ ಮತ್ತು ಮೂರು ಲೋಕಗಳೂ, ಮೂರು ವೇದಗಳೂ (ಇಲ್ಲಿ ನಾಲ್ಕನೇಯ ಅಥರ್ವವೇದವಿದ್ದರೂ, ಒಂದೇ ಉಪನಯನದಿಂದ ಅಧಿಕರಿಸಲು ಸಾಧ್ಯವಾಗುವ ಋಗ್ಯಜು

**ತ್ರಯೋಲೋಕಾ ಸ್ತ್ರಯೋವೇದಾ ಸ್ತ್ರೈವಿದ್ಯಂ ಪಾವಕತ್ರಯಂ।**
**ತ್ರೀಣಿ ಜ್ಯೋತೀಂಷಿ ವರ್ಗಾಶ್ಚ ತ್ರಯೋ ಧರ್ಮಾದಯ ಸ್ತಥಾ ॥ ೧೦ ॥**

**ತ್ರಯೋ ಗುಣಾಃ ತ್ರಯೋ ವರ್ಣಾಃ ತ್ರಯೋ ವೇದಾಃ ತಥಾಕ್ರಮಾತ್।**
**ತ್ರಿಧಾತವಸ್ತಥಾ ವಸ್ಥಾಃ ಪಿತರಶ್ಚಾಣಿಮಾದಯಃ ॥ ೧೧ ॥**

ಸ್ಸಾಮರೂಪವಾದ ಮೂರು ವೇದಗಳೇ ಪೃಥಕ್ಕರಿಸಿ ಹೇಳಲ್ಪಟ್ಟಿವೆ. ಅಥರ್ವವೇದದ ಅಧ್ಯಯನವು ಬೇರೆ ಸಂಸ್ಕಾರದಿಂದ ಅಧಿಕರಿಸತಕ್ಕದ್ದಾಗಿದೆ.) ಆ ಋಗ್ಯಜುಸ್ಸಾಮ ಗಳಿಂದ ಪ್ರತಿಪಾದ್ಯಮಾನವಾದ ಕರ್ಮಗಳು, ಅಥವಾ ಕರ್ಮನಿಷ್ಠರು, ದಕ್ಷಿಣಾಗ್ನಿಯೇ ಮೊದಲಾದ ಅಗ್ನಿತ್ರಯಗಳು ಸೂರ್ಯಚಂದ್ರಾಗ್ನಿರೂಪವಾದ ಮೂರು ಪ್ರಕಾಶಕ ವಸ್ತುಗಳು, ಧರ್ಮಾರ್ಥಕಾಮಗಳೆಂಬ ತ್ರಿವರ್ಗ, ಸತ್ವರಜಸ್ತಮೋರೂಪವಾದ ಮೂರು ಗುಣಗಳು, ಬ್ರಹ್ಮಕ್ಷತ್ರಾದಿ ಮೂರು ವರ್ಣಗಳು (ಇಲ್ಲಿ ವೇದಾಧಿಕಾರವುಳ್ಳ ಮೂರು ವರ್ಣಗಳೇ ಪರಿಗಣಿಸಲ್ಪಟ್ಟಿವೆ.) ವಾತ, ಪಿತ್ತ, ಶ್ಲೇಷ್ಮರೂಪವಾದ ಮೂರು ಧಾತು ಗಳು, ಬಾಲ್ಯ, ಯೌವನ, ಕೌಮಾರವೆಂಬ ಮೂರು ಅವಸ್ಥೆಗಳು. ಪಿತೃ, ಪಿತಾಮಹ, ಪ್ರಪಿತಾಮಹರೆಂಬ ಮೂರು ಪಿತೃಗಳು, ಅಣಿಮಾದಿಸಿದ್ಧಿಗಳು ಇವೆಲ್ಲವೂ ಅಡಗಿದೆಯೋ ಅಂತಹ ಪ್ರಣವದ ಮಾತ್ರಾತ್ರಯವು ನಿನ್ನ ಸ್ವರೂಪಕ್ಕೆ ಸೇರಿದುದಾಗಿದೆ. (ಪ್ರಣವದ ಅರ್ಥವು ಗಂಭೀರವಾಗಿಯೂ ನಿಗೂಢವಾಗಿಯೂ ಆಯಾಯ ಸಿದ್ಧಾಂತಗಳಿಗೆ ಅನುಗುಣವಾಗಿ ವಿಸ್ತಾರವುಳ್ಳದ್ದಾಗಿಯೂ ಉಪದೇಶಗಮ್ಯವಾಗಿಯೂ ಇದೆ. ಇಲ್ಲಿ ಪ್ರಕೃತಕ್ಕೆ ತಕ್ಕಂತೆ ಇಷ್ಟುಮಾತ್ರ ಅಭಿಪ್ರಾಯವನ್ನು ಗ್ರಹಿಸಬಹುದು. ಚೇತನಾ ಚೇತನವಸ್ತುಗಳು ವಾಚ್ಯರೂಪನಾದ ಪರಮಾತ್ಮನನ್ನು ಶರೀರ ಶರೀರಿಭಾವದಿಂದ ಹೇಗೆ ಹೊಂದಿವೆಯೋ ಹಾಗೆಯೇ ವಾಚಕವಾದ ಪ್ರಣವವನ್ನು ಮೂರು ಮಾತ್ರೆಗಳೂ ಆಶ್ರಯಿಸಿವೆ. ವಾಚಕವಾದ ಪ್ರಣವವು ಮೂರು ಮಾತ್ರೆಯಿಂದ ಕೂಡಿ ಒಂದಾಗಿರು ವಂತೆ ವಾಚ್ಯವಾದ ಪರಬ್ರಹ್ಮಸ್ವರೂಪವೂ ಸಂಘಾತಾತ್ಮಕವಾಗಿ ಏಕರೂಪವನ್ನು ಹೊಂದಿದೆ. ಈ ರೀತಿ ವಾಚ್ಯವಾಚಕಗಳಿಗೆ ಸಾಮ್ಯವಿರುವದ್ದರಿಂದ ಬ್ರಹ್ಮವು ಪ್ರಣವದ ಅರ್ಥವೆಂದೂ ಪ್ರಣವ ಸ್ವರೂಪವೇ ಎಂದೂ ಶಾಸ್ತ್ರದಲ್ಲಿ ವ್ಯವಹಾರವಿದೆ. ಪ್ರಣವವು ವಿಶಿಷ್ಟಬ್ರಹ್ಮಕ್ಕೆ ವಾಚಕವಾಗಿರುವಂತೆಯೇ ಪ್ರಣವದ ಮಾತ್ರೆಗಳೂ ಚೇತನಾಚೇತನಪ್ರಪಂಚಕ್ಕೆ ವಾಚಕವಾಗಿವೆ. ಈ ಮಾತ್ರೆಗಳು ಎಲ್ಲವನ್ನೂ ಅರ್ಥವನ್ನಾಗಿ ಹೊಂದಿದ್ದರೂ ಸಂಖ್ಯಾಸಾಮ್ಯದಿಂದ ಮೂರು ಮೂರು ಸಂಖ್ಯೆಯುಳ್ಳ ತ್ರಿಲೋಕ, ತ್ರಿವೇದ ಮೊದಲಾದುವನ್ನು ಪೃಥಕ್ಕರಿಸಿ ನಿದರ್ಶನಕ್ಕಾಗಿ ಇಲ್ಲಿ ಉದಾ ಹರಿಸಿರುವರು.) ಈ ಓಂಕಾರವೂ ಪರಬ್ರಹ್ಮಕ್ಕೆ ವಾಚಕಶಬ್ದವಾಗಿರುವದ್ದರಿಂದ ಇದೂ ಸರಸ್ವತಿಯ ಒಂದು ರೂಪವೆಂದು ತಾತ್ಪರ್ಯ.

ಏತನ್ಮಾತ್ರಾತ್ರಯಂ ದೇವಿ ತವ ರೂಪಂ ಸರಸ್ವತಿ ।
ವಿಭಿನ್ನದರ್ಶನಾ ಆದ್ಯಾ ಬ್ರಹ್ಮಣೋ ಹಿ ಸನಾತನಾಃ ॥ ೧೨ ॥

ಸೋಮಸಂಸ್ಥಾ ಹವಿಸ್ಸಸ್ಥಾಃ ಪಾಕಸಂಸ್ಥಾಃ ಸನಾತನಾಃ ।
ತಾಃ ತ್ವದುಚ್ಚಾರಣಾದ್ದೇವಿ ಕ್ರಿಯಂತೆ ಬ್ರಹ್ಮವಾದಿಭಿಃ ॥ ೧೩ ॥

ಅನಿರ್ದೇಶ್ಯಂ ತಥಾಚಾನ್ಯದರ್ಧಮಾತ್ರಾಶ್ರಿತಂ ಪರಂ ।
ಅವಿಕಾರ್ಯಕ್ಷಯಂ ದಿವ್ಯಂ ಪರಿಣಾಮವಿವರ್ಜಿತಂ ॥ ೧೪ ॥

ತಥೈವತತ್ಪರಂ ರೂಪಂ ಯನ್ನಶಕ್ಯಂ ಮಯೋದಿತುಂ ।
ನಚಾನ್ಯೇನ ತಥಾ ಜಿಹ್ವಾ ತಾಲ್ವೋಷ್ಠಾದಿಭಿರುಚ್ಯತೇ ॥ ೧೫ ॥

ಸ ವಿಷ್ಣುಃ ಸ ಶಿವೊ ಬ್ರಹ್ಮಾ ಚಂದ್ರಾರ್ಕಜ್ಯೋತಿರೇವ ಚ ।
ವಿಶ್ವಾವಾಸಂ ವಿಶ್ವರೂಪಂ ವಿಶ್ವಾತ್ಮಾನಂ ಮಹೇಶ್ವರಂ ॥ ೧೬ ॥

---

೧೨-೧೫. ಬೇರೆ ಬೇರೆಯಾದ ಸ್ವರೂಪವುಳ್ಳ ಸೋಮಸಂಸ್ಥೆ, ಹವಿಸ್ಸಂಸ್ಥೆ, ಪಾಕಸಂಸ್ಥೆ ಎಂಬ ಅನಾದಿಸಿದ್ಧವಾದ ವೈದಿಕಕ್ರಿಯೆಗಳು ಯಾಗದಲ್ಲಿ ಬ್ರಹ್ಮಜ್ಞರಾದ ಮಹಾತ್ಮರಿಂದ ಮಾಡಲ್ಪಡಬೇಕಾದರೆ ಆಯಾಯ ಮಂತ್ರಸ್ವರೂಪಿಣಿಯಾದ ನಿನ್ನನ್ನು ಉಚ್ಚರಿಸಿಯೇ ಮಾಡಲ್ಪಡುತ್ತಿವೆ. ಮತ್ತು ಇದು ಇಂಥಾದ್ದು ಎಂದು ನಿರ್ದೇಶಿಸಲಶಕ್ಯವಾದ ವಿಕಾರ ಮತ್ತು ಪರಿಣಾಮಗಳಿಂದ ದೂರವಾದ ಯಾವ ಪರವಸ್ತುವಿನ ರೂಪವುಂಟೋ ಅದು ನನ್ನಿಂದಲೂ ಹೇಳಲು ಸಾಧ್ಯವಲ್ಲವೋ ಇತರರಿಂದಲೂ ನಾಲಗೆ, ತಾಲು ಮೊದಲಾದವುಗಳಿಂದ ಉಚ್ಚರಿಸಲ್ಪಡತಕ್ಕದ್ದೂ ಅಲ್ಲವೋ ಆ ಪರವಸ್ತುವಿಗೆ ಆಶ್ರಯವಾದ ಅರ್ಧಮಾತ್ರೆಯೂ ಪ್ರಣವದ ಕೊನೆಯಲ್ಲಿ ಸೇರಿರುತ್ತದೆ.

೧೬-೧೮. ಆ ಅರ್ಧಮಾತ್ರೆಯಲ್ಲಿ ಅಡಗಿರುವ ಪರವಸ್ತುವು ವ್ಯಾಪಕವಾದುದರಿಂದ ವಿಷ್ಣುವೆಂದೂ ಶಿವ, ಬ್ರಹ್ಮ, ಸೂರ್ಯಚಂದ್ರರುಗಳಲ್ಲಿಯೂ ಅಂತರ್ಯಾಮಿಯಾಗಿ ನೆಲಸಿರುವದ್ದರಿಂದ, ಆಯಾಯ ರೂಪದಲ್ಲಿರುವ ನಾರಾಯಣನೇ ಎಂದೂ ತಿಳಿಯಲಾಗಿದೆ. ಆ ಪರವಸ್ತುವೇ ಸಾಂಖ್ಯಸಿದ್ಧಾಂತ ಮತ್ತು ವೇದಗಳು ಅವುಗಳ ಅನಂತಶಾಖೆಗಳು ಇವುಗಳಿಂದ ವಿಶ್ವಸ್ವರೂಪವೆಂದೂ, ವಿಶ್ವವಾಸಿ ಎಂದೂ ಮಹೇಶ್ವರನೆಂದೂ ವಿಚಾರದಿಂದ ಸ್ಥಿರೀಕೃತವಾಗಿದೆ. ಅದೇ ಆದಿಮಧ್ಯಾವಸಾನರಹಿತವಾಗಿಯೂ,

ಸಾಂಖ್ಯಸಿದ್ಧಾಂತವೇದೋಕ್ತಂ ಬಹುಶಾಖಾಸ್ಥಿರೀಕೃತಂ।
ಅನಾದಿಮಧ್ಯನಿಧನಂ ಸದಸಚ್ಚ ಸದೈವ ತು ॥ ೧೭ ॥

ಏಕಂ ತ್ವನೇಕಧಾ ಪ್ಯೇಕಂ ಭಾವಭೇದಸಮಾಶ್ರಿತಂ।
ಅನಾಖ್ಯಂ ಷಡ್ಗುಣಾಖ್ಯಂ ಚ ಬಹ್ವಾಖ್ಯಂ ತ್ರಿಗುಣಾಶ್ರಯಂ ॥ ೧೮ ॥

ನಾನಾಶಕ್ತಿವಿಭಾವಜ್ಞಂ ನಾನಾಶಕ್ತಿವಿಭಾವಕಂ।
ಸುಖಾತ್ಸೌಖ್ಯಂ ಮಹಾಸೌಖ್ಯಂ ರೂಪಂ ತತ್ವಗುಣಾತ್ಮಕಂ ॥ ೧೯ ॥

ಏವಂ ದೇವಿ ತ್ವಯಾ ವ್ಯಾಪ್ತಂ ನಿಷ್ಕಲಂ ಸಕಲಂ ಜಗತ್।
ಅದ್ವೈತಾವಸ್ಥಿತಂ ಬ್ರಹ್ಮ ಯಚ್ಚ ದ್ವೈತೇ ವ್ಯವಸ್ಥಿತಂ ॥ ೨೦ ॥

ಸದಸದ್ರೂಪವಾಗಿಯೂ, ಒಂದೇ ಆದರೂ ಅನೇಕ ಜಗದ್ರೂಪವಾಗಿ ಸ್ವಸಂಕಲ್ಪದಿಂದ ಪರಿಣಮಿಸಿ ವಿಶಿಷ್ಟೈಕ್ಯಬುದ್ಧಿಗೆ ಗೋಚರವಾಗಿಯೂ, ನಾಮರೂಪರಹಿತವಾಗಿಯೂ, ಷಡ್ಗುಣಶಾಲಿ ಎಂದು ಪ್ರಸಿದ್ಧವಾಗಿಯೂ (ಇಲ್ಲಿ "ತವಾನಂತಗುಣಸ್ಯಾಪಿ ಷಡೇವ ಪ್ರಥಮೇ ಗುಣಾಃ. ಜ್ಞಾನಶಕ್ತಿ ಬಲೈಶ್ವರ್ಯ ವೀರ್ಯತೇಜಾಂಸ್ಯಶೇಷತಃ" ಎಂಬ ವಿಷ್ಣುಪುರಾಣದ ವಚನವು ಜ್ಞಾಪಿಸಲ್ಪಟ್ಟಿದೆ.) ಮುಖ್ಯ ವೃತ್ತಿಯಿಂದ ಬ್ರಹ್ಮ, ರುದ್ರ, ಇಂದ್ರ, ಚಂದ್ರಾದಿ ನಾನಾ ನಾಮಧೇಯಗಳಿಗೆ ಆಶ್ರಯವಾಗಿಯೂ, ಗುಣತ್ರಯ (ಸತ್ವರಜಸ್ತಮಸ್ಸುಗಳು) ಮಯವಾದ ಪ್ರಕೃತಿಗೂ ಆಶ್ರಯವಾಗಿಯೂ, ಮತ್ತು (ಅಚೇತನರೂಪವಾದ ಪ್ರಕೃತಿಯು ಚೇತನಸ್ವರೂಪನಾದ ಪರಮಾತ್ಮನಿಂದ ಪ್ರೇರಿತ ವಾಗಿ (ಅಧಿಷ್ಠಿತವಾಗಿ) ಅಚೇತನ ಜಗದ್ರೂಪವಾಗಿ ಪರಿಣಾಮ ಹೊಂದುತ್ತದೆ. ಎಂಬ ಸಿದ್ಧಾಂತಾವಲಂಬನದಿಂದ ಇಲ್ಲಿ ತ್ರಿಗುಣಾಶ್ರಯವೆಂದು ವ್ಯವಹರಿಸಿದ್ದಾರೆ ತ್ರಿಗುಣ ವಾದ ಪ್ರಕೃತಿಗೆ ಆಶ್ರಯದಾತನೆಂದರ್ಥ, ತ್ರಿಗುಣಗಳಿಗೇ ಆಶ್ರಯನೆಂದರ್ಥವಲ್ಲ.)

೧೯-೨೦. ಕಾರ್ಯಕಾರಣರೂಪವಾದ ಪ್ರಪಂಚದಲ್ಲಿ ಕಾರಣಸ್ವರೂಪವೂ ಕಾರಣದಲ್ಲಿರುವ ಕಾರ್ಯೋತ್ಪಾದಕ ಶಕ್ತಿಸ್ವರೂಪವೂ ತಾನೇ ಆಗಿ ಅವುಗಳ ಸ್ವರೂಪ ಜ್ಞಾನವನ್ನೂ ಹೊಂದಿರುವ ಮತ್ತು ಎಲ್ಲಾ ಸುಖಕ್ಕಿಂತಲೂ ಮಹಾಸುಖರೂಪವಾದ, ಗುಣಾತೀತವಾದ ಪರವಸ್ತುವೂ ಅದೇ ಎಂದೂ ನಿರ್ಧರಿಸಲ್ಪಟ್ಟಿದೆ. ಎಲೈ, ದೇವಿಯೇ, ಅಭೇದಾವಸ್ಥೆಯಿಂದಲೂ ಭೇದದಿಂದಲೂ ಅದೇ ವಸ್ತುವೇ ವ್ಯವಹರಿಸಲ್ಪಡುತ್ತದೆ. (ವಿಶಿಷ್ಟವಸ್ತುವು ಒಂದೇ ಆಗಿರುವದ್ದರಿಂದ ಅದ್ವೈತದೃಷ್ಟಿಗೂ ವಿಶೇಷಗುಣಗಳ ಭೇದದಿಂದ ಭೇದದೃಷ್ಟಿಗೂ ವಿಷಯವಾಗಿದೆ. ಎಂದು ತಾತ್ಪರ್ಯ.) ಈ ಪ್ರಕಾರ ನಿನ್ನಿಂದ ಸಕಲ ಜಗತ್ತೂ ವ್ಯಾಪಿಸಲ್ಪಟ್ಟಿದೆ. (ಪರಮಾತ್ಮನು ಜಗದ್ವ್ಯಾಪಕನಾಗಿರು

ಯೇಽರ್ಥಾನಿತ್ಯಾ ಯೇ ವಿನಶ್ಯಂತಿ ಚಾನ್ಯೇ
ಯೇಽರ್ಥಾಃ ಸ್ಥೂಲಾ ಯೇ ವಿನಶ್ಯಂತಿ ಸೂಕ್ಷ್ಮಾಃ ।
ಯೇ ವಾ ಭೂಮೌ ಯೇಂತರಿಕ್ಷೇಽನ್ಯತೋ ವಾ
ತೇಷಾಂ ದೃಶ್ಯಾ ಸಾ ತ್ವಮೇವೋಪಲಬ್ಧಿಃ ॥ ೨೧ ॥

ಯದ್ವಾ ಮೂರ್ತಂ ಯಚ್ಚಮೂರ್ತಂ ಸಮಸ್ತಂ
ಯದ್ವಾ ಭೂತೇಷ್ವೇವ ಕರ್ಮಾಸ್ತಿ ಕಿಂಚಿತ್ ।
ಯದ್ವಾ ದೇವೇಷ್ವಸ್ತಿ ಲೇಖೇನ್ಯತೋವಾ
ತತ್ಸಂಬದ್ಧಂ ತ್ವಕ್ಷರೈಃ ವ್ಯಂಜನೈಶ್ಚ ॥ ೨೨ ॥

ಏವಂ ಸ್ತುತಾ ತದಾ ದೇವೀ ವಿಷ್ಣೋರ್ಜಿಹ್ವಾ ಸರಸ್ವತೀ ।
ಪ್ರತ್ಯುವಾಚ ಮಹಾತ್ಮಾನಂ ಮಾರ್ಕಂಡೇಯಂ ಮಹಾಮುನಿಂ ॥ ೨೩ ॥
ಯತ್ರ ತ್ವಂ ನೇಷ್ಯಸೆ ವಿಪ್ರ ತತ್ರ ಯಾಸ್ಯಾಮ್ಯತಂದ್ರಿತಾ ।

ಮಾರ್ಕಂಡೇಯ ಉವಾಚ

ಆದ್ಯಂ ಬ್ರಹ್ಮಸರಂ ಪುಣ್ಯಂ ತತೋ ನಾಗಹ್ರದಂ ಸ್ಮೃತಂ ॥ ೨೪ ॥

---

ವದ್ದರಿಂದ ಅವನಿಗೂ ವಾಚಕವಾದ ಓಂಕಾರವು ನಿನ್ನ ಅಂಶವಾಗಿರುವದ್ದರಿಂದ ನೀನೂ ಜಗದ್ವ್ಯಾಪಕಳೇ ಆಗಿರುತ್ತೀಯೆ ಎಂದು ತಾತ್ಪರ್ಯ.) ನಿತ್ಯವಾಗಿಯೂ ಅನಿತ್ಯವಾಗಿಯೂ, ಸ್ಥೂಲವಾಗಿಯೂ, ಸೂಕ್ಷ್ಮವಾಗಿಯೂ ಇರುವ ಯಾವ ವಸ್ತುಗಳು ಇಂದ್ರಿಯ ಗೋಚರವಾಗುವುದಿಲ್ಲವೋ ಅಂತಹ ವಸ್ತುಗಳ ಜ್ಞಾನಕ್ಕೆ ನೀನೇ ಸಾಧನ ವಾಗಿದ್ದೀಯೆ. ಆ ಪದಾರ್ಥಗಳ ಜ್ಞಾನವು ಶಬ್ದದಿಂದಲೇ ಉಂಟಾಗಬೇಕಾಗಿರುವದ್ದ ರಿಂದ ಶಬ್ದಸ್ವರೂಪಳಾದ ನೀನೇ ಅದರ ಜ್ಞಾನಕ್ಕೆ ಮುಖ್ಯಕಾರಣಳಾಗಿರುವದ್ದರಿಂದ ಆ ಜ್ಞಾನದ ಸ್ವರೂಪವೇ ನಿನ್ನದಾಗಿರುವದೆಂದು ತಾತ್ಪರ್ಯ.)

೨೨-೨೫. ಮೂರ್ತವಸ್ತುಗಳೂ ಅಮೂರ್ತವಸ್ತುಗಳೂ ಭೂತಗಳಲ್ಲಿರುವ ಕರ್ಮವಿಶೇಷಗಳೂ ದೇವತೆಗಳ ಮತ್ತು ದೇವತಾವಿಶೇಷಗಳ ಕರ್ಮಗಳೂ ಎಲ್ಲವೂ ಸ್ವರವ್ಯಂಜನರೂಪವಾದ ಅಕ್ಷರಗಳಿಂದ ಕೂಡಿದ ವಾಙ್ಮಯಕ್ಕೇ ಸೇರಿದ್ದಾಗಿದೆ. ಈ ಪ್ರಕಾರ ವಿಷ್ಣುವಿನ ನಾಲಿಗೆಯಂತಿರುವ ಸರಸ್ವತಿಯನ್ನು ಮಾರ್ಕಂಡೇಯನು ಸ್ತೋತ್ರಮಾಡಲಾಗಿ ಸಂತುಷ್ಟಳಾದ ಆ ಸರಸ್ವತಿಯು ಮಾರ್ಕಂಡೇಯನನ್ನು ಕುರಿತು ನೀನು ಎಲ್ಲಿಗೆ ಒಯ್ಯುವೆಯೋ ಅಲ್ಲಿಗೆ ನಾನು ಬರುತ್ತೇನೆಂದು ಉತ್ತರವಿತ್ತಳು.

**ಕುರುಣಾ ಕೃಷಿಣಾ ಕೃಷ್ಟಂ ಕುರುಕ್ಷೇತ್ರಂ ತತಃ ಸ್ಮೃತಂ ।**
**ತಸ್ಯ ಮಧ್ಯೇನ ವೈ ಯಾಹಿ ಪುಣ್ಯಾಪುಣ್ಯಜಲಾವಹಾ ॥ ೨೫ ॥**

**ಇತಿ ಶ್ರೀ ವಾಮನಪುರಾಣೇ ಸರೋಮಾಹಾತ್ಮ್ಯೇ ಸರಸ್ವತೀಸ್ತೋತ್ರಂ ನಾಮ ದ್ವಾತ್ರಿಂಶೋಽಧ್ಯಾಯಃ**

---

ಅನಂತರ ಮಾರ್ಕಂಡೇಯನು ಮೊದಲು ಬ್ರಹ್ಮಸರಸ್ಸಿನಲ್ಲೂ ಅನಂತರ ನಾಗಹ್ರದದಲ್ಲೂ ಆ ಮೇಲೆ ಕುರುಕ್ಷೇತ್ರದಲ್ಲೂ ಪುಣ್ಯಕರವಾಗಿಯೂ ಅಪುಣ್ಯಕರವಾಗಿಯೂ ಇರುವ ಪ್ರವಾಹವನ್ನು ಹೊಂದಿ ಮಧ್ಯದಲ್ಲಿ ಪ್ರವಹಿಸು ಎಂದು ಪ್ರಾರ್ಥಿಸಿದನು.

ಇಲ್ಲಿಗೆ ಶ್ರೀ ವಾಮನಪುರಾಣದ ಸರೋಮಾಹಾತ್ಮ್ಯದಲ್ಲಿ ಸರಸ್ವತೀ ಸ್ತೋತ್ರವೆಂಬ ಮೂವತ್ತೆರಡನೆಯ ಅಧ್ಯಾಯವು ಮುಗಿದಿದೆ.

## ಅಧ್ಯಾಯಾರ್ಥ ಸಂಗ್ರಹ

ಈ ಅಧ್ಯಾಯದಲ್ಲಿ ವಿಷ್ಣುಪದ ಸರೋವರದ ಮಾಹಾತ್ಮ್ಯವನ್ನು ಮುಗಿಸಿ ಆ ಕುರುಕ್ಷೇತ್ರದ ಮಾಹಾತ್ಮ್ಯಕ್ಕೆ ಅನುಬಂಧಿಸುವ ಸರಸ್ವತೀ ನದಿಯ ವಿಚಾರವನ್ನು ಪ್ರಾರಂಭಿಸಿರುವರು. ಸರಸ್ವತೀ ನದಿಯು ಹೇಗೆ ಉತ್ಪನ್ನವಾಯಿತು, ಈ ಸರೋವರವನ್ನು ಹೊಂದಿ ಆ ನದಿಯು ದೃಶ್ಯಾದೃಶ್ಯರೂಪಳಾಗಿ ಹೇಗೆ ಪ್ರವಹಿಸಿದಳು ಎಂಬ ಪ್ರಶ್ನೆಗೆ ಅನುಗುಣವಾಗಿ ಪ್ಲಕ್ಷವೃಕ್ಷದಲ್ಲಿ (ಆಲದ ಮರದಲ್ಲಿ) ಮೊದಲು ಹುಟ್ಟಿದ ಸರಸ್ವತಿಯನ್ನು ಸಾಕ್ಷಾತ್ಕರಿಸಿ ಮಾರ್ಕಂಡೇಯ ಮಹಾ ಮುನಿಯು ಅವಳಿಗೆ ನಮಸ್ಕಾರಮಾಡಿ ಬಹು ವಿಧವಾಗಿ ಸ್ತೋತ್ರಮಾಡಿದನೆಂದೂ ಪ್ರಸನ್ನಳಾದ ಸರಸ್ವತಿಯು ನದೀ ರೂಪವನ್ನು ಹೊಂದಿ ಮಾರ್ಕಂಡೇಯನ ಇಷ್ಟದಂತೆ ಈ ವಿಷ್ಣುಪದ ಸರೋವರದಲ್ಲಿ ಸೇರಿ ದೃಶ್ಯಾದೃಶ್ಯ ಗತಿಯಿಂದ ಹರಿದು ಪಾರ್ಶ್ವಗಳಲ್ಲಿ ಪುಣ್ಯ ತೀರ್ಥಗಳನ್ನುಂಟು ಮಾಡಿದಳೆಂದೂ ಲೋಮಹರ್ಷಣರು ಉತ್ತರವಿತ್ತರೆಂದು ವರ್ಣಿಸಲಾಗಿದೆ.

---

ಆರ್. ಕೃಷ್ಣಶೆಟ್ಟಿ, ಪ್ರಿಂಟರ್, ಶ್ರೀ ಶಾರದಾ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.